## ಡಾ॥ ಜಿ. ಕೃಷ್ಣಪ್ಪ

ಡಾ॥ ಜಿ. ಕೃಷ್ಣಪ್ಪ (1948) ಬೆಂಗಳೂರಿನವರು. ಇವರು ಸಹೃದಯ ವಿಮರ್ಶಕರು. ಕವಿ ದ.ರಾ. ಬೇಂದ್ರೆಯವರ ಸಾಹಿತ್ಯವನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದ್ದು ಮಾತ್ರವಲ್ಲದೆ ತಮ್ಮ ಬದುಕಿನ ಬಹುಭಾಗವನ್ನು ಬೇಂದ್ರೆ ಸಾಹಿತ್ಯ ಪ್ರಸಾರಕ್ಕಾಗಿ ಸಮರ್ಪಿಸಿಕೊಂಡಿದ್ದಾರೆ. ಬೇಂದ್ರೆ ಕಾವ್ಯದ ಓದಿಗೆ ಹೊಸ ಆಯಾಮವನ್ನು ಒದಗಿಸಿಕೊಟ್ಟಿದ್ದಾರೆ.

ಪ್ರಾದೇಶಿಕ ಸಾರಿಗೆ ಕಛೇರಿಯಲ್ಲಿ ಸೇವೆಮಾಡಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಯಾಗಿ 2006ರಲ್ಲಿ ನಿವೃತ್ತರಾಗಿದ್ದಾರೆ. ಮೈಸೂರು ವಿಶ್ವವಿದ್ಯಾಲಯದಿಂದ 'ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ– ಒಂದು ಅಧ್ಯಯನ', ಎಂಬ ವಿಷಯದಲ್ಲಿ ಪಿಎಚ್.ಡಿ., ಪದವಿಯನ್ನು ಪಡೆದಿದ್ದಾರೆ. 'ಹಾಡು ಹಕ್ಕಿ ಅಂಬಿಕಾತನಯದತ್ತ'. 'ಡಿ.ಆರ್. ಬೇಂದ್ರೆ', 'ನಾಕುತಂತಿ–ಒಂದು ಟಿಪ್ಪಣಿ', 'ಹೂತsದ ಹುಣಸಿ', 'ಬರೆಹದಲ್ಲಿ ಬೇಂದ್ರೆಯವರ ಬದುಕು', 'ಅಂತರಂಗದತ್ತ ನಯನ', 'ರಸ್ತೆ ನಿಯಮಗಳು' 'ಬೇಂದ್ರೆಯವರ ಸಾಹಿತ್ಯದಲ್ಲಿ ಶರಣಚಿಂತನೆ' ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಇವರು ಸರಳ ಕನ್ನಡದಲ್ಲಿ ರಚಿಸಿರುವ ಮಹಾಕವಿ ಲಕ್ಷ್ಮೀಶನ 'ವಚನ ಜೈಮಿನಿ ಭಾರತ', ಹರಿಹರ ಮಹಾಕವಿಯ 'ವಚನ ಗಿರಿಜಾಕಲ್ಯಾಣ', ರಾಘವಾಂಕ ಮಹಾಕವಿಯ 'ವಚನ ಹರಿಶ್ಚಂದ್ರ ಚಾರಿತ್ರ' 'ಸಂತಕವಿ ಕನಕದಾಸರ ನಳದಮಯಂತಿ ಪ್ರೇಮಕಥೆ' ಕೃತಿಗಳು ಜನಮನ್ನಣೆ ಪಡೆದಿವೆ.

1988 ರಿಂದ ಶಾಲಾ ಕಾಲೇಜುಗಳಲ್ಲಿ ದ.ರಾ. ಬೇಂದ್ರೆ ಕವನ ಗಾಯನ ಸ್ಪರ್ಧೆಯನ್ನು ಏರ್ಪಡಿಸಿ, ದ.ರಾ.ಬೇಂದ್ರೆ ಕೃತಿಗಳನ್ನು ಬಹುಮಾನವಾಗಿ ನೀಡುತ್ತ ಬಂದಿದ್ದಾರೆ. ಈವರೆಗೆ 600ಕ್ಕೂ ಹೆಚ್ಚು ಬೇಂದ್ರೆ ಕೇಂದ್ರಿತ ಕಾರ್ಯಕ್ರಮಗಳನ್ನು ನಾಡಿನಾದ್ಯಂತ ನಡೆಸಿದ್ದಾರೆ. ಬೆಂಗಳೂರಿನಲ್ಲಿ ತಮ್ಮ 'ದ.ರಾ.ಬೇಂದ್ರೆ ಕಾವ್ಯ ಕೂಟ'ದ ಅಡಿಯಲ್ಲಿ 2007 ರಿಂದ ಪ್ರತಿವರ್ಷ ದ.ರಾ.ಬೇಂದ್ರೆ ಕಾವ್ಯ ಕುರಿತು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ರಾಜ್ಯಮಟ್ಟದ ವಿಮರ್ಶಾ ಸ್ಪರ್ಧೆ ಏರ್ಪಡಿಸಿ ಸುಮಾರು ರೂ.10,000/– ನಗದು ಬಹುಮಾನ ನೀಡುತ್ತಿದ್ದಾರೆ.

ಇವರ ವಿಶಿಷ್ಟ ಸಾಹಿತ್ಯ ಪ್ರಸರಣ ಕಾರ್ಯವನ್ನು ಗುರುತಿಸಿ ಕನ್ನಡ ಪುಸ್ತಕ ಪ್ರಾಧಿಕಾರವು 2011ರ ಡಾ. ಜಿ.ಪಿ. ರಾಜರತ್ನಂ ಕನ್ನಡ ಸಾಹಿತ್ಯ ಪರಿಚಾರಕ ಪ್ರಶಸ್ತಿ ನೀಡಿದೆ. 2014ರಲ್ಲಿ ದ.ರಾ.ಬೇಂದ್ರೆ ರಾಷ್ಟ್ರೀಯ ಟ್ರಸ್ಟ್ ಧಾರವಾಡವು ಅಂಬಿಕಾತನಯದತ್ತ ರಾಷ್ಟ್ರೀಯ ಪ್ರಶಸ್ತಿ ನೀಡಿದೆ. ಅದೇ ವರ್ಷ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ 'ನಾಡಪ್ರಭು ಕೆಂಪೇಗೌಡ ಪ್ರಶಸ್ತಿ' ಪ್ರದಾನಮಾಡಿದೆ. ಉದಯಭಾನು ಕಲಾಸಂಘವು 'ಉದಯಭಾನು ಸುವರ್ಣ ಸಾಹಿತ್ಯ ರತ್ನ' ಪ್ರಶಸ್ತಿ ನೀಡಿದೆ.

ಇಪ್ಪತ್ತೈದನೇ ಪ್ರಕಟನೆ:

# ಬೇಂದ್ರೆಕಾವ್ಯ : ಪದನಿರುಕ್ತ

**ಡಾ॥ ಜಿ. ಕೃಷ್ಣಪ್ಪ**




**ವಂಶಿ ಪಬ್ಲಿಕೇಷನ್ಸ್**
ನೆಲಮಂಗಲ, ಬೆಂಗಳೂರು

**"Bendre Kaavya: Padanirukta"** - A lexicon of words and phrases in D.R. Bendre's poetry by Dr. G. Krishnappa, No.22, Sri Gurudatta Nilaya, 1st Cross, Netaji Nagar, Mathikere, Bangalore - 560054, M: 9972109209

Published by
**Vamshi Publications**
Gayathri Complex,
Near T.B. Bus Stand, B.H. Road,
Nelamangala, Bengaluru - 562 123
Mob : 9916595916 / 9743055511
email : vamshipublications@gmail.com

ISBN No.: 978-81-938415-3-2

First Edition: 2018
Page: xiv + 488 = 512
Book size : 1/8 Demy
Paper Used: 80 GSM NS Maplitho

Price: ₹ 480/-

ಪುಟಗಳು : xiv + 488 = 512
ಬೆಲೆ : ರೂ. 480/–
ಮೊದಲ ಮುದ್ರಣ : 2018

ಬಳಕೆ ಕಾಗದ : 80 ಜಿಎಸ್ಎಂ ಎನ್.ಎಸ್.ಮ್ಯಾಪ್ಲಿಥೋ
ಆಕಾರ : 1/8 ಡೆಮಿ ಸೈಜ್
ಪ್ರತಿಗಳು : 1000

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು–18
ದೂರವಾಣಿ : 080–2661 3123, 2661 8752

# ಸಮರ್ಪಣೆ

ನಾಡಿನ ಸಮಸ್ತ ದ.ರಾ. ಬೇಂದ್ರೆ
ಕಾವ್ಯ ಸಹೃದಯರಿಗೆ.

ನಲ್ಮೆಯಿಂದ ಸಮರ್ಪಣೆ

# ಮುನ್ನುಡಿ

ಕಳೆದ ಮೂರು ತಿಂಗಳ ಹಿಂದೆ 'ಬೇಂದ್ರೆಪ್ರಿಯ' ಡಾ. ಜಿ. ಕೃಷ್ಣಪ್ಪ ಅವರು ದೂರವಾಣಿ ಮಾಡಿ "ನಾನು ಬೇಂದ್ರೆಕಾವ್ಯ ಪದನಿರುಕ್ತವನ್ನು ಪೂರ್ತಿಗೊಳಿಸಿದ್ದೇನೆ. ಆ ಹಸ್ತಪ್ರತಿಯನ್ನು ಡಿ.ಟಿ.ಪಿ ಮಾಡಿಸಿದ್ದೇನೆ. ಅದರ ತಿದ್ದಿದ ಆವೃತ್ತಿಯನ್ನು ನಿಮಗೆ ಕಳುಹಿಸುತ್ತಿದ್ದೇನೆ. ನೀವು ಅದನ್ನು ಸಂಪೂರ್ಣ ಪರಿಶೀಲಿಸಿ–ಮುನ್ನುಡಿ ಬರೆದುಕೊಡಿ." ಎಂದು ಪ್ರೀತಿಯ ಕೋರಿಕೆಯನ್ನು ನುಡಿದಿದ್ದರು. ಅನಂತರ ಕವಿಮಿತ್ರ ಸತ್ಯಮಂಗಲ ಮಹದೇವನ ಮೂಲಕ ಆ ಪ್ರತಿ ತಲುಪಿತು. ಆದರೆ, ಈ ನಡುವೆ ನಾನು ಹಮ್ಮಿಕೊಂಡ ಹತ್ತಾರು ಕಾರ್ಯಕ್ರಮಗಳು–ನಿಯತ ಬರೆಹಗಳು ಹಾಗೂ ಸ್ವಕೀಯ ಉಪದ್ವ್ಯಾಪಗಳಿಂದ ಕಳೆದ ತಿಂಗಳಿನ ಕೊನೆಯ ವರೆಗೂ ಮುಟ್ಟಲು ನನಗೆ ಸಾಧ್ಯವೇ ಆಗಿರಲಿಲ್ಲ. ಕಳೆದ ಜೂನ್ 29 ರಂದು ಉಡುಪಿಗೆ ಹೊರಡುವಾಗ ಡಿ.ಟಿ.ಪಿ. ಪ್ರತಿಯನ್ನು ನಾನು ಜತೆಗೊಯ್ದೆ. ಆದಿನ ರಾತ್ರಿ ಓದಲು ತೊಡಗಿದೆ. ಡಾ. ಜಿ. ಕೃಷ್ಣಪ್ಪ ಅವರ ಸೃಜನಶಕ್ತಿ, ಶ್ರಮ, ಪಾಂಡಿತ್ಯ, ಕವಿಹೃದಯವನ್ನು ಅನ್ವೇಷಿಸಿದ ಬಗೆ–ನನ್ನನ್ನು ನಿಬ್ಬೆರಗುಗೊಳಿಸಿತು. ಒಂದೊಂದು ಸಾಲಿನಲ್ಲೂ ಹುದುಗಿರುವ ಅರ್ಥದ ಪಲುಕುಗಳನ್ನು ಬೇಂದ್ರೆ ಕೃಷ್ಣಪ್ಪ ಅವರು ಹಿಡಿದಿಟ್ಟ ರೀತಿ ನಿಜಕ್ಕೂ ನನ್ನಲ್ಲಿ ಸೋಜಿಗವನ್ನೂ, ರೋಮಾಂಚನವನ್ನೂ ಉಂಟುಮಾಡಿತು!

ಬೇಂದ್ರೆಕಾವ್ಯವೂ ಅನಂತಪಾರಾವಾರ. ಬೇಂದ್ರೆಯವರು ಕಾವ್ಯವನ್ನು ಬೌದ್ಧಿಕನೆಲೆಯಲ್ಲಿ ಗ್ರಹಿಸುವುದು ಒಂದು ಕ್ರಮವಾದರೆ; ಇನ್ನೊಂದು ಕ್ರಮವೂ ಉಂಟು. ಅದು ಇನ್‌ಟ್ಯೂಷನ್ ನೆಲೆಯಿಂದ ಗ್ರಹಿಸುವುದು. ಈ ಎರಡನೆಯ ನೆಲೆಗೆ ತಲುಪಬೇಕಾದರೆ ಮೊದಲನೆಯ ಬಾಗಿಲು ತೆರೆದುಕೊಳ್ಳಬೇಕಷ್ಟೆ. ಈ ಪ್ರವೇಶಿಕೆಯಿಲ್ಲದೆ ಅವರ ಅಂತಶ್ಶಕ್ತಿಯನ್ನೊ ಅಂತರ್ಮನಸ್ಸನ್ನೊ ಅಂತರ್‌ಭಾವವನ್ನೊ ಕಾವ್ಯದ ಅಂತರಪ್ರಜ್ಞೆಯನ್ನೊ ಮುಟ್ಟಲು ನಮಗೆ ಸಾಧ್ಯವೇ ಇಲ್ಲ. ಶಬ್ದದ ಅರ್ಥವನ್ನು ನಿಘಂಟಿನಿಂದ ಹೇಗೊ ತಿಳಿಯಬಹುದು. ಆದರೆ, ಅರ್ಥದೊಳಗಿನ ಭಾವವನ್ನು ಗ್ರಹಿಸಬೇಕಾದರೆ ಸಾಂಸ್ಕೃತಿಕ ಸಂಗತಿಗಳ ಉಪಜ್ಞೆಯಿಂದ ಮಾತ್ರ ಸಾಧ್ಯ. ಈ ಉಪಜ್ಞೆಯ ನೆಲೆಯಿಂದಲೇ ನಾವು ಬೇಂದ್ರೆಕಾವ್ಯವನ್ನು ನೋಡ ಬೇಕಾಗುತ್ತದೆ. ಒಂದೊಂದು ಅರ್ಥದ ನೆಲೆಗೂ ವಿಶೇಷ ಬಗೆಯ ಹಾಸುಗಳೂ ಉಂಟು; ಹೊಕ್ಕುಗಳೂ ಉಂಟು! ವಾಚ್ಯ ಮತ್ತು ಲಕ್ಷ್ಯದ ಬಗೆಗಳು ನಮ್ಮ ಓದಿನ ಕೊನೆಗೆ ಬಂದು ನಿಲ್ಲಬೇಕು. ಅದಿಲ್ಲದೆ 'ಧ್ವನಿ'ಯ ಸಾಧ್ಯತೆಗಳನ್ನು ತಿಳಿಯುವುದು ಅಸಾಧ್ಯವೇ ಸರಿ! ಇದು ಕಾವ್ಯಚಿಂತನೆಯ ಬೇರುಗಳನ್ನು ತಿಳಿದ ನಮ್ಮೆಲ್ಲರಿಗೂ ಗೊತ್ತಿರುವಂಥದ್ದೇ.

ಡಾ. ಬೇಂದ್ರೆ ಕೃಷ್ಣಪ್ಪ ಅವರು ಇಂಥ ಎಡೆಯಲ್ಲಿ ನಿಂತು ಬೇಂದ್ರೆಕಾವ್ಯಕ್ಕೆ ಸರಿಯಾದ ಪ್ರವೇಶಿಕೆಯನ್ನು ಈ ಕೃತಿಯ ಮೂಲಕ ಒದಗಿಸುತ್ತಿದ್ದಾರೆ. 'ಬೇಂದ್ರೆಕಾವ್ಯ: ಪದನಿರುಕ್ತ' ಸ್ಥೂಲವಾಗಿ ನಿಘಂಟಿನ ಮಾದರಿಯನ್ನು ಹೊಂದಿರುವುದೇನೊ ನಿಜ. ಆದರೆ, ಇದು 'ಬೇಂದ್ರೆಕಾವ್ಯದ ಒಳತಿರುಳಿನ ನಿರುಕ್ತ'ವೆಂದೇ ನನ್ನ ಅನಿಸಿಕೆ. ಯಾಸ್ಕನೆಂಬ ಋಷಿಯು ವೇದಗಳಲ್ಲಿ ಬರುವ ವಿಶಿಷ್ಟಪದಗಳಿಗೆ-ನಿರುಕ್ತವನ್ನು ಬರೆದು ಮಹದುಪಕಾರ ಮಾಡಿದ್ದಾನೆ. ಪದದ ನಿಷ್ಪತ್ತಿ, ಆ ನಿಷ್ಪತ್ತಿಯ ಹಿಂದಿರುವ ವಿಶಾಲವಾದ ಸಾಂಸ್ಕೃತಿಕ ಅರ್ಥಪರಂಪರೆಗಳನ್ನು ಹಿಡಿದಿಟ್ಟು ಹೇಳಿದ್ದಾನೆ. ಇವನ ಕೃತಿಯಿಲ್ಲದೆ ವೇದಾರಣ್ಯವನ್ನು ಹೊಗಲು ನಮಗೆ ಸಾಧ್ಯವೇ ಇಲ್ಲ. ಅದರಂತೆ 'ಬೇಂದ್ರೆಕಾವ್ಯ : ಪದನಿರುಕ್ತ'ವನ್ನು ನೋಡಬೇಕಾಗುತ್ತದೆ. ಜಿ. ಕೃಷ್ಣಪ್ಪ ಅವರ ಪ್ರಸ್ತುತ ಕೃತಿಯನ್ನು ನಾನು ಸಂಪೂರ್ಣವಾಗಿ ಓದಿ ಪರಿಶೀಲಿಸಿ, ಈ ಮಾತನ್ನು ಹೇಳುತ್ತಿದ್ದೇನೆ. ನನ್ನ ಈ ವಿದ್ವಾಂಸ ಮಹನೀಯರು ಅರ್ಥದ ಎಳೆಯನ್ನು ತೆಗೆದು ನಮಗೆ ತೋರಿಸಬೇಕಾದರೆ, ಅವರು ಪಟ್ಟಿರುವ ಶ್ರಮಕ್ಕೆ ನಾವು ಎಂಥ ಬೆಲೆಯನ್ನು ಕಟ್ಟಲು ಸಾಧ್ಯ? ನೀವೇ ಹೇಳಿ?

ಕನ್ನಡದ ಬಹುಮುಖ್ಯ ಕವಿಗೆ ಇಂಥದೊಂದು ಕೃತಿಯನ್ನು ರಚಿಸುವ ಮೂಲಕ ಡಾ. ಜಿ.ಕೃಷ್ಣಪ್ಪನವರು ಸಹೃದಯರಾದ ನಮ್ಮೆಲ್ಲರಿಗೂ ಉಪಕಾರವನ್ನು ಮಾಡಿದ್ದಾರೆ. ನನಗೆ ತಿಳಿದ ಮಟ್ಟಿಗೆ ಕನ್ನಡದಲ್ಲಿ ಅದರಲ್ಲೂ ವರಕವಿಯೊಬ್ಬರ ಕಾವ್ಯಪ್ರವೇಶಕ್ಕೆ ಸಲ್ಲಿಸಿರುವ ಬೆಲೆಯುಳ್ಳ ಕಾಣಿಕೆ ಇದೇ ಎಂದು ನನ್ನ ಭಾವನೆ. ಬೇಂದ್ರೆಯವರ ಪ್ರಾರಂಭಿಕ ಕವನ ಸಂಗ್ರಹದಿಂದ ಪ್ರಾರಂಭಿಸಿ, ಮರಣೋತ್ತರ ಪ್ರಕಟವಾದ ಕವನಸಂಕಲನದ ವರೆಗೂ ತಮ್ಮ ನಿರುಕ್ತದ ಬಾಹುಗಳನ್ನು ಬಿಡುಬೀಸಾಗಿ ಚಾಚಿದ್ದಾರೆ. ಬೇಂದ್ರೆಯವರೂ ಅವರ ಮಗ ವಾಮನ ಅವರೂ ಕವನಗಳ ಸಂದರ್ಭಗಳನ್ನು ಆಯಾಯ ಕಾವ್ಯ ಸಂದರ್ಭಗಳಲ್ಲಿ ಹೇಳಿರುವುದೇನೊ ಉಂಟು. ಆದರೆ, ಎಲ್ಲ ಕವಿತೆಗಳಿಗೂ ಕವಿತೆಗಳಲ್ಲಿ ಕಾಣಿಸಿಕೊಳ್ಳುವ ಪದವೃಂದಕ್ಕೂ, ನುಡಿಗೂ ಸಾಲಿಗೂ ಬೇಂದ್ರೆಯವರು ಅರ್ಥ ಅಥವಾ ಭಾವಸಂದರ್ಭವನ್ನು ನೀಡಿಲ್ಲ. ಬೇಂದ್ರೆ ಕವಿತೆಗೆ ಪ್ರವೇಶ ಮಾಡುವವರು ಈಗೀಗ ನಾನಾ ಸ್ತರದಿಂದ ಬರುತ್ತಿದ್ದಾರೆ. ಹೀಗಾಗಿ, ಉತ್ತರಕರ್ನಾಟಕದ ಸಾಂಸ್ಕೃತಿಕ ಪದಕೋಶವನ್ನು ನಾವು ತಿಳಿದಿರಬೇಕಾಗುತ್ತದೆ. ವಿಶಿಷ್ಟವಾದ ಜಾನಪದ ಸಂಗತಿಯನ್ನು ಅರಿತಿರಬೇಕಾಗುತ್ತದೆ. ಇದಾವುದರ ಪರಿಚಯ ಇಲ್ಲದಿರುವವರಿಗೆ ಬೇಂದ್ರೆಕಾವ್ಯ ವಾಚ್ಯಾರ್ಥದ ನೆಲೆಯಲ್ಲಿ ಮಾತ್ರ ನಿಂತುಬಿಡುತ್ತದೆ! ಉತ್ತರಕರ್ನಾಟಕದ ಸೀಮೆ-ಬೇರಾವ ಸೀಮೆಗಿಂತಲೂ ವಿಶಿಷ್ಟವಾದುದೇ ಸೈ. ಹಳ್ಳಿಗರ ವಿಶಿಷ್ಟ ಬದುಕನ್ನು ಬೇಂದ್ರೆ ಆಳವಾಗಿ ಕಂಡವರಷ್ಟೆ. ಅಲ್ಲಿ ನಡೆಯುತ್ತಿದ್ದ ಸಂತೆ, ಹಬ್ಬ, ಮದುವೆ, ಮುಂಜಿ, ದೈವದ ಆರಾಧನೆ, ಪ್ರಕೃತಿಪೂಜೆ, ಪಾರಂಪರಿಕವಾಗಿ ಬಂದಂಥ ವಿಶಿಷ್ಟ ಆಚರಣೆ ಮುಂತಾದವುಗಳು ಬೇಂದ್ರೆ ಕಾವ್ಯದಲ್ಲಿ ಎಲ್ಲೆಲ್ಲಿಂದಲೋ

ಹಾಸುಹೊಕ್ಕಾಗಿ ಇಂಚು ಇಂಚಾಗಿ ಬರುತ್ತವೆ. ಅವುಗಳ ಅರ್ಥಭಾವಗಳನ್ನೊ ಗತಿಗಳನ್ನೊ ಹಿನ್ನೆಲೆಯನ್ನೊ ತಿಳಿಯಬೇಕಾದರೆ ಬಲ್ಲಿದರ ಸಂಪರ್ಕವನ್ನು ನಾವು ಅವಲಂಬಿಸಬೇಕಾಗುತ್ತದೆ. ಈಗೀಗಂತೂ ಇದು ದುರ್ಲಭವೇ ಆಗಿದೆ.

ಬೇಂದ್ರೆಕಾವ್ಯದ ಯಾನಕ್ಕೆ ಇದೀಗ ನೂರುವರ್ಷ ತುಂಬುತ್ತಿದೆ. ನೂರುವರ್ಷದ ಅವಧಿಯಲ್ಲಿ ನಮ್ಮ ಸಮಾಜದಲ್ಲಿ ಎಷ್ಟೋ ಬದಲಾವಣೆಗಳು ಘಟಿಸಿವೆ. ಅದರಲ್ಲೂ ಕಳೆದ ಮೂವತ್ತು ವರ್ಷಗಳ ಈಚೆಗೆ ವಿದ್ಯುನ್ಮಾನ-ತಂತ್ರಜ್ಞಾನ ಹಾಗೂ ಮಾಹಿತಿಜ್ಞಾನದಲ್ಲಿ ಆಗಿರುವ ವೇಗೋತ್ಕರ್ಷ ಪರಿಣಾಮಗಳು ನಾವು ಊಹಿಸುವುದಕ್ಕೂ ಸಾಧ್ಯವಾಗಿಲ್ಲದಿರುವುದು ಎಲ್ಲರಿಗೂ ತಿಳಿದ ಸಂಗತಿಯೇ. ಇಂಥ ಸಂದರ್ಭದಲ್ಲಿ 'ಬೇಂದ್ರೆಕಾವ್ಯ'ವನ್ನು ತಿಳಿಯುವ ಬಗೆ ಹೇಗೆ? ಅದಕ್ಕೆ ಉತ್ತರರೂಪವಾಗಿ ಡಾ.ಜಿ.ಕೃಷ್ಣಪ್ಪನವರು 'ಬೇಂದ್ರೆಕಾವ್ಯ: ಪದನಿರುಕ್ತ'ವನ್ನು ನಮ್ಮ ಕೈಗೆ ಇಡುತ್ತಿದ್ದಾರೆ. ಬೇಂದ್ರೆಕಾವ್ಯಸಹೃದಯರು ಇದನ್ನು ತಮ್ಮ ಬಳಿಯಿಟ್ಟುಕೊಳ್ಳಬೇಕು; ಆಧುನಿಕ ವಿಮರ್ಶಾ ಮೂರ್ಧನ್ಯರೂ ಇದರ ಜತೆ ಓಲಾಡಬೇಕು. ಬೇಂದ್ರೆಕಾವ್ಯ ಸಮುದ್ರದಲ್ಲಿ ಕುಂಗನ ರೀತಿಯಲ್ಲಿ ಡಾ.ಜಿ.ಕೃಷ್ಣಪ್ಪನವರು ಅಸೀಮಸಾಹಸವನ್ನು ಮೆರೆದಿದ್ದಾರೆ. ಇದು ನಿಜಕ್ಕೂ ಕುಂಭಕಪ್ರಾಣಾಯಾಮವೇ ಸರಿ. ಕಾವ್ಯಪ್ರಾಣಾಯಾಮದಲ್ಲಿ ಪೂರಕ ಮಾಡಿಕೊಳ್ಳಬಹುದು; ರೇಚಕವನ್ನೂ ಮಾಡಿಕೊಳ್ಳಬಹುದು. ಆದರೆ, ಬೇಂದ್ರೆಕಾವ್ಯದ ಅರ್ಥದ ವಿಶೇಷತೆಗಳನ್ನು ಕುಂಭಕಧ್ಯಾನದಲ್ಲಿ ನೆಲೆನಿಂತು ಅರಸಬೇಕಾದರೆ ಜಿ. ಕೃಷ್ಣಪ್ಪನವರ ಈ ಕೃತಿ ನಮಗೆ ಸಹಾಯ ಮಾಡುತ್ತದೆ. ಡಾ.ಜಿ.ಕೃಷ್ಣಪ್ಪನವರ ಕೃತಿಯಿಲ್ಲದೆ ಬೇಂದ್ರೆಯವರ ಕಾವ್ಯಪ್ರವೇಶ ಅಸಾಧ್ಯವೆಂದೇ ನನ್ನ ತಿಳಿವಳಿಕೆ. ಬೇಂದ್ರೆಕಾವ್ಯ ಸಾಂಕೇತಿಕವಾಗಿ ಪುರುಷಸೂಕ್ತವೇ ಹೌದು. ಇಲ್ಲಿ ಸಾವಿರ ಕಣ್ಣುಗಳುಂಟು, ಸಾವಿರ ಕಿವಿಗಳುಂಟು, ಆದರೆ, ಅದನ್ನು ಹುಡುಕುವ ಒಳಗಣ್ಣೂ ಬೇಕು. ಈ ಮನುಷ್ಯನ ಹೊರಗಣ್ಣು (ಚರ್ಮಚಕ್ಷು) ಎಷ್ಟೆಂದು ತಿಳಿದೀತು. ಅದು ಬೌದ್ಧಿಕ ನೆಲೆಯದೇ. ಆದರೆ, ಒಳಗಣ್ಣಿನ ನೋಟದಿಂದ ಮಾತ್ರ ಬೇಂದ್ರೆಕಾವ್ಯ ನಮ್ಮ ಹೃದಯಸಂವಾದಕ್ಕೆ ಹತ್ತಿರವಾಗುತ್ತದೆ!

ಡಾ. ಜಿ.ಕೃಷ್ಣಪ್ಪ ಅವರು ಮೊದಲು ಪದರೂಪವನ್ನು ಕೊಟ್ಟು, ಅದು ಬಳಕೆಯಾಗಿರುವ ಕವಿತೆಯಿಂದ ವಾಕ್ಯಬೃಂದವನ್ನು ಆರಿಸಿಕೊಡುತ್ತಾರೆ. ಅನಂತರ ಅರ್ಥವನ್ನು ನೀಡುತ್ತಾರೆ. ಕೆಲವೊಮ್ಮೆ ಪ್ರಾಥಮಿಕ ಅರ್ಥವನ್ನೂ ನೀಡುತ್ತಾರೆ. ಇಲ್ಲದೆ ಹೋದರೆ ಒಂದಕ್ಕಿಂತ ಹೆಚ್ಚು ಅರ್ಥದ ಮೈ ಇರುವುದನ್ನು ಕೊಟ್ಟು ಆಲಂಕಾರಿಕ ರೂಪ ಮತ್ತು ಅದರ ಸ್ವರೂಪಾರ್ಥವನ್ನು ಅಲ್ಲಲ್ಲಿ ನೀಡಿರುವುದೂ ಉಂಟು. ಕೆಲವೊಮ್ಮೆ ವಿವರವಾದ ಟಿಪ್ಪಣಿಗಳೂ ಅಲ್ಲಲ್ಲಿ ಬಂದಿವೆ. ಇದು ಕೃಷ್ಣಪ್ಪನವರು ಬೇಂದ್ರೆಕಾವ್ಯದ 'ಪದನಿರುಕ್ತ'ಕ್ಕೆ ಮಾಡಿಕೊಂಡಿರುವ ಸ್ಥೂಲವಾದ ಅರ್ಥಪ್ರಪಂಚ. ಇದು ವೈಜ್ಞಾನಿಕವಾಗಿ ಸರಿಯಾಗಿದೆ. ಬೇಂದ್ರೆಯವರು

ನಾನು ಹಿಂದೆ ತಿಳಿಸಿದಂತೆ, ಈಗೀಗ ಕಣ್ಮರೆಯಾಗಿರುವ ಅನೇಕ ಜಾನಪದ ಪ್ರಕಾರಗಳಿಂದ ಪದರೂಪಗಳನ್ನು ಮರುರೂಪಗೊಳಿಸಿ ಕೊಟ್ಟಿರುವುದೂ ಉಂಟು! ನಡುಗನ್ನಡಕಾವ್ಯದಲ್ಲಿ ಬಳಕೆಗೊಂಡಿದ್ದರೆ, ಅಂಥರೂಪಗಳನ್ನು ಹೆಕ್ಕಿ ನೀಡಿರುವುದೂ ಉಂಟು! ಸಂಗೀತಪ್ರಕಾರಗಳಿಂದ, ದರ್ಶನಶಾಸ್ತ್ರಗಳಿಂದ ಅಪೂರ್ವ ಪದಗಳನ್ನು ಗುರುತಿಸಿರುವುದೂ ಇಲ್ಲುಂಟು. ನಾವು ಅವುಗಳನ್ನು ಕಾವ್ಯಸಂದರ್ಭದ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತೇವೆ. ಆದರೆ, ಸ್ಥೂಲವಾದ ಅರ್ಥ ಮಾತ್ರ ಆಗ ಹೊಳೆಯುತ್ತದೆಯೇ ಹೊರತು; ಸೂಕ್ಷ್ಮವಾದ ಅರ್ಥ ನಮ್ಮಿಂದ ದೂರವೇ ನಿಲ್ಲುತ್ತದೆ. ಉದಾ. ಅಮನಸ್ಕ, ಅಜಪ ಮುಂತಾದ ಕೆಲವು ಪದಗಳನ್ನು ಎತ್ತಿ ಹೇಳಬಹುದು! ಇವು ಕೆಲವೊಮ್ಮೆ ತಂತ್ರ, ಆಗಮ, ದರ್ಶನಶಾಸ್ತ್ರಗಳಲ್ಲಿ ಬೇರೆಬೇರೆ ಅರ್ಥಛಾಯೆಯಲ್ಲಿ ಹೇಳಿರುವುದೂ ಉಂಟು. ಅವುಗಳನ್ನು ಗಮನಿಸಿದಾಗ ಮಾತ್ರ ಕಾವ್ಯದ ಸಂಪೂರ್ಣ ನೇಯ್ಗೆ ಹಾಗೂ ಅದರ ಸ್ವರೂಪಾರ್ಥ ನಮಗೆ ತಿಳಿದೀತು!

ಹಿರಿಯರಾದ ಡಾ. ಜಿ.ಕೃಷ್ಣಪ್ಪ ಅವರು ತಮ್ಮ ಜೀವಮಾನದ ಸಾಧನೆಯೆಂಬಂತೆ ಈ ಗ್ರಂಥವನ್ನು ಬಹು ಪರಿಶ್ರಮ ಪಟ್ಟು ಸಿದ್ಧಪಡಿಸಿದ್ದಾರೆ. ಅವರ ಪರಿಶ್ರಮ ಸಫಲವಾಗಬೇಕಾದರೆ ಸಹೃದಯರು, ಕಾವ್ಯಾಭಿಮಾನಿಗಳು, ಶಾಸ್ತ್ರಾಸಕ್ತರು ಇದನ್ನು ಖಂಡಿತ ಓದಿ ತಿಳಿಯಬೇಕು! ವರಕವಿ ಬೇಂದ್ರೆಕಾವ್ಯ ಎಲ್ಲಿಯ ವರೆಗೆ ನಮ್ಮ ಹೃದಯದಲ್ಲಿ ನೆಲೆನಿಂತಿರುತ್ತದೋ ಅಲ್ಲಿಯ ವರೆಗೆ 'ಬೇಂದ್ರೆಕಾವ್ಯ:ಪದನಿರುಕ್ತ' ನಮ್ಮೊಡನೆ ತದ್ಗತವಾಗಿರುತ್ತದೆಂದು ಹೇಳಿದರೆ ತಪ್ಪಾಗಲಾರದು! ಅವರ ಈಕೃತಿ ಕಾವ್ಯಸಹೃದಯರ ಮನಸ್ಸಿನಲ್ಲಿ ನೆಲೆಸಲಿ; ಕನ್ನಡಜನರ ಕಾವ್ಯಭಂಡಾರಕ್ಕೆ ಅನನ್ಯವಾದ ಸಂಪತ್ತಾಗಲಿ ಎಂದು ನಾನು ಮನವಾರೆ ಆಶಿಸುತ್ತೇನೆ.

**ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ**
ವಿಶ್ರಾಂತ ಕುಲಪತಿಗಳು

ಮೊ: ೯೪೪೮೨೯೧೮೦೨

e mail : mallepuram@yahoo.com

# ಸವಿನುಡಿ

ಡಾ॥ ಜಿ. ಕೃಷ್ಣಪ್ಪನವರು ಮೂಲತಃ ಆಟೊಮೊಬೈಲ್ ಇಂಜಿನಿಯರ್. ಮೋಟಾರು ವಾಹನಗಳ ಪರಿವೀಕ್ಷಕರಾಗಿ, ಎ.ಆರ್.ಟಿ.ಒ. ಪದವಿಯವರೆಗೆ ಏರಿ ನಿವೃತ್ತರಾಗಿದ್ದಾರೆ. ಬಾಲ್ಯಕಾಲದಿಂದಲೇ ಬೇಂದ್ರೆಯವರ ಕಾವ್ಯದ ಬಗ್ಗೆ ಹೇಗೋ ಏನೋ ಆಸಕ್ತಿ-ಅಭಿಮಾನಗಳುಂಟಾಗಿ ಅದನ್ನು ಜೀವನದುದ್ದಕ್ಕೂ ಪೋಷಿಸಿಕೊಂಡು ಬಂದ ಅಪೂರ್ವ ವ್ಯಕ್ತಿ ಕೃಷ್ಣಪ್ಪನವರು. ಜೀವನ ನಿರ್ವಹಣೆಗೆ ಪರಿವೀಕ್ಷಕ ಹುದ್ದೆ, ಅದು ಅವರಿಗೆ ವೃತ್ತಿ. ಆದರೆ ಬೇಂದ್ರೆ ಕಾವ್ಯದ ಅಧ್ಯಯನವಾದರೋ ಪ್ರವೃತ್ತಿಯಾಗಿ ಎಲ್ಲಿ ಹೋದರೂ ಅದು ಅವರ ಬೆನ್ನು ಬಿಡಲಿಲ್ಲ. "ಕನ್ನಡದಲ್ಲಿ ಎಂ.ಎ ಪದವಿ ಗಳಿಸಿಕೊಂಡರೆ ಅದು ನನ್ನ ಬೇಂದ್ರೆ ಕಾವ್ಯಾಧ್ಯಯನಕ್ಕೆ ಹೆಚ್ಚು ಉಪಕಾರವಾದೀತೇನೊ" ಎಂಬ ವಿಚಾರ ಅವರ ಮನಸ್ಸಿಗೆ ಬಂದುದೇ ಕಾರಣವಾಗಿ ಮುಕ್ತ ವಿಶ್ವವಿದ್ಯಾನಿಲಯದಿಂದ ಆ ಪದವಿಯನ್ನು ತಮ್ಮದಾಗಿಸಿಕೊಂಡರು.

"ಬೇಂದ್ರೆಯವರ ಕಾವ್ಯವನ್ನು ಕುರಿತು ಅಧ್ಯಯನ ನಡೆಸಿ ಡಾಕ್ಟರೇಟ್ ಪದವಿ ಪಡೆದುಕೊಂಡರೆ ನಾನು ಹೆಚ್ಚು ಪರಿಣಾಮಕಾರಿಯಾಗಿ ಮುಂದುವರಿಯ ಬಹುದೇನೊ" ಎಂಬ ವಿಚಾರ ಅಲ್ಲಿಂದ ಮುಂದಕ್ಕೆ ಅವರ ಚಿತ್ತವನ್ನು ಆಕ್ರಮಿಸಿಕೊಂಡಿತು. ಮನಸ್ಸಿನಲ್ಲಿ ಏನಾದರು ಸಂಕಲ್ಪ ಮೂಡಿತೆಂದರೆ ಮುಗಿಯಿತು. ಕೃಷ್ಣಪ್ಪನವರು ಅದನ್ನು ಸಾಧಿಸಿಯೇ ತೀರುವ ಜಾಯಮಾನಕ್ಕೆ ಸೇರಿದವರು. 'ಬೇಂದ್ರೆ ಸಾಹಿತ್ಯದಲ್ಲಿ ಸ್ತ್ರೀ : ಒಂದು ಅಧ್ಯಯನ' ಎಂಬ ವಿಷಯವನ್ನು ಕೈಗೆತ್ತಿಕೊಂಡು ತಲಸ್ಪರ್ಶಿಯಾದ ಅಧ್ಯಯನ ನಡೆಸಿ ಮಹಾಪ್ರಬಂಧವನ್ನು ಮಂಡಿಸಿ ಡಾಕ್ಟರ್ ಕೃಷ್ಣಪ್ಪ ಆಗಿಬಿಟ್ಟರು. ಆ ಮಹಾಪ್ರಬಂಧವನ್ನು ಕೃಷ್ಣಪ್ಪನವರು ಪ್ರಕಟಮಾಡಿಯೂ ಇದ್ದಾರೆ.

ಬೇಂದ್ರೆಯವರ ಕಾವ್ಯವನ್ನು ಪ್ರೀತಿಸಿದ್ದಲ್ಲದೆ, ಕೃಷ್ಣಪ್ಪನವರು ಅವರ ಜೀವನವನ್ನೂ ಪ್ರೀತಿಸಿದರು. ಅದರ ಫಲವಾಗಿ 'ಹಾಡುಹಕ್ಕಿ ಅಂಬಿಕಾತನಯದತ್ತ' ಎಂಬ ಹೆಸರಿನಲ್ಲಿ ಸುಬೋಧವಾಗಿ ಗ್ರಂಥವೊಂದನ್ನು ಹೊರತಂದಿದ್ದಾರೆ. ಅದರ ಮುಖಪುಟದ ಮೇಲೆ ಬೇಂದ್ರೆಯವರ ಒಂದು ಅಪರೂಪದ ಚಿತ್ರವಿದೆ. 'ಡಿ.ಆರ್.ಬೇಂದ್ರೆ' ಎಂಬ ಶೀರ್ಷಿಕೆಯಲ್ಲಿ ಕೃಷ್ಣಪ್ಪನವರು ಆಂಗ್ಲಭಾಷೆಯಲ್ಲೂ ಜೀವನಚರಿತ್ರೆ ಮತ್ತು ಕಾವ್ಯ ಸಿದ್ಧಿಗಳ ಸಾರಪೂರ್ಣವಾದ ಗ್ರಂಥವೊಂದನ್ನು ರಚಿಸಿದ್ದು, ಅದನ್ನು ಮೈಸೂರು ವಿಶ್ವವಿದ್ಯಾಲಯವೇ ಪ್ರಕಟಿಸಿದೆ.

ಬೇಂದ್ರೆ ಕಾವ್ಯದ ಅಧ್ಯಯನಕ್ಕೇ ತಮ್ಮನ್ನು ಪರಿಪೂರ್ಣವಾಗಿ ಸಮರ್ಪಿಸಿಕೊಂಡ ಕೃಷ್ಣಪ್ಪನವರು 'ನಾಕುತಂತಿ : ಒಂದುಟಿಪ್ಪಣಿ', 'ಹೂತದ ಹುಣಸಿ', 'ಬರೆಹದಲ್ಲಿ ಬೇಂದ್ರೆಯವರ ಬದುಕು', 'ಅಂತರಂಗದತ್ತನಯನ', 'ತಿರುತಿರುಗಿಯು ಹೊಸತಾಗಿರಿ', 'ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ' ಮೊದಲಾದ ಕೆಲವು ವಿಮರ್ಶಾ

ಕೃತಿಗಳನ್ನು ಪ್ರಕಟಿಸಿ, ಬೇಂದ್ರೆ ಕಾವ್ಯಾಧ್ಯಯನಕ್ಕೊಂದು ವಿಶೇಷ ಚಾಲನೆ ನೀಡಿದ್ದಾರೆ. ಬೇಂದ್ರೆಯವರನ್ನು ಕುರಿತಂತೆ ಕನ್ನಡ ನಾಡಿನ ವಿವಿಧ ಭಾಗಗಳಲ್ಲಿ ನಡೆದ ಕೆಲವು ಪ್ರೌಢ ವಿಚಾರಗೋಷ್ಠಿಗಳಲ್ಲಿ ಪಾಲ್ಗೊಂಡು, ತಮ್ಮ ಪ್ರಬಂಧಗಳನ್ನು ಮಂಡಿಸಿ ಯಶಸ್ವಿಯಾಗಿದ್ದಾರೆ.

ಬೇಂದ್ರೆಯವರನ್ನು ಕುರಿತಂತೆ ಇದೆಲ್ಲವೂ ಬರವಣಿಗೆ ಮತ್ತು ಗ್ರಂಥ ಪ್ರಕಟಣೆಯ ದಿಕ್ಕಿನಲ್ಲಿ ಅವರು ಮಾಡಿದ ಸಾಧನೆಯಾದರೆ, ಬೇಂದ್ರೆಯವರ ಕಾವ್ಯದ "ಬಹಿರಂಗ ಪ್ರಚಾರ"ಕ್ಕೆ ಕೃಷ್ಣಪ್ಪನವರು ತೊಡಗಿದ್ದು ಅತ್ಯಂತ ಉಲ್ಲೇಖನೀಯವಾದ ವಿಚಾರ. ನಾಡಿನ ವಿವಿಧ ಶಾಲೆ ಕಾಲೇಜುಗಳನ್ನು ಪ್ರವೇಶಿಸಿ, ಅಲ್ಲಿ ಬೇಂದ್ರೆ ಕವನ ಗಾಯನ ಸ್ಪರ್ಧೆಗಳನ್ನು ಕೃಷ್ಣಪ್ಪನವರು ವಿಜೃಂಭಣೆಯಿಂದ ಏರ್ಪಡಿಸಿದ್ದಾರೆ. ಬಹುಮಾನಿತರಿಗೆ ಬೇಂದ್ರೆಯವರ ಕೃತಿಗಳನ್ನು ಕೊಟ್ಟು, ಅವರಲ್ಲಿ ಬೇಂದ್ರೆಕಾವ್ಯಾಸಕ್ತಿಯನ್ನು ಮೂಡಿಸಿದ್ದಾರೆ.

ಕನ್ನಡನಾಡಿನ ವಿವಿಧ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ಎಂ.ಎ. ಓದುತ್ತಿರುವ ವಿದ್ಯಾರ್ಥಿಗಳ ನಡುವೆ ಬೇಂದ್ರೆಕಾವ್ಯ ವಿಮರ್ಶೆಯ ಸ್ಪರ್ಧೆಯನ್ನೇರ್ಪಡಿಸಿ, ಬೇಂದ್ರೆ ಕಾವ್ಯವಿಮರ್ಶೆಗೊಂದು ಹೊಸ ಹಾದಿಯನ್ನು ತೆರೆದಿದ್ದಾರೆ. ಬಹುಮಾನಿತರಿಗೆ ನಾಲ್ಕು ಸಾವಿರ, ಮೂರು ಸಾವಿರ, ಎರಡು ಸಾವಿರ ಎಂಬಂತೆ ದ್ರವ್ಯ ಬಹುಮಾನವಿತ್ತು ಗೌರವಿಸಿದ್ದಾರೆ. ಬಹುಮಾನಿತ ಲೇಖನಗಳ ಕೆಲವು ಚಿಕ್ಕ ಹೊತ್ತಿಗೆಗಳನ್ನೂ ಹೊರತಂದಿದ್ದಾರೆ. ಬೇಂದ್ರೆಯವರನ್ನು ಕುರಿತಂತೆ ಕವನ ರಚಿಸುವ ಕಮ್ಮಟಗಳು, ಸ್ಪರ್ಧೆಗಳನ್ನು ಏರ್ಪಡಿಸಿದ್ದಾರೆ.

ಬೇಂದ್ರೆಯವರ ಹೆಸರಿನಲ್ಲೊಂದು ಕಾವ್ಯಕೂಟವನ್ನು ಮಾಡಿಕೊಂಡು ಕೃಷ್ಣಪ್ಪನವರು ಬೇಂದ್ರೆ ಹುಟ್ಟುಹಬ್ಬವನ್ನು ಆಚರಿಸುವುದು, ಬೇಂದ್ರೆ ಕಾವ್ಯಾಭಿಮಾನಿಗಳಿಗೆ ಸನ್ಮಾನ ಮಾಡುವುದು ಮೊದಲಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಎಲ್ಲವನ್ನೂ ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಚಾಮರಾಜನಗರ ಜಿಲ್ಲೆಯಿಂದ ಬೀದರ್ ಜಿಲ್ಲೆಯವರೆಗೆ ಇದುವರೆಗೆ ಕೃಷ್ಣಪ್ಪನವರು ಸರಿಸುಮಾರು 600 ಕಾರ್ಯಕ್ರಮಗಳನ್ನು ನಡೆಸಿ ಗೆದ್ದಿದ್ದಾರೆ.

ಯಾವುದಾದರೊಂದು ವಿಶ್ವವಿದ್ಯಾನಿಲಯ, ಯಾವುದಾದರೊಂದು ಫೌಂಡೇಶನ್, ಯಾವುದಾದರೊಂದು ಅಧ್ಯಯನ ಪೀಠ–ಮಾಡಬಹುದಾದಷ್ಟು ಬೇಂದ್ರೆಕಾರ್ಯಗಳನ್ನು ಕೃಷ್ಣಪ್ಪನವರು ಅಸಹಾಯಶೂರರಾಗಿ, ಏಕಾಂಗಿಯಾಗಿ ಮಾಡಿದ್ದಾರೆ.

ಹಂಪಿ ಕನ್ನಡ ವಿಶ್ವವಿದ್ಯಾಲಯದ ದೂರಶಿಕ್ಷಣ ಕೇಂದ್ರದ ಎಂ.ಎ. ಪದವಿಗೆ 'ನಾದಲೀಲೆ' ಎಂಬ ಬೇಂದ್ರೆ ಪಠ್ಯದ ಮೇಲೆ ವಿದ್ಯಾರ್ಥಿಗಳಿಗೆ ಅಧ್ಯಯನ

ಪಾಠಗಳನ್ನು ಬರೆದುಕೊಟ್ಟಿದ್ದಾರೆ. ಬೇಂದ್ರೆಯವರ ನಾಟಕಗಳನ್ನು ರಂಗದ ಮೇಲೆ ತರುವ ಕಾರ್ಯ ಮಾಡಿದ್ದಾರೆ. ಅವರ ಕೆಲವು ಕವಿತೆಗಳನ್ನು 'ರೂಪಕ'ಗಳಾಗಿ ತಯಾರಿಸಿದ್ದಾರೆ. ಬೇಂದ್ರೆ ಕವಿತೆಗಳನ್ನೇ ಹಾಡುತ್ತಾ ಕಂಸಾಳೆ ಕಲಾವಿದರು ನೃತ್ಯ ಮಾಡುವ ಪ್ರಯೋಗವನ್ನೂ ನಡೆಸಿದ್ದಾರೆ. ಇಷ್ಟೆಲ್ಲದ್ದರ ಪರಿಣಾಮವಾಗಿ ಇಂದು ಕನ್ನಡ ಸಾಹಿತ್ಯ ಪ್ರೇಮಿಗಳ ನಡುವೆ ಕೃಷ್ಣಪ್ಪ ಎಂದರೆ "ಬೇಂದ್ರೆ ಕೃಷ್ಣಪ್ಪ ತಾನೆ" ಎಂಬಂತೆ ಮನೆಮಾತಾಗಿದ್ದಾರೆ. ಬೇಂದ್ರೆಯವರನ್ನು ಕುರಿತ "ಹುಚ್ಚನ್ನು" ಬಾಲ್ಯದಲ್ಲಿಯೇ ಹಿಡಿಸಿಕೊಂಡ ಕೃಷ್ಣಪ್ಪನವರು ಯೌವ್ವನ, ಮಧ್ಯವಯಸ್ಸು, ಇಳಿವಯಸ್ಸು ಮತ್ತು ಮುಪ್ಪು ಎಂಬ ಎಲ್ಲ ಹಂತಗಳಲ್ಲೂ ಆ "ಹುಚ್ಚಿನಿಂದ" ಬಿಡುಗಡೆಯಾಗದೆ ಹಾಗೆಯೇ ಮುನ್ನಡೆಯುತ್ತಿದ್ದಾರೆ.

ತಾಯಿಯೊಬ್ಬಳು ತನ್ನ ಮಗುವಿಗೆ ವಿಧವಿಧವಾದ ಅಲಂಕಾರಗಳನ್ನು ಮಾಡಿ, ಒಂದೊಂದು ಅಲಂಕಾರದಲ್ಲಿಯೂ "ಈಗ ನನ್ನ ಮಗು ಹೇಗೆ ಕಾಣಿಸುತ್ತಿದೆ" ಎಂದು ಕಣ್ತುಂಬ ನೋಡಿ ಹಿಗ್ಗುವಂತೆ, ಕೃಷ್ಣಪ್ಪನವರು ಬೇಂದ್ರೆಯವರ ಕಾವ್ಯರಾಶಿಯನ್ನು ಯಾವಯಾವ ಬಗೆಯಿಂದ ಲೋಕದ ಮುಂದೆ ಪರಿಣಾಮಕಾರಿಯಾಗಿ ಮಂಡಿಸಬಹುದೋ, ಆ ಸಾಧ್ಯತೆಗಳನ್ನೆಲ್ಲಾ ಸೂರೆಮಾಡಿದ್ದಾರೆ ಎಂದು ಹೇಳದೆ ವಿಧಿಯಿಲ್ಲ.

ಕವಿಯೊಬ್ಬನ ಕಾವ್ಯಗಳ ಸರ್ವಾಂಗೀಣ ಪ್ರಚಾರಕ್ಕೆ ತಮ್ಮ ಬದುಕನ್ನೇ ಮೀಸಲಾಗಿರಿಸಿ ದುಡಿದ, ದುಡಿಯುತ್ತಿರುವ ಕೃಷ್ಣಪ್ಪನವರಂತೆ ಇರುವ, "ವೀರಪುರುಷ"ನನ್ನು ನಾವು ಬೇರೆಲ್ಲಿಯೂ ಕಾಣಲಾರೆವು. "ಕೃಷ್ಣಪ್ಪನವರಿಗೆ ಕೃಷ್ಣಪ್ಪನವರೇ ಸಾಟಿ."

ಜೀವನಪರ್ಯಂತ ಬೇಂದ್ರೆ ಕಾವ್ಯಗಳ ಧ್ಯಾನ ಜಪಗಳನ್ನೇ ಮಾಡುತ್ತಾ ಬಂದಿರುವ ಕೃಷ್ಣಪ್ಪನವರು ಇದೀಗ ಅವರ ಕಾವ್ಯ ಪ್ರಪಂಚಕ್ಕೊಂದು ಶಕ್ತಿಶಾಲಿಯಾದ "ನಿರುಕ್ತ"ವನ್ನು ಕೊಟ್ಟಿದ್ದಾರೆ. ಈ ಕೋಶದ ಮೂಲಕ ಕೃಷ್ಣಪ್ಪನವರು ಸಾಧಿಸಿರುವುದಾದರೂ ಏನು ಎಂಬುದು, ಅದರ ಪುಟಗಳನ್ನು ತಿರುವಿ ಹಾಕುತ್ತಿದ್ದಂತೆ ವೇದ್ಯವಾಗಿಬಿಡುತ್ತದೆ. ವಿವರಿಸಿ ಹೇಳಬೇಕಾಗಿಯೇ ಇಲ್ಲ.

ಬೇಂದ್ರೆಯವರ ಕಾವ್ಯಗಳ ವಿಮರ್ಶೆಯ ಹಾದಿಯಲ್ಲಿ ಕೃಷ್ಣಪ್ಪನವರು ಒಂದು ಚಿನ್ನದ ಬಾಗಿಲನ್ನೇ ಈ ಕೋಶದ ಮೂಲಕ ತೆರೆದಿದ್ದಾರೆಂದರೆ ಅದು ಅತಿಶಯೋಕ್ತಿಯಲ್ಲ. ಬೇಂದ್ರೆಯವರ ಕಾವ್ಯವನ್ನು ಮೊದಲು ವಾಚ್ಯಾರ್ಥದ ನೆಲೆಯಲ್ಲಿ ಅರ್ಥಮಾಡಿಕೊಂಡು ತರುವಾಯ ಲಕ್ಷ್ಯಾರ್ಥ ಧ್ವನ್ಯಾರ್ಥಗಳ ಅಂತಸ್ತುಗಳನ್ನು ಕಟ್ಟಬೇಕು ಎಂದು ಬಯಸುವವರಿಗೆಲ್ಲ ಈ ಕೋಶವೊಂದು ತವನಿಧಿಯಂತಿದೆ. ಬೇಂದ್ರೆಯವರ ಕವಿತೆಗಳನ್ನು ಆಸ್ವಾದಿಸುವ, ಅರ್ಥೈಸುವ, ವಿಮರ್ಶಿಸುವ ದಿಕ್ಕಿನಲ್ಲಿ ಸಹೃದಯರಿಗೆ ಕೃಷ್ಣಪ್ಪನವರು ಹೊಸದೊಂದು "ಕಣ್ಣನ್ನೇ" ಕೊಟ್ಟಿದ್ದಾರೆ. "ನನ್ನ

ವಿಶ್ವರೂಪವನ್ನು ನೀನು ಸಾಮಾನ್ಯ ಕಣ್ಣುಗಳಿಂದ ನೋಡಲಾರೆಯಪ್ಪಾ, 'ದಿವ್ಯಂದದಾಮಿತೇ ಚಕ್ಷುಃ'- ನಿನಗೆ ದಿವ್ಯವಾದ ಕಣ್ಣುಗಳನ್ನು ಕೊಡುತ್ತೇನೆ." ಎಂದು ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ಹೇಳಿದ ಮಾತು ಈ ಹೊತ್ತಿನಲ್ಲಿ ನನಗೆ ನೆನಪಿಗೆ ಬರುತ್ತಿದೆ. ಈ ಕೋಶದ ಮೂಲಕ ಬೇಂದ್ರೆಯವರ ಕಾವ್ಯದ ವಿರಾಟ್‌ದರ್ಶನಕ್ಕೆ ಕೃಷ್ಣಪ್ಪನವರು ದಿವ್ಯವಾದ ಚಕ್ಷುಸ್ಸನ್ನೇ ಕೊಟ್ಟಿದ್ದಾರೆ. ಇದು ಬೇಂದ್ರೆಯವರನ್ನು ಕುರಿತಂತೆ ಕೃಷ್ಣಪ್ಪನವರು ಮಾಡಿರುವ "ಜೀವಮಾನದ ಸಾಧನೆ"ಎಂದು ನಿರ್ಭಯವಾಗಿ ಹೇಳಬಹುದು.

ಈ ಕೋಶರಚನೆಗಾಗಿ ಕೃಷ್ಣಪ್ಪನವರು ಎರಡು ದಶಕಕ್ಕೂ ಹೆಚ್ಚು ಕಾಲ ಹೆಣಗಿದ್ದಾರೆ. ಹತ್ತಾರು ಕೆರೆಗಳ ನೀರು ಕುಡಿದಿದ್ದಾರೆ. ಈವರೆಗೆ ಪ್ರಕಟವಾಗಿರುವ ಕೋಶಗಳನ್ನೆಲ್ಲಾ ಜಾಲಾಡಿದ್ದಾರೆ. ಈವರೆಗೆ ಪ್ರಕಟವಾಗಿರುವ ಬೇಂದ್ರೆಕಾವ್ಯ ಸಂಗ್ರಹಗಳಲ್ಲಿರುವ ಟಿಪ್ಪಣಿಗಳನ್ನೆಲ್ಲ ತಡಕಾಡಿದ್ದಾರೆ. ಬೇಂದ್ರೆಯವರು ಹುಟ್ಟಿ ಬೆಳೆದು ಕಾವ್ಯರಚನೆ ಮಾಡಿದ ಧಾರವಾಡ ಪರಿಸರದ ನೂರಾರು ಮಂದಿಯನ್ನು ಭೇಟಿಮಾಡಿ ಬೇಂದ್ರೆ ಕಾವ್ಯಗಳಲ್ಲಿ ಬಳಕೆಯಾಗಿರುವ ಅಚ್ಚಗನ್ನಡ ಪದಗಳಿಗೆ, ಪ್ರಾದೇಶಿಕ ಮಹತ್ವದ ಕನ್ನಡ ಪದಗಳಿಗೆ, ಕೆಲವು ವಿಶೇಷ ಸಂಸ್ಕೃತ ಪದಗಳಿಗೆ "ಇದಕ್ಕೇನರ್ಥ, ಅದಕ್ಕೇನರ್ಥ" ಎಂದು ಅವರ "ತಲೆತಿಂದು" ಇಂತಹ ಕೋಶವೊಂದಕ್ಕೆ ಜನಕರಾಗಿದ್ದಾರೆ.

ಕೊರಚು, ಹಾಳಿ, ಹಸುಮಗಳು, ಕಸೆ, ದೊರೆವಾಡು, ಹಿಂಜಾಪು, ಉಗೆವಾಡ, ಜೊಂಡಿಗ, ಸಲ್ಲಾಗು, ಕಂಕ, ಕಿಳ್ಳಿಕೇತ, ಚಾಂಗು, ನೆಲಬುರುಕಿ, ತಿಳಲು, ಬೀಸಲು, ಚವಲಂಬ, ಗೋದಲೆ, ಅಸರಂತ, ನಿಕ್ಕಳ–ಮುಂತಾದ ಶಬ್ದಗಳನ್ನು ಗಮನಿಸಬೇಕು. ಬೇಂದ್ರೆಯವರ ಭಾವಕ್ಕೆ ಹೊಂದುವಂತೆ, ಕೃಷ್ಣಪ್ಪನವರು ಅವುಗಳ ಅರ್ಥವನ್ನು ಶೋಧಿಸಿಕೊಟ್ಟಿದ್ದಾರೆ.

ಝುಂಝೂವಾತ, ಜಡಧಿ, ರಾಸಭ, ಅಪವರ್ಗ, ಔದುಂಬರ, ಸ್ಥಲ, ಜಪಾಕುಸುಮ, ಸಮ್ಯಕ್ಕು, ಸಂವಿತ್ತು, ತಮಸ್ಸು, ಪಿಪಾಸೆ, ಭೂಮ, ಚಷಕ, ಶಿಖಿ, ದ್ವಂದ್ವ, ಪಾಥೇಯ, ವಿಜ್ಞ, ಇಂದ್ರಚಾಪ, ಶಾಲ್ಮಲಿ ಮುಂತಾದ ಶಬ್ದಗಳಿಗೆ ಸಂಸ್ಕೃತ ಕೋಶಗಳಲ್ಲಿ, ಕನ್ನಡ ಕೋಶಗಳಲ್ಲಿ ಕೂಡ ಅರ್ಥಗಳು ದೊರೆಯುತ್ತವಾದರೂ ಕೃಷ್ಣಪ್ಪನವರು ಬೇಂದ್ರೆ ಕಾವ್ಯದ ಹಿನ್ನೆಲೆಯಲ್ಲಿ ಅವುಗಳ ಬಳಕೆಯ ಸಾರ್ಥಕತೆಯತ್ತ ಕಾವ್ಯಜಿಜ್ಞಾಸುಗಳ ಗಮನ ಸೆಳೆದಿದ್ದಾರೆ.

ಆರುಪಾರು, ಸೀಗೆಹುಣ್ಣಿಮೆ, ಬಾವಿಲಿ, ಅಂಗಲು, ಹಡಗಲು, ನಿವಳ, ರವದಿ, ನೆರೆವಾತು, ಹಳವಂಡ, ಭೋರಂಗ, ನಚ್ಚಿಗೆ, ಮಣ್ಣೆತ್ತು, ಕಂತು, ಹೊರಪು, ಕುರಿ, ಕನ್ನನಾರು, ವಿಚಿಕೇತ, ಒಟ್ಟಿತು, ತವದ, ಮದಗ, ಕಾಮಿ ಎಂಬ

ಶಬ್ದಗಳಿಗೆ ಅರ್ಥಮಾತ್ರವಲ್ಲದೆ ವಿಶೇಷವಾದ ಟಿಪ್ಪಣಿಗಳನ್ನು ಕೃಷ್ಣಪ್ಪನವರು ಜೋಡಿಸಿಕೊಟ್ಟಿದ್ದಾರೆ.

ಮಿಂಚಿನಾತಂತಿಯ ಮೇಲೆ ನಡೆವಾಕೆ, ಅರವಿಂದಮಯವಾದ ಮಾನಸವು, ಕಾಮದೊಳಗೆ ಹೂತಿದೆ ಪ್ರೇಮಾ, ಒಂಬತ್ತು ಗೆರಿ ದೇವರು, ಬಯಲಾಗಿರತಾರ, ಕಾರಹುಣ್ಣಿಮೆ, ಸಾಯಕಲ್ಲ ಮೇಲೆ ಟಾಂಗ ಹೊಡಿ, ಕಾಳ್ಯೋ ಮಾಳ್ಯೋ, ವಿಷ್ಣು ಸಹಸ್ರ ನಾಮ, ಸತ್ತ್ಯೋ ಮಗನ, ತಂತಿಯಲಿ ನಡೆಸಿದಳು, ಮಾವಿನ ಪೀಪಿ, ಮಂಗಾಟ, ಮುದ್ದೆ ಮೂರ್ತತೆಗೊಂಡು ಕೂಸಾಗಿದೆ, ತತ್ತಿಯನ್ನಿಟ್ಟಿತ್ತು ನವಮೇಘವು–ಎಂಬಂತ ಶಬ್ದಪುಂಜಗಳನ್ನು ಉದ್ಧರಿಸಿ ಅವುಗಳ ಅರ್ಥ ವಿಸ್ತಾರವೇನೆಂಬುದನ್ನು ವಿವರವಾಗಿ ಮನದಟ್ಟು ಮಾಡಿಸಿಕೊಟ್ಟಿದ್ದಾರೆ. ಆಟೊಮೊಬೈಲ್ ಕೃಷ್ಣಪ್ಪ ಎಲ್ಲಿ, ಬೇಂದ್ರೆ ನಿರುಕ್ತರಾದ ಕೃಷ್ಣಪ್ಪ ಎಲ್ಲಿ!

ಬೇಂದ್ರೆಕಾವ್ಯ ಪ್ರೇಮಿಗಳು, ವಿದ್ಯಾರ್ಥಿಗಳು ಈ ಕೋಶವನ್ನು ನೋಡಲೇಬೇಕು. ವಿಮರ್ಶಕರು ಪರಿಶೀಲಿಸಲೇಬೇಕು. ಸಂಶೋಧಕರು ತಮಗೆ ಬೇಕಾದುದ್ದನ್ನು ಇಲ್ಲಿ ಹುಡುಕಾಡಲೇಬೇಕು. ಅಧ್ಯಾಪಕರು ತಮ್ಮ ಬೋಧನೆಯು ಪರಿಣಾಮಕಾರಿಯಾಗಲು ಸಹಾಯ ಪಡೆಯಲೇಬೇಕು. ಕೋಶಕಾರರು ಕೋಶಗಳ ಪುನರ್ ಮುದ್ರಣದ ಹೊತ್ತಿನಲ್ಲಿ ಈ ಕೋಶವನ್ನೊಮ್ಮೆ ಅಧ್ಯಯನ ಮಾಡಬೇಕು. ಕೃಷ್ಣಪ್ಪನವರು ಈ 'ನಿರುಕ್ತ'ದ ಮೂಲಕ ಬೇಂದ್ರೆಕಾವ್ಯಕ್ಕೆ ಕೈಯಿಕ್ಕುವವರೆಲ್ಲ ಇದನ್ನು ಪರಿಶೀಲಿಸಲೇಬೇಕಾದ ಅನಿವಾರ್ಯತೆಯುಂಟಾಗುವಂತೆ ಮಾಡಿಬಿಟ್ಟಿದ್ದಾರೆ. ಕೃಷ್ಣಪ್ಪನವರ ಶ್ರಮ ಸಾರ್ಥಕವಾಗಿದೆ. ಅವರ ಕೀರ್ತಿಲತೆ ಸರ್ವತ್ರ ಹಬ್ಬಲಿ ಎಂದು ಹಾರೈಸುತ್ತೇನೆ.

**ಕೆ. ಅನಂತರಾಮು**
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ

# ಅರಿಕೆ

ಪ್ರೌಢಶಾಲಾ ವಿದ್ಯಾರ್ಥಿಯಾಗಿದ್ದಾಗ ನಾನು ಬೇಂದ್ರೆ ಕಾವ್ಯದ ನಾದಲಯಕ್ಕೆ ಒಳಗಾದೆ. ಅವರ ಭಾವಗೀತೆಗಳಲ್ಲಿರುವ ಉತ್ತರ ಕರ್ನಾಟಕದ ದೇಸಿ ಪದಗಳು ಹಾಗೂ ವಿಶಿಷ್ಟ ಕಾವ್ಯಕಲ್ಪನೆಯ ಓಘದಲ್ಲಿ ಹರಿದುಬಂದ ನುಡಿಗಳು ಆಗ ನನಗೆ ಅರ್ಥವಾಗುತ್ತಿರಲಿಲ್ಲ. ಹಾಗಾಗಿ, ಅವು ಪೂರ್ತಿ ನನ್ನವಾಗಲಿಲ್ಲ. ಬೇಂದ್ರೆ ಕಾವ್ಯವನ್ನು ಅಧ್ಯಯನ ಮಾಡುತ್ತ ಅವರು ಪ್ರಯೋಗಿಸಿರುವ ಪ್ರತಿ ಪದದ ಅರ್ಥ ತಿಳಿಯಲು ಪ್ರಾಮಾಣಿಕ ಪ್ರಯತ್ನ ನಡೆಸುತ್ತ ಸಾಗಿದೆ. ಕನ್ನಡಿಗರ ಸಂಸ್ಕೃತಿಯ ಅಗಾಧ ನಿಧಿಯನ್ನು ಶೋಧಿಸಿ ದೇಸಿ ಪದಗಳನ್ನು ಶಿಷ್ಟಕಾವ್ಯದಲ್ಲಿ ಕಸಿಗೊಳಿಸಿ; ಭಾರತೀಯ ತಾತ್ವಿಕಚಿಂತನೆಯ ಆಂತರ್ಯವನ್ನು ಪ್ರಕಾಶಿಸಿ ಬೇಂದ್ರೆಯವರು ಕಾವ್ಯ ಗಾರುಡಿಗರಾಗಿರುವುದು ತಿಳಿಯಿತು. ನನ್ನ ಅರಿವಿನ ಮಿತಿಯಲ್ಲಿ ಅರ್ಥವಾಗಿದ್ದನ್ನು ಕಾವ್ಯ ರಸಿಕರಿಗೆ ಒಪ್ಪಿಸುವ ಪ್ರಯತ್ನವಾಗಿ 'ಬೇಂದ್ರೆಕಾವ್ಯ: ಪದನಿರುಕ್ತ'ವನ್ನು ರಚಿಸಿದೆ.

ಬೇಂದ್ರೆ ಕಾವ್ಯವು ರಸಿಕನ ಮನೋಧರ್ಮಕ್ಕೆ ತಕ್ಕಂತೆ ರಸ ಒಸರುತ್ತದೆ. ಬೇಂದ್ರೆ ಕಾವ್ಯದಿಂದ ಹೊಮ್ಮಿ ಬರುವ ಪ್ರತಿ ಶಬ್ದ ನಿಸರ್ಗ ಸೃಷ್ಟಿಯ ಬೆಳಕು, ಬಣ್ಣ, ಬೆಡಗಿನ ಚಿಗುರು. ಅದು ಶ್ರವಣ ಪ್ರತಿಭೆಯ(ಆಡಿಟರಿ ಇಮ್ಯಾಜಿನೇಷನ್) ಫಲ. ಅದು 'ಕಣ್ಣು ಮಣ್ಣ ಕೂಡಲಲ್ಲಿ ಹಾಡು ಕಟ್ಟಿತಣ್ಣ' ಎಂಬ ಸಹಜ ಕಾವ್ಯಲಹರಿ. 'ಬರುವ ಸೃಷ್ಟಿಯ ಬೇಳೆಯೊಡೆದಿದೆ/ ಶಬ್ದವಾಗಿದೆ। ಶಬ್ದ ಕೇಳಣ್ಣ' ಎಂಬ ಅವರ ಆತ್ಮೀಯ ಕಂಪಿನ ಕರೆ. ಆ ಕಂಪು ಇಂಪಿನ ಶಾಂತಿ ಸಮಾಧಾನದ, ನೈತಿಕ ಮೌಲ್ಯಗಳ, ಮಾನವೀಯ ಅಂತಃಕರಣದ, ವಿಶ್ವದೊಳಿತಿನ ಬೇಂದ್ರೆಕಾವ್ಯ ಅಧ್ಯಯನ ಮಾಡುತ್ತಾ ಸಾಗಿದಂತೆ ಕನ್ನಡಿಗರ ಹಿರಿದಾದ ಸಂಸ್ಕೃತಿ ನನಗೆ ಅರಿವಾಯಿತು. ನಮ್ಮ ಜನಾಂಗದ ಸಂಚಿತ ನುಡಿ ಸಂಪತ್ತಿನ ಬಗ್ಗೆ ಅಭಿಮಾನವನ್ನು ನನ್ನಲ್ಲಿ ಮೂಡಿಸಿತು. ನಮ್ಮ ಭಾಷಾ ಸೊಬಗು ಸವಿದ ಆರ್ದ್ರತೆಯನ್ನು ಉಂಟು ಮಾಡಿತು.

ಸಾಹಿತ್ಯದಲ್ಲಿ ಅಧ್ಯಯನ ಎಂಬುದು ಹಲವು ನೆಲೆಗಳಲ್ಲಿ ವಿಸ್ತರಿಸಿಕೊಂಡಿದೆ. ಗ್ರಂಥಸಂಪಾದನೆಯಿಂದ ಹಿಡಿದು ಇಂದಿನ ಸಂಶೋಧನೆ, ವಿಮರ್ಶೆಗಳ ಹಲವು ತಾತ್ತ್ವಿಕ ನೆಲೆಗಟ್ಟಿನ ಚಿಂತನೆಗಳಿಗೆ ತೊಡಗಿ ಬಹುರೂಪಿ ಅಧ್ಯಯನವಾಗಿದೆ. ಕಾವ್ಯದ ಓದು ಕೂಡ ಶಾಸ್ತ್ರೀಯ ಅಧ್ಯಯನದಿಂದ ಆಚೆ ಬಂದು ಹಲವು ರೂಪಕಗಳ ಹೊಸ ಹಾದಿಯನ್ನು ಹಿಡಿದಿದೆ. ಮೂಲವನ್ನು ಸರಿಯಾಗಿ ತಿಳಿದುಕೊಂಡು ಹೊಸ ಅರಿವಿನತ್ತ ಸಾಗುವುದು ಉತ್ತಮ ವಿಮರ್ಶೆ. ಅದು ಆಗ ಬದುಕಿಗೆ ಹಾಸುಹೊಕ್ಕಾಗಿ ಬಾಳನ್ನು ಹಸನಾಗಿಸುತ್ತದೆ. ವಿಮರ್ಶೆಯೆಂಬುದು ಭಿನ್ನ ಭಿನ್ನ ಜ್ಞಾನಶಿಸ್ತಿನಲ್ಲೇ ಸಾಗದೆ ಅದೊಂದು ಸಹೃದಯ ಓದುಗರ

ಅನುಭವಸಾರ ವಾಗುವ ಮಾರ್ಗ ಹೆಚ್ಚು ಅರ್ಥಪೂರ್ಣ ಎನಿಸಿದೆ. ವಿಶ್ವಸಾಹಿತ್ಯದಲ್ಲಿಯೇ ಕನ್ನಡಸಾಹಿತ್ಯವು ವಿಭಿನ್ನವಾದುದು. ಅದರ ಅಧ್ಯಯನಕ್ಕೆ ಪ್ರಾದೇಶಿಕ ಅನುಭವಗಳಲ್ಲಿ ಭಾರತೀಯ ಶಾಸ್ತ್ರ ಚೌಕಟ್ಟಿನ ಶಿಸ್ತು ಅನುಸರಿಸಿ, ಪಾಶ್ಚಿಮಾತ್ಯ ಸಾಹಿತ್ಯ ವಿಮರ್ಶಾ ಮಾನದಂಡಗಳನ್ನು ಬಳಸಿಕೊಂಡು ಚಿಂತನೆ ನಡೆಸುವುದು ಹೆಚ್ಚು ಮೌಲಿಕವಾದುದೇ ಸರಿ. ಈ ಮೇಲಿನ ಮೂರು ಪರಿಧಿಗಳ ಹಿನ್ನೆಲೆಯಲ್ಲಿ ಬೇಂದ್ರೆ ಕಾವ್ಯದ ಅಧ್ಯಯನವನ್ನು ಮಾಡಿದ್ದೇನೆ. ಅವರು ಕಾವ್ಯದಲ್ಲಿ ಬಳಸಿರುವ ಪದಗಳ ಸಂಕೇತಾರ್ಥಗಳನ್ನು ಅಧ್ಯಯನ ಮಾಡುತ್ತ ಅವುಗಳು ವ್ಯಂಜಿಸುವ ಗೂಢಾರ್ಥಗಳನ್ನು ತಿಳಿಯುವ ಪ್ರಯತ್ನವನ್ನು ನಡೆಸಿದ್ದೇನೆ. ಅದನ್ನು 'ಬೇಂದ್ರೆಕಾವ್ಯ : ಪದನಿರುಕ್ತ'ವಾಗಿ ನೀಡಿದ್ದೇನೆ. ಈ ಅಧ್ಯಯನದಲ್ಲಿ ವಿಮರ್ಶೆ, ಸಂಶೋಧನೆ, ಶಬ್ದಕೋಶದ ಪ್ರಕಾಶವಿದೆ.

ಕನ್ನಡ ಭಾಷೆಯ ಮರುಸೃಷ್ಟಿಯೇ ಬೇಂದ್ರೆ ಕಾವ್ಯ. ಅವರು ಬಳಸಿರುವ ಪದಗಳ ವಿವಿಧ ಅರ್ಥಗಳು; ಕಾವ್ಯ ರಚನಾ ಸಂದರ್ಭಗಳು; ಜೀವನ ಮೌಲ್ಯಗಳು ಅವರ ಭಾವಗೀತೆಗಳಲ್ಲಿ ಮೈತುಂಬಿ ಬಂದಿವೆ. ಅವನ್ನು ಕುತೂಹಲದಿಂದ ಅಧ್ಯಯನ ಮಾಡಿದ್ದೇನೆ. ಬೇಂದ್ರೆ ಕಾವ್ಯದ ಹೊಳೆಯಲ್ಲಿ ನನ್ನ ಬೊಗಸೆಗೆ ಸಿಕ್ಕಷ್ಟನ್ನು ಕುಡಿದು ರುಚಿ ನೋಡಿದ್ದೇನೆ. ಅದನ್ನು ನನ್ನ ಅರಿವಿನ ಮಿತಿಯಲ್ಲಿ ಹೇಳಲು ಪ್ರಯತ್ನಿಸಿದ್ದೇನೆ. ಈ ಬಗೆಯ ಪ್ರಯತ್ನ ಕನ್ನಡ ಕಾವ್ಯ ಅಧ್ಯಯನದಲ್ಲಿ ಹೊಸತಾಗಿರಬಹುದೆಂದು ತೋರುತ್ತದೆ!

'ಬೇಂದ್ರೆಕಾವ್ಯ : ಪದನಿರುಕ್ತ'ದಲ್ಲಿ ಪದಗಳನ್ನು ಅಕಾರಾದಿಯಾಗಿ ನೀಡಿಲ್ಲ. ಪ್ರಕಟಣಾ ವರ್ಷವನ್ನು ಅನುಸರಿಸಿ ಕವನ ಸಂಕಲನಗಳನ್ನು ಕ್ರಮವಾಗಿ ಅಧ್ಯಯನ ಮಾಡಿದ್ದೇನೆ. ಆ ಕವನ ಸಂಕಲನದಲ್ಲಿರುವ ಕವನಗಳ ಕ್ರಮವನ್ನು ಅನುಸರಿಸಿ ಆಯಾ ಕವನದಲ್ಲಿ–ಕಾವ್ಯ ಸಹೃದಯನಾದ ಶ್ರೀಸಾಮಾನ್ಯನಿಗೆ ಅರ್ಥವಾಗದ ಕ್ಲಿಷ್ಟ, ವಿಶಿಷ್ಟ ಪದಗಳನ್ನು ಮಾತ್ರ ಆಯ್ಕೆ ಮಾಡಿಕೊಂಡಿದ್ದೇನೆ. ಬೇಂದ್ರೆ ಕಾವ್ಯದಲ್ಲಿರುವ ಎಲ್ಲ ಕವನಗಳು ಮತ್ತು ಎಲ್ಲ ಪದಗಳು ಇಲ್ಲಿಲ್ಲ.

ಈ ಅಧ್ಯಯನದಲ್ಲಿ ಕವನವನ್ನು ಮೊದಲು ಸೂಚಿಸಿದೆ. ಅದರ ಅಡಿಯಲ್ಲಿ ಆಯ್ಕೆ ಮಾಡಿದ ಪದವಿದೆ. ಆ ಪದಕ್ಕೆ ವ್ಯಾಕರಣ ರೂಪವನ್ನು ನಮೂದಿಸಿಲ್ಲ. ಕೆಲವು ಪದಗಳಿಗೆ ಅರ್ಥ ಮಾತ್ರ ನೀಡಿದೆ. ಕೆಲವು ಪದಗಳಿಗೆ ಅರ್ಥದ ಜೊತೆಗೆ ವಿವರಣೆ, ವಿಶ್ಲೇಷಣೆ, ವಿಶಿಷ್ಟ ಸಂದರ್ಭದ ವಿಶೇಷತೆಗಳನ್ನು ನೀಡಿ ವಿಮರ್ಶಾ ದೃಷ್ಟಿಯಿಂದ ಪರಿಶೀಲಿಸಿದೆ. ಕೆಲವು ಕಡೆ ಪೂರಕವಾಗಿ ಆ ಪದ ಪ್ರಯೋಗವಾಗಿರುವ ಬೇಂದ್ರೆಯವರ ಇತರ ಕವನಗಳ ಸಾಲುಗಳನ್ನು ನೀಡಿದೆ.

## ವಿಶಿಷ್ಟವಾಗಿ ಬಳಸಿರುವ ಚಿಹ್ನೆಗಳು

೧. ವಿವರಣ ವಿರಾಮ :

ಅರ್ಥ ಸೂಚನೆಯ ಚಿಹ್ನೆ.

೨. ಒಂದು ನಕ್ಷತ್ರ ಚಿಹ್ನೆ *

ವಿವರಣೆ ಸೂಚನೆಯ ಚಿಹ್ನೆ.

೩. ಎರಡು ನಕ್ಷತ್ರ ಚಿಹ್ನೆ * *

ಒಂದೇ ಕವನದ ಬೇರೆ ಬೇರೆ ನುಡಿಯ ಸಾಲುಗಳನ್ನು ಸೂಚಿಸಲು.

೪. ಮೂರು ನಕ್ಷತ್ರ ಚಿಹ್ನೆ ***

ಒಂದು ಕವನದ ಪದಕ್ಕೆ ವಿವರ ನೀಡುವಾಗ ಪೂರಕವಾಗಿ ಬೇರೊಂದು ಕವಿತೆಯ ಸಾಲುಗಳನ್ನು, ಅದರ ವಿವರಗಳನ್ನು ಸೂಚಿಸಲು ಬಳಸಿದ ಚಿಹ್ನೆ.

೫. ಆರು ನಕ್ಷತ್ರ ಚಿಹ್ನೆ * * * * * *

ಒಂದೇ ಕವನದ ಆಯ್ದ ಪದಗಳ ವಿವರವನ್ನು ಪ್ರತ್ಯೇಕವಾಗಿ ಸೂಚಿಸಲು.

೬. ಓರೆಯಾದ ಲಂಬಗೆರೆ /

ಅ. ಕವನದ ನುಡಿಯ ಸಾಲುಗಳನ್ನು ಪಕ್ಕಪಕ್ಕದಲ್ಲಿ ನೀಡುವಾಗ ಆ ಸಾಲುಗಳ ಪ್ರತ್ಯೇಕತೆಯನ್ನು ಸೂಚಿಸಲು.

ಆ. ವಿವರಣೆ ನೀಡುವಾಗ ಪದದ ಇನ್ನೊಂದು ಅರ್ಥವನ್ನು ಸೂಚಿಸಲು.

## ಅಕ್ಷರಗಳ ಗಾತ್ರ

೧೬ ಪಾಯಿಂಟ್ ದಪ್ಪ ಅಕ್ಷರ: ಕವನ ಸಂಕಲನದ ಹೆಸರು ಸೂಚಿಸಲು ಬಳಸಲಾಗಿದೆ.

೧೫ ಪಾಯಿಂಟ್ ದಪ್ಪ ಅಕ್ಷರ: ಕವನದ ಹೆಸರು ಸೂಚಿಸಲು ಬಳಸಲಾಗಿದೆ.

೧೪ ಪಾಯಿಂಟ್ ದಪ್ಪ ಅಕ್ಷರ: ಪದ ಸೂಚಿಸಲು ಬಳಸಲಾಗಿದೆ.

೧೨ ಪಾಯಿಂಟ್ ದಪ್ಪ ಅಕ್ಷರ: ಕವನದ ಸಾಲುಗಳನ್ನು ಸೂಚಿಸಲು ಬಳಸಲಾಗಿದೆ.

೧೨ ಪಾಯಿಂಟ್ ಸಾದಾ ಅಕ್ಷರ: ಅರ್ಥ ಮತ್ತು ವಿವರಣೆ ಸೂಚಿಸಲು ಬಳಸಲಾಗಿದೆ.

## ಅನ್ಯ ದೇಶ್ಯ ಶಬ್ದಗಳು

| | | | |
|---|---|---|---|
| ಮರಾ. | ಮರಾಠಿ | ಹಿಂ. | ಹಿಂದಿ |

| | | | |
|---|---|---|---|
| ತ. | ತಮಿಳು | ತೆ. | ತೆಲುಗು. |
| ಸಂ. | ಸಂಸ್ಕೃತ | ವೀಶೈ. | ವೀರಶೈವ |
| ಉ.ಕ | ಉತ್ತರಕರ್ನಾಟಕ | ಸಾ.ವಿ.ಸ್ವ. | ಸಾಹಿತ್ಯದ ವಿರಾಟ್ ಸ್ವರೂಪ |
| ಅರ. | ಅರಬ್ಬಿ | (ಆಲಂ). | ಅಲಂಕಾರಿಕವಾಗಿ |

ಬೇಂದ್ರೆ ಕಾವ್ಯದ ದೇಸಿ ಪದಗಳ ಅರ್ಥವನ್ನು ತಿಳಿಯಲು ನಾಡಿನಾದ್ಯಂತ ನಾನು ಪ್ರವಾಸ ಮಾಡಿದೆ. ರೈತರನ್ನು, ಕುಶಲಕರ್ಮಿಗಳನ್ನು, ಶಿಕ್ಷಕರನ್ನು, ಪ್ರಾಧ್ಯಾಪಕರನ್ನು, ಸಹೃದಯ ಸ್ನೇಹಿತರನ್ನು ಕಂಡು ನನಗೆ ಅರ್ಥವಾಗದ ಪದ, ಪದಸಮುಚ್ಚಯಗಳ ಬಗ್ಗೆ ಕೂಲಂಕಷವಾಗಿ ಚರ್ಚಿಸಿದೆ. ಪದಗಳು ಅರ್ಥ-ಭಾವದಲ್ಲಿ ಒಂದಾಗಿ ನಾದಮಯವಾಗಿರುವಾಗ ಅದು ನನಗೆ ಅರ್ಥವಾಗಿಲ್ಲವೆಂದು ಮೌನವಾಗಿ ಆ ಕವನದ ಸಾಲುಗಳನ್ನು ಧ್ಯಾನಿಸಿದೆ. ಆಗ ನನ್ನ ಅಳವಿಗೆ ಸಿಕ್ಕಷ್ಟು ಅರ್ಥವನ್ನು ನೀಡಿದೆ.

ಮದಗ, ಮುಕ್ಕು, ಅಂಗಲು, ಅಕ್ಕಿ, ಆರುಪಾರು, ಮದಗುಣಕಿ, ಗೊರಟಿಗೆ, ನಿವಳ, ತಿಗಳಿ, ಕೆಂಪೆಳ್ಳು, ಗುಂಭ, ಚಷಕ, ಕಲಲ, ಸಿಕ್ಕಲ್ಲು, ನಿಕ್ಕಳ, ಕಾಮಿ, ಗಂಟಿ ಚೌಡಿ, ಪಾಲಾಬಿಡು, ಹಿಂಡವಳ, ಹಡಗದ ಹುಡುಗಿ, ಕಳಘ, ತಿರುಗುಪ್ಪು(ತಿಳ್ಳಿ), ಗಳ್ಳಾಗಂಟಿ, ಬಿರ್‍ತರೆ, ಮಾವಿನ ಪೀಪಿ, ಒಂಭತ್ತುಗೆರಿ ದೇವರು, ಬೈಚಣ್ಣ, ತಾಳು, ಗುಂಗು, ಗಂಗಟಗಾಳ, ಅಳ್ಳಕ, ತ್ರಿವಾರ, ನೆಲಬುರುಕಿ ಇವೆ ಮುಂತಾದ ಪದಗಳು ಅರ್ಥವಾದಾಗ ಆದ ಕಾವ್ಯಾನಂದದ ಸವಿಯನ್ನು, ಕನ್ನಡ ಭಾಷಾ ಸಮೃದ್ಧಿಯನ್ನು, ಅಭಿವ್ಯಕ್ತಿ ಸಾಮರ್ಥ್ಯದ ಅರಿವನ್ನು ಈ ಕೃತಿಯಲ್ಲಿ ಸಹೃದಯರೊಡನೆ ಹಂಚಿಕೊಂಡಿದ್ದೇನೆ. ಇದು ಬೇಂದ್ರೆ ಕಾವ್ಯ ಪಾಠ ಮಾಡುವ ಶಿಕ್ಷಕರಿಗೆ ಉಪಯುಕ್ತವಾಗಬಹುದೆಂದು ಭಾವಿಸುತ್ತೇನೆ. ೧೯೮೮ರಲ್ಲಿ 'ಸಾಬಾಣ' ಪದದ ಅರ್ಥವನ್ನು ತಿಳಿಯಲು ವಾಮನ ಬೇಂದ್ರೆಯವರನ್ನು ಕೇಳಿದೆ. ಅವರು ನೀಡಿದ ಅರ್ಥದಿಂದ ನಾನು 'ಕುರುಡು ಕಾಂಚಾಣ' ಕವನವನ್ನು ಸರಿಯಾಗಿ ತಿಳಿದುಕೊಂಡೆ. ಶೋಷಣೆಯ ಕ್ರೂರ ಮುಖವನ್ನು ಪ್ರತಿಮಾತ್ಮಕವಾಗಿ ಚಿತ್ರಿಸಿರುವ ಬೇಂದ್ರೆಯವರ ಪ್ರತಿಭಾ ಶಕ್ತಿಗೆ ನಾನು ಶರಣಾದೆ. ೧೯೯೮ರಲ್ಲಿ ಪಿಎಚ್.ಡಿ ಅಧ್ಯಯನಕ್ಕಾಗಿ 'ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ' ವಿಷಯ ತೆಗೆದುಕೊಂಡೆ. ಮೈಸೂರಿನಲ್ಲಿ ಕೆಲಸಮಾಡುತ್ತಿದ್ದವನು ಧಾರವಾಡದಲ್ಲಿದ್ದು ಅಲ್ಲಿಯ ಪರಿಸರ, ಪ್ರಕೃತಿ, ಭಾಷಾ ಬಳಕೆ, ಜೀವನ ರೀತಿ ತಿಳಿಯಲು ಧಾರವಾಡಕ್ಕೆ ವರ್ಗ ಮಾಡಿಸಿಕೊಂಡೆ. ಅದು ನನಗೆ ಪಾಂಡುರಂಗ ಬೇಂದ್ರೆ, ವಾಮನ ಬೇಂದ್ರೆ, ಶಂಕರ ಮೊಕಾಶಿ ಪುಣೇಕರ ಅವರ ಸಾಮೀಪ್ಯವನ್ನು, ಪ್ರೀತಿ ಆದರಗಳನ್ನು ಒದಗಿಸಿತು. ಬೇಂದ್ರೆ ಕುಟುಂಬದ ತಾಯಿ ಶ್ರೀಮತಿ ಪದ್ಮ ಪಾಂಡುರಂಗ ಬೇಂದ್ರೆ, ಕು॥ ಪುನರ್ವಸು ಬೇಂದ್ರೆ, ಶ್ರೀಮತಿ ವೈಖರಿ

ಮಹೇಶ್ ದೇವಧರ್ ಅವರು ತೋರಿಸಿದ ಪ್ರೀತಿ ವಾತ್ಸಲ್ಯ ನನ್ನಲ್ಲಿ ಸದಾ ಹಸಿರಾಗಿದೆ. ಅಲ್ಲಿಯ ಸಂತೆ, ಜಾತ್ರೆಗಳಲ್ಲಿ ಓಡಾಡುತ್ತಾ ಧಾರವಾಡದ ಭಾಷೆಯ ಬನಿಯನ್ನು ನನ್ನದಾಗಿಸಿಕೊಂಡೆ. ಜನ ಬಳಸುವ ಪ್ರತಿ ಪದವೂ ನಮ್ಮ ಜೀವನ ಸಮೃದ್ಧಿಯ ಪ್ರತೀಕಗಳಾಗಿ ಕಂಡವು. ಅದನ್ನು ಬೇಂದ್ರೆ ಕಾವ್ಯದಲ್ಲಿ ಪ್ರತಿಮೆ, ರೂಪಕ, ಉಪಮಾನಗಳಲ್ಲಿ ಬಳಸಿರುವ ಬಗೆ ಒಂದು ಅಚ್ಚರಿಯಾಗಿ ಕಂಡು ಅದರ ಅಧ್ಯಯನದಲ್ಲಿ ತೊಡಗಿಕೊಂಡೆ. ಈ ವಿಚಾರವನ್ನು ನನ್ನ ಗುರುಗಳಾದ ಪ್ರೊ ಕೆ. ಅನಂತರಾಮು ಅವರ ಬಳಿ ಚರ್ಚಿಸಿದೆ. ಅವರ ಮಾರ್ಗದರ್ಶದಲ್ಲಿ 'ಬೇಂದ್ರೆಕಾವ್ಯ : ಪದನಿರುಕ್ತ' ರಚಿಸಿದೆ. ಅವರ ಆಶೀರ್ವಾದದ 'ಸವಿನುಡಿ'ಗೆ ನಾನು ಆಭಾರಿ ಯಾಗಿದ್ದೇನೆ.

ಬೇಂದ್ರೆ ಕಾವ್ಯದಲ್ಲಿ ಬಳಸಿರುವ ಪದಗಳ ಅರ್ಥಗಳನ್ನು ಸರಿಯಾಗಿ ತಿಳಿಯಲು ಬೇಂದ್ರೆಯವರ ಗೆಳೆಯರಾದ ಸಿಂಪಿ ಲಿಂಗಣ್ಣ ಮತ್ತು ಮಧುರಚೆನ್ನ ಅವರ ಮಕ್ಕಳಾದ ವೀರೇಂದ್ರ ಸಿಂಪಿ ಮತ್ತು ಪುರುಷೋತ್ತಮ ಗಲಗಲಿ ಅವರೊಡನೆ ಚರ್ಚಿಸಿದೆ. ಅವರ ಮಾರ್ಗದರ್ಶನವನ್ನು ಸದಾ ನೆನೆಯುತ್ತೇನೆ. ಬೇಂದ್ರೆ ಕಾವ್ಯಾಸಕ್ತರಾದ ಯುವಸಾಹಿತಿ ಟಿ. ಎನ್. ವಾಸುದೇವಮೂರ್ತಿಯವರು ನನ್ನ ಈ ಅಧ್ಯಯನಕ್ಕೆ ಪೂರಕ ವಿಷಯಗಳನ್ನು ನೀಡಿ ಸಹಕರಿಸಿದ್ದಾರೆ. ಇಂತಹ ಯುವಕರೆ ಈ ನಾಡಿನ ಮುಂದಿನ ಬೆಳಕು. ಇದರ ಜೊತೆಗೆ ಮೈಸೂರಿನ ಸುಧಾಕರ, ಕ್ಯಾತನಹಳ್ಳಿ ರಾಮಣ್ಣ, ಪಿ.ಕೆ ರಾಜಶೇಖರ, ಶಿವರಾಮು ಕಾಡನಕುಪ್ಪೆ, ಕೆ.ಎಸ್ ಭಗವಾನ್, ಸಿ. ನಾಗಣ್ಣ; ಬೀದರದ ಸಿದ್ಧರಾಮಪ್ಪ ಮಾಸಿಮಡೆ; ಭತಮುರ್ಗೆ ಚಂದ್ರಪ್ಪ; ವೀರಪ್ಪ ಕಟ್ಟೀಮನಿ; ಗೋಗಿಯ ಡಿ.ಎನ್ ಅಕ್ಕಿ; ಗುಲ್ಬರ್ಗದ ವೆಂಕಟೇಶ ಮಾನು; ಧಾರವಾಡದ ಬಾಳಣ್ಣ ಸೀಗಿಹಳ್ಳಿ, ಸುರೇಶ್ ಎಲ್. ಕುಲಕರ್ಣಿ; ಬೆಳಗಾವಿಯ ಸುಭಾಷ್ ಚೌಗಲೆ; ಹಾಸನದ ಜ.ಹೊ ನಾರಾಯಣಸ್ವಾಮಿ, ರಾಜೇಗೌಡ ಹೊಸಳ್ಳಿ; ಮಂಡ್ಯದ ಬಿ. ಜಯಪ್ರಕಾಶಗೌಡ; ಚನ್ನಪಟ್ಟಣದ ಸಿ.ಪಿ ನಾಗರಾಜ, ಕಡೂರಿನ ಕೆ. ಬಿ. ಲೋಕೇಶ್ವರಪ್ಪ; ಹೊನ್ನಾಳಿಯ ಯು.ಎನ್ ಸಂಗನಾಳಮಠ; ತುಮಕೂರಿನ ಪಂಡಿತ ಎಚ್ ಹನುಮಂತರಾಯ; ಚಾಮರಾಜನಗರದ ಎಂ. ಬಸವಣ್ಣ; ಬೆಂಗಳೂರಿನ ಪಿ.ವಿ ನಾರಾಯಣ, ಮಲ್ಲೇಪುರಂ ಜಿ ವೆಂಕಟೇಶ್, ಕೋಲಾರದ ಕೆ.ಸಿ ಶಿವಾರೆಡ್ಡಿ, ಚಂದ್ರಶೇಖರ ನಂಗಲಿ ಮಂಗಳೂರಿನ ಟಿ.ಎ.ಎನ್ ಖಂಡಿಗೆ ಮುಂತಾದವರು ಬೇಂದ್ರೆ ಕಾವ್ಯದ ಪದಗಳ ಅರ್ಥಗಳನ್ನು ತಿಳಿಯಲು ಸಹಾಯ ಮಾಡಿದ್ದಾರೆ ಅವರೆಲ್ಲರ ತುಂಬು ಪ್ರೀತಿಯ ಮಾರ್ಗದರ್ಶನದಲ್ಲಿ ಈ ಕೃತಿ ರಚಿಸಿದ್ದೇನೆ. ಅವೆಲ್ಲರಿಗೂ ಋಣಿಯಾಗಿದ್ದೇನೆ.

ನನ್ನ ಈ ಕೃತಿ ರಚನೆಯ ಆಲೋಚನೆಗೆ ತುಂಬಾ ಸಹಾಯಕರಾದವರು ವೆಂಕಟೇಶ ಮಾನು ಮತ್ತು ಎ.ಕೆ ರವಿಶಂಕರ. ಮೂರು ವರ್ಷಗಳ ಹಿಂದೆ ವೆಂಕಟೇಶ ಮಾನು ಅವರು ಮನೆಗೆ ಬಂದು ನಾನು ಕಲೆಹಾಕಿದ್ದ ಪದಗಳನ್ನು

ಡಿಟಿಪಿ ಮಾಡಿ ಈ ಕೃತಿಯ ರೂಪಣಕ್ಕೆ ಕಾರಣರಾದರು. ಹಲವು ಪ್ರಿಂಟ್‌ಗಳನ್ನು ತೆಗದು ಪರಿಣತರಿಗೆ ಕಳುಹಿಸಿ ಅಭಿಪ್ರಾಯ ಪಡೆಯಲು ಸಹಕರಿಸಿದರು. ಅನಂತರ ನಲ್ಮೆಯ ಎ.ಕೆ. ರವಿಶಂಕರ ಈ ಕೆಲಸವನ್ನು ತನ್ನ ವೈಯಕ್ತಿಕ ಕೆಲಸವೆಂಬಂತೆ ಮುತುವರ್ಜಿ ವಹಿಸಿ ಸಮಗ್ರ ಪದನಿರುಕ್ತವನ್ನು ದೋಷ ರಹಿತವಾಗಿ ಡಿಟಿಪಿ ಮಾಡಿಕೊಟ್ಟರು. ಇವರು ಮತ್ತು ಮೇಲೆ ಸೂಚಿಸಿರುವ ಎಲ್ಲ ಮಹನೀಯರು ನನ್ನ ಈ ಕೆಲಸಕ್ಕೆ ಬೇಂದ್ರೆ ನುಡಿಯಂತೆ 'ಅರ್ಥವಿಲ್ಲ ಸ್ವಾರ್ಥವಿಲ್ಲ, ಬರಿಯ ಭಾವಗೀತ' ಎಂಬಂತೆ ಜೊತೆಯಾಗಿ ಪ್ರೋತ್ಸಾಹ ನೀಡಿದ್ದಾರೆ. ಇದು ನನ್ನ ಜೀವನದ ಭಾಗ್ಯ.

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿಗಳಾದ ಪ್ರೊ. ಮಲ್ಲೇಪುರಂ ಜಿ ವೆಂಕಟೇಶ ಅವರು ನನ್ನ ಬೇಂದ್ರೆ ಕಾವ್ಯ ಅಧ್ಯಯನವನ್ನು ಮೆಚ್ಚಿ ಮಾರ್ಗದರ್ಶನ ಮಾಡಿದ್ದಾರೆ. ಅವರು ಈ ಕೃತಿಗೆ 'ಬೇಂದ್ರೆಕಾವ್ಯ: ಪದನಿರುಕ್ತ' ಎಂಬ ಶೀರ್ಷಿಕೆಯನ್ನು ಸೂಚಿಸಿ ಅಮೂಲ್ಯವಾದ ಮುನ್ನುಡಿಯನ್ನು ಬರೆದು ಕೊಟ್ಟಿದ್ದಾರೆ. ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ವಂಶಿ ಪ್ರಕಾಶನದ ಯುವ ಪ್ರಕಾಶಕರಾದ ಎನ್. ಪ್ರಕಾಶ್ ಅವರು ಈ ಕೃತಿಯನ್ನು ಪ್ರಕಟಿಸುತ್ತಿರುವುದು ಸಂತಸದ ವಿಷಯವಾಗಿದೆ.

ನನ್ನ ಈ ಬೇಂದ್ರೆ ಅಧ್ಯಯನಕ್ಕೆ 'ದ.ರಾ ಬೇಂದ್ರೆ ಕಾವ್ಯ ಕೂಟ'ದ ಎಲ್ಲಾ ಸದಸ್ಯರು ಸಹಕಾರ ನೀಡಿದ್ದಾರೆ. ಅವರನ್ನು ಸದಾ ನೆನೆಯುತ್ತೇನೆ. ಹಲವಾರು ವರ್ಷಗಳಿಂದ ಈ ನನ್ನ ಬೇಂದ್ರೆ ಕಾವ್ಯಾಸಕ್ತಿ ತಿಳಿದು ಪ್ರೋತ್ಸಾಹಿಸುತ್ತಿರುವ ಹೆಚ್. ಎಸ್ ಹರಿಶಂಕರ್, ಕೆ.ಎನ್. ಶಾಂತಕುಮಾರ್, ಪದ್ಮರಾಜ ದಂಡಾವತಿ, ಚ.ಹ. ರಘುನಾಥ, ಸುಗತ ಶ್ರೀನಿವಾಸರಾಜು, ನಂ. ನಂಜಪ್ಪ, ಎಸ್.ಜಿ ಸಿದ್ದರಾಮಯ್ಯ, ಜಿ.ಬಿ ಹರೀಶ್, ಎಂ ನರಸಿಂಹ, ಎನ್ ಸೂರ್ಯನಾರಾಯಣ, ಎಚ್.ಎಲ್. ನಾಗರಾಜ್ ಕೆ.ಎ.ಎಸ್, ಎಂ. ಈ ಅಹ್ಮದ್ ಖಾನ್, ಮಹಮ್ಮದ್ ಕಲೀಂಉಲ್ಲ, ನಾ.ಸು. ನಾಗೇಶ್, ಬಿ.ಎಸ್ ಜಯಪ್ರಕಾಶ ನಾರಾಯಣ, ಜೆ.ಎನ್ ಶಾಮರಾವ್, ಸಮಿಉಲ್ಲಾಖಾನ್, ಡಿ.ಕೆ. ಶ್ಯಾಮಸುಂದರರಾವ್, ಎಂ.ಎನ್ ಮಂಜುನಾಥ್, ಕೆ.ಎಸ್ ನರಸಿಂಗರಾವ್, ಸತ್ಯಮಂಗಲ ಮಹದೇವ, ರಾ.ನಂ ಚಂದ್ರಶೇಖರ್, ಶ್ರ. ದೇ. ಪಾರ್ಶ್ವನಾಥ್, ಬಿ.ಜಿ. ಮಳಲಿಗೌಡ ಮುಂತಾದವರನ್ನು ನೆನೆಯುವುದು ನನಗೊಂದು ಹೆಮ್ಮೆ.

ನನ್ನ ಬೇಂದ್ರೆ ಅಧ್ಯಯನ ಮತ್ತು ಕಾರ್ಯಕ್ರಮಗಳಿಗೆ ಎಲ್ಲ ಪೂರ್ಣ ಸಹಕಾರವನ್ನು ನೀಡುತ್ತಿರುವ ನನ್ನ ಪತ್ನಿ, ಮಕ್ಕಳು, ಅಳಿಯಂದಿರು, ಸೊಸೆಯನ್ನು ನೆನೆಯುವುದು ಕುಟುಂಬ ಸಾಹಿತ್ಯ ಪೋಷಕ ವಾತಾವರಣದ ಆಹ್ಲಾದವೇ ಸರಿ.

ಈ ಕೃತಿಯನ್ನು ಅಂದವಾಗಿ ಮುದ್ರಿಸಿದ ಲಕ್ಷ್ಮೀ ಮುದ್ರಣಾಲಯದ ಮಾಲೀಕರಾದ ಶ್ರೀ ಕೆ.ಎಸ್. ಮಂಜು ಮತ್ತು ಸಿಬ್ಬಂದಿಗಳಿಗೆ ನನ್ನ ವಂದನೆಗಳು.

ಈ ಕೃತಿಯನ್ನು ನಾಡಿನ ಸಹೃದಯ ಬೇಂದ್ರೆ ಕಾವ್ಯಾಭಿಮಾನಿಗಳಿಗೆ ಅರ್ಪಿಸುತ್ತಿದ್ದೇನೆ. ಅವರ ಶ್ರೀರಕ್ಷೆಯಲ್ಲಿ ನಾನಿದ್ದೇನೆ. ನಾಡಿನ ಕಾವ್ಯ ಸಹೃದಯರು ಪ್ರೀತಿಯಿಂದ ಸ್ವೀಕರಿಸಿ ಆಶೀರ್ವದಿಸಬೇಕೆಂದು ಪ್ರಾರ್ಥಿಸುತ್ತೇನೆ.

ಬೆಂಗಳೂರು
೩೦-೮-೨೦೧೮

**ಡಾ. ಜಿ. ಕೃಷ್ಣಪ್ಪ**

# ಪರಿವಿಡಿ

## ೧. ಕೃಷ್ಣಾಕುಮಾರಿ–ಖಂಡಕಾವ್ಯ (೧೯೨೨)

## ಕಾವ್ಯದ ಮೊದಲಿರುವ ಗದ್ಯ.

**ಕಾಸಾರ, ಕಲಕಾಗು**

**ಕುಮಾರಿಯ ಅಂತಃಕರಣ ಕಾಸಾರವು ಕದಡಿ ಕಲಕಾಯಿತು.**

: ಕೊಳ; ಸರೋವರ.

: (ಕದಡಿ)ಬಗ್ಗಡವಾಗು.

* * * * * *

**ಕಿಂಕರ್ತವ್ಯತಾಮೂಢ**

**ಭೀಮಸಿಂಹನು ಕಿಂಕರ್ತವ್ಯತಾಮೂಢನಾದನು.**

: ಏನು ಮಾಡಬೇಕೆಂದು ತಿಳಿಯದವನು; ದಿಕ್ಕು ತೋಚದಿರುವವನು.

* * * * * *

**ಕಾಳನಿದ್ರೆ**

**ನಾಲ್ಕನೆಯ ಸಲ ನಿರುಪಾಯವಾಗಿ ಅದು ಅವಳನ್ನು ಕಾಳನಿದ್ರ್ರೆಯುವಂತೆ ಮಾಡಿತು.**

: ಚಿರಕಾಲದ ನಿದ್ದೆ; ಸಾವು; ಮರಣ.

**ಬಾಸಣಿಸು**

**ರಾತ್ರಿಯು ಕಾರ್ಮೋಡಗಳಿಂದ ಮುಗಿಲನ್ನು ಬಾಸಣಿಸಿತ್ತು.**

:ಹೊದಿಸು; ಮುಚ್ಚು.

---

## ಕಾವ್ಯ

**ಬೆದಿಗುದಿ**

**ಥೂ ನರರ ಬೆದಿಗುದಿಗೆ ಷಂಢಗಂಡಸುತನಕೆ** (2–5)

: ಸಂತಾಪ; ಕ್ಲೇಶ; ಬೇಗುದಿ.

*ಕೃಷ್ಣಾಕುಮಾರಿಯು ಕನ್ನೆಯಾದ ತನ್ನನ್ನು ರಕ್ಷಿಸಲಾಗದ ರಾಜಪುತ್ರ ಕುಲದ ಗಂಡಸರ ಸಂತಾಪ; ಬೇಗುದಿಯನ್ನು ಬೆದಿಗುದಿ ಎಂದು ಕರೆದು ಅವರ ಷಂಢ ಗಂಡಸುತನಕ್ಕೆ ಥೂ ಎಂದಿದ್ದಾಳೆ.

* * * * * *

### ಕೃಷ್ಣಮುಖ

**ಕೃಷ್ಣಪಕ್ಷದ ಕೃಷ್ಣತರ ರಾತ್ರಿಯೇ! ನೀನು/ ಕೃಷ್ಣತಮಳಾದ ಈ ಕೃಷ್ಣೆಯಂ ನುಂಗಿನ್ನು/ ಕೃಷ್ಣಮುಖವಂ ತೆರೆದು, (6–1,2,3)**

: ಕಪ್ಪಾದ ಬಾಯಿ; ಕರಾಳವಾದ ಮುಖ.

*ಅಮಾವಾಸ್ಯೆಯ ಕತ್ತಲು 'ಕೃಷ್ಣ' ನುಡಿಯಲ್ಲಿ ಗಾಢವಾಗುತ್ತಾ, ಅದು ತನ್ನ ಕರಾಳವಾದ ಮುಖದ ಕಪ್ಪಾದ ಬಾಯಿಯನ್ನು ತೆರೆದು ನುಂಗಲಿ ಎಂದು ಕೃಷ್ಣಾಕುಮಾರಿಯು ವಿಷ ಸೇವಿಸುತ್ತಿದ್ದಾಳೆ.

* * * * * *

### ಕೃಷ್ಣಕೀರ್ತಿ

**ರಜಪೂತ/ ಕೃಷ್ಣಕೀರ್ತಿಯನೊಮ್ಮೆ ಕಣ್ದಣಿಯೆ ನೋಡುತ್ತ। (6–4,5)**

*ಕಥಾಸಂದರ್ಭದಲ್ಲಿ ರಜಪೂತರಿಗಾದ ಅಪಖ್ಯಾತಿ; ಕಪ್ಪಾದ ಕೀರ್ತಿಯನ್ನು ಕವಿ ಕೃಷ್ಣಕೀರ್ತಿ ಎಂಬ ಪದ ರೂಪಕದಿಂದ ಕರೆದಿದ್ದಾರೆ.

* * * * * *

### ಕೊರಚು

**ಮುಂಚೆ ನಗೆಯೊಳಗೆಂದ ಮಾತುಗಳ ನೆನಪಿಟ್ಟು ಮುಗಿಲಿನೊಳಗಿಂದು ಬಂದು/ ಮಿಂಚುಗಳ ಬಳಗ ಕಣ್ಚಿವುಟಿ ಕೊರಚುವದೆನ್ನ;। (9–3,4)**

: ಚುಚ್ಚು ಮಾತಿನಿಂದ ಅಣಕಿಸು; ಮೂದಲಿಸು.

*ಕೃಷ್ಣಾಕುಮಾರಿಯು ಹಿಂದೊಮ್ಮೆ ನಗೆಯಲ್ಲಿ ತನ್ನನ್ನು ತಾನೇ ಬಣ್ಣಿಸಿಕೊಳ್ಳುತ್ತ 'ನನ್ನ ಮೈಸಿರಿಯ ಮಿಂಚಿನ ಮುಂದೆ ಮಿಂಚುಗಳು ಮಿಂಚುಹುಳಗಳಂತೆ ಹಿಮ್ಮೆಟ್ಟಿ ಹೋಗುವವು' ಎಂದು ಹೇಳಿದ್ದನ್ನು ಮಿಂಚುಗಳು ನೆನಪಿಟ್ಟುಕೊಂಡಿವೆ. ಆ ಮಿಂಚುಬಳಗ ಈ ಕಾಳರಾತ್ರಿಯಲ್ಲಿ ಮುಗಿಲಿನೊಳಗಿಂದ ಬಂದು ಕಣ್ಣಿನಿಂದ ಸನ್ನೆ ಮಾಡುತ್ತ, ಚುಚ್ಚು ಮಾತಿನಿಂದ ಅಣಕಿಸುತ್ತಿವೆ ಎಂದು ಆಕೆ ನೊಂದುಕೊಂಡಿದ್ದಾಳೆ.

* * * * * *

## ಹತಬುದ್ಧ

**ವೀರ ಪದವಂ ಪಡೆದ ವೀರ ಕೌಮರಿಯರೆ/ ತೀರ ಹತಬುದ್ಧಳಾದೀ ಕುವರಿಯಂ ನೀವು ಕೈನೀಡಿ ಕಾಯಬೇಕು॥ (14–2,3)**

: ಬುದ್ಧಿಯನ್ನು ಕಳೆದುಕೊಂಡ ವ್ಯಕ್ತಿ.

*ರಾಜಸ್ಥಾನದ ವೀರ ಕೌಮಾರಿಯರಲ್ಲಿ ಮದುವೆಯಾಗದ ಕನ್ಯೆಯರಲ್ಲಿ ಕೃಷ್ಣಕುಮಾರಿಯು–ತಾನು ಬುದ್ಧಿಯನ್ನು ಕಳೆದುಕೊಂಡವಳು, ತನ್ನನ್ನು ಕೈನೀಡಿ ಕಾಯಿರಿ ಎಂದು ಕೇಳಿಕೊಳ್ಳುತ್ತಿದ್ದಾಳೆ. ಇಲ್ಲಿರುವ ಪದರೂಪ ಬೇಂದ್ರೆ ಕವಿ ರೂಪಿಸಿರುವುದು.

* * * * * *

## ಹಾಳಿ

**ಕಳೆದುಹೋಗಲಿ ಕಾಳರಾತ್ರಿ ಈ ಕಾಳು ವಿಷ ಕಾರೊಡಲ ಹಾಳಿನಲ್ಲಿ॥ (15–06)**

*ಇದು ಕೃಷ್ಣಾಕುಮಾರಿ ಮೂರನೆಯ ವಿಷದ ಬಟ್ಟಲನ್ನು ಎತ್ತಿ ಕುಡಿಯುವಾಗ ಹೇಳುವ ಮಾತು. ಇದು ಜೀವನದಲ್ಲಿ ಒಂದಿಷ್ಟು ಆಶಯದ ಬೆಳಕೇ ಇಲ್ಲದ ಕಾಳರಾತ್ರಿ, ಇದರ ಜೊತೆಗೆ ವಿಷ ತುಂಬಿದ ಒಡಲು, ಎಲ್ಲವೂ ನೀರಸವಾಗಿ ಬದುಕಿನೆಡೆಗಿನ ಅವಳ ಪ್ರೀತಿ ಸಂಪೂರ್ಣವಾಗಿ ಬತ್ತಿ ಹೋದ ಬರ್ಬರ ಸ್ಥಿತಿಯನ್ನು ಇದು ಸಂಕೇತಿಸುತ್ತದೆ. ಅವಳ ಮನಸ್ಸಿನ ಕ್ಲೇಶ, ಬದುಕಿರಲಾಗದ ಸಂಕಟ, ರಾಜಕುಮಾರಿಗೆ ಪರಿಸ್ಥಿತಿ ತಂದೊಡ್ಡಿದ ದುರವಸ್ಥೆಯನ್ನು 'ಹಾಳಿ' ಪದಪ್ರಯೋಗದ ಮೂಲಕ ಕವಿ ಸಮರ್ಥವಾಗಿ ಬಿಂಬಿಸಿದ್ದಾರೆ. ಹಾಳಿ/ನಾಶವಾದ, ಹಾಳಾದ ಎಂಬ ಪರಿಚಿತ ಅರ್ಥ ಹೊಂದಿದೆ. ವಿಷ ಕುಡಿದ ಆಕೆಯ ಒಡಲು ಇನ್ನೂ ನಾಶವಾಗಿಲ್ಲ. ಅದು ಕಾಳರಾತ್ರಿಯ ರೀತಿ ಕಪ್ಪಾಗುತ್ತಿದೆ. ಕಾಳರಾತ್ರಿ ಆಕೆಯ ಜೀವನದಲ್ಲಿ ಉಂಟಾದ ದುರವಸ್ಥೆಯ ವಿಷಮ ಪ್ರತಿಮೆ. ವಿಷ ಕುಡಿದ ಅವಳ ದೇಹ ಆಕೆಯ ಜೀವನದಲ್ಲಿ 'ಹಾಳಿ' ಆಗಿದೆ.

'ಕಾಳ' ಪದವು 'ಕಪ್ಪು' ಎಂಬ ಅರ್ಥ ಹೊಂದಿದೆ. ಈ ಪದವನ್ನು ಬೀದರ ಜಿಲ್ಲೆಯ ಜನ 'ಕಾಡಿಸು' ಎಂಬ ಅರ್ಥದಲ್ಲಿ ಬಳಸುತ್ತಾರೆ. ಕೃಷ್ಣಾಕುಮಾರಿಗೆ ಈ ಕಾಳರಾತ್ರಿ–ಕಾಡಿಸುವ, ಪೀಡಿಸುವ ರಾತ್ರಿಯೂ ಆಗಿದೆ. ಕಾಳ ಅಂದರೆ 'ಕೆಟ್ಟ' ಎನ್ನುವ ಅರ್ಥವೂ ಉಂಟು.

'ಕ', 'ಳ' ಅಕ್ಷರಗಳು, ಪುನರಾವರ್ತನೆಯ ಶಬ್ದಗಳು ಒಳಪ್ರಾಸದಂತೆ ಬಳಕೆಯಾಗಿದ್ದು ಶಬ್ದದ ಸೊಗಸಿನಿಂದಾಗಿ, ಅರ್ಥ ಸೌಂದರ್ಯವನ್ನು ಇವು ಹೆಚ್ಚಿಸಿವೆ.

* * * * * *

## ಹಸುಮಗಳು

**ಏಕಭಾವದಿ ನಿನ್ನ ಹಸುಮಗಳು ಪಶುಪತಿಯೆ! (16–03)**

* ಕೃಷ್ಣಾಕುಮಾರಿಯನ್ನು ಬೇಂದ್ರೆ 'ಹಸುಮಗಳು' ಎಂದು ಕರೆದಿದ್ದಾರೆ. ಅದು ಬಾಲೆಯ ಸುಕುಮಾರಿ ಲಕ್ಷಣ ಒಳಗೊಂಡು ಓದುಗನಿಗೆ ಆಪ್ತವಾಗುವ ಮುಗ್ಧ ಹೆಣ್ಣಿನ ಬಣ್ಣನೆಯಾಗಿದೆ.

* * * * * *

## ಮಾಲಿಸು

**ಮುದವಾಗೆ ತವವೀರಹಾಸ್ಯದಲಿ ಮಾಲಿಸಿದ ದೈವಸ್ವರೂಪ ತಂದೇ! (18–3)**

* ಮೂರನೆಯ ವಿಷದ ಬಟ್ಟಲನ್ನು ಸೇವಿಸುವ ಮೊದಲು ಲಾವಣ್ಯವತಿ ಕೃಷ್ಣಾಕುಮಾರಿ ತನ್ನ ತಂದೆ ರಾಣಾ ಭೀಮಸಿಂಹನ ಮುದ್ದನ್ನು ನೆನೆಯುತ್ತಾಳೆ. ಅದನ್ನು ವರ್ಣಿಸುವ ವಾತ್ಸಲ್ಯಮೂರ್ತಿ ಬೇಂದ್ರೆ ಅವರು ಕೃಷ್ಣಾಕುಮಾರಿಯಿಂದ ಮೇಲಿನ ನುಡಿ ಹೊಮ್ಮಿಸಿದ್ದಾರೆ.

ತಂದೆಯ ಮುದ್ದು ಯಾವಾಗಲೂ ಮಗಳಿಗೆ ಮುದವನ್ನುಂಟುಮಾಡುತ್ತದೆ. ಮಾಲಿಸು ಎಂಬುದು ಮುಂಡಾಡುವುದು. ಮುದ್ದುಗರೆಯುತ್ತ, ಪ್ರೀತಿಯಿಂದ ಮುತ್ತಿಟ್ಟು, ಲಾಲಿಸಿ ತನ್ನ ಕಣ್ಣಲ್ಲಿ ತುಂಬಿಕೊಳ್ಳುವುದು ಎಂಬ ಅರ್ಥಭಾವದ ಪರಂಪರೆಗಳು ಇಲ್ಲಿ ಅನಾವರಣಗೊಂಡಿದೆ.

***

ಮೇಲಿನ ಅರ್ಥದಲ್ಲಿಯೇ 'ಕನ್ನಡದ ಕಂದವ್ವನ ಲಾಲಿ' ಕವನದಲ್ಲಿ 'ಮಾಲಿಪರೆ', 'ಮಾಲಿಸಿರಿ' ಪದಗಳನ್ನು ಬಳಸಿದ್ದಾರೆ.

**'ಮಾಲಿಪರೆ, ಆಲಿಪರೆ, ತಾಯಿ–ಮಗಳನ್ನೀಗ ಮಾಲಿಸಿರಿ, ಲಾಲಿ, ಜೋಜೋ॥(ನಾದಲೀಲೆ: ಕನ್ನಡದ ಕಂದವ್ವನ ಲಾಲಿ)**

***

'ಗಂಗಾವತರಣ' ಕವನಸಂಕಲನದ 'ಏಲಾಗೀತೆ'ಯಲ್ಲಿ 'ಆಲಿಸುತಿವೆ ಮಾಲಿಸುತಿವೆ ಹರಿಣದ ಜತೆ ಹರಿಣಿ' ಎಂಬ ಸಾಲಿನ 'ಮಾಲಿಸುತಿವೆ' ಪದ ಇನ್ನೊಂದು ವಿಶಿಷ್ಟ ಅರ್ಥದಲ್ಲಿ ಪ್ರಯೋಗವಾಗಿದೆ. ಹರಿಣದ ಜತೆ ಹರಿಣಿ ಒಂದಕ್ಕೊಂದು ಒಲವಿನ ಗೀತಾಭಾವಾಭಿವ್ಯಕ್ತಿಯನ್ನು ಆಲಿಸುತ್ತಿವೆ. ಆ ಪ್ರೀತಿಯ ಕರೆಗೆ ಓರೆಯಾಗಿಸಿದ ಕಿವಿಯಿಂದ

ಅವು ಪರಸ್ಪರ 'ಮಾಲಿಸುತಿವೆ' ಅರ್ಥಾತ್ ಕಡೆಗಣ್ಣಿನಿಂದ ನೋಡಿ ನಲಿಯುತ್ತಿವೆಯೆಂಬ ಅರ್ಥ ಇಲ್ಲಿ ಪ್ರತೀತಗೊಳ್ಳುತ್ತಿದೆ.

* * * * * *

## ಹೋಮಿಸು, ಹೋತ್ರ

**ನಿನ್ನನ್ನು / ಹೋಮಿಸಿದರೌ ಕುಸುಮ ಸುಕುಮಾರ ಕುವರಿಯೇ! ಕಾಮಾಗ್ನಿ ಹೋತ್ರದಲ್ಲಿ॥ (೨೭–೦೨, ೦೩)**

: ೧. ಯಜ್ಞಕಾಲದಲ್ಲಿ ಹವಿಸ್ಸನ್ನು ಮಂತ್ರಪೂರ್ವಕವಾಗಿ ಅರ್ಪಣೆ ಮಾಡು; ಹೋಮಮಾಡು.

೨. (ಆಲಂ) ಬಲಿಕೊಡು; ಆಹುತಿ ಮಾಡು.

: ಹೋಮ; ಯಜ್ಞ,

*ಪರಾಂತಃಕರಣ ಪ್ರವೇಶವುಳ್ಳ ಕವಿಯು ತನ್ನ ಕಾವ್ಯನಾಯಿಕೆಯ ನಿರ್ಯಾಣ ಮಂಗಳವನ್ನು ಹಾಡುವಾಗ ಹೇಳಿದ ನುಡಿ ಇದಾಗಿದೆ.

ಕುಸುಮ ಸುಕುಮಾರ ಕುವರಿ ಕೃಷ್ಣಾಕುಮಾರಿಯೆ ನಿನ್ನನ್ನು ಕಾಮಾಗ್ನಿಯಜ್ಞಕ್ಕೆ ಆಹುತಿ ಕೊಟ್ಟರು ಎಂದು ಕವಿ ದುಃಖಿಸಿದ್ದಾರೆ.

---

## ೨. ಗರಿ (೧೯೩೨)

### ಬೆಳಗು

**ಮುಗಿ**

**ಮಘಮಘಿಸುವಾ ಮುಗಿದ ಮೊಗ್ಗೀ/ ಪಟಪಟನೇ ಒಡೆದು (2–4,5)**

: ಹೂವಿನ ದಳಗಳು ಮುಚ್ಚಿಕೊಳ್ಳು–ಸಂಕೋಚನ ಹೊಂದು.

*ಮುಚ್ಚಿಕೊಂಡಿದ್ದ ಹೂವಿನ ದಳಗಳು ಅರಳುವ ಸೂಕ್ಷ್ಮತೆಯಲ್ಲೂ ಕವಿ ಯಾರೂ ಗ್ರಹಿಸಲಾರದ 'ಪಟಪಟನೆ' ಎಂಬ ಶಬ್ದವನ್ನು ಕೇಳಿಸಿಕೊಳ್ಳುತ್ತಾನೆ. ಹೂ–ಬಿರಿಯುವ ಅಂದದ ಅಮೂರ್ತರೂಪವನ್ನು ಮೂರ್ತವಾದ 'ಪಟಪಟನೆ' ಶಬ್ದದ ಮೂಲಕ ಓದುಗರಿಗೆ ಸುಲಭವಾಗಿ ಅರ್ಥವಾಗುವಂತೆ ಕಟ್ಟಿಕೊಟ್ಟಿದ್ದು ಕವಿಯ ಕುಶಲತೆ. ಇದು ಅನುಕರಣಾವ್ಯಯ.

---

### ಅಹಹ ಸ್ವಾತಂತ್ರ್ಯ ದೇವೀ!

**ಶೆಲೆ, ನೀರೆ**

**'ಶೆಲೆ'ಯೊಳಗೆ ಸೆಲೆಯಾಗಿ ಹರಿದ ನೀರೇ/ ಬಾರೆ (5–1, 2)**

: (ನೀರು) ಒಸರುವಿಕೆ; ಜಿನುಗುವಿಕೆ.

: ಸುಂದರಿ; ಚೆಲುವೆ.

*ಗುಪ್ತಗಾಮಿನಿಯಾಗಿ ಹರಿವ ನೀರು ಶೆಲೆ. ಬಾವಿ ತೋಡುವಾಗ ಗುದ್ದಲಿಯ ಏಟು ಬಿದ್ದು, ಆಳದಲ್ಲಿ ಹರಿಯುವ ನೀರು ಸೆಲೆಯಾಗಿ ಚಿಮ್ಮುತ್ತದೆ. ಬೇಂದ್ರೆ ಅವರು 'ಶೆಲೆ' ಪದವನ್ನು ಶ್ಲೇಷಾಲಂಕಾರದಲ್ಲಿ ಪ್ರಯೋಗಿಸಿದ್ದಾರೆ.

ಭಾರತೀಯರ ಆಂತರ್ಯದಲ್ಲಿ ಸ್ವಾತಂತ್ರ್ಯದ ಹಂಬಲ 'ಶೆಲೆ'ಯಾಗಿತ್ತು. ಅದರಲ್ಲಿ ಸೆಲೆಯಾಗಿ ಹರಿದ ಸುಂದರಿ ಸ್ವಾತಂತ್ರ್ಯದೇವಿಯೇ ಬಾ ಎಂಬುದು ಒಂದು ಅರ್ಥ.

ಆಂಗ್ಲ ಕವಿ ಪಿ.ಬಿ. ಶೆಲ್ಲಿ (1792–1822) ಬಾಲ್ಯದಿಂದಲೂ ಎಗ್ಗಿಲ್ಲದ, ಸ್ವತಂತ್ರ ಮನೋಭಾವದ, ತನ್ನ ತತ್ತ್ವನಿಷ್ಠೆಗೆ ಬದ್ಧನಾದ, ಸಾಮಾಜಿಕವಾಗಿ ಯಾರಿಗೂ ಅಂಜದ ವ್ಯಕ್ತಿಯಾಗಿದ್ದನು. ಅವನು ತನ್ನ ಬುದ್ಧಿ ಮತ್ತು ಕಾವ್ಯ ಪ್ರತಿಭೆಯನ್ನು ನಡೆ, ನುಡಿ, ಬರೆಹದಲ್ಲಿ ಪ್ರಕಟಿಸಿದನು. ಆ ಕವಿ 'ಶೆಲೆ'ಯಲ್ಲಿ ಸೆಲೆಯಾಗಿ ಹರಿದ ಸ್ವಾತಂತ್ರ್ಯ ದೇವಿಯೇ ಬಾ ಎಂಬುದು ಇನ್ನೊಂದು ಅರ್ಥ ಇಲ್ಲಿ ಅಭಿಪ್ರೇತವಾಗಿದೆ.

---

# ಚಂದ್ರ

**ಕಡುಪು, ರಮಿಸು**

**ನೀ/ ನೊಡಲುರಿಗೆ ಮೊರೆಯಿಡುವ ಕಡಲನು/ ಕಡುಪಿನೊಳು ಮುದ್ದಾಡಿ ರಮಿಸುವೆ/ ನಗೆಮೊಗವ ತೋರಿ (3–1, 2, 3, 4)**

: ಹುರುಪು, ಉತ್ಸಾಹ, ಉಬ್ಬು.

: ಪ್ರೀತಿಯಿಂದ ಸಮಾಧಾನಮಾಡು; ಸಂತೈಸು.

*ನಿಸರ್ಗದಲ್ಲಿ ಕಡಲು ಚಂದ್ರನ ವಿಕಾಸದಲ್ಲಿ ಉಬ್ಬಿ, ಅದು ಕುಗ್ಗಿದಾಗ ಕುಗ್ಗುತ್ತದೆ. ಅದನ್ನು ಬೇಂದ್ರೆಯವರು ಪ್ರೀತಿಯ ಬಂಧದಾಟವೆಂದು ಭಾವಿಸಿದ್ದಾರೆ. ಚಂದ್ರನು ಒಡಲುರಿಗೆ ಮೊರೆಯುವ ಸಮುದ್ರವನ್ನು ಕಡುಪಿನೊಳು/ಹುರುಪು, ಉತ್ಸಾಹದಲ್ಲಿ ಉಬ್ಬುಬ್ಬಿ ಮುದ್ದಾಡುತ್ತಿದ್ದಾನೆ. ನಗೆಯ ಮುಖ ತೋರಿ ರಮಿಸುತ್ತಿದ್ದಾನೆ/ಪ್ರೀತಿಯಿಂದ ಸಮಾಧಾನಮಾಡುತ್ತಿದ್ದಾನೆ ಎಂದು ಚಂದ್ರ ಮತ್ತು ಕಡಲ ಒಲ್ಮೆಯನ್ನು ಮಾನವ ಪ್ರೀತಿಯಾಗಿ ಕಂಡು ಬಣ್ಣಿಸಿದ್ದಾರೆ.

***

ಕೊಲ್ಲಾಪುರದ ಮಾಯೆಯನ್ನು ಸಿದ್ಧರು ಕಿನ್ನರಿಯಾಗಿ ಮಾಡಿ ಹೊತ್ತುಕೊಂಡು ಹೋಗಿ ಒಲಿಸಿಕೊಂಡ ಕವನ 'ಮಾಯಾಕಿನ್ನರಿ'. ಅವಳನ್ನು ಒಲಿಸಿ ನುಡಿಸಿದ ಬಗೆ:

ನಂಬಿಸಿ ರಂಬಿಸಿ ಚುಂಬಿಸಿ ಎದೆಗೊಂಬಿ/ ಬಿಂಬೀಸಿ ಎದೆಯೊಳಗ ಅಂಥಾಂಗ (ಸಖೀಗೀತ: ಮಾಯಾಕಿನ್ನರಿ)

ಪ್ರೀತಿಯಿಂದ ಸಂತೈಸಿ ರಂಬಿಸುವ ಮನದಲ್ಲಿ ನಂಬಿಕೆ ಮುಖ್ಯ. ನಂಬಿಸಿ ರಮಿಸುವಾಗ ಸಹಜವಾಗಿ ಚುಂಬನಕ್ಕೊಳಗಾದ ಆ ಸಖಸಖಿಯರ ಕಣ್ಣಲ್ಲಿ ಎದೆಗೊಂಬಿ ಬಿಂಬಿಸಿ ಐಕ್ಯಭಾವಕ್ಕೊಳಗಾಗುತ್ತಾರೆ. ಆಗ ಅವರ ಪ್ರೀತಿಯೆಂಬುದು:

ಅದು ಇದೆ ಎದೆಯಲ್ಲಿ, ಬೆಳಕಿನ ಬದಿಯಲ್ಲಿ/ ರಸಗಂಗಾನದಿಯಲ್ಲಿ ಅದರುಗಮ/ ಹೆಸರದಕೆ ಪ್ರೀತಿಯು, ಹಿಗ್ಗಿನ ರೀತಿಯು/ ಆತ್ಮದ ನೀತಿಯು ಮಧುಸಂಗಮ (ಸಖೀಗೀತ : 901–904)

## ಗಂಡುಸು–ಹೆಂಗುಸಿಗೆ

### ಕನಿಮನೆ

**ತಾಯೆ ಕನಿಮನೆಯೇ ನೀ, ಅಕ್ಕ ಅಕ್ಕರತೆಯೇ (1–1)**

: ಕರುಣೆಯ ನೆಲೆ; ದಯೆಯ ಆಗರ.

*ಬೇಂದ್ರೆಯವರು ತಾಯಿಯು ಕರುಣೆಯನೆಲೆ; ದಯೆಯ ಆಗರವಾಗಿರುವುದನ್ನು 'ಕನಿಮನೆ'ಎಂದು ಕರೆದಿದ್ದಾರೆ. ಪ್ರೀತಿ, ಆದರದ–'ಅಕ್ಕರತೆ'ಯೇ ಅಕ್ಕ.

'ಅಕ್ಕ' ಪದದಲ್ಲಿ 'ಅಕ್ಕರತೆ' ಅಡಗಿರುವುದನ್ನು ಬೇಂದ್ರೆ ಈ ಪದದ ಮೂಲಕ ಅಭಿವ್ಯಂಜಿಸಿದ್ದಾರೆ.

* * * * * *

### ಕಸೆ

**ನನ್ನ ನಿನ್ನಯ ಮನದ ಜೊನ್ನಮಗ್ಗದ ಮೇಲೆ/ ನಿನ್ನ ಮತ್ತೆನ್ನೆದೆಯ ಕಸೆಗೆ ಕಸೆಯನುಗೊಳಿಸಿ/ ನನ್ನಿ ನೇಕಾರಿತಿಯು ಮುಗಿಯದಿಹ ಬಟ್ಟೆಯನ್ನನವರತ ನೇಯುತಿಹಳು. (4–5 ರಿಂದ 8)**

: ನೇಯ್ಗೆಯ ಎಳೆ.

* 'ಅಂತರಂಗವು ಕನ್ನಡಿಯಾದರೆ ಜೀವನವೆ ಚೆಲುವು' ಎಂದು ಜೀಬ್ರಾನ್ ಹೇಳಿರುವಂತೆ ಗಂಡ–ಹೆಂಡತಿಯರು ಅಂತರಂಗದಲ್ಲಿ ಬೆಳಕಾಗಿ ಚೆಲುವಾಗುತ್ತಾರೆ ಎಂಬ ತತ್ತ್ವವನ್ನು ಬೇಂದ್ರೆ ಕಾವ್ಯವಾಗಿಸಿದ್ದಾರೆ. ಈ ಬಗೆಯ ಆಕರ್ಷಣೆಯನ್ನೇ ಕಾಯುತ್ತಿದ್ದ ಸತ್ಯದ ಒಡತಿಯಾದ ಜಗನ್ಮಾತೆ ಅವರಿಬ್ಬರನ್ನು–ಅವರ ಪ್ರಕಾಶಮಯವಾದ ಬೆಳುದಿಂಗಳಂತಹ ಮನಸ್ಸಿನ ಮೇಲೆ ಎಳೆ ಎಳೆ ಹಾಸುಹೊಕ್ಕಾಗುವಂತೆ ಹೆಣೆದು ಬಟ್ಟೆಯನ್ನು ನೇಯುತ್ತಿದ್ದಾಳೆ. ಈ ಜಗದ ಸೃಷ್ಟಿಕ್ರಿಯೆ ದಂಪತಿಗಳ ಪ್ರೀತಿಯಲ್ಲಿ ವಿಸ್ತಾರವಾಗುತ್ತಿದೆ ಎಂದು ರೂಪಕಾತ್ಮಕವಾಗಿ ಮೇಲಿನ ನುಡಿಯಲ್ಲಿ ಬಣ್ಣಿಸಿದ್ದಾರೆ.

***

**ತೋಳು ತೋಳಿನಲಿ ಕಸೆಯ ಮಾಡಿದೊಲು ಎದೆಯ ಬೆಸೆಯುತಿಹವು.(ಹಾಡುಪಾಡು: ಕಲ್ಪವೃಕ್ಷ ವೃಂದಾವನಂಗಳಲಿ)**

---

## ಚತುರ್ಮುಖ ಸೌಂದರ್ಯ

**ಧೀಮೂಢತೆ**

**ರಸವನು ಸವಿಯೆ ಧೀಮೂಢತೆಯನೊಡೆದು ನಿಲ್ಲಿಸುವೆ ಚಿತ್ತವನು (1–2, 3)**

: ಬುದ್ಧಿಯಿಲ್ಲದಿರುವಿಕೆ; ತಿಳಿವಳಿಕೆಯಿಲ್ಲದಿರುವಿಕೆ; ಮೂಢತ್ವ

*ಸೌಂದರ್ಯಾನುಭವಕ್ಕೆ ಒಳಗಾಗುವ ವರೆಗೆ ತಿಳಿವಳಿಕೆಯಿಲ್ಲದ್ದರಿಂದ ಮೂಢತ್ವ ಆವರಿಸಿಕೊಂಡಿರುತ್ತದೆ. ರಸಾನುಭಾವಕ್ಕೆ ಒಳಗಾದ ಮೇಲೆ ಚಿತ್ತ ತಿಳಿವಿನ ಪ್ರಕಾಶದಲ್ಲಿ ಬೆಳಗುತ್ತದೆ.

---

## ಹಸಿ–ಹಂಬಲ

**ದೊರೆವಾಡು**

**ದೊರೆವಾಡುಗಳ/ ಸೀಮೆಗಳ ಸಮ್ರಾಟನಾಗಿ ಆಳುವ ವರೆಗೆ/ ಏನಾದರೇನು ನನಗೆ? (3–6, 7, 8)**

: ಶ್ರೇಷ್ಠವಾದ ಹಾಡು; ಉತ್ತಮವಾದ ಹಾಡು.

*ಬೇಂದ್ರೆಯವರು ವರಕವಿ. ವರ ಎಂದರೆ ಶ್ರೇಷ್ಠ. ತಾನು ಶ್ರೇಷ್ಠವಾದ ಹಾಡು/ ದೊರೆವಾಡುಗಳ ಸೀಮೆಗಳ ಸಮ್ರಾಟ ಎಂದು ಹೇಳಿಕೊಂಡಿದ್ದಾರೆ. ಇಲ್ಲಿ ಕವಿಯ ಆತ್ಮ ಪ್ರತ್ಯಯ ಧೀಮಂತವಾಗಿದೆ.

---

## ಲೀಲೆ

**ಗುಬ್ಬಿಮನೆ**

**ಮುನ್ನ–ಮುನ್ನಕೆ ಗುಬ್ಬಿಮನೆಯ ಹೂಡಿದ ಹಾಗೆ (1–5)**

: ಒದ್ದೆಯಾದ ಮರಳಿನಿಂದ ಹುಡುಗರು ಆಟಕ್ಕಾಗಿ ಮಾಡುವ ಸಣ್ಣಗೂಡು.

*ಮಕ್ಕಳು ಮರಳಿನಿಂದ ಮನೆಕಟ್ಟುವ ಆಟವನ್ನು 'ಹೊಸಮನೆಗೆ ಇಂಬನು ಮಾಡಿತದು ವಿಫಲ ಕಾರ್ಯಮಲ್ಲ' ಎಂದು ತಿಳಿಸಿದ್ದಾರೆ.

ಈ ಕವನದಲ್ಲಿ 'ಲೀಲೆಯಲಿ ಯಾವುದೂ ವಿಫಲಮಲ್ಲ' ಎಂಬ ಚಿಂತನೆ ಇದೆ.

---

# ಮುದ್ದಣ

## ವ್ರಾತ್ಯ, ಬಣಗು, ಮರ್ತ್ಯ, ಕಂಗಳ

**ಸತ್ಯ ಪ್ರೀತಿಗಳಿಲ್ಲದೇ ಬಣಗು ಮಾತಿನೊಳು/ ವ್ರಾತ್ಯರಾಗಿದ್ದ ಭಟ್ಟಂಗಿಗಳ ಹಿಂಡಿಗೂ/ ಮರ್ತ್ಯರಾದಂತ ನರ-ಕವಿಗಳಿಗೂ ಕಲಿಸಿದೆಯೊ/ ಚೆನ್ನಾಗಿ ಅಮರ ಕವಿಯೆ!/ "ಸತ್ಯದಲ್ಲಿಯೆ ಪ್ರೀತಿ, ಪ್ರೀತಿಯಲ್ಲಿಯೆ ಸತ್ಯ ನಿತ್ಯ ನಿಜವಿದು"ಎಂದು ಕಂಗಳರ ಜಂಗುಳಿಯ/ ಪ್ರತ್ಯಯಕೆ ತಂದೆಯೋ ನಿನ್ನ ಮನದನ್ನೆಯೊಡ/ ನನ್ನಿವಾತುಗಳನಾಡಿ (4-1 ರಿಂದ 8)**

: ನೀಚ; ಅಧಮ; ಕೆಟ್ಟವನು.

: ಕೆಲಸಕ್ಕೆ ಬಾರದ; ಅಪ್ರಯೋಜಕವಾದ.

: ಸಾವಿಗೊಳಗಾಗುವ; ಮರಣ ಹೊಂದುವ.

: ಕಣ್ಣಿಲ್ಲದವನು; ಕುರುಡ.

*ಬೇಂದ್ರೆ ಅವರು ಮುದ್ದಣನನ್ನು ಸತ್ಯ ಪ್ರೀತಿಗಳಿಲ್ಲದ ಅಪ್ರಯೋಜಕ ಮಾತಿನ ನೀಚ ಭಟ್ಟಂಗಿಗಳ ಹಿಂಡಿಗೆ ಮತ್ತು ಸಾವಿಗೊಳಗಾಗುವ ನರಕವಿಗಳಿಗೆ ಚೆನ್ನಾಗಿ ಕಲಿಸಿದ ಅಮರಕವಿ ಎಂದು ಕರೆದಿದ್ದಾರೆ.

ಮುದ್ದಣ ತನ್ನ ಮನದನ್ನೆಯೊಡನೆ ಸತ್ಯ ನುಡಿಗಳನ್ನಾಡಿ 'ಸತ್ಯದಲ್ಲಿಯೇ ಪ್ರೀತಿ, ಪ್ರೀತಿಯಲ್ಲಿಯೇ ಸತ್ಯ ನಿಜವಿದು' ಎಂದು ಕುರುಡರ ಗುಂಪಿಗೆ ಮನನ ಮಾಡಿದವನು ಎಂದು ಹೆಮ್ಮೆಯಿಂದ ತಿಳಿಸಿದ್ದಾರೆ.

*   *   *   *   *   *

## ಒಳಹದುಳ

**ಹಳಸಿ ತಂಗೂಳಾದ ರೀತಿಗಳ ಹೀಗಳಿಸಿ/ ಬಳಬಳೆಸಿ ಸವಿಗೆಟ್ಟ ನಲ್ಗತೆಯ ರಸವೆರಸು/ ಬಳೆಸಿ ಪೇಳಿದನು ಒಳಹದುಳವನು ಹದಮಾಡಿ। ತನ್ನ ಮಿದು ಮಾತಿನಿಂದ (5-1, 2, 3, 4)**

: ಒಳಗಿನ ನೆಮ್ಮದಿ.

*ಮುದ್ದಣನು ತನ್ನ ಒಳಗಿನ ನೆಮ್ಮದಿ/ ಒಳಹದುಳವನ್ನು ಹದಮಾಡಿಕೊಂಡು ಮೃದುವಾದ; ಹಿತವಾದ, ಕೋಮಲಮಯವಾದ ಮಿದು ಮಾತಿನಿಂದ ಕಾವ್ಯ ರಚಿಸಿದ್ದಾನೆಂಬ ಆಶಯ ಇಲ್ಲುಂಟು.

# ಪುನರ್ಯೋಗಾರೂಢ

## ಓಜ

**ಹೀರಿ ಹೋಯಿತು ಓಜ, ಹಾರಿ ಹೋಯಿತು ತೇಜ/ ಏರಿರುವೆನೋ ನಾನು ಇಳಿದಿರುವೆನೋ? (1–3, 4)**

:(ವೈದ್ಯಶಾ)ವೀರ್ಯದ ಅತಿ ಸೂಕ್ಷ್ಮ ಭಾಗ.

*ವೀರ್ಯದ ಅತಿ ಸೂಕ್ಷ್ಮ ಭಾಗ ಹೀರಿಹೋಯಿತು– ಎಂಬುದು ಮೇನಕೆಯು ಶಕುಂತಲೆಯನ್ನು ಬಿಸುಟಿ ಹೋದ ಮೇಲೆ ವಿಶ್ವಾಮಿತ್ರನು ಪುನರ್ಯೋಗಾರೂಢನಾಗುವ ಸಂದರ್ಭದ ಸ್ವಗತವಾಗಿದೆ.

* * * * * *

## ಹಿಂಜಾಪು

**ಭಲೆ ಭಾಪು ಭಾಪು! ಹಿಂಜಾಪು ಕಿತ್ತೆಲೆ ಎತ್ತು/ ಭಲೆ ಸಿದ್ಧ ಶಿಖರವನ್ನೇರು; ಹತ್ತು! (8–1)**

: ಹಿಂದೆ ಇಟ್ಟ ಹೆಜ್ಜೆ.

*ಹಿಂದಿನ ಹೆಜ್ಜೆಯನ್ನು ಕಿತ್ತು ರಭಸದಿಂದ ಮುನ್ನುಗ್ಗು ಎಂಬ ಭಾವ ಇಲ್ಲಿದೆ. ವಿಶ್ವಾಮಿತ್ರನ ಮುಂದೆ ಮೇನಕೆಯು ಮಗಳು ಶಕುಂತಲೆಯನ್ನು ತಿರಸ್ಕಾರಭಾವದೊಂದಿಗೆ ಬಿಟ್ಟು ಹೋದ ಮೇಲೆ ಮಹರ್ಷಿಗಳು 'ಪುನಃಯೋಗಾರೂಢ'ರಾಗುವ ಕ್ಷಣದಲ್ಲಿ– ಅಂದರೆ ಆಗಿದ್ದೆಲ್ಲವನ್ನೂ ಸಹಿಸಿಕೊಂಡು, ಪರಿಸ್ಥಿತಿಯನ್ನು ಸವಾಲಾಗಿ ಸ್ವೀಕರಿಸಿ, ಸಮಸ್ಯೆಯನ್ನು ಎದುರಿಸುವ ದೃಢತೆ ತೋರು ಎಂಬ ಅರ್ಥದಲ್ಲಿ, ಹಿಂದಾದ ತಪ್ಪಿಗೆ ಪ್ರಾಯಶ್ಚಿತ್ತವಾಗಿಯೋ, ಸರಿಪಡಿಸಿಕೊಳ್ಳಲೋ ಎಂಬಂತೆ 'ಹಿಂಜಾಪು ಕಿತ್ತೆಲೆ ಎತ್ತು' ಪದ ಬಳಸಿದ್ದಾರೆ.

ಹಿಂಜಾಪು ಕಿತ್ತು ಎತ್ತಲು ವಿಶ್ವಾಮಿತ್ರನಿಗೆ ಹುರಿದುಂಬಿಸಲು ಎಂಬಂತೆ 'ಭಲೇ ಭಾಪು ಭಾಪು' ಎಂಬ ಉದ್ಗಾರ ಪದವನ್ನು ಬಳಸಿದ್ದಾರೆ. ಹಿಂಜಾಪು ಕಿತ್ತಲೇಬೇಕು ಎಂಬುದಕ್ಕೆ ಕವಿ ನೀಡುವ ಕಾರಣವೆಂದರೆ– ಆತ ಸಿದ್ಧ ಶಿಖರವೇರಬೇಕಿದೆ ಎಂಬುದು.

---

# ಕೋಗಿಲೆ

## ಕರ್‍ರನೆ ಕರಗಿ

**ಹೃದಯ ಕರ್‍ರನೆ ಕರಗಿ ನದಿಯಾಗಿ ನನ್ನಿಯ/ ಉದಯವಾಗ್ಸುವಂತೆ ಕೋಗಿಲೇ!/ ಅದಯರಿದ್ದವರೆಲ್ಲ ಸದಯರಾಗ್ಸುವಂತೆ/ ಕೂಗುವಿಯಾ ಹೇಳು ಕೋಗಿಲೇ! (5–1, 2, 3, 4)**

*ಕರಗುವಿಕೆಯ ತೀವ್ರತೆಯನ್ನು ಹೇಳಲು ಕವಿ ಬೇಂದ್ರೆ 'ಕರ್‍ರನೆ' ಎಂದು ಬಳಸಿರಬಹುದೆ? 'ಜರ್‍ರನೆ ಜರಿದು' ಎನ್ನುವಾಗ ಜರ್‍ರನೆ'ಗೆ ಪ್ರತ್ಯೇಕ ಅರ್ಥವಿಲ್ಲ. ಅದು ಸರಿಯುವ, ಇಲ್ಲವೇ ಇಳಿಯುವ, ಇಲ್ಲವೇ ಜಾರುವ ತೀವ್ರತೆಯನ್ನು ಮಾತ್ರ ಸಂಕೇತಿಸುತ್ತದೆ. ಕರ್+ಎನೆ, ಕರಿ+ಎನೆ–'ಕರ್' ಎನ್ನುವುದು ಒಂದು ಕ್ರಿಯೆಯನ್ನು ಅನುಕರಿಸುವ ಶಬ್ದವೂ ಆಗಬಹುದು ('ಬೇಗ', ತೀವ್ರ, ಎಂಬರ್ಥದಲ್ಲಿ). ಅದಯರಾಗುವುದು ಹೃದಯದಲ್ಲಿ 'ಕರಿ' ಎಂದರೆ ವಿಷ, ಮಸಿ, ಸ್ವಾರ್ಥ ಇದ್ದಾಗ. ಅದು ಕರಗಿ ಪ್ರೀತಿಯ ಉದಯವಾಗುವುದು–ನನ್ನಿಯ ಉದಯ.

ಕೋಗಿಲೆಯ ದನಿಗೆ ಇಡೀ ಮನುಕುಲವೇ ಮನಗೊಟ್ಟು ಕೇಳಿ ಆನಂದಗೊಳ್ಳುವುದು ಮಾತ್ರವಲ್ಲ; 'ಅದಯ'ರಿದ್ದವರೂ ಸಹ ದಯಾಮಯರಾಗುತ್ತಾರೆ. ದನಿಯ ಇಂಪಿಗೆ ಹೃದಯ ಕರಗಿ ಅಕ್ಕರೆಯು ನದಿಯ ರೂಪದಲ್ಲಿ ಪ್ರಕಟಗೊಳ್ಳುತ್ತದೆ. ಈ ಪರಿವರ್ತನಾ ಸಾಮರ್ಥ್ಯ ಕೋಗಿಲೆಯ ದನಿಗೆ ಇದೆ. ಆದ್ದರಿಂದ, ನೀನು ಹಾಡು ಎಂಬ ಅರ್ಥದಲ್ಲಿ ಹಂಬಲಿಸಿ 'ಕೂಗುವಿಯಾ ಹೇಳು ಕೋಗಿಲೆ' ಎಂಬುದು ಕವಿಯ ಮನವಿ ಮತ್ತು ಆಶಯ.

* * * * * *

## ಕಿರಣಿಸು

**ಶರಣರ ದಾಸರ ಕರುಣೆ ಕಿರಣಿಸುವಂತೆ/ ಕೂಗುವಿಯಾ ಹೇಳು ಕೋಗಿಲೇ! (7–3 ರಿಂದ 4)**

: ಹರಡು; ಪಸರಿಸು.

*ಬೇಂದ್ರೆಯವರು ಕೋಗಿಲೆಯನ್ನು ಶರಣರ ದಾಸರ ಕರುಣೆ ಪಸರಿಸುವಂತೆ ಕೂಗಲು ಕೇಳಿಕೊಳ್ಳುತ್ತಿದ್ದಾರೆ.

***

ಒಂದೆ ಬಿಂದುವು ಸುತ್ತು ಕಡೆಗೂ/ ಒತ್ತಿ ಕಿರಣಿಸಿ/ ಮೊತ್ತವಾಗಿದೆ ಬಿತ್ತು ಬೀಳಣ್ಣಾ (ಜೀವಲಹರಿ:ನುಡಿ)

---

## ಓ ಹಾಡೇ !

### ಉಗೆವಾಡ

**ಬಗೆಯ ನಗೆಯಲಿ ಸುಳಿವ ಉಗೆವಾಡದಲಿ ಕುಳಿತ (1-1)**

: ಮೋಡ; ಹಬೆಯ ಮಾಡ.

ಮನದೊಳಗಿನ ಭಾವದ ನಗೆಯಲ್ಲಿ ಸುಳಿವ ಮೋಡದಲ್ಲಿ ಕುಳಿತದ್ದು ಹಾಡು.

* * * * * *

### ಮುಕ್ಕು

**"ಬಿತ್ತಿದರೆ ಬಿತ್ತುವದು ಮುಕ್ಕು ಚಿಕ್ಕೆಯ ಕಾಳು/ ಮುತ್ತುರತುನವ ಬಿತ್ತಿ ಮಾಡದಿರು ಹೊಲ ಹಾಳು/ ಜೀವವನು ಚಾಚಿ ಮುಗಿಲಂಗಳಕೆ ಹಚ್ಚಿ/ ದೇವನೊಡೆನುಡಿವಂತೆ ಮಾಡು ಮೆಚ್ಚಿ;/ ಏಳು ಮಲಗಿದೆಯೇಕೆ ಶರಣನಾಡೇ" (7-1 ರಿಂದ 5)**

*ನನಗೆ ಈ 'ಮುಕ್ಕು' ಪದ ಅರ್ಥವಾಗಿರಲಿಲ್ಲ. ಹಾಗಾಗಿ, ಮುಂದಿನ ಸಾಲು 'ಮುತ್ತು ರತುನವ ಬಿತ್ತಿ ಮಾಡದಿರು ಹೊಲ ಹಾಳು' ಎಂಬುದು ಅರ್ಥವಾದಂತಿದ್ದರೂ ಸ್ಪಷ್ಟವಾಗಿರಲಿಲ್ಲ. ಸ್ನೇಹಿತರೊಡನೆ ಈ ಕುರಿತು ಚರ್ಚಿಸುವಾಗ 'ಮುಕ್ಕು' ಎಂದರೆ 'ಮುಕ್ಕಿದ' ಎಂಬ ಪದ ಮೊದಲು ಇಣುಕಿ, ಬೇಂದ್ರೆ ಆಲೋಚನೆ ನಮಗೆ ಅರ್ಥವಾಗದಂತೆ ಸಂವಾದವನ್ನು ಊನವಾಗಿಸುತ್ತಿತ್ತು. ಇನ್ನೂ ಸ್ವಲ್ಪ ಮುಂದುವರೆದಾಗ, ಕಡಲೆಪುರಿ ಮುಕ್ಕುವುದು, ಮಣ್ಣು ಮುಕ್ಕು ಎಂಬ ನುಡಿಗಟ್ಟು ಹೊರಟು ನಗೆ ಅಲೆ ಎಬ್ಬಿಸಿ ಅದರ ಅರ್ಥದ ಗೂಢತೆಯನ್ನು ನಗೆ ಚಟಾಕಿಯಲ್ಲಿ ಲೀನವಾಗಿಸುತ್ತಿತ್ತು.

ನಾನು ಕಲಬುರ್ಗಿ ಜಿಲ್ಲೆಯ ಗೋಗಿ ಪಟ್ಟಣದ ಸರಕಾರಿ ಪ್ರೌಢಶಾಲೆಯಲ್ಲಿ 2002ರಲ್ಲಿ ದ.ರಾ ಬೇಂದ್ರೆ ಕವನ ಗಾಯನ ಸ್ಪರ್ಧೆ ನಡೆಸಿದಾಗ ಒಂದು ಹುಡುಗಿ 'ಬೆಳಗು' ಕವನವನ್ನು ಜೋಳ ಬೀಸುವ ಧಾಟಿಯಲ್ಲಿ ಹಾಡಿದಳು. 'ಮೂಡಲ ಮನೆಯಾ ಮುತ್ತಿನ ನೀರಿನ ಎರಕವ ಹೊಯ್ದಾ' ಎಂದು ಹಾಡಿ, ತುಸು ನಿಲ್ಲಿಸಿ, 'ನುಣ್ಣ ಪದವನ್ನು ನಿಧಾನವಾಗಿ ಎಳೆಯುತ್ತಾ... ನ್ನೆರಕವ ಹೊಯ್ದ' ಎಂದು ಹಾಡಿದಳು. ಆಗ ತಕ್ಷಣ ನನಗೆ ನನ್ನವ್ವ ರಾಗಿ ಬೀಸುವಾಗ ಬೆಳಗಿನಜಾವ ಹಾಡುತ್ತಾ ಮಧ್ಯೆ ಮಧ್ಯೆ ಒಂದು ಮುಕ್ಕು ರಾಗಿ ಹಾಕುತ್ತಿದ್ದದ್ದು ನೆನಪಾಯಿತು. ಒಂದು ಮುಕ್ಕು ರಾಗಿಯನ್ನು ಬೀಸುವ

ಕಲ್ಲಿನ ಕೊಳ್ಳಿಗೆ(ಬಾಯಿಗೆ) ಹಾಕಿ ಬೀಸುತ್ತಿದ್ದರು. ಆ ಮುಕ್ಕು ಮುಗಿಯುವುದರೊಳಗಾಗಿ ಜಾನಪದ ಹಾಡಿನ ಎರಡು ಸಾಲು ಮುಕ್ತಾಯಕ್ಕೆ ಬರುತ್ತಿತ್ತು. 'ಮುಕ್ಕು' ಎಂದರೆ ಒಂದು ಹಿಡಿಯಲ್ಲಿ ಬರುವಷ್ಟು ಕಾಳು. ಬೀಸುವ ಕಲ್ಲಿನಲ್ಲಿ ಒಮ್ಮೆ ಹಿಡಿಯುವಷ್ಟು ಕಾಳು. ಸತ್ತ್ವಭರಿತ ಕಾಳುಗಳು ಅವು ಪರಿಶುದ್ಧ (ಬಿತ್ತನೆ ಕಾಳು ಇಲ್ಲವೇ ಬೀಜಗಳೆಂದು ರೈತರು ಅವುಗಳನ್ನು ಜೋಪಾನವಾಗಿರಿಸುತ್ತಿದ್ದರು) ಎನ್ನುವುದಕ್ಕೆ ಕವಿ ಅವುಗಳನ್ನು ಚುಕ್ಕೆಗೆ ಹೋಲಿಸಿದ್ದಾರೆ. ಬಿತ್ತಿದರೆ ಅಂತಹ ಕಾಳುಗಳನ್ನು ಮಾತ್ರ ಬಿತ್ತಬೇಕು ಎಂಬುದು ಕವಿಯ ಆಶಯ.

ಬೇಂದ್ರೆ ಅವರಿಗೆ ವಚನಗಳೆಂದರೆ 'ಮುಕ್ಕು ಚಿಕ್ಕೆಯ ಕಾಳು'. ಸತ್ತ್ವ ಭರಿತವಾಗಿ ಹೊಳಪಿನಿಂದ ಚಿಕ್ಕೆಯಂತಿರುವ ಒಂದು ಹಿಡಿ ಕಾಳು. ಅಂತಹ ಅಮೂಲ್ಯ ನುಡಿ ಬಿತ್ತಿ ವಚನರಚಿಸಿ, ಜನಜೀವನವನ್ನು ಹಸನುಗೊಳಿಸಿದವರು ವಚನಕಾರರು. ಆ ನುಡಿಗಳು 'ದೇವನೊಡೆನುಡಿವ' ಭಾವದಲ್ಲಿ ರಚಿತವಾದವುಗಳು. ಅಂತಹ ಸತ್ತ್ವಭರಿತ ವಚನಗಳನ್ನು ಕನ್ನಡ ಸಾರಸ್ವತಹೊಲದಲ್ಲಿ ಬಿತ್ತಿದವರು ವಚನಕಾರರು ಎಂಬ ಚಿಂತನೆಯಿಂದ– ಅಂತಹ ಶರಣನಾಡು ಎಚ್ಚರಗೊಳ್ಳಲಿ ಎಂದು ಬೇಂದ್ರೆ ಆಶಿಸಿದ್ದಾರೆ.

***

ಬಿತ್ತಿದರು ಕಾಳು ಹನಿಹನಿಯಾಗಿ ಬರ್ತಾಳ ತಾಯ್ ತೆನಿತೆನಿಯಾಗಿ (ಮುಕ್ತಕಂಠ: ಹರಗೋಣ ಬಾ ಹೊಲ)

---

## ರಸಿಕಾ ಪೇಳೊ!

**ಕಂಬಿ**

**ಬಿಲ್ಲ ಕಂಬಿಯು ಡೊಂಕು. ಬಿಟ್ಟ ಬಾಣವು ಡೊಂಕೆ ?/ ರಸಿಕಾ ಪೇಳೊ! (3–1, 2)**

: ಕೋಲು

*ಶೃಂಗಾರದಲ್ಲಿ ಆಸಕ್ತಿಯುಳ್ಳವನು ರಸಿಕ. ಅವನನ್ನು ರಸಿಕಳು 'ಹುಬ್ಬಿನ ಗೆರೆ ಡೊಂಕು. ಕಣ್ಣ ನೋಟವು ಡೊಂಕೆ?' ಎಂದು ಪ್ರಶ್ನಿಸುತ್ತಾಳೆ. ಅದಕ್ಕೆ ಪೂರಕವಾಗಿ ಬಿಲ್ಲ ಕಂಬಿ/ ಕೋಲು ಡೊಂಕಾಗಿದ್ದರೂ, ಬಿಟ್ಟ ಬಾಣ ನೇರ ಎಂದು ಹೇಳಿದ್ದಾಳೆ.

---

# ದಿನದ ಹಾಡು

## ನಾಣು, ಊರ್ಮಿ

**ಹೊಸನಾಣು ಹೊಸ ಮುನಿಸು ಹೊಸದಾಗೆ ಸತಿಯು/ ಹೊಸಮೌನ ಹೊಸ ಊರ್ಮಿ ಹೊಸದೊಂದು ರತಿಯು (3–5, 6)**

: (ಹೆಂಗಸಿಗೆ ಗಂಡಸಿನ ಎದುರಿನಲ್ಲಿ ಒದಗುವ) ನಾಚಿಕೆ; ಸಿಗ್ಗು; ಲಜ್ಜೆ.

: ಉತ್ಸಾಹ, ಹೆಚ್ಚಳ.

*ಬೇಂದ್ರೆಯವರು ದಾಂಪತ್ಯದ ಸವಿ ಅಮರವಾದುದು ಎಂದು 'ದಿನದ ಹಾಡು'ವಿನಲ್ಲಿ ತಿಳಿಸಿದ್ದಾರೆ. ಅದಕ್ಕೆ ಸತಿಯು ಹೊಸ ಲಜ್ಜೆಯವಳಾಗಿ ಹೊಸ ಮುನಿಸಿನಿಂದ ಕೂಡಿರಬೇಕು. ಆಗ ಅವರಲ್ಲಿ ಹೊಸ ಮೌನವು ಇನ್ನೊಂದು ಮನವನ್ನು ಮುಟ್ಟುವ ಹೊಸ ಉತ್ಸಾಹವಾಗುತ್ತದೆ. ಅದು ಪ್ರೇಮಲಹರಿಯ ಪ್ರವಾಹವಾಗಿ ಅವರಲ್ಲಿ ಹರಿದು ಹೊಸ ರತಿಯ ಸುಖವನ್ನು ಹೊಂದುತ್ತಾರೆ.

* * * * * *

## ವ್ಯಾಪ, ನೀಲಾಂಬರಿ

**ದಿನದಿನದ ಸಂತಾಪ ವ್ಯಾಪ ಬೇರೆ,/ ದಿನದ ನೀಲಾಂಬರಿಯ ಆಲಾಪ ಬೇರೆ! (4–11, 12)**

: ವ್ಯವಹಾರ; ದಂಧೆ; ಕೆಲಸ(<ಮರಾ: ವ್ಯಾಪ)

: ಒಂದು ರಾಗದ ಹೆಸರು.

*ದಿನದಿನದ ಸಂತಾಪ, ವ್ಯವಹಾರ ಬೇರೆ ಬೇರೆ ಇವೆ. ಅದೊಂದು ಬೇಸರದ ಸಂಗತಿ. ಆದರೆ ಅದೇ ದಿನದಲ್ಲಿ ಸುಖ ಸಂತೋಷದ ನೀಲಾಂಬರಿಯ ಆಲಾಪವೂ ಇದೆ. ನೀಲಾಂಬರಿ ರಾಗ ಕರ್ನಾಟಕ ಸಂಗೀತದ 29ನೆಯ ಮೇಳಕರ್ತ ಧೀರಶಂಕರಾಭರಣದಲ್ಲಿ ಜನ್ಯ. ಇದು ಎರಡು ಶತಮಾನಗಳಷ್ಟು ಹಿಂದಿನದು. ಇದನ್ನು ಹೆಚ್ಚಾಗಿ ಲಾಲಿ ಹಾಡುಗಳಲ್ಲಿ ಬಳಸುತ್ತಾರೆ. ಇದು ರಕ್ತಿರಾಗ. ಕರುಣೆ, ಭಕ್ತಿ ಮತ್ತು ವಾತ್ಸಲ್ಯಭಾವ ಪ್ರಧಾನವಾದ ರಾಗ. ಇದನ್ನು ಹೆಚ್ಚಾಗಿ ಸಾಯಂಕಾಲದಲ್ಲಿ ಹಾಡುತ್ತಾರೆ. ಈ ರಾಗದಲ್ಲಿ ತ್ಯಾಗರಾಜರು, ಸ್ವಾತಿತಿರುನಾಳ್, ವೀಣೆಶೇಷಣ್ಣ ಕೃತಿಗಳನ್ನು ರಚಿಸಿದ್ದಾರೆ.

---

## ಸೀಮೋಲ್ಲಂಘನ

### ಹೇವ

**ಹೇವದಿಂ ಗುರಿಯಿಟ್ಟು ಮೇಳ ಹೊರಟಿಹುದು/ ಏರಿಕೆಯ ಕರಿನಾಡ ಸೀಮೆಯನು ದಾಟಿ. (9–3,4)**

: ಸ್ವಾಭಿಮಾನ; ಆತ್ಮಗೌರವ.

'ಕನ್ನಡ ನಾಡಹಬ್ಬದ ಉಗ್ಗಡಣೆಗಾಗಿ ಬರೆದದ್ದು. 1926ರಲ್ಲಿ ಗೆಳೆಯರ ಗುಂಪು ಇಟ್ಟುಕೊಂಡಿದ್ದ ಧ್ಯೇಯಗಳ ವಿವರಣೆ' ಎಂಬ ಭಾವ ಸಂದರ್ಭವನ್ನು ಈ ಕವನವು ಹೊಂದಿದೆ.

ಸ್ವಾಭಿಮಾನದಿಂದ ಕನ್ನಡನಾಡನ್ನು ಕಟ್ಟುವುದೇ ಅವರ ಗುರಿಯಾಗಿತ್ತು.

***

**ಹೇವ ಹುಟ್ಟಿತು ಜೀವಭಾವಗಳ ಹೊಟ್ಟೆಯಲಿ/ ಹೊರಟೆ ನಾ ಮೈಯ ಮರೆಯೆ. (ಸಂಚಯ: ನಾಡಗುಡಿ)**

**ತಳ। ಮಳನೆ ಕುದಿವುದು ಜೀವ/ ಈ। ಎದೆಯೊಳು ಹುಟ್ಟಿದ ಹೇವ.(ಸಂಚಯ: ಬಿಡುಗಡೆ)**

ಮೇಲಿನ ಸಾಲುಗಳಲ್ಲಿ ಹೇವ ಪದವು ರೋಷ; ಕೋಪ ಎಂಬ ಅರ್ಥವನ್ನೂ ವ್ಯಂಜಿಸುತ್ತದೆ.

---

## ಪಂಪನ ನೆನೆದು

### ಮಿಳಿರಲಿ

**ವೀರಕೇತು ಮಿಳಿರಲಿಂದು ಪಾಪಿಹೃದಯ ನಡುಗಲಿ (8–4)**

*ಪಂಪನ ವೀರಪತಾಕೆಯು ನೆಗೆಯಲಿ, ಜಿಗಿಯಲಿ, ಹಾರಲಿ ಎಂಬ ಅರ್ಥದಲ್ಲಿ ಬೇಂದ್ರೆ 'ಮಿಳಿರಲಿ' ಪದವನ್ನು ಪ್ರಯೋಗಿಸಿದ್ದಾರೆ.

---

# ಗಿಳಿಯು ಪಂಜರದೊಳಿಲ್ಲಾ

**ಅಗಿ**

**ಕಲ್ಪವೃಕ್ಷದ ಅಗಿಯೇ, ಚಿಗಿಯೇ, (17–1)**

: ಚಿಗುರು; ಮೊಳಕೆಯಾಗು; ಮೊಳೆದೋರು; ಪಲ್ಲವಿಸು.

*ತನ್ನ ಒಡಲಲ್ಲಿ ಹುಟ್ಟಿರುವ ಮಗು ಕಲ್ಪವೃಕ್ಷದ ಹಿಗ್ಗು, ಉತ್ಸಾಹ ನೀಡುತ್ತಾ ಅದು ಮೊಳೆದೋರಿ, ಪಲ್ಲವಿಸಿರುವುದನ್ನು ಬೇಂದ್ರೆ 'ಅಗಿ' ಪದದಲ್ಲಿ ಅಭಿವ್ಯಕ್ತಿಸಿದ್ದಾರೆ.

---

# ೩೩೦೦೦೦೦೦೦

**ಹಿಂಗು**

**ಬಯಕೆಗಳು ಬಸಿರುಗಳು ಹಡೆದದ್ದು ಹಿಂಗಿದ್ದು/ ಮೂವತ್ತುಮೂರು ಕೋಟಿ! (2–2, 3)**

: ವ್ಯರ್ಥವಾದುದು, ನಿಷ್ಫಲವಾದುದು ಎಂಬ ಅರ್ಥದಲ್ಲಿ ಹಿಂಗಿದ್ದು ಪದ ಪ್ರಯೋಗವಾಗಿದೆ.

* * * * * *

**ಬೀತ, ಬಾತು**

**ಬೀತ ನರಪೇತುಗಳಿರಾ! ಬಾತಂಥ ಪ್ರೇತಗಳಿರಾ! (5–1)**

: ಬಡವಾಗು; ಕೃಷವಾಗು; ಕ್ಷೀಣಿಸು.

: ಊತ; ಬಾವು.

*ಮುವತ್ತುಮೂರು ಕೋಟಿ ಇದ್ದರೂ ಅವರು ಜೊಳ್ಳಿನಂತೆ. ಕ್ಷೀಣ ನರಪೇತುಗಳು, ಊತಂತ ಪ್ರೇತಗಳು ಎಂದು ನೊಂದು ಭಾರತಮಾತೆ ನುಡಿದಿದ್ದಾಳೆ.

* * * * * *

**ಗೊನೆಮಿಂಚು**

**ವಜ್ರದೇಹಿಗಳೆಂದೆ ಗೊನೆಮಿಂಚೊ ಎನೆ ಕಂಡೆ (10–2)**

: ಗೊಂಚಲಿನ ಆಕಾರದ ಮಿಂಚು; ಬಳ್ಳಿಮಿಂಚು.

*ಈ ಮಕ್ಕಳಿಗೆ ನನ್ನದೆಯ ಹಾಲು ಉಣಿಸಿ, ನನ್ನೊಳಿಹ ಬೆಳಕ ಬೆರಸಿದೆ. ಇವರು ವಜ್ರದೇಹಿಗಳು, ಬಳ್ಳಿ ಮಿಂಚುಗಳು, ವಿಜಯವಾಗಲಿ ಎಂದು ಹರಸಿ ಕಳುಹಿಸಿದೆ.

***

ಬೇಂದ್ರೆಯವರಿಗೆ ತಾಯಿಯೆಂದರೆ ಬೆಳಕು, ಜ್ಞಾನ, ತೇಜಸ್ಸು. ಅವಳನ್ನು ಹೀಗೆ ಧ್ಯಾನಿಸಿದ್ದಾರೆ: ಬೆಳಕಿನ ಬಾಂಧವ್ಯದಿಂದ ತಾಯ ಸೆರಗ ಹಿಡಿದೆವು/ ಬೆಳಕಿನಿಂದ ಬಂದೆವಣ್ಣ ಬೆಳಕಿನತ್ತ ನಡೆದೆವು. (ಚೈತ್ಯಾಲಯ: ವಚನಗಳು)

---

## ಹಕ್ಕಿ ಹಾರುತಿದೆ ನೋಡಿದಿರಾ ?

### ಕೆನ್ನ

**ಕೆನ್ನನ ಹೊನ್ನನ ಬಣ್ಣ-ಬಣ್ಣಗಳ/ ರೆಕ್ಕೆಗಳೆರಡೂ ಪಕ್ಕದಲುಂಟು (2-3, 4)**

*'ಕೆಂಪು ಬಣ್ಣ' ಕಾವ್ಯಸಂದರ್ಭದಲ್ಲಿ ಕೆನ್ನ ಆಗುತ್ತದೆ. ಅದು ಕೆಂಪ, ಕೆಂಚ ಎನ್ನುವಂತಹ ಆಡುನುಡಿ. ವಿಶೇಷ ಆಕರ್ಷಣೆಯುಳ್ಳ ಕೆಂಪುಬಣ್ಣದ ಹಕ್ಕಿಯನ್ನು ನೋಡಿದಿರಾ? ಎಂದು ಕೇಳಿ, ಅದು ಸಾಮಾನ್ಯ ಹಕ್ಕಿಯಾಗಿರದೆ, ಅದರ ಪಕ್ಕದಲ್ಲಿರುವ ರೆಕ್ಕೆಗಳು ಹಗಲು-ರಾತ್ರಿಗಳಾಗಿ ಸದಾ ಹಾರುತ್ತಲೇ ಇರುವ, ಎಂದಿಗೂ ನಿಲ್ಲದ 'ಕಾಲ'ದ ಪ್ರತಿಮೆಗೆ ಸಾಕ್ಷಿಯಾಗಿವೆ ಎಂದು ಬೇಂದ್ರೆ ತಿಳಿಸಿದ್ದಾರೆ.

* * * * * *

### ಮಂಡಲ, ಗಡ

**ಮಂಡಲ-ಗಿಂಡಲಗಳ ಗಡ ಮುಕ್ಕಿ (4-2)**

:ನಾಡು; ರಾಷ್ಟ್ರ; ದೇಶ.

:(ಉ.ಕ) ಬೇಗನೆ; ಜಾಗ್ರತೆಯಾಗಿ; ಕ್ಷಿಪ್ರವಾಗಿ.

*ಕಾಲಪಕ್ಷಿಯು ಬೇಗನೆ ಮಂಡಲ ಗಿಂಡಲಗಳನ್ನು ಮುಕ್ಕುತ್ತಿದೆ.

* * * * * *

### ಮನ್ವಂತರ

**ಮನ್ವಂತರಗಳ ಭಾಗ್ಯವ ತೆರೆಸಿ (5–2)**

*(ಪುರಾಣದಲ್ಲಿ ಹೇಳಿರುವ ಹದಿನಾಲ್ಕು ಮನುಗಳಲ್ಲಿ) ಒಬ್ಬ ಮನುವಿನ ಆಳ್ವಿಕೆಯ ಕಾಲ; ಮನುಷ್ಯರ ನಾಲ್ಕು ಯುಗಗಳು ಸೇರಿದರೆ ಒಂದು ದೈವಯುಗ. ಇಂತಹ ಎಪ್ಪತ್ತೊಂದು ದೈವಯುಗಗಳು ಸೇರಿದರೆ ಒಂದು ಮನ್ವಂತರ.

---

## ತುತ್ತಿನ ಚೀಲ

### ದೈವುಳ್ಳವ

**ದೈವುಳ್ಳವರಿಗೆ/ ದಯವೇ ಇಲ್ಲ! (4–1, 2)**

ದೈವ (fortune) + ಉಳ್ಳವ

: ಐಶ್ವರ್ಯವಂತ; ಧನಿಕ; ಸಾಹುಕಾರ.

*ಧನಿಕರಿಗೆ ದಯವೇ ಇಲ್ಲ.

* * * * * *

### ಕಕ್ಕಸಬಡು, ಬೊಕ್ಕಸ, ತುತ್ತಿನ ಚೀಲ, ತೆರವು, ಬಡವರು ಬಗ್ಗರು

**ಕಿಕ್ಕಿರಿ ತುಂಬಿದೆ/ ಭೂಮಿಯ ಕಣಜ/ ಕಕ್ಕಸಬಡುತಿದೆ/ ಬೊಕ್ಕಸದೊಡಲು/ ಬಾಳಿಗಿಂತಲೂ/ ಕೂಳೇ ಮೇಲೊ?/ ಬರಿದೋ ಬರಿದು/ ತೆರವೋ ತೆರವೂ/ ಬಡವರ ಬಗ್ಗರ/ ತುತ್ತಿನ ಚೀಲಾ (6–1 ರಿಂದ 10)**

: ಕಷ್ಟಪಡು; ಚಡಪಡಿಸು.

: ಹಣದ ಭಂಡಾರ; ಕೋಶ; ಖಜಾನೆ.

: ಹೊಟ್ಟೆ; ಉದರ.

: ಖಾಲಿಯಾದುದು; ಬರಿದಾದುದು.

: ಅತ್ಯಂತ ದರಿದ್ರರು.

*ಭೂಮಿಯಲ್ಲಿ ಸಮೃದ್ಧ ಬೆಳೆಯಾಗಿ ಕಣಜ ತುಂಬಿದ್ದರೂ, ರಾಜ್ಯ ಕೋಶಗಳಲ್ಲಿ ಹಣ ತುಂಬಿ ಚಡಪಡಿಸುತ್ತಿದ್ದರೂ 'ಬರಿದೋ ಬರಿದು/ ತೆರವೋ ತೆರವೂ/ ಬಡವರ ಬಗ್ಗರ ತುತ್ತಿನ ಚೀಲ' ಎಂದು ಕ್ರೂರವಾಸ್ತವವನ್ನು ವ್ಯಂಗ್ಯಾತ್ಮಕವಾಗಿ ತಿಳಿಸಿದ್ದಾರೆ.

* * * * * *

**ಕಲಮಲ**

**ಸಾವಿನ ನೋವಿಗೆ/ ಕಲಮಲವೆದ್ದು (7–7, 8)**

: ಕಳವಳ; ತಳಮಳ, ಸಂಕಟ.

* * * * * *

**ಒಳದನಿ**

**ಬಡವರ ಬಗ್ಗರ/ ತುತ್ತಿನ ಚೀಲದ/ ಒಳಗಿನ ಒಳಗಿನ/ ಒಳದನಿಯೊಂದು! (7–13, 14, 15, 16)**

: ಅಂತರಂಗದ ಮಾತು; ಹೃದಯದ ವಾಣಿ.

---

## ನಗೀನವಿಲು

**ಒನಪು**

**ಕಣ್ಣೆನ್ಯಾಗ ಬಣ್ಣದ ನೋಟ/ ತಕತಕ ಕುಣಿದಾಡತ್ತಿತ್ತ/ ಕುಣೀತಿತ್ತ ಮಣೀತಿತ್ತ/ ಒನಪಿಲೆ ಒನದಾಡತಿತ್ತ (3–1, 2, 3, 4)**

: ಬೆಡಗು; ಬಿನ್ನಾಣ; ಒಯ್ಯಾರ.

*ವಿರಹ ಕೆಲವು ಕಾಲ ಉಳಿದು, ಮತ್ತೆ ಪ್ರೇಮ ಪಲ್ಲವಿಸಿದಾಗ ಆ ವಿರಹಕ್ಕೆ ಅರ್ಥವಿದೆ. ಆದರೆ ವಿರಹ ಜೀವಂತ ವಿರಹವಾದಾಗ ಅಂತಹ ವಿರಹವನ್ನು ಜನಪ್ರಿಯ ಪ್ರೇಮಗೀತೆಯಾಗುವಂತೆ ರಚಿಸುವುದು ಸಮರ್ಥ ಕವಿಗೆ ಮಾತ್ರ ಸಾಧ್ಯ. ಅಂತಹ ಅಪರೂಪದ ಕವನ 'ನಗೀನವಿಲು'.

ಕಾವ್ಯನಾಯಕಿಯ ಮುಖದಲ್ಲಿ ನಗೆಯ ನವಿಲಿನ ಆಟವಿದೆ, ಕುಣಿತವಿದೆ. ಅದು ಮುಗಿಲ ಕಡೆಗೆ ದೃಷ್ಟಿಯನ್ನು ಬೀರಿ ಮಳೆಗೆ ಅಂದರೆ ನಲ್ಲನ ಬರುವಿಕೆಗೆ ಆಶಿಸುತ್ತಾ ಭರವಸೆಯ ನೋಟವನ್ನು ಇಲ್ಲಿ ಹರಿಸಿದೆ. ಆ ಪ್ರಿಯ ಅವಳಲ್ಲಿ ರತಿಭಾವವನ್ನು ಉಂಟುಮಾಡಿ ಶೃಂಗಾರಪ್ರಭೆ ನೀಡಿ ಹೋದವನು. ಅವಳ ಮನಸ್ಸು ಮತ್ತು ಶರೀರದ ಬಿನ್ನಾಣದ ಒನೆದಾಟ ಕಾಣುವುದು ಕಣ್ಣಿನಲ್ಲಿ, ಅದನ್ನು ಬೇಂದ್ರೆಕಾವ್ಯದಲ್ಲಿ ಹಿಡಿದಿಟ್ಟ ರೀತಿ ಅನನ್ಯ.

---

## ರಾಗರತಿ

### ರತಿ

**ಮುಗಿಲ ಮಾರಿಗ್ಕೆ ರಾಗರತಿಯ ನಂಜ ಏರಿತ್ತ/ ಆಗ ಸಂಜೆಯಾಗಿತ್ತ(೧–೧)**

*ಶೃಂಗಾರದ ಸ್ಥಾಯಿಭಾವ ರತಿ. ಅದು ಸ್ತ್ರೀ ಪುರುಷರಲ್ಲಿರುವ ಪ್ರೀತಿಯನ್ನು ವ್ಯಂಜಿಸುತ್ತದೆ. ಬೇಂದ್ರೆಯವರು ಪ್ರಕೃತಿ ಸಹಜ ಸಂಜೆಯ ರಂಗಿನಲ್ಲಿ ಸ್ತ್ರೀಪುರುಷರ ಪ್ರೀತಿಯನ್ನು ಕಂಡು, ಆ ರತಿಗೆ ರಂಗು, ಅನುರಾಗ, ಹಿಗ್ಗು, ಸೊಬಗು, ಇಂಪಾಗುವಂತೆ ಹೊಂದಿಸಿದ ಸ್ವರಮೇಳವನ್ನು 'ರಾಗರತಿ' ಎಂದು ಸೂಚ್ಯವಾಗಿ ಕರೆದಿದ್ದಾರೆ.

---

## ನರಬಲಿ

### ಎಕ್ಕಲ, ಉಕ್ಕಡ, ಕಕ್ಕಡ, ಕೆನ್ನೀರ್

**ನಿಂದಿಹರಿದೊ ಇಗೊ !/ ಎಕ್ಕಡ ಮೆಟ್ಟಿಹ ಎಕ್ಕಲ ಬಂಟರು/ ಉಕ್ಕಡ ಗಾತ್ರದ ಉಕ್ಕಡದವರು/ ಕಕ್ಕಡ ಹೊತ್ತಿಸಿ ಕಣ್ಣುಗಳಲ್ಲಿ/ ಮಾಡಿಸೆ ಕೆನ್ನೀರ್ ಜಳಕವನು (1–22 ರಿಂದ 26)**

: ಒಂದು ನರಕದ ಹೆಸರು.

: ಬಾವಿಯ ಹಗ್ಗದ ತುದಿಗೆ ಕಟ್ಟುವ ತಲೆಕಣ್ಣಿ; ಹಗ್ಗದ ಕುಣಿಕೆ.

: ಬಟ್ಟೆಯನ್ನು ಎಣ್ಣೆಯಲ್ಲಿ ನೆನೆಯಿಸಿ ಉರಿಸುವ ಕೈದೀಪ; ದೀವಟಿಗೆ.

: ನೆತ್ತರು; ರಕ್ತ.

*ಕ್ರೂರ ಬ್ರಿಟಿಷ್ ಸೈನಿಕರನ್ನು 'ನಿಂದಿಹರಿದೊ ಇಗೊ!' ಎಂದು ಹೇಳಿ ಅವರ ಕಠೋರ ಚಹರೆಯನ್ನು ಹೀಗೆ ವರ್ಣಿಸಿದ್ದಾರೆ:

ಅವರು ಎಕ್ಕಡ ಮೆಟ್ಟಿಕೊಂಡಿರುವ 'ಎಕ್ಕಲ' ಎಂಬ ನರಕದ ಭಂಟರು. ಅವರು 'ಉಕ್ಕಡ ಗಾತ್ರದ ಉಕ್ಕಡದವರು'. ಇಲ್ಲಿಯ ಮೊದಲ ಉಕ್ಕಡ ಪದವು– ಗಾತ್ರದಲ್ಲಿ ಚಿಕ್ಕದಿದ್ದರು ಕುಣಿಕೆ ಸಾವಿನಷ್ಟೇ ಭೀಕರ ಪರಿಣಾಮ ಬೀರುತ್ತದೆ ಎಂಬ ಅರ್ಥವನ್ನು ಹೊಮ್ಮಿಸುತ್ತದೆ. ಎರಡನೆಯ 'ಉಕ್ಕಡ' ಪದವು ಗುಣವಾಚಕವಾಗಿ ಅವರಲ್ಲಿರುವ 'ಅತಿಯಾದ' ಕ್ರೌರ್ಯವನ್ನು ಧ್ವನಿಸುತ್ತದೆ. ಅವರು ಭಾರತೀಯರ ಕೊರಳಿಗೆ ಮೂಲವಾದವರು ಎಂಬ ಭೀಕರತೆಯನ್ನು ಕಟ್ಟಿಕೊಡುತ್ತದೆ.

ಆ ಸೈನಿಕರಲ್ಲಿಯ ಕಣ್ಣಿನ ಕ್ರೌರ್ಯದ ಉರಿಯನ್ನು 'ಕಕ್ಕಡ' ಪ್ರತಿಮೆಯು ಚಿತ್ರಿಸುತ್ತದೆ. ಅವರು ಬಂದಿರುವುದು ರಕ್ತದಲ್ಲಿ ನಮ್ಮನ್ನು ತೋಯಿಸಲು– 'ಮಾಡಿಸೆ ಕೆನ್ನೀರ್ ಜಳಕವನು' ಎಂದು ಸ್ಪಷ್ಟವಾಗಿ ಹೇಳುತ್ತದೆ.

ಇವರಿಂದ ಬಿಡುಗಡೆಗೊಳ್ಳಲು 'ನರಬಲಿಯೇ ಬೇಕು!' ಎಂದು ಈ ಕವನ ರಚಿಸಿ ಬ್ರಿಟಿಷರ ಕೆಂಗಣ್ಣಿಗೆ ಬೇಂದ್ರೆ ಗುರಿಯಾದರು. ಬ್ರಿಟಿಷರು ಅವರನ್ನು 1932ರಲ್ಲಿ ಬೆಳಗಾವಿಯ ಹಿಂಡಲಗಾ ಜೈಲಿನಲ್ಲಿ ಸೆರೆಯಲ್ಲಿಟ್ಟರು.

---

## ಹುದುಗಲಾರದ ದುಃಖ

### ಹುದುಗು, ಹುಗಿದಿರಿಸು

**ಹುದುಗಲಾರದ ದುಃಖ ಹುಗಿದಿರಿಸಿ ನಗೆಯಲ್ಲಿ/ ನಸುನಗುತ ಬಂದೆ ಇದಿರು (1–1, 2)**

: ಅಡಗು; ಮರೆಯಾಗು.

: ಒಳಗಿರಿಸು; ಒಳಗಿಡು.

*ಸಂಸಾರದ ಕಷ್ಟಗಳನ್ನು, ಅಡಗಿಸಿ ಮರೆಯಾಗಿಸಿಕೊಳ್ಳಲಾರದ ದುಃಖವನ್ನು ನಗೆಯಲ್ಲಿ ಒಳಗಿರಿಸಿಕೊಂಡು ಪತಿಯೆದುರು ಬಂದ ಸತಿಯನ್ನು ಕಂಡು ಅವಳ ಸಾಧ್ವಿ ಗೃಹಿಣಿಯ ಲಕ್ಷಣಕ್ಕೆ ಕವಿ ಕರಗಿ ಹೋಗಿ ಹಾಡಿದ ಗೀತೆ 'ಹುದುಗಲಾರದ ದುಃಖ'. ಅವಳದು ತನ್ನನ್ನು ಸಂತೋಷವಾಗಿರಿಸುವ ನಟನೆ ಎಂದು ತಿಳಿದು ಅವಳ ಆಂತರ್ಯದ ಪ್ರೀತಿಗೆ ಸ್ಪಂದಿಸಿ ಹೇಳುತ್ತಾರೆ 'ನಿನ್ನ ನಗೆ ಸುಖದ ಹೂವೆಂದು ತಿಳಿಯಲಿ ಹೇಗೆ ಅಂತಿಂತು ನಟಿಸುತಿರಲು?'

---

## ಬೆಕ್ಕು ಹಾರುತಿದೆ ನೋಡಿದಿರಾ?

### ಜೊಂಡಿಗ

**ರಾಜ್ಯದ ಹೆಗ್ಗಣಗಳ ತಾನೊಕ್ಕಿ/ ಜೊಂಡಿಗದಾ ಹುಲುಗಡಣವ ಮುಕ್ಕಿ (4–1, 2)**

: ಒಂದು ಬಗೆಯ ಹುಳು; ಜಿರಲೆ.

*ಬೆಕ್ಕು ಹೆಗ್ಗಣಗಳನ್ನು ತಿಂದು, ನಿಕೃಷ್ಟ ಜಿರಲೆಗಳ ಸಮೂಹವನ್ನು ಮುಕ್ಕಿತು ಎಂದು ಅಣಕವಾಡು ರಚಿಸಿದ್ದಾರೆ.

---

## ಕೀರ್ತಿ

### ಒಗುಮಿಗು, ಹಾಯಿ

**ತೇಲಿದ್ದು ತೇಲಿತ್ತು/ ಮುಳುಗಿದ್ದು ಮುಳುಗಿತ್ತು/ ಗಾಳಿನೀರ್ ಬಾಳು ಒಗುಮಿಗುತಲಿಹುದು/ ಮೇಲೆ ಕೀರ್ತಿಯ ಹಾಯಿ/ ಪಾಪ ಬಿಡುತಿದೆ ಬಾಯಿ/ ತೆರೆನೊರೆಯಲಿತಿಹಾಸ ನಗುತಲಿಹುದು (3–1 ರಿಂದ 6)**

: ಅತಿಶಯವಾಗು; ಹೆಚ್ಚಾಗು.

: ಗಾಳಿಯ ಅನುಕೂಲತೆಗಾಗಿ ದೋಣಿಯ ನಡುಗಂಬಕ್ಕೆ ಕಟ್ಟುವ ನೌಕಾಪಟ.

*ಕೀರ್ತಿ ಎಂಬುವುದು ಎಷ್ಟು ಅರ್ಥಹೀನ ಎಂಬುದನ್ನು ಕವಿ 'ಮೇಲೆ ಕೀರ್ತಿಯ ಹಾಯಿ/ ಪಾಪ ಬಿಡುತಿದೆ ಬಾಯಿ' ಎಂದು ಪ್ರತಿಮಾತ್ಮಕವಾಗಿ ತಿಳಿಸಿದ್ದಾರೆ. ಮನುಷ್ಯನು ಹುಸಿಪ್ರತಿಷ್ಠೆಯಲ್ಲಿ 'ತೇಲಿದ್ದು ತೇಲಿತ್ತು/ ಮುಳುಗಿದ್ದು ಮುಳುಗಿತ್ತು.' ಆದರೆ ಪ್ರಪಂಚದ ಸೃಷ್ಟಿಗೆ ಕಾರಣವಾಗಿರುವ ಪಂಚಭೂತಗಳಲ್ಲಿ ಗಾಳಿ ಮತ್ತು ನೀರಿನ ಬಾಳು ಅತಿಶಯವಾದ ಹೊಂದಾಣಿಕೆಯಲ್ಲಿ ಸಾಗುತ್ತಿದೆ.

* * * * * *

### ಕೊನೆಬಿಕ್ಕು, ತಣಿವು

**ಕೊನೆಬಿಕ್ಕು ಬಂದಾಗ/ ಇಡುಗಂಗೆ ತಂದಾಗ/ ಹನಿಯೊಂದು ಕುಡಿಸಿದರೆ ಏನು ತಣಿವು? (5–4, 5, 6)**

: ಕೊನೆಗಾಲದ ಬಿಕ್ಕಳಿಕೆ; ಅಂತ್ಯಕಾಲದ ಬಿಕ್ಕು.

: ತೃಪ್ತಿ; ಸಮಾಧಾನ.

*ವ್ಯಕ್ತಿ ಬದುಕಿದ್ದಾಗ ದೀನದಲಿತರನ್ನು ಕಂಡು 'ತನ್ನ ಮರುಕಿಗೆ ಮರುಗಿ /ಆಣೆಕಲ್ಲೊಲು ಕರಗಿ/ ಬಿಟ್ಟ ನಿಟ್ಟುಸಿರೆ ಚಂದನದ ತಂಪು.' ಹಾಗೆ ಜೀವನ ನಡೆಸದೆ ಸ್ವಾರ್ಥದಲ್ಲಿ ಉಸಿರಾಡಿದರೆ ಅದೇ ದಣಿವು. ಅಂತಹವನಿಗೆ ಕೊನೆಗಾಲದ ಬಿಕ್ಕಳಿಕೆ ಬಂದಾಗ ಗಂಗೆಯ ಹನಿ ಕುಡಿಸಿದರೆ ತೃಪ್ತಿ ತರುವುದಿಲ್ಲ.

* * * * * *

### ಕಾಕಪಿಂಡ

**ಅವಗೆಲ್ಲಿ ಕಣ್ಣೀರು/ ಜೊಳ್ಳೆಳ್ಳು ತಣ್ಣೀರು/ ಮೇಲೆ ಕೀರ್ತಿಯ ಶುಭ್ರ ಕಾಕಪಿಂಡ. (6–4, 5, 6)**

: (ಶ್ರಾದ್ಧಾದಿ ಕಾಲಗಳಲ್ಲಿ ಪಿತೃಗಳ ತೃಪ್ತಿಗೆಂದು)ಕಾಗೆಗಳಿಗೆ ನೀಡುವ ಪಿಂಡ.

* * * * * *

**ಗಾಳಿಬಯಲು, ಕುರುಹು**

**ಗಾಳಿ ಬಯಲಿನ ಬೀದಿ/ ಹೆಜ್ಜೆ ಮೂಡದ ಹಾದಿ/ ಯಲ್ಲಿ ಕುರುಹನು ಕಾಂಬ ಕಣ್ಣು ಬರಲಿ. (9–4, 5, 6)**

: ಆವರಣವಿಲ್ಲದ ಬಯಲು; ಬಟ್ಟಬಯಲು.

: ಗುರುತು; ಚಿಹ್ನೆ.

*ಹಳುವ(ಕಾಡು)ದಲ್ಲಿ ದಾರಿತಪ್ಪಿದ ಹಕ್ಕಿಯನ್ನು ಕುರಿತು ಬೇಂದ್ರೆ ಆ ಬಟ್ಟಬಯಲಿನಲ್ಲಿ ಯಾವ ದಿಕ್ಕಿನಲ್ಲಿ ಸಾಗಬೇಕೆಂದು ಗೊತ್ತಿಲ್ಲದಿರುವಾಗ ಅದಕ್ಕೆ ಗುರುತು ಕಾಣುವ ಕಣ್ಣು ಬರಲಿ ಎಂದು ಹಾರೈಸಿದ್ದಾರೆ.

---

## ಪಾತರಗಿತ್ತಿ ಪಕ್ಕ

**ಪಕ್ಕ**

**ಪಾತರಗಿತ್ತೀ ಪಕ್ಕಾ/ ನೋಡಿದೇನ್ಸ ಅಕ್ಕಾ! (ಸಾಲು: 1, 2)**

: ಗರಿ; ರೆಕ್ಕೆ.

*ತಂಗಿಯು ತಾನು ಪಾತರಗಿತ್ತಿಯ ರೆಕ್ಕೆಯಲ್ಲಿ ಕಂಡ ಬೆರಗನ್ನು ಅಕ್ಕನಿಗೆ ಹೇಳುತ್ತಾ ಆಶ್ಚರ್ಯವನ್ನು ವ್ಯಕ್ತಪಡಿಸುತ್ತಿದ್ದಾಳೆ.

* * * * * *

**ಹಚ್ಚಿ ಚುಚ್ಚಿ(ಹಚ್ಚೆ ಚುಚ್ಚು)**

**ಹಸಿರು ಹಚ್ಚಿ ಚುಚ್ಚಿ/ ಮೇಲ್ಸಕರಿಸಿಣ ಹಚ್ಚಿ (ಸಾಲು: 3, 4)**

: ಮೈ ಮೇಲೆ ಅಲಂಕಾರಕ್ಕಾಗಿ ಚಿತ್ರ ಬರೆದು ಹಸಿರು ತುಂಬಿ ಮುಳ್ಳಿನಿಂದ ಅಥವಾ ಸೂಜಿಯಿಂದ ಚುಚ್ಚಿಸು; ಹಚ್ಚೆ ಹೊಯಿಸು.

*ತಂಗಿಗೆ ಪಾತರಗಿತ್ತಿಯ ರೆಕ್ಕೆಯ ಮೇಲಿರುವುದು ಹಳ್ಳಿಯ ಜನಗಳ ಮೈಮುಖದ ಮೇಲೆ ಕಂಡ ಹಚ್ಚೆಯ ಪ್ರತಿರೂಪ. ಅವಳು ಆ ದೇಸಿ ಕಲೆಯನ್ನು ಹಸಿರು

ಗಿಡಮೂಲಿಕೆಗಳಿಂದ ತಯಾರಿಸಿದ ರಸವನ್ನು ಹಚ್ಚಿ, ಹಚ್ಚೆ ಚುಚ್ಚುವುದನ್ನು ಕಂಡಿದ್ದಾಳೆ. ಆ ಚುಚ್ಚಿದ ಭಾಗಕ್ಕೆ ನಂಜು ಆಗದಿರಲು ಅರಿಷಿಣ ಹಚ್ಚುವುದನ್ನು ನೋಡಿದ್ದಾಳೆ. ಜೀವಂತ ಚೇತನವಾದ ಪಾತರಗಿತ್ತಿಯ ರೆಕ್ಕೆಗಳಿಗೆ ಅನಂತಶಕ್ತ ಹಚ್ಚೆ ಹಚ್ಚಿರುವುದನ್ನು ಕಂಡು ಅಚ್ಚರಿಗೊಂಡಿದ್ದಾಳೆ. ಅದರ ಬಣ್ಣ ಬೆಡಗು ಲವಲವಿಕೆಗೆ ಸರಿಸಾಟಿಯಾಗಿ ಓಡಿ, ಪಾತರಗಿತ್ತಿಯನ್ನು ಹಿಡಿದು ನೋಡಿ ಅಕ್ಕನಿಗೆ ಹೇಳುತ್ತಿದ್ದಾಳೆ: ಅದನ್ನು ಮುಟ್ಟಿ ನೋಡಿದೆ ಕೈಯೆಲ್ಲ ಅರಿಷಿಣವಾಯಿತು. ಅದಕ್ಕೆ ಸೃಷ್ಟಿಕರ್ತ 'ಹಸಿರು ಹಚ್ಚೆ ಚುಚ್ಚಿ ಮೇಲ್ಯ್ಕರಿಸಿಣ ಹಚ್ಚಿ' ಕಳುಹಿಸಿದ್ದಾನೆ!.

*  *  *  *  *  *

## ಅಕ್ಕಿ

**ಹೊನ್ನ ಚಿಕ್ಕಿ ಚಿಕ್ಕಿ/ ಇಟ್ಟು ಬೆಳ್ಳೀ ಅಕ್ಕಿ (ಸಾಲು:5, 6)**

: ಅಕ್ಷಿ; ಕಣ್ಣು.

*ಪಾತರಗಿತ್ತಿಯ ರೆಕ್ಕೆಯನ್ನು ನೋಡುತ್ತಿದ್ದರೆ ಅದರ ರಚನೆಯಲ್ಲಿ ಸುತ್ತಲೂ ಹೊನ್ನನಕ್ಷತ್ರದ ಹೊಳಪಿದೆ. ಮಧ್ಯದಲ್ಲಿ ಬೆಳಗುವ ಬೆಳ್ಳಿಯಂತಹ ಕಣ್ಣು ಇದೆ.

*  *  *  *  *  *

## ಗಾಳಿಕೆನೆ, ತಾನ

**ಗಾಳೀ ಕೆನೀಲೇನ್ಯ/ ಮಾಡಿದ್ದಾರ ತಾನ! (ಸಾಲು: 9, 10)**

*ಜನಪದರ ಅನುಭವ ಜಾಣತನದಿಂದ ಧ್ವನಿಯಾಗಿ ಹೊಮ್ಮುವುದೇ ನುಡಿಗಟ್ಟು. ಅದರ ಭಾವತೀವ್ರತೆ ವರ್ಣನಾತೀತ. ಅಂತಹದೇ ನುಡಿಗಟ್ಟು 'ಗಾಳಿಕೆನೆ'ಯನ್ನು ಬೇಂದ್ರೆ ಅವರು ಪಾತರಗಿತ್ತಿಯನ್ನು ಬಣ್ಣಿಸಲು ಬಳಸಿದ್ದಾರೆ. ಪಾತರಗಿತ್ತಿಯ ಶುಭ್ರತೆ, ನುಣುಪು, ರಂಗು, ಕಾಂತಿಗೆ ಮಾರು ಹೋದ ತಂಗಿಯು 'ಇದನ್ನು ಗಾಳಿಯ ಕೆನೆಯಲ್ಲಿ ಮಾಡಿದ್ದಾರಲ್ಲವೆ!' ಎಂದು ಅಕ್ಕನನ್ನು ಕೇಳುತ್ತಾಳೆ.

*  *  *  *  *  *

## ಆರುಪಾರು

**ನೂರು ಆರು ಪಾರು/ ಯಾರು ಮಾಡಿದ್ದಾರು! (ಸಾಲು:11,12)**

ಆರಪಾರ, ಆರುಪಾರು: (ಉ.ಕ) ತುದಿಯಿಂದ ತುದಿಯವರೆಗೆ, ತಡೆಯಿಲ್ಲದೆ,–ಅನಿರ್ಬಂಧಿತವಾದ,–ನೇರವಾಗಿ,–ಸ್ಪಷ್ಟವಾಗಿ.

[1. ಹಿಂ. ಮರಾ. ಆರ್ ಪಾರ್= ಈ ಕೊನೆಯಿಂದ ಆ ಕೊನೆಯ ವರೆಗೆ

2. ಹಿಂ = ಪಾರದರ್ಶಕ]

ಕಣ್ಣು ಹರಿದಷ್ಟು ದೂರ ಅನಿರ್ಬಂಧಿತವಾಗಿ ಈ ಕೊನೆಯಿಂದ ಆ ಕೊನೆವರೆಗೆ ಹಾರಾಡುತ್ತಿರುವ, ಗುಂಪು ಗುಂಪಾಗಿ ತೇಲಾಡುತ್ತಿರುವ ಅಗಣಿತ ಪಾತರಗಿತ್ತಿಯನ್ನು ವೀಕ್ಷಿಸುತ್ತ ತಂಗಿ ಅಕ್ಕನನ್ನು ಪ್ರಶ್ನಿಸುತ್ತಾಳೆ:

'ನೂರು ಆರು ಪಾರು। ಯಾರು ಮಾಡಿದ್ದಾರು!' ತಂಗಿಯ ಪ್ರಶ್ನೆ ಅಕ್ಕನಿಗೂ ಪ್ರಶ್ನೆಯಾಗಿಯೇ ಉಳಿಯುತ್ತದೆ.

***

'ನೋಡ ನೋಡುತಿರೆ ಜಡವೆ ಜಲದವೊಲು ತೆಳ್ಳನಾರುಪಾರು' (ಹೃದಯ ಸಮುದ್ರ-ಚಿತ್ತ ಭಿತ್ತಿಯ ಚಿತ್ರ)

***

'ಪ್ರಾಜ್ಞಗಿದೆ ಈ ವಿಶ್ವ ಒಂದು ಮಾರು/ ತಿಳಿವ ತೇಜದ ಮುಂದೆ ನಾನು, ಬಾನೂ, ನೀನು ತುದಿಯಿಂದ ತುದಿವರೆಗೆ ಆರುಪಾರು' (ಮುಕ್ತಕಂಠ-ಬಿಡಿಮುತ್ತು)

* * * * * *

**ಪಕಳೆ**

**ಹೂವಿನ ಪಕಳಿಗಿಂತ/ ತಿಳಿವು ತಿಳಿವು ಅಂತ?/ ಹೂವಿಗೆ ಹೋಗಿ ತಾವ/ ಗಲ್ಲಾ ತಿವಿತಾವ. (ಸಾಲು: 17-20)**

: ಹೂವಿನ ದಳ,-ಎಸಳು,-ರೇಕು.

*ಹೂವಿನ ದಳಗಳಿಗಿಂತ ತಾವು ಶುದ್ಧ, ನಿರ್ಮಲ ಎಂಬ ಭಾವದಲ್ಲಿ ಪಾತರಗಿತ್ತಿಗಳು ಹೂವಿನ ಬಳಿ ಹೋಗಿ ಪ್ರೀತಿಯನ್ನು ಹೊಮ್ಮಿಸುತ್ತಿವೆ.(ತಿಳಿ: ನಿರ್ಮಲವಾಗು; ಶುದ್ಧವಾಗು; ಸ್ವಚ್ಛವಾಗು)

***

**ಎರಡೇ ಎಸಳು ನಾಲ್ಕೇ ಪಕಳೆ ಕಳೇವರದೊಳು ಕಂಡಿತೊಂದು ಕಳೆ (ಗರಿ-ನಿರಾಶೆ, 4-1, 2)**

* * * * * *

## ಹುಡದಿ

**ಹುಲ್ಲುಗಾವುಲದಾಗ/ ಹಳ್ಳೀ ಹುಡುಗೀ ಹಾಂಗ/ ಹುಡದೀ ಹುಡದೀ ಭಾಳ/ ಆಟಕ್ಕಿಲ್ಲ ತಾಳ. (ಸಾಲು: 23–26)**

: 1. ಗೊಂದಲ; ಗಲಾಟೆ.

2. ಹುಡುಗಾಟಿಕೆ; ಚೆಲ್ಲಾಟ.(ಮರಾ.ಹುಡಿದೀ)

*ತಂಗಿಯು ಪಾತರಗಿತ್ತಿಯ ಹುಲ್ಲುಗಾವಲದಲ್ಲಿಯ ಚೆಲ್ಲಾಟವನ್ನು, ಹೆಣ್ಣುಮಕ್ಕಳ ಹುಡುಗಾಟಿಕೆಗೆ, ಗದ್ದಲಕ್ಕೆ ಹೋಲಿಸಿಕೊಂಡು ಪ್ರಕಟಪಡಿಸಿರುವ ಸಹಜಾಭಿವ್ಯಕ್ತಿ–ರಸಿಕ ನಿಂತು ನೋಡುವಂತಿದೆ.

* * * * * *

## ಮದಗುಣಿಕಿ

**ಮದಗುಣಿಕಿಯ ಮದ್ದು/ ಹುರುಪಿಗಿಷ್ಟು ಮೆದ್ದು, (ಸಾಲು:39, 40)**

: ಮದಗುಣಿಕಿ ಕೆಟ್ಟವಿಷದ ಗಿಡ. ಇದರಲ್ಲಿ ಮುಳ್ಳು ಮುಳ್ಳು ಕಾಯಿ ಬಿಡುತ್ತದೆ. ಅದು ಬಿಳಿ ಹೂ ಬಿಡುತ್ತದೆ. ಅದರ ಮೇಲೆ ನಸುನೀಲಿ ಬಣ್ಣವಿರುತ್ತದೆ. ಅಗಲ ಎಲೆ ಬಿಡುತ್ತದೆ. ಅದರ ಎಲೆಯನ್ನು ಕುಟ್ಟಿ ಮಜ್ಜಿಗೆ ಒಳಗೆ ಕಲಸಿ ಕಡಲೆಗೆ ಹಚ್ಚಿ ಬೀಜೋಪಚಾರ ಮಾಡಿ ರೈತರು ಬಿತ್ತುತ್ತಾರೆ. ಅದರಲ್ಲಿ ರೋಗ ನಿರೋಧಕ ಶಕ್ತಿ ಉಂಟು. ಪಾತರಗಿತ್ತಿಯು ಅದನ್ನು ಹುರುಪಿಗಿಷ್ಟು ಮೇಯುತ್ತದೆ.

* * * * * *

## ಗೊರಟಿಗೆ

**ಗೊರಟಿಗೆಗೆ ಶರಣ/ ಮಾಡಿ ದೂರಿಂದ್ಸನ (ಸಾಲು: 45, 46)**

*ಎಲೆಯ ತುದಿ ಚೂಪಾಗಿ ಮುಳ್ಳು ಹೊಂದಿರುವ ಗಿಡ. ಅದರ ಬಣ್ಣದ ಹೂವನ್ನು ಪೂಜೆಗೆ ಜನರು ಬಳಸುತ್ತಾರೆ. ಎಲೆ ಬಲಿಯುತ್ತಿದ್ದಂತೆ ಮುಳ್ಳು ಬಲಿತು ಗಟ್ಟಿಗೊಂಡು ಮುಟ್ಟಿದರೆ ಅಪಾಯ ಎಂಬಂತಿರುತ್ತದೆ. ಪಾತರಗಿತ್ತಿಯು ಅದಕ್ಕೆ ದೂರದಿಂದಲೆ ನಮಸ್ಕರಿಸುತ್ತದೆ !. ಇದು ಅದರ ಜಾಣ ನಡೆ.

* * * * * *

## ಮಾಲಿಂಗನ ಬಳ್ಳಿ

**ಮಾಲಿಂಗನ ಬಳ್ಳಿ/ ತೂಗೂ ಮಂಚದಲ್ಲಿ/ ತೂಗಿ ತೂಗಿ ತೂಗಿ/ ಧಣಿಧಾಂಗ ಆಗಿ(ಸಾಲು:47–50)**

*ದೀಪಾವಳಿಯಲ್ಲಿ ತಂಗಿಯು ತಾನು ಬಿಸಿನೀರು ಸ್ನಾನ ಮಾಡುವ ಹಂಡೆಗೆ ಸುತ್ತಿದ ಮಾಲಿಂಗನ ಬಳ್ಳಿಯನ್ನು ನೆನೆದು, ಹೊರಗೆ ಸುಖದ ಸೊಬಗಿನಲ್ಲಿ ಪಾತರಗಿತ್ತಿ ಅದರ ಮೇಲೆ ತೂಗಾಡುವುದನ್ನು ವರ್ಣಿಸಿದ್ದಾಳೆ. ಮಾಲಿಂಗನ ಬಳ್ಳಿಯಲ್ಲಿರುವ ಕಾಯಿಗಳು ಲಿಂಗಾಕೃತಿಯಲ್ಲಿದ್ದು ರೋಗನಿರೋಧಕವಾದ ಶಕ್ತಿಯನ್ನು ಹೊಂದಿವೆ.

* * * * * *

## ಗುಲಬಾಕ್ಷಿ

**ಗುಲಬಾಕ್ಷಿಯ ಹೂವ/ ಕುಶಲ ಕೇಳತಾವ(ಸಾಲು:55,56)**

*'ಗುಲಬಾಕ್ಷಿ' ಎನ್ನುವುದು ಬಹುಬಣ್ಣದ ಹೂವುಗಳನ್ನು ಬಿಡುವ ಜಾತಿಗೆ ಸೇರಿದ ಸಸ್ಯ. ಅಲ್ಲಲ್ಲಿ ಗನ್ನುಗಳನ್ನು, ಗೆಲ್ಲುಗಳನ್ನು ಹೊಂದಿದ್ದು ಮಟ್ಟಸ ಎತ್ತರಕ್ಕೆ ಇದು ಬೆಳೆಯುತ್ತದೆ. ಇದರಲ್ಲಿ ಬಿಳಿ, ಕೇಸರಿ, ಗುಲಾಬಿ, ಹಳದಿ ಇತ್ಯಾದಿ ಬಣ್ಣದ ಹೂಗಳನ್ನು ಬಿಡುವ ಪ್ರಭೇದಗಳಿವೆ. ಇಳಿಹೊತ್ತಿನ ಸಮಯದಲ್ಲಿ ಸಂಜೆಯ ಹೂ ಬಿಸಿಲಿಗೆ ಈ ಹೂಗಳು ಅರಳುತ್ತವೆ; ತುಂಬ ಮನೋಹರವಾಗಿರುತ್ತವೆ. ಆ ಸಂಭ್ರಮದಲ್ಲಿ ಪಾತರಗಿತ್ತಿ ಅವುಗಳ **'ಕುಶಲ ಕೇಳತಾವ!'**

* * * * * *

## ಚವ್ವ, ಚಕ್ಕ

**ತಾಳ ಚವ್ವ ಚಕ್ಕ/ ಕುಣಿತ ತಕ್ಕ ತಕ್ಕ; (ಸಾಲು:67,68)**

: (ಉ.ಕ) ಸುಖ; ಚೈನಿ. ಚೈನಿ= ಮಜ, ಷೋಕಿ.

: ಆರು ಎಂಬ ಸಂಖ್ಯೆಯ ಸಂಕೇತ; ಪಗಡೆಯಾಟದಲ್ಲಿ ಬೀಳುವ ಆರರ ಗರ.

*ಜೀವನದಲ್ಲಿ ಸುಖದ ಸಮಯವೆಂದರೆ ತಾಳ ಹಾಕುತ್ತಾ, ಚೈನಿಹೊಡೆಯುತ್ತಾ, ಪಗಡೆಯಾಡುತ್ತಾ ಅದರಲ್ಲಿ ಬೀಳುವ ಚಕ್ಕ, ಭಾರ ನೋಡುತ್ತಾ ಹುಮ್ಮಸ್ಸಿನಿಂದ ಆಡುವುದು. ಅಂತಹದೇ ಹುಮ್ಮಸ್ಸಿನಲ್ಲಿ ಚಿಟ್ಟೆ ತಕ್ಕ ತಕ್ಕ ಕುಣಿಯುತ್ತಿದೆ.

'ಪಾತರಗಿತ್ತಿ' ಶಿಶುಗೀತವು ಜಾನಪದ ದ್ವಿಪದಿಯಲ್ಲಿ ಅಂಶಛಂದಸ್ಸಿನಲ್ಲಿದೆ. ಪ್ರತಿಸಾಲು ಮೂರು ತಾಳಕ್ಕೆ ದುಡಿಯುತ್ತಾ, ಅಂತ್ಯ ಪ್ರಾಸವು ದೇಶಿಗತ್ತಿಗೆ, ಹಾಡಿನ ಮಟ್ಟಿಗೆ ಕುಣಿಯುತ್ತದೆ. ಇಲ್ಲಿಯ ಕಾವ್ಯಭಾಷೆ ಮಗುವಿನ ಸಹಜ ಸರಳ ಕುತೂಹಲದ ನುಡಿಯಲ್ಲಿ ಪಾತರಗಿತ್ತಿಯ ಮೋಹಕ ಲಾವಣ್ಯದಂತಿದೆ.

* * * * * *

**ನಂದನದ ತೋಟ**

**ಕಾಣದೆಲ್ಲೊ ಮೂಡಿ/ ಬಂದು ಗಾಳಿಗೂಡಿ,/ ಇನ್ನು ಎಲ್ಲಿಗೋಟ/ ನಂದನದ ತೋಟ(ಸಾಲು:73–76)**

:ಇಂದ್ರನ ತೋಟ,–ವನ.

*ಈ ಜಗದ ಸೃಷ್ಟಿ ಸೌಂದರ್ಯ ಮೂಡುವ ಬಗೆ ಹೇಗೆ ಗೂಢವೋ, ಅದು ನಿಸರ್ಗದಲ್ಲಿ ಒಂದಾಗಿ ಹೋಗುವುದು ಅಷ್ಟೆ ನಿಗೂಢ ಎಂಬುದನ್ನು ಈ ಸಾಲುಗಳು ಧ್ವನಿಸುತ್ತವೆ.

---

## ಬಿಸಿಲುಗುದುರೆ

**ಥಾಟು**

**ಉಡುಗಿಯ ಮಾಟೇನ, ನಡಗಿಯ ಥಾಟೇನ (2–3)**

: ಡೌಲು;ಪ್ರದರ್ಶನ; ಆಡಂಬರ.

*ತಾನು ಮದುವೆಯಾಗುವ ಹುಡುಗಿಯನ್ನು ಮೊದಲಬಾರಿ ಕಂಡಾಗ ಅವಳ ಮಾಟದ ಉಡುಗೆ ಮತ್ತು ನಡಿಗೆಯ ಡೌಲನ್ನು ಕವಿ ಜಾನಪದ ಧಾಟಿಯಲ್ಲಿ ಬಣ್ಣಿಸಿದ್ದಾರೆ.

---

## ನನ್ನ ಕೈಯ ಹಿಡಿದಾಕೆ?

**ಕಳ್ಳ ಹುದುಲು**

**ನಿನ ಅಳುವ ಹುಚ್ಚು ಹಳ್ಳದ ಕಳ್ಳ/ ಹುದುಲಾಗ ಸಿಕ್ಕೇನ! (1–3,4)**

*ಗೋಮುಖ ವ್ಯಾಘ್ರನ ಭೀಕರತೆಯನ್ನು ಅನುಭವಕ್ಕೆ ತಂದುಕೊಡುವ ಪದ–ಕಳ್ಳ ಹುದುಲು. ಉತ್ತರ ಕರ್ನಾಟಕದಲ್ಲಿ ಕಳ್ಳ ಕೆಸರನ್ನು 'ಕಳ್ಳಹುದುಲು' ಎಂದು ಕರೆಯುತ್ತಾರೆ. ತುಂಬಾ ಆಳದ ಕೆಸರುಗುಂಡಿ ಅದು. ಗಾಳಿ ಬಿಸಿಲಿಗೆ ಮೇಲೆ ಒಣಗಿದಂತೆ ಕಂಡರೂ ಒಳಗೆ ಹಸಿಹಸಿಯಾದ ಕೆಸರೇ ಇರುತ್ತದೆ. ನೆಲ ಗಟ್ಟಿಯಾಗಿದೆ ಎಂದು ಕಾಲಿಟ್ಟರೆ ಒಳಗೊಳಗೆ ಇಳಿಯುತ್ತಾ ಹೋಗುತ್ತದೆ. ಒದ್ದಾಡಿದಷ್ಟು ಮತ್ತಷ್ಟು ಒಳಗೆ ಇಳಿದು ನಾವು ಸಾಯುತ್ತೇವೆ. ಸಂಸಾರದ ಜಂಜಾಟದ ಮಧ್ಯೆಯೂ ಹೆಂಡತಿ ಅಳು ನುಂಗಿ ನಕ್ಕಾಗ ಗಂಡನೂ ನಗುತ್ತಾನೆ. ಆದರೆ, ಹೆಂಡತಿ ತನ್ನ ನೋವಿಗೆ ಒಳಗೊಳಗೆ ಕೊರಗುತ್ತಿದ್ದರೆ

ಅದು ಗಂಡನಿಗೆ ಸಹಿಸಲು ಅಸಾಧ್ಯವಾದ ಹಿಂಸೆಯಾಗುತ್ತದೆ. ಆ ಹಿಂಸೆಯ ಪರಾಕಾಷ್ಠೆಯನ್ನು ಕವಿ 'ಕಳ್ಳಹುದುಲು' ಎಂದು ಯಥಾರ್ಥವಾಗಿ ಬಣ್ಣಿಸಿದ್ದಾರೆ.

ಕೈ ಹಿಡಿದವಳ ಸಂಕಟವನ್ನು ತಿಳಿಯದೇ ಹೋಗುವ ಗಂಡನ ಅಸಹನೀಯವಾದ ತಳಮಳದ ಆಳಕ್ಕೆ ಇಳಿಯುತ್ತಲೇ ಹೋಗುವ ಈ ರೂಪಕಾಲಂಕಾರ ಕವಿಯ ಜೀವನಾನುಭವದ ಒಟ್ಟು ಸಾರವೇ ಆಗಿದೆ. ಇದೊಂದು ಅಪೂರ್ವ ಪದಪ್ರಯೋಗ.

---

## ಚಳಿಯಾಕೆ

### ಸೀಗೆ ಹುಣ್ಣಿವೆ

**ಸೀಗೆ ಹುಣ್ಣಿವೆ ಮುಂದೆ/ ಸೋಗಿನ ಚಂದ್ರಮ/ ಸಾಗಿಬರುವೊಲು ಬರುವ ಚಳಿಯಾಕೆ. (1-1, 2, 3)**

: ಆಶ್ವಯುಜ ಮಾಸದ ಹುಣ್ಣಿಮೆ ಮತ್ತು ಅಂದು ಆಚರಿಸುವ ಗೌರಿ ಪೂಜೆ.

*1998ರ ಅಕ್ಟೋಬರ್ ತಿಂಗಳಿನಲ್ಲಿ ಧಾರವಾಡದ ಆರ್.ಟಿ.ಓ ಕಛೇರಿಯಲ್ಲಿ ಕೆಲಸ ಮಾಡುವಾಗ ಒಂದು ದಿನ ಮಧ್ಯರಾತ್ರಿಯ ವರೆಗೆ ವಿಶೇಷ ಕರ್ತವ್ಯನಿಮಿತ್ತ ಅಲ್ಲಿಯೇ ಇರಬೇಕಾಗಿತ್ತು. ಹೊರಗೆ ವಿಶಾಲ ಬಯಲಿನಲ್ಲಿ ಚಂದ್ರನ ಬೆಳುದಿಂಗಳು ಹಾಲು ಚೆಲ್ಲಿದಂತಿತ್ತು. ಕೈಲಿರುವ ಕಛೇರಿ ಟಿಪ್ಪಣಿಗಳನ್ನು ಸ್ಪಷ್ಟವಾಗಿ ಓದಬಹುದಾದಷ್ಟು ಬೆಳಕು ಹರಿದಿತ್ತು. ನಾನು ಆ ಸ್ವರ್ಗ ಸದೃಶ ಬೆಳುದಿಂಗಳಲ್ಲಿ ಮೈಮರೆತು ಹುಬ್ಬಳ್ಳಿಯವರಾದ ನನ್ನ ಸಹೋದ್ಯೋಗಿ ಕಂಬಾರರನ್ನು ಕೇಳಿದೆ: 'ಇದೇನಿದು ಇಷ್ಟು ಬೆಳುದಿಂಗಳು!'

ಅವರು 'ಇಂದು ಸೀಗಿಹುಣ್ಣಿಮೆ. ನೋಡಿ ಇನ್ನು ಕೆಲವೇ ದಿನಗಳಲ್ಲಿ ನೀವು ನಡುಗಿ ಹೋಗುವ ಹಾಗೆ ಚಳಿ ಶುರುವಾಗುತ್ತದೆ' ಎಂದರು. ನಾನು ನಕ್ಕು ಅದು ಹೇಗೆ ಸಾಧ್ಯ ಎಂದುಕೊಂಡೆ. ತಕ್ಷಣ ಬೇಂದ್ರೆಯವರ ಕವನ ಚಳಿಯಾಕೆಯ ಮೊದಲ ನುಡಿ ನೆನಪಾಯಿತು. ದಿನದಿನ ಕಳೆದ ಹಾಗೆಲ್ಲಾ ಚಳಿ ಧಾರವಾಡವನ್ನು ತಟ್ಟಿತು. ನಾನು ನಡುಗಿದೆ.

ಒಂದು ಋತುಮಾನದ ಹೊರಳನ್ನು ಆ ನೆಲದ ಅಣುಗನಾಗಿ ಬೇಂದ್ರೆ ಸೂಕ್ಷ್ಮವಾಗಿ ಗ್ರಹಿಸಿ ಅಭಿವ್ಯಕ್ತಿಸಿರುವ ರೀತಿ ಕನ್ನಡಕಾವ್ಯದ ಅಚ್ಚರಿ. ಅದು ಸೀಗೆಕಾಯಿಗಳು ಫಲಕ್ಕೆ ಬರುವ ಕಾಲ. ಆ ಬಳ್ಳಿಯಲ್ಲಿರುವ ಮುಳ್ಳುಗಳು ಗಟ್ಟಿಗೊಂಡು ಚುಚ್ಚಿ ನೋಯಿಸುವಂತಹ-ಚಳಿ ಬಿಗುವುಗೊಂಡು ಕೊರೆಯುವ ಪ್ರತಿಮೆ ಒಂದು ವಿಶಿಷ್ಟ ಸ್ಪರ್ಶಾನುಭವ. ಈ ಕವನದಲ್ಲಿ ಬೇಂದ್ರೆ ಅವರು ಚಳಿಯನ್ನು ಹೆಣ್ಣಾಗಿ ಪರಿಭಾವಿಸಿ ಆಕೆ ನಿಸರ್ಗದಿಂದ ಪಡೆದ ಪರಿಕರಗಳಲ್ಲಿ ಚೆಲುವಾದುದನ್ನು ಚಿತ್ರಿಸಿದ್ದಾರೆ. ಆಕೆ ಸಕಲ ಜೀವಜಾಲವನ್ನು ಆಕರ್ಷಿಸಿ ತನ್ನ ತೆಕ್ಕೆಗೆ ತೆಗೆದುಕೊಂಡ ಅಮೂರ್ತಾನುಭವವು ಇಲ್ಲಿ ಮೂರ್ತಗೊಂಡಿದೆ.

ಬೇಂದ್ರೆ ತಮ್ಮ ಪಂಚೇಂದ್ರಿಯಗಳು ಅನುಭವಿಸಿದ ಚಳಿಯನ್ನು ಅಂಗೈಲಿ ಹಿಡಿದು ಆಡಿಸಿ ನೋಡಿದ್ದಾರೆ.

* * * * * *

## ಬಾವಿಲಿ, ಓಲೆಕೊಪ್ಪು, ಚಳತುಂಬ

**ಮುಗಿಲಲ್ಲಾಡುವ/ ಬಾವಿಲಿ ಮಲ್ಲಿಗೆ/ ಕಿವಿಗೊಪ್ಪು ಓಲೆಕೊಪ್ಪು ಚಳತುಂಬ (2–1, 2, 3)**

: ಕಿವಿಗಿಟ್ಟುಕೊಳ್ಳುವ ಒಂದು ಆಭರಣ.

: ಕಿವಿಗಿಟ್ಟುಕೊಳ್ಳುವ ಒಂದು ಆಭರಣ.

: ಓಲೆಗೆ ಸೇರಿಸುವ ಜುಮುಕಿಯಂತಹ ಅಲ್ಲಾಡುವ ಒಂದು ಆಭರಣ

* ನಡುಗಿಸಲು ಅಡಿಯಿಟ್ಟು ಬರುವ ಚಳಿಯಾಕೆಯನ್ನು ಬೇಂದ್ರೆ ಅವರು ಆಕೆ ತೊಟ್ಟ ಆಭರಣಗಳ ಪ್ರತಿಮೆಯಲ್ಲಿ ಹಿಡಿದಿಟ್ಟಿದ್ದಾರೆ. ಮುಗಿಲ ಮಲ್ಲಿಗೆಯಂತಹ ಒಡವೆಯನ್ನು ಆಕೆ ಕಿವಿಯಲ್ಲಿ ಧರಿಸಿದ್ದಾಳೆ. ಅದು ಕಿವಿಯ ಹಾಲೆಯ ಮೇಲುಭಾಗದಲ್ಲಿ ನೇತಾಡುವಂತೆ ಇಟ್ಟುಕೊಳ್ಳುವ ಮತ್ತು ಅರಳುಗಳನ್ನು ಜೋಡಿಸಿದ ಉಂಗುರದಂತಿರುವ ಆಭರಣ ಬಾವಿಲಿ. ಇನ್ನೊಂದು ಕಿವಿಗೆ ಒಪ್ಪುವ ಓಲೆಕೊಪ್ಪ. ಆ ಓಲೆಗೆ ಸೇರಿಸುವ ಜುಮುಕಿಯಂತಹ ಅಲ್ಲಾಡುವ 'ಚಳತುಂಬ'. ಅವೆಲ್ಲಾ ಚಳಿಯ ಮುಖ ಅಲುಗುತ್ತಿರುವುದರ ಸೂಚನೆ. ಅಂಥ ಒಡವೆಗಳನ್ನು ಧರಿಸಿದ ಹಲವಾರು ಮುಖಗಳನ್ನು ಚಳಿಯಾಕೆ ನಡುಗಿಸುತ್ತಿದ್ದಾಳೆ ಎಂಬುದು ಅನುಭವ ಗೋಚರ.

* * * * * *

## ತೆನೆಹಾಲು

**ತೆನೆಹಾಲು ದಕ್ಕಲಿ/ ಕಕ್ಕಿಸಬೇಡದನು/ ನಿನ್ನ ನಂಜಿನ ಸೆರಗ ಬೀಸಾಡಿ (3–4, 5, 6)**

: ಹೊಡೆಯಲ್ಲಿ ಕಾಳು ಗಟ್ಟಿಯಾಗುವುದಕ್ಕೆ ಮುಂಚಿನ ಹಾಲು; ಎಳೆಯ ತೆನೆಯೊಳಗಿನ ರಸ, ತೆನೆಹಾಲು. ಇನ್ನು ಬಲಿಯದೆ ಹಾಲುತುಂಬಿ ಸಿಹಿಯಾಗಿರುವ ತೆನೆ. ಅದು ಸೀ ತೆನೆ; ಸಿಹಿತೆನೆ.

*ಚಳಿಯಾಕೆಯ ಬೀಸು ಬಿರುಸಾದರೆ ನಂಜಾಗಿ ಸೀ ತೆನೆ ಉದುರಿಹೋಗುತ್ತದೆ. ಈ ನೆಲದ ಪ್ರಾಣಿ ಪಕ್ಷಿಗಳಿಗೆ ಕಾಳು ಇಲ್ಲವಾಗುತ್ತದೆ. ಆದುದರಿಂದ ಚಳಿಯಾಕೆಯನ್ನು ಬೇಂದ್ರೆಯವರು ಮೇಲಿನಂತೆ ಪ್ರಾರ್ಥಿಸಿದ್ದಾರೆ.

## ಕೂಸು ಬಿನ್ನಾಣ

### ತಪ್ಪಡಿ

**ತೊದಲಾಟ ಒಂದಂದ ತಪ್ಪಡಿಯು ಬಲು ಚೆಂದ (8–1)**

: ತಪ್ಪು ಹೆಜ್ಜೆ; ದಟ್ಟಡಿ; ತತ್ತರಿಸುವ ಹೆಜ್ಜೆ.

*ಕೂಸಿಗೆ ಅದರ ಸಹಜ ಬೆಳವಣಿಗೆಯಲ್ಲಿ ತನ್ನ ಕೌಶಲ್ಯದಿಂದ ಲಭ್ಯವಾದುದು ಬಿನ್ನಾಣ. ಅದು ಅದರ ಸೊಬಗು ಹೌದು. ಬೇಂದ್ರೆಯವರು ಈ ಕವನದಲ್ಲಿ ಕೂಸಿನ ತೊದಲಾಟ ಒಂದು ಸೊಬಗಾದರೆ, ಅದರ ತಪ್ಪಡಿ ಬಲು ಚೆಂದ ಎಂದು ನೋಡಿ ಸುಖಿಸಿದ್ದಾರೆ, ಹಾಡಿ ನಲಿದಿದ್ದಾರೆ.

---

## ಕೆಲಸವಿಲ್ಲದವರ ಹಾಡು

### ಬಕ್ಕರಿಸು

**ತಿನ್ನಲು ಬೆಳೆಯದು ತುಸು ಕಡಿಕಾಳು/ ಬಕ್ಕರಿಸುವದೋ ಹೆಂಟೆಯ ಕೂಳು? (1–18, 19)**

: ತಿನ್ನು; ಕಬಳಿಸು.

*ಬೇಂದ್ರೆಯವರು ಬರದ ಬೇಗೆಗೆ ಸಿಲುಕಿ ವಿಲಿವಿಲಿ ಒದ್ದಾಡುವವರ ಚಿತ್ರಣವನ್ನು ಈ ಕವನದಲ್ಲಿ ನೀಡಿದ್ದಾರೆ. ಅವರು ಹಸಿವಿನ ಬೇಗೆಯಿಂದ ಮಣ್ಣಿನ ಉಂಡೆಯನ್ನು ಕೂಳಾಗಿ ಕಬಳಿಸುವುದೇ? ಎಂದು ಪ್ರಶ್ನಿಸಿದ್ದಾರೆ. ತೀವ್ರವಾದ ಹಸಿವನ್ನು 'ಬಕ್ಕರಿಸು' ಪದ ಚೆನ್ನಾಗಿ ಧ್ವನಿಸಿದೆ.

---

## ರುದ್ರವೀಣೆ

### ಧರ್ಮಾಸನ

**ಧರ್ಮಾಸನ ಹೊರಳುತಿವೆ/ ಸಿಂಹಾಸನ ಉರುಳುತಿವೆ (5–1, 2)**

: ನ್ಯಾಯನಿರ್ಣಯ ಮಾಡುವಾಗ ನ್ಯಾಯಾಧೀಶನು ಕುಳಿತುಕೊಳ್ಳುವ ನ್ಯಾಯಪೀಠ.

*ಯುದ್ಧ, ಭೂಕಂಪ, ಧರ್ಮ ವಿಪ್ಲವಗಳು ಉಂಟಾದಾಗಿನ ರುದ್ರ ನಡೆಯ ಪರಿಣಾಮವನ್ನು ಈ ಸಾಲುಗಳು ಧ್ವನಿಸಿವೆ.

---

# ಕುಣಿಯೋಣು ಬಾರ$_s$

**ತಂತಿ**

**ತಾಳ್ಯಾಕ/ ತಂತ್ಯಾಕ/ ರಾಗದ ಚಿಂತ್ಯಾಕ (9–1, 2, 3)**

: ತಂತಿಗಳಿಂದ ಕೂಡಿರುವ ವೀಣೆ, ತಂಬೂರಿ ಮೊದಲಾದ ತಂತಿವಾದ್ಯ.

*ಉಲ್ಲಾಸಗೊಂಡ ಮನಸ್ಸು ಕುಣಿಯುವಾಗ ಯಾವುದೇ ತಾಳ, ತಂತಿ ರಾಗಗಳ ಚಿಂತೆ ಬೇಕಾಗಿಲ್ಲ.

***

ತುಂತೂರು ಮಳೆಯಾಗಿ ತಂತಿಯ ತುಂಬೆಲ್ಲ ಸಿಡಿಧಾಂಗ (ಸಖೀಗೀತ:ಮಾಯಾಕಿನ್ನರಿ)

* * * * * *

**ನನೆ>ನನಿ, ಚಿಗಿ**

**ತರಗೆಲಿ ಜಗಿಧಾಂಗ/ ಚಿಗುರೆಲಿ ಚಿಗಿತ್ಹಾಂಗ/ ನನಿಕೊನೆ ಮುಗಿಧಾಂಗ (11–5, 6, 7)**

: ಹೂವು ಬಿಡು; ಮೊಗ್ಗಾಗು; ಮುಗುಳಾಗು.

: ಮೊಳೆದೊರು; ಪಲ್ಲವಿಸು.

*'ಚಿಗುರೆಲಿ ಚಿಗಿತ್ಹಾಂಗ' ನುಡಿ ಬೆಡಗಿನಲ್ಲಿ ಚಿಗುರು ಮೊಳೆದೋರಿ, ಬಣ್ಣಗೊಂಡು ಉತ್ಸಾಹದಲ್ಲಿ ನಲಿದಾಡುವುದರ ಉಲ್ಲಾಸವಿದೆ. ಗಿಡದಲ್ಲಿ ಮೊಗ್ಗು ಮೂಡಿ ಹಿಗ್ಗಿ ಬೆಳೆಯುವುದು 'ನನಿ ಕೊನೆ ಮುಗಿಧಾಂಗ' ಅದು ಮೊಗ್ಗು ಅಂಕುರಗೊಂಡು ದೊಡ್ಡದಾಗುತ್ತಾ ಇರುವ ಆನಂದ.

ತರಗೆಲೆಯ ಹಾಗೆ ಜಿಗಿಯುತ್ತಾ, ಚಿಗುರು ಮೊಳೆದೋರಿದ ಹಾಗೆ ನಲಿಯುತ್ತಾ, ಮೊಗ್ಗು ಹಿಗ್ಗಿ ಬೆಳೆದು ಪ್ರೀತಿಯಿಂದ ಅರಳುವಂತೆ ಹುಮ್ಮಸ್ಸು, ಉತ್ಸಾಹ, ಹರ್ಷಾನಂದದಿಂದ ಕುಣಿಯೋಣು ಬಾ.

* * * * * *

## ಚಲಮಲ

**ಚಕಚಕ/ ಚಂಚಲ/ ಮಿಂಚಿನ ಗೊಂಚಲ/ ಚಕಮಕಿ ಚಲಮಲ (12–1,2,3,4)**

: ಹೊಳಪು; ಚಕಚಕ; ಮಿನುಗುಟ್ಟುವಿಕೆ

ಚಕಚಕ: 1. ಒಂದು ಅನುಕರಣ ಶಬ್ದ.

2. ಹೊಳೆಯುವಿಕೆ; ಲಕಲಕಿಸುವಿಕೆ, ಕಾಂತಿ.

*ಕುಣಿಯುವಾಗ ಕಣ್ಣಿನ ಹೊಳುಪು, ಮಿಂಚು, ನೋಟದ ಮಾಟವನ್ನು ಕವಿಯು ಪ್ರಾಸ, ಒಳಪ್ರಾಸ, ಅನುಕರಣ ಶಬ್ದಗಳಿಂದ ಮಿಡಿದಿದ್ದಾರೆ. ಇಲ್ಲಿ ಪದಗಳು ಜೀವ ಪಡೆದು ಲಾಸ್ಯವಾಡಿವೆ.

* * * * * *

## ಅಂಗಲು

**ಅಂಗಲು/ ಅಂಗಲು/ ಚಿಕಿಚಿಕ್ಕಿ ತಿಂಗಳು/ ಉಸಿರಾಸೆ ಹಿಂಗಲು (18–1,2,3,4)**

*ನಕ್ಷತ್ರಗಳು ಅಗಣಿತ. ಅಷ್ಟೊಂದು ಸಂಖ್ಯೆಯಲ್ಲಿದ್ದರೂ ಅವು ತಮ್ಮತಮ್ಮೊಳಗೆ ಒಂದು ಅಂತರವನ್ನು ಕಾಯ್ದುಕೊಂಡು ಸುಂದರವಾಗಿ ಹಂದರವನ್ನು ನಿರ್ಮಿಸಿಕೊಂಡಿವೆ. ಅದೇ ರೀತಿ, ಮಕ್ಕಳ ಸಂಖ್ಯೆ ಹೆಚ್ಚಿದ್ದರೂ ಸಹ ಕುಣಿಯುವಾಗ ಒಬ್ಬರು ಇನ್ನೊಬ್ಬರಿಗೆ ತಾಗದಂತೆ ತೊಂದರೆಯಾಗದ ರೀತಿಯಲ್ಲಿ ಸಾಕಷ್ಟು ಸ್ಥಳಾವಕಾಶ ಮಾಡಿಕೊಂಡು(ನಕ್ಷತ್ರಗಳಂತೆ) ಕುಣಿಯುವ ಆನಂದ ಸವಿಯಲು ಕವಿ ನೀಡಿದ 'ಅಂಗಲು' ಪದ ಮತ್ತು ಅದನ್ನು ಸುಲಭವಾಗಿ ಹೇಳಲು ನಕ್ಷತ್ರಗಳನ್ನು ಎಳೆದು ತರುವ ಕವಿಯ ಕಲ್ಪನಾ ಸೌಂದರ್ಯ ಅನನ್ಯವಾದದ್ದು.

ಬೇಂದ್ರೆಯವರ ಕಾವ್ಯ ಕುರಿತು ಮಕ್ಕಳನ್ನು ಆನಂದಪಡಿಸುವಾಗ 'ಕುಣಿಯೋಣು ಬಾರಾ' ಕವನವನ್ನು ಚಪ್ಪಾಳೆ ಹಾಕಿ ಅವರಿಂದ ಹೇಳಿಸಿ ಕುಣಿಯುವುದು ನನ್ನ ಹವ್ಯಾಸ. ಹಾಗೆ 'ಅಂಗಲು ಅಂಗಲು ಚಿಕ್ಕಿ ಚಿಕ್ಕಿ ತಿಂಗಳು, ಉಸಿರಾಸೆ ಹಿಂಗಲು ಕುಣಿಯೋಣು ಬಾರಾ' ಎಂದು ಹೇಳುವಾಗ ಮಕ್ಕಳು ಆ ಲಯಕ್ಕೆ ಸಂತಸದಿಂದ ದನಿಗೂಡುತ್ತಿದ್ದರು. ಆದರೆ ನನಗೆ 'ಅಂಗಲು' ಪದ ಅರ್ಥವಾಗಿರಲಿಲ್ಲ. ಹಲವು ಜನ ಸಾಹಿತ್ಯಮಿತ್ರರನ್ನು ಕೇಳಲು 'ಅಂಗಳ, ಅಂಗಣ'ದ ಸುತ್ತಲೇ ಚರ್ಚೆ ಕೊನೆಗೊಳ್ಳುತ್ತಿತ್ತು.

ನಾನು ನಮ್ಮಮ್ಮನನ್ನು ಒಮ್ಮೆ ಈ ಸಾಲು ಹೇಳಿ 'ಅಂಗಲು' ಏನಿರಬಹುದು? ಎಂದೆ. ನಮ್ಮಮ್ಮ 'ಅಂಗ್ಲವಾಗಿ ಬಿತ್ತು ಅಂತಾರೆ. ಅಂದರೆ, ಒತ್ತಾಗಿ ಬಿತ್ತಬೇಡ ಅನ್ನೋದು' ಎಂದು ಹೇಳಿದಳು.

ಬೇಸಾಯದ ಜನ ಉತ್ತಮ ಬೆಳೆ ಬೆಳೆಯುವ ದೃಷ್ಟಿಯಿಂದ ಬಳಸುವ ದೇಸಿಪದ 'ಅಂಗ್ಲ'.

ಬೇಂದ್ರೆ ಕಾವ್ಯದಲ್ಲಿ ಅಂಗ್ಲ ಎಂಬ ಪದವು ಆಕಾಶದ ಚುಕ್ಕೆಗಳು ಕಾಯ್ದುಕೊಂಡಿರುವ ಅಂತರವನ್ನು ಸೂಚಿಸುತ್ತದೆ ಎಂಬುದನ್ನು ಕಂಡು ಚಕಿತನಾದೆ.

ಪಕ್ಕಾ ಗ್ರಾಮ್ಯಭಾಷೆಯಲ್ಲಿ 'ಅಂಗಲು' ಪದವು 'ಅಂಗ್ಲ' ಆಗುತ್ತದೆ. ಈ ಪದದ ರಚನೆ ಕಾವ್ಯಸಂದರ್ಭದಲ್ಲಿ ಅಂದರೆ ಕಾವ್ಯದ ಭಾವ, ಲಯ, ಗತಿ, ರಾಗ ಹೀಗೆ ಕಾವ್ಯಲಕ್ಷಣಗಳ ಹಿನ್ನೆಲೆಯಲ್ಲಿ ಅಂಗಲು ಆಗಿದೆ. ಎರಡು ಚಿಕ್ಕೆಗಳ ನಡುವಿನ ಅಂತರ ಅಳೆಯಲು ಎಂದಿಗೂ ಅಸಾಧ್ಯವೇ.

---

# ೩. ಮೂರ್ತಿ ಮತ್ತು ಕಾಮಕಸ್ತೂರಿ (೧೯೩೪)

## ಮುನ್ನುಡಿ

**ಸೋಗೊಡು**

**ಒಂದು ವ್ಯಕ್ತಿಯೇ ಆಗಲಿ, ಸಮಾಜವೇ ಆಗಲಿ, ರಾಜ್ಯವೇ ಆಗಲಿ, ಸಾಮ್ರಾಜ್ಯವೇ ಆಗಲಿ, ಮತವಾಗಲಿ, ಪಂಥವಾಗಲಿ–ಈ ಕಲ್ಲಿನ ಕಥೆಗೆ ಸೋಗೊಡುತ್ತವೆ**

*ಹಾಡುವವರೊಂದಿಗೆ ಜೊತೆ ಇರುವವರು 'ಸೋ' ಎಂದು ದನಿಗೂಡಿಸುವುದು ಸೋಗೊಡು. ಬೇಂದ್ರೆಯವರ ಮೇಲಿನ ವಾಕ್ಯದಲ್ಲಿ 'ಸೋಗೊಡು' ಪದವು ಸಮ್ಮತಿಸುವುದನ್ನು ಧ್ವನಿಸುತ್ತದೆ.

*      *      *      *      *      *

**ಬಣ್ಣದೋರು**

**ಇನ್ನುಳಿದುದು ಸಹೃದಯ ಹೃದಯ ನಿಕಷದಲ್ಲಿ ಬಣ್ಣದೋರಬೇಕು.**

*ಬೇಂದ್ರೆಯವರು ಲೇಖಕನ ಮಾತಿನಲ್ಲಿ 'ಹೇಳಬಹುದಾದುದನ್ನು ಹೇಳಿಯಾಯಿತು. ಇನ್ನುಳಿದುದು ಸಹೃದಯ ಹೃದಯ ನಿಕಷದಲ್ಲಿ ಬಣ್ಣದೋರಬೇಕು' ಎಂದಿದ್ದಾರೆ. ಅವರು ಓದುಗ ಸಹೃದಯನನ್ನು ತುಂಬಾ ಗೌರವಿಸುತ್ತಿದ್ದರು. ಸಹೃದಯನ ಹೃದಯವೇ ಕಾವ್ಯದ ನಿಜವಾದ ಒರೆಗಲ್ಲು/ನಿಕಷ. ಅಲ್ಲಿ ಪರೀಕ್ಷೆಗೆ ಒಳಗಾಗಬೇಕು. ಅಲ್ಲಿ ಅದು ಬಣ್ಣದೋರಬೇಕು/ತನ್ನ ಯೋಗ್ಯತೆಯನ್ನು ವ್ಯಕ್ತಪಡಿಸಬೇಕು ಎಂದು ತಿಳಿಸಿದ್ದಾರೆ.

---

## ಮೂರ್ತಿ

## ಬಾಳು

**ದುಂಡಿ**

**ಪದರು ಗುಂಡು ದುಂಡಿ ಬಂಡೆ (1–3)**

: ಗುಂಡಗಿರುವ ಕಲ್ಲು; ಕಲ್ಲುಗುಂಡು.

---

## ಅರಸು ಕನಸು

**ಅರಸುತೋಟ**

**ನೆಲವೆ ಅರಸುತೋಟವಾಗಿ/ ಮೆರೆಯಬೇಕು (1–7)**

: ಅತ್ಯುತ್ತಮವಾದ ತೋಟ.

---

## ಮುಪ್ಪು

**ತುಲೆ**

**ಬೆಲೆಯ ತುಲೆಯ ತಳಿಗೆಯಲ್ಲಿ/ ಎಡೆ ಪ್ರಸಾದ ತೂಗುತಿಹುದು. (3–1, 2)**

: ಪದಾರ್ಥಗಳನ್ನು ತೂಗುವ ಸಾಧನ; ತಕ್ಕಡಿ, ತ್ರಾಸು; ಚಿಂತಾಲು.

---

## ಕೊನೆಯಹಾಡು

**ತನನ**

**ನಿನ್ನ ಮನನ/ ದಿಂದ ತನನ/ ವೆನುತಿದೆ ತನು ಪಾವನಾ (1–4, 5, 6)**

: (ಆಲಂ) ಆನಂದ ಪರವಶನಾಗು, ಹಾಡಿನ ಪ್ರಾರಂಭದಲ್ಲಿ ಗುಣುಗುಟ್ಟುವಿಕೆ; ತನ್ನಲ್ಲಿ ತಾನು ಹಾಡನ್ನು ಗುಣುಗುಣಿಸುವುದು.

*ಮೇಲಿನ ನುಡಿಯಲ್ಲಿ ಅನಂತಶಕ್ತನ ಧ್ಯಾನದಲ್ಲಿ ಒಂದಾದ ಮನಸ್ಸು 'ಆನಂದಪರವಶವಾಗು'ವುದನ್ನು ಆಲಂಕಾರಿಕವಾಗಿ 'ತನನ' ಪದ ತಿಳಿಸುತ್ತಿದೆ.

* * * * * *

**ಮಿಷ**

**ಸುಖದ ಮಿಷವು/ ದುಃಖವಿಷವು/ ಹಿಗ್ಗಿ, ಪ್ರಾಣ ಪೂರಣಾ! (2–1, 2, 3)**

: ನೆಪ; ನೆವ; ವ್ಯಾಜ.

*ಮನುಷ್ಯರಿಗೆ ಸುಖ ನೆಪದಂತೆ ಕಂಡು, ದುಃಖ ವಿಷವೆನಿಸುತ್ತದೆ. ಆದರೆ, ಅದು ಹಗಲು ಮತ್ತು ರಾತ್ರಿ ಕೂಡಿ ಒಂದು ದಿನ ಆದಂತೆ. ಒಂದಿಲ್ಲದೆ ಇನ್ನೊಂದಿಲ್ಲ.

ಸುಖ ಮತ್ತು ದುಃಖ ಎರಡನ್ನು ಸಮಭಾವದಲ್ಲಿ ವ್ಯಕ್ತಿ ಸ್ವೀಕರಿಸಬೇಕು. ಆಗ ಮಾತ್ರ ಅವನ ಈ ನೆಲದ ಬಾಳು ಅರ್ಥಪೂರ್ಣವಾಗುತ್ತದೆ ಎಂಬ ಚಿಂತನೆಯನ್ನು ಈ ಕವನ ಸಾರುತ್ತದೆ.

ಇದು ಯಾವುದೇ ಒಂದು ಮತ, ಧರ್ಮ, ಪಂಗಡ, ದೇಶಕ್ಕೆ ಮಿತಿಗೊಳ್ಳದ ಅನಂತ ಶಕ್ತನನ್ನು ಧ್ಯಾನಿಸುವ ಅಪೂರ್ವ ಕವನ. ಇದು ನಮ್ಮ ಕುಟುಂಬದ ಪ್ರತಿದಿನದ ಪ್ರಾರ್ಥನೆಯಾಗಿದೆ.

---

## ಕಾಮಕಸ್ತೂರಿ

**ಕಾಮಕಸ್ತೂರಿ**

**ತಂದೇನಿ ನಿನಗೆಂದ/ತುಂಬಿ ತುರುಬಿನವಳ,/ ಕಾಮಕಸ್ತೂರಿಯಾ/ ತೆನಿಯೊಂದ(೧-೧,೨,೩,೪)**

: ತುಳಸಿ ಜಾತಿಗೆ ಸೇರಿದ ಒಂದು ಸುವಾಸನೆಯ ಸಸ್ಯ.

---

## ಕತ್ತಲೋ ಕತ್ತಲು

**ಹಡಗಲು**

**ಕಣ್ಣಿನಾ ಹಡಗಲು। ಬೆಳಕನ್ನು ಪಡೆಯಲು॥/ ಹೊರಟಿಹುದು ಹುಡುಕಲು। ಯಾವ ನಡುಗಡ್ಡೆಯಲೊ॥ (4, 5)**

*ಪ್ರೇಯಸಿ ತನ್ನ ಪ್ರಿಯಕರನನ್ನು ಕತ್ತಲಲ್ಲಿ ಹುಡುಕುತ್ತ ಹೊರಟ ಚಿತ್ರಣವನ್ನು 'ಕತ್ತಲೋ ಕತ್ತಲು' ಕವನ ನೀಡಿದೆ. ಪ್ರತಿಮಾತ್ಮಕವಾಗಿ ಅವಳ ಕಣ್ಣನ್ನು ಹಡಗಲು ಅರ್ಥಾತ್ ಹಡಗು ಎಂದು ಕರೆದಿದ್ದಾರೆ. ಅದು ಪ್ರೀತಿಯ ಪ್ರಯಾಣವನ್ನು ಕತ್ತಲಿನ ಕಡಲಿನಲ್ಲಿ ನಡೆಸುತ್ತದೆ. ಅವಳಲ್ಲಿರುವ ಪ್ರೀತಿಯ ನಂಬಿಕೆಯ ಆಶಾಕಿರಣ 'ತೇಜಗಳ ತುಣು ತುಣುಕು ಮಿಂಚು ಹುಳ ಮಿಣು ಮಿಣುಕು'. ಅದರ ಆಸರೆಯಲ್ಲಿ ಯಾವ ನಡುಗಡ್ಡೆಯಲ್ಲೋ ಇರುವ ತನ್ನ ಪ್ರಿಯಕರ ದೊರಕೇ ದೊರಕುತ್ತಾನೆಂದು ಅವಳು ಸಾಗಿದ್ದಾಳೆ. ಅವಳಿಗೆ ಬಡಗಲ್/ಉತ್ತರದಿಕ್ಕು ಸಿಕ್ಕೇಸಿಗುವುದೆಂಬ ನಂಬಿಕೆಯಿದೆ. ಆ ಬಡಗಲ್‌ನಲ್ಲಿಯೇ ತನ್ನ ನಿರೀಕ್ಷೆಗೆ ಬೆಳಕಿನ ಉತ್ತರವಾಗಿ ಪ್ರಿಯಕರನ ಮುಖ ಗೋಚರಿಸುತ್ತದೆ; ತಾನು ಅವನನ್ನು

ಕೊಡುತ್ತೇನೆ ಎಂಬ ಭರವಸೆ ಇದೆ. ಅವಳು ತನ್ನ ಕಣ್ಣಿನ ಹಡಗಿನಲ್ಲಿ ಪ್ರಿಯಕರನ ಬೆಳಕನ್ನು ಪಡೆಯಲು 'ಕತ್ತಲೋ ಕತ್ತಲಲ್ಲಿ' ಧೃತಿಗೆಡದೆ ಸಾಗುತ್ತಿದ್ದಾಳೆ.

* * * * * *

**ಮುಂಗುರುಡು**

**ಚಿಂತಿಸುವ ಚಿತ್ತದಲು। ಗುರಿಯಿರದ ಬಾಣದೊಲು।/ ಎತ್ತಲೋ ಎತ್ತಲು। ಮುಂಗುರುಡ ಮನದೊಲು॥ (12, 13)**

: (ಆಲಂ)ಮುಂದುಗಾಣದಿರುವಿಕೆ; ದಿಕ್ಕು ತೋಚದಿರುವಿಕೆ; ದಿಗ್ಭ್ರಮೆ.

---

## ಬರಿಗೊಡದ ಬಾಲಿ

**ಹುಡದಿ**

**ಹುಡದೀಯ ಬಿಟ್ಟು ಅಡಿಗಡಿ ಮುರಕದ/ ನಡಿಗೀಯ ಹಿಡಿದು ದಿನವೇಸ ಕೋಲ (3–3,4)**

: ಹುಡುಗಾಟಿಕೆ; ಚೆಲ್ಲಾಟ.

---

## ನೀರಿಗೆ ನಡೆದಾಗ

**ಹರದಿ**

**ಹರೆಯೊಂದು ಹರಿನೀರ ತಿರೆಯೊಂದು ಕರಿನೀರ/ ಹರದಿ ನಿನ್ನೆದೆಯು ಮುನ್ನೀರ ಜನುಮಾವು/ ಹರಿಗಡಿಯದಂಥ ಹೊಳೆನೀರ (3–1, 2, 3)**

*ಬೇಂದ್ರೆಯವರು ಹರದಿಯಾದ ಗರತಿ, ಮುತ್ತೈದೆಯ ಎದೆಯನ್ನು ಭೂಮಿಗಿಂತಲೂ ಮೊದಲು ಸೃಷ್ಟಿಯಾದ ಜಲದ ಕಡಲಿಗೆ ಹೋಲಿಸಿದ್ದಾರೆ. ಅವಳ ಎದೆ ಸಮುದ್ರದಷ್ಟು ಆಳ ವಿಸ್ತಾರ. ಅವಳ ಹರೆ ಎಂಬುದು ಹರಿವ ನೀರು. ಜನುಮವು ಹರಿಗಡಿಯದಂಥ ಅರ್ಥಾತ್ ನಿಂತು ಹೋಗದಂಥ ಸದಾ ಹರಿವ ಶುದ್ಧ ಹೊಳೆನೀರು.

---

## ಜನುಮದ ಜಾತ್ರಿ

### ನೇತ್ರಪಲ್ಲವಿ

**ನೇತ್ರಪಲ್ಲವಿಯಿಂದ ಸೂತ್ರಗೊಂಬೀ ಹಾಂಗ/ ಪಾತ್ರ ಕುಣಿಸ್ಯಾನ (1–1, 2)**

*ನಲ್ಲೆಯು ಗೆಣತಿಗೆ ತನ್ನ ನಲ್ಲ ತನ್ನನ್ನು ಸೆಳೆದು ಆಡಿಸುವ ಬಗ್ಗೆ ಹೇಳಿದ ಪ್ರಣಯ ಕವನ 'ಜನುಮದ ಜಾತ್ರಿ'. ನಲ್ಲನು ತನ್ನನ್ನು–ನೇತ್ರಪಲ್ಲವಿಯಿಂದ ಸೂತ್ರಗೊಂಬಿಯ ಹಾಗೆ ಕುಣಿಸುತ್ತಿದ್ದಾನೆ– ಎಂದು ಹೇಳುವಲ್ಲಿ ಬೇಂದ್ರೆಯವರು ಬಳಸಿರುವ ನೇತ್ರಪಲ್ಲವಿಯು ಮರಾಠಿ ಪದವಾಗಿದೆ. ಕಣ್ಣಿನಿಂದ ಮಾಡುವ ಸಂಜ್ಞೆ; ಕಣ್ಸನ್ನೆಯನ್ನು ಮರಾಠಿಯಲ್ಲಿ ನೇತ್ರಪಲ್ಲವೀ, ನೇತ್ರಪಾಲವೀ ಎಂದು ಕರೆಯುತ್ತಾರೆ.

***

ಮೇಘನಾದ ಮತ್ತು ಅವನ ಹೆಗಲ ಅಪ್ಸರೆ ಮಿಂಚು ಇವರ ಪ್ರೇಮದಾಟದ ಮಧುರ ಭಾವೋನ್ಮಾದ 'ಮಿಂಚು' ಕವನ. 'ಮಿಂಚು'ವಿನ ಕಣ್ಸನ್ನೆ–ನೇತ್ರಪಲ್ಲವಿಯ ಪ್ರಕಾಶ ಸ್ಫುರಣವನ್ನು ಬೇಂದ್ರೆ ಹೀಗೆ ನುಡಿಯಲ್ಲಿ ಹಿಡಿದಿಟ್ಟಿದ್ದಾರೆ:

ಬಾನ ಬರಸಿಡಿಲಲ್ಲಿ ಕೆಮ್ಮಿಂಚು ಹೊಮ್ಮಿಂಚು/ ಅಬ್ಬ! ವಜ್ರದ ಮಿಂಚು, ನೇತ್ರಪಲ್ಲವಿಯ ಈ/ ತಂತ್ರ ಬಲ್ಲವರಾರು? (ಸೂರ್ಯಪಾನ:ಮಿಂಚು)

ಮೇಘನಾದನ ಹೆಗಲ ಅಪ್ಸರೆಯ ಅಪಾಂಗ/ಕುಡಿನೋಟದ ಪಾಂಗು/ ರೀತಿಯು 'ಗಗನಾಂಗನೆಯ ಪ್ರಾಯದ ಅಭಿಪ್ರಾಯ!' ಎಂದು ಆ ಯೌವನದ ಉಲ್ಲಾಸ, ಸೌಂದರ್ಯ, ಬಾಗು, ಬಳುಕು, ಪ್ರಭೆಯನ್ನು ತಮ್ಮ ಕಾವ್ಯದಲ್ಲಿ ಪ್ರಕಾಶಿಸಿದ್ದಾರೆ.

'ಹಾ! ಮೂಢ/ ಮೇಘನಾದನ ಹೆಗಲ ಅಪ್ಸರೆಯ ಪಾಂಗದೀ/ ಪಾಂಗು ಗಗನಾಂಗನೆಯ ಪ್ರಾಯದ ಅಭಿಪ್ರಾಯ!' (ಸೂರ್ಯಪಾನ:ಮಿಂಚು)

---

## ಒಲುಮೆಯ ಕಿಚ್ಚು

### ಮರುಳಿ

**ನೀರನ ನೋಟಕ್ಕ ನೀರು ಕಡೆದಿತು ಜೀವ/ ಧೀರ ಧೈರ್ಯಾವ ಕಳೆದಾನ ನನ್ನೊಂದ/ ತೀರ ಮರುಳಿಯ ಮಾಡ್ಯಾನ (1–1, 2, 3)**

: ಮರುಳಾದವಳು; ಮೋಹಗೊಂಡವಳು.

*ಪ್ರಿಯರ ಅಗಲಿಕೆ ವಿಪ್ರಲಂಭ ಶೃಂಗಾರ. ಆ ವಿರಹವನ್ನು ಬೇಂದ್ರೆಯವರು 'ಒಲುಮೆಯ ಕಿಚ್ಚು' ಎಂದು ಕರೆದಿದ್ದಾರೆ. ಆ ಕಿಚ್ಚಿನಲ್ಲಿ ಬೇಯುವ ವಿರಹಿಣಿಯು ತನ್ನ ನೀರನ ನೋಟವನ್ನು ನೆನೆಯುತ್ತ ನೀರು ಕಡೆದಿತು ಜೀವ–ಎಂದು ತಾನು ಕರಗಿ ಹೋದ ಭಾವವನ್ನು ವ್ಯಕ್ತಪಡಿಸುತ್ತಿದ್ದಾಳೆ. ಆ ನೀರ– ಚೆಲುವ, ಪ್ರಿಯ ಧೀರ. ಅವನು ತನ್ನ ಧೈರ್ಯ ಕಳೆದು, ಮರುಳಾಗಿಸಿ ಮೋಹಗೊಳ್ಳುವಂತೆ ಮಾಡಿದ್ದಾನೆ ಎಂದು ತನ್ನೊಳಗಿನ ಕುಲುಮೆಯ ಕಿಚ್ಚನ್ನು ನೀರೆ ಅಭಿವ್ಯಕ್ತಿಸಿದ್ದಾಳೆ.

ನೀರ ಪುರುಷ, ನೀರೆ ಸ್ತ್ರೀ. ಅವರು ಎರಡಾದರೂ ಒಂದೆ. ಅವರು ನೀರರು. ಹಾಗಾಗಿ ಬೇಂದ್ರೆ ಹೇಳಿದ್ದಾರೆ. 'ನೀರರು ಪರಸ್ಪರರ ತಿರುಳು ನೆರಳು' (ಸೂರ್ಯಪಾನ: ಸಂಖ್ಯಾಂಕಿತ)

---

## ಗಿಣಿ ಹೇಳ !

### ನಿವಳ

**ಕವಳ ಮೆಲ್ಲುವ ಬಾಯ ಹವಳತುಟಿ ಹಿಂಡುತ್ತ/ ನಿವಳ ನಿಂತಾಳ ನಿಲಿವಿಲಿ, ಗಿಣಿ ಹೇಳ/ ಇವಳ ಮನವೆಲ್ಲಿ ಇರಬಹುದು (1–1, 2, 3)**

*ವಿರಹಿಣಿಯು ಕವಳ(ತಂಬುಲ) ಮೆಲ್ಲುತ್ತ ಕೆಂಪಾದ ಹವಳದಂತಹ ತುಟಿಯನ್ನು ಹಿಂಡಿಕೊಳ್ಳುತ್ತ ತನ್ನ ನಲ್ಲನನ್ನು ನೆನೆದು 'ನಿವಳ ನಿಂತಾಳ' ಅಂದರೆ ತೂಗಾಡುತ್ತ ನಿಂತಿದ್ದಾಳೆ. ಇಲ್ಲಿಯ 'ನಿವಳ' ಎಂಬ ಪದ ನಿಘಂಟಿನ ಪ್ರಕಾರ moved, waved ಎಂಬ ಅರ್ಥವನ್ನು ನೀಡಿದರೂ ಅದು ಈ ಕವನದಲ್ಲಿ ನಿವ್ವಳ ಎಂಬುದರ ಆಡುನುಡಿಯಾಗಿದೆ. ಅದು 'ಅಸಲು' ಎಂಬ ಅರ್ಥವನ್ನು ಹೊಂದಿದೆ. ಕಾವ್ಯದ ನಾಯಕಿ ಪೂರ್ತಿ ತನ್ನ ನಾಯಕನನ್ನೇ ಧ್ಯಾನಿಸುತ್ತ ಅಸಲ್ ತಯಾರಾಗಿ ನಿಂತಿದ್ದಾಳೆ ಎಂಬ ಅರ್ಥವನ್ನು ಸ್ಫುರಿಸುತ್ತ, ಅದು ಒಂದು ಬಗೆಯ obscenityಯನ್ನು ಒಳಗೊಂಡಿದೆ ಎಂದು ಹೇಳಬಹುದು. ಅವಳ ಶೃಂಗಾರಭಾವ ಮಾತಾಗಿ ಹೊರಬರದೆ ನಿಲಿವಿಲಿಯಾಗಿದೆ. ಅಂದರೆ ನಾಲಿಗೆಗೆ ನಿಲುಕದ ನುಡಿಯಾಗಿದೆ. ಅವಳು ನಿಂತಿರುವ ರೀತಿ ಅವಳ ಮನವೆಂಬ ಗಿಣಿಯ ಜೊತೆ ಮಾತಿಗೆ ತೊಡಗಿ 'ಗಿಣಿ ಹೇಳ ಇವಳ ಮನವೆಲ್ಲಿ ಇರಬಹುದು' ಎಂದು ಪ್ರಶ್ನಿಸುತ್ತದೆ. ಗಿಣಿಯ ನುಡಿಯು ನಿಲಿವಿಲಿ, ಅವಳ ಭಾವವೂ ನಿಲಿವಿಲಿಯಾಗಿ ಈ ಪದ ಇಲ್ಲಿ ಧ್ವನ್ಯರ್ಥಕವಾಗಿ ಗಿಣಿಯ ನುಡಿಯಂತೆ ಅಡಗಿ ಕುಳಿತಿದೆ. ಆ ನಿಲಿವಿಲಿ ಗಿಣಿ ಒಲಿದಂತೆ, ಗಿಣಿ ನುಡಿದಂತೆ ತಾನೇ ಶೃಂಗಾರ ಸಂಕೇತವಾಗಿದೆ. ಹಾಗೆ ಅವಳು ತನ್ನ ಮನವೆಂಬ ಗಿಣಿಯ ಜೊತೆ ಆಡಿದ ಮಾತು ಸ್ವಗತ ಶೃಂಗಾರಲಹರಿಯಾಗಿದೆ.

ಅವಳ ಅಚ್ಚವಳ ಹಲ್ಲು ಸುಗ್ಗಿಯ ಶರೀರವನ್ನು, ಕಾಡಿಗೆಗಣ್ಣು ಕಾಂತನನ್ನು ಅರಸುತ್ತ ತಾನು ಪಾಡಿಗೆ (ಪಾಡು=ripeness and freshness to be gatheredನ ಸ್ಥಿತಿ. ಉತ್ತರ ಕರ್ನಾಟಕದಲ್ಲಿ ಮಾವು ದೋರುಗಣ್ಣಿನ ಹಂತ ದಾಟಿ ಪಕ್ವತೆಯ ಹಂತ ತಲುಪಿದ ಸ್ಥಿತಿಯನ್ನು 'ಪಾಡು' ಎನ್ನುವರು) ಬಂದಿದ್ದು ಅದು ಸಫಲವಾಗದ ಸ್ಥಿತಿಯ ವ್ಯಥೆಯನ್ನು 'ಗಿಣಿಹೇಳ ಪಾಡಿಗೆ ಬಂದವಳಿವಳೇನು' ಎಂದು ಪ್ರಶ್ನಿಸುತ್ತದೆ. 'ಕಾಂತೆ ಏಕಾಂತ ಬಯಸಿದ' ಶರೀರದ ತೀವ್ರತೆಯನ್ನು ಮನದ ಗಿಣಿಯೊಂದಿಗಿನ ಸಂಭಾಷಣೆಯಾಗಿಸಿ ಅವಳು ಅವನ ಧ್ಯಾನದಲ್ಲಿಯೇ ಲೀನವಾಗಿ ರೋಮಾಂಚಿತಳಾಗುತ್ತಾಳೆ.

'ಪರುಷ ಕಬ್ಬಿಣಕ್ಕ ಸ್ಪರುಷ ಮಾಡಿಧಾಂಗ/ ಪುರುಷನ ಧ್ಯಾನ ಸರಸಿಗೆ, ಗಿಣಿಹೇಳ/ ಹರುಷ ರೋಮಾಂಚ ತಳೆದಾಳ'. (ಗಿಣಿ ಹೇಳ!, 5–1, 2, 3)

* * * * * *

## ಕಾಡಿಗೆಗಣ್ಣು

**ಕಾಡಿಗೆಗಣ್ಣಿಗೆ ಕಾಡಿಗೆ ತೀಡ್ಯಾಳ/ ಕಾಡಿನ ಕಡೆಗೆ ಕಣ್ತಿರುವಿ, ಗಿಣಿ ಹೇಳ/ ಪಾಡಿಗೆ ಬಂದಳಿವಳೇನು**

(3–1, 2, 3)

: ಕಾಡಿಗೆಯಂತೆ ಅಚ್ಚಗಪ್ಪಾದ ಕಣ್ಣು.

* * * * * *

## ಪರುಷ

**ಪರುಷ ಕಬ್ಬಿಣಕ್ಕ ಸ್ಪರುಷ ಮಾಡಿಧಾಂಗ/ ಪುರುಷನ ಧ್ಯಾನ ಸರಸಿಗೆ (5–1, 2)**

*ಸರಸಿಯಾದ ಹೆಣ್ಣು ತನ್ನ ಪುರುಷನನ್ನು ಸದಾ ಧ್ಯಾನಿಸುತ್ತಾ ತಾನು ಆತನ ಸ್ಪರ್ಶದಲ್ಲಿ ಹೊನ್ನಾಗಿ ಹೋಗುವ ರಸಸಿದ್ಧಿಯನ್ನು ಬೇಂದ್ರೆ ಮೇಲಿನ ನುಡಿಯಲ್ಲಿ ತಿಳಿಸಿದ್ದಾರೆ.

ಪರುಷ–ತನ್ನನ್ನು ಸೋಕಿದ ಇತರ ಲೋಹಗಳನ್ನು ಚಿನ್ನವಾಗಿ ಪರಿವರ್ತಿಸುವುದೆಂದು ಭಾವಿಸಲಾದ ಒಂದು ಬಗೆಯ ಶಿಲೆ; ಸ್ಪರ್ಶಮಣಿ. ಅದನ್ನು ಉಪಮಾನಾತ್ಮಕವಾಗಿ ಬೇಂದ್ರೆ ಹೇಳಿರುವ ರೀತಿಯಲ್ಲಿ ಸ್ಪರ್ಶ, ಧ್ಯಾನ, ಸುಖಪ್ರಾಪ್ತಿ ಮುಂತಾದ ಅನುಭವಗಳು ಉಂಟಾಗುತ್ತವೆ.

---

## ಚಿತ್ರ

**ಹಾಸುಹೊಕ್ಕು**

**ನಗುವು ಬಿಕ್ಕು...**

(ಒಲುಮೆಯಲಿ ಹಾಸು ಹೊಕ್ಕು!) (5–1, 2)

: ಅಡ್ಡಕ್ಕೂ ಉದ್ದಕ್ಕೂ; ಓತಪ್ರೋತವಾಗಿ.

*ಕಾವ್ಯದಲ್ಲಿ ಸಂಕೇತಗಳ ರೇಖಾಚಿತ್ರವಾಗಿ ಮೂಡಿರುವ ವಿಶಿಷ್ಟಕವನ 'ಚಿತ್ರ'. ಕೈಗಲ್ಲದಿಂದ ಪ್ರಾರಂಭವಾಗಿ ನಗುವು ಬಿಕ್ಕುವಿನಲ್ಲಿ ಮುಕ್ತಾಯವಾಗುವ ಪ್ರಣಯಿನಿಯ ಚಿತ್ರ ತನ್ನ ಎಲ್ಲ ಒಳಭಾವವನ್ನು ಬಿಂಬಿಸುವಲ್ಲಿ ಯಶಸ್ವಿಯಾಗಿದೆ. ಅವರು ಒಂದಾಗಿ ಸುಖಿಸಿದ್ದು– 'ಹಾಸುಹೊಕ್ಕು'ವಿನಲ್ಲಿ ಧ್ವನಿಪೂರ್ಣವಾಗಿ ಹೊಮ್ಮಿದೆ.

---

## ಸಂಸಾರ

**ಥಳಿ**

**ಮಾತೆಲ್ಲ ಮುತ್ತಿನ ಎಳಿ/ ಜೇನಿನ ಥಳಿ/ ಹಿಗ್ಗಿನ ತೊಳಿ (4–2, 3, 4)**

: ಸಿಂಪಡಿಸುವುದು; ಸೇಚನ.

*ಬೇಂದ್ರೆಯವರಿಗೆ ಮಕ್ಕಳು ಮಾಣಿಕದ ಕಣಿ/ಗಣಿ. ಅವು ಮುದ್ದು ಮಾತಿನ ಗಿಣಿಗಳು. ಆ ಮಕ್ಕಳ ಮಾತು ಮುತ್ತಿನ ಎಳೆ, ಮಧುರ ಮಧುಜೇನಿನ ಸಿಂಪಡಣೆ, ಹಿಗ್ಗಿನ ಹಲಸಿನ ತೊಳೆಯಂತಿರುವ ಜೀವೋಲ್ಲಾಸ.

***

**ಜೇನಿನ ಥಳಿಮಳಿ ಸನಿಹ ಹನಿ (ನಾಕುತಂತಿ)**

***

**ಈ ನನ್ನಯಂತರಂಗದ ಸಭಾಮಂಟಪವ /ನಾನೆನ್ನ ಕೆನ್ನೀರಿನಿಂದ ತಳಿಹೊಡೆದೆನೈ (ಸಖೀಗೀತ: ಆನಂದವೇ)**

ಬೇಂದ್ರೆಯವರು ಗೆಳೆತನದ ಹರ್ಷವನ್ನು 'ಆನಂದವೇ!' ಕವನದಲ್ಲಿ ಅದು ಪ್ರಕೃತಿ ಸಹಜ ಸುಖ ಎಂಬಂತೆ ವರ್ಣಿಸಿದ್ದಾರೆ. ಗೆಳೆತನವೇ ಆನಂದ. ಅದು ನನ್ನಿ, ಅರ್ಥಾತ್ ನಿಜ, ಅಕ್ಕರೆ, ಚೆಲುವು ಒಂದಾದ ಸೌಭಾಗ್ಯ. ಅದನ್ನು ಅವರು 'ಬಾ, ನನ್ನಿಯೇ

ನಿನ್ನ ಗದ್ದಿಗೆಯೊಲಾಗುವದು ಏರದನು ಪಟ್ಟದರಸೇ!' ಎಂದು ಆಹ್ವಾನಿಸಿದ್ದಾರೆ. ತನ್ನ ಅಂತರಂಗದ ಸಭಾಮಂಟಪಕ್ಕೆ ಆ ನನ್ನಿಯನ್ನು ಸ್ವಾಗತಿಸಲು ಕವಿಯು ತನ್ನ ಕೆನ್ನೀರು/ರಕ್ತದಿಂದ ತಳಿಹೊಡೆದೆ ಎಂದು ಹೇಳಿದ್ದಾರೆ. ನೆಲವನ್ನು ಗುಡಿಸಿ ನೀರನ್ನು ಚಿಮುಕಿಸುವುದು ತಳಿಹೊಡೆ, ತಳಿಹಾಕು.

# ೪. ಸಖೀಗೀತ (೧೯೩೭)

## ಗುರುದೇವ

**ಹಣ್ಣಾಗು, ಕಣ್ಣಾಗು**

**ಹಾಡಿ ಹಣ್ಣಾದಿ ನೀ। ಜಗದ ಕಣ್ಣಾದಿ ನೀ/ ದುಡಿದು ಸಣ್ಣಾದಿ ನೀ ಗುರುದೇವಾ (4–3, 4)**

:'ಹಣ್ಣಾದಿ' ಪದವು ಕಾವ್ಯರಚಿಸಿ ಹಾಡಿ ತಣಿದೆ, ಪರಿಪಕ್ವವಾದೆ, ತೃಪ್ತಿಯನ್ನು ಪಡೆದೆ ಎಂಬ ಅರ್ಥವನ್ನು ಹೊಮ್ಮಿಸುವುದರ ಜೊತೆಗೆ 'ಬಳಲಿ'ದೆ ಎಂಬ ಅರ್ಥವನ್ನು ಹೊಂದಿದೆ.

:ಮಾರ್ಗದರ್ಶಕವಾಗು.

*ಗುರುದೇವ ರವೀಂದ್ರನಾಥ ಠಾಕೂರರು ಕವಿಯಾಗಿದ್ದು, ಜಗದ ಮಾರ್ಗದರ್ಶಕರೂ ಆಗಿದ್ದರು.

---

## ಶಾಂತಿ

**ಕೀಸರ ಬಾಸರ**

**ತಂಬೂರಿ ತುಂಬೆಲ್ಲಾ/ ಕೀಸರ ಬಾಸರ/ ಬೇಸರ ಬಂದೈತಿ (1–1, 2, 3)**

: (ದ್ವಿರುಕ್ತಿ), ಬೇಸರ ತರುವ ಗಟ್ಟಿಯಾದ ಶಬ್ದ; ಒಂದೇ ರೀತಿಯಾಗಿ ನಡೆದಿರುವ ಅಪ್ರಿಯ ಶಬ್ದ; ಗಲಾಟೆ.

*ಬೇಂದ್ರೆ ಅವರು ತಳವೂರಿದ ಚಿಂತೆಯನ್ನು 'ತಳಕಿತ್ತಿ ಓಡು' ಎಂದು ಹೇಳುತ್ತಾ 'ನಿಲ್ಲಲಿ ಚಿರಶಾಂತಿ' ಎಂದು ಆಶಿಸಿರುವ ಕವನ 'ಶಾಂತಿ'. ಚಿಂತೆ ಎಂಬುದನ್ನು ಅದರ ಮೂಲಚೂಲಗಳೊಂದಿಗೆ ಹಿಡಿದಿಟ್ಟ ಪದ 'ಕೀಸರ ಬಾಸರ'. ಒಂದೇ ರೀತಿಯ ಅಪ್ರಿಯವಾದ ಶಬ್ದ–ಕೀಸರ. ಚಿಂತೆ ಎಂಬುದು ಒಂದೇ ವಿಧವಾದ ಮನಸ್ಸಿನ ಚೀರಾಟ, ಗದ್ದಲದಿಂದೊಡಗೂಡಿದ ಮನಸ್ಸಿನ ಸ್ಥಿತಿ. ಅದು ದೇಹ ಮತ್ತು ಮನಸ್ಸಿನ ಶಕ್ತಿಯನ್ನು ಕುಂದಿಸುವ ಒಳನೋವು. ಆಯಾಸಪಡಿಸುವ ಆಂತರಿಕ ಕುದಿ. ಕ್ರೀಯಾಶೀಲತೆ, ಜವಾಬ್ದಾರಿಗಳಿಂದ ದೂರ ಸರಿದ ದೇಹ ಮತ್ತು ಮನಸ್ಸು. ಅದೆಲ್ಲದರ ಪ್ರತಿಮೆಯೇ 'ಕೀಸರ'.

---

# ಮಾಯಾಕಿನ್ನರಿ

**ಕಚ್ಚಾಡು**

**ಹೆಣ್ಗಂಡು ಜೇನ್ನೊಣ ಮುದ್ದಾಡಿ ಕಚ್ಚಾಡಿ/ ಹೂಜೇನ ಹನಿಹನಿ ಕುಡಿಧಾಂಗ (5–1, 2)**

: (ಆಲಂ)ಪ್ರಣಯ ಕಲಹವಾಡು

* * * * * *

**ಹಾಸಾದ**

**ಹಾಸಾದ ಹಾಡೀಗೆ ಹೊಕ್ಕಾತು ಕಿನ್ನರಿ (7–3)**

: ಹಾಸ್ಯರಸದ ಸ್ಥಾಯಿಭಾವ 'ಹಾಸ'. ಅದು ನಗೆ ಉಲ್ಲಾಸದ ನಲಿವು. ಮಾಯೆ ಮತ್ತು ಸಿದ್ಧರಲ್ಲಿ ಸಮಭಾವವಾಗಿ ಪರಸ್ಪರರು ಒಂದಾದುದು 'ಹಾಸ'. ಹಾಸ ಎಂದರೆ ನೇಯ್ಗೆಯೆಂಬ ಅರ್ಥವೂ ಉಂಟು.

*ಹಾಡು ನಗೆ ಅವರಿಬ್ಬರನ್ನು ಬೆಸೆದ ರೀತಿಗೆ 'ಹಾಸ' ಪದ ಪ್ರಯೋಗಿಸಿ ಕಿನ್ನರಿ ಒಂದಾದುದನ್ನು ಸಮರ್ಥವಾಗಿ ಧ್ವನಿಸಿದ್ದಾರೆ. ಅದು 'ನೇಯ್ಗಿಯೊಳಗ ನೂಲು ಹೋಧಾಂಗ' ಒಬ್ಬರಿಗೊಬ್ಬರು ಒಂದಾಗಿಹೋದುದು. 'ಹಾಸ' ಪದವನ್ನು ಶ್ಲೇಷಾರ್ಥದಲ್ಲಿ ವಿಶಿಷ್ಟ ರೀತಿಯಲ್ಲಿ ಪ್ರಯೋಗಿಸಿದ್ದಾರೆ. 'ಹಾಸುಹೊಕ್ಕು' ಒಂದು ಸುಂದರ ನುಡಿಗಟ್ಟು. ಎಡದಿಂದ ಒಂದೆಳೆಯು ಉದ್ದ ಎಳೆಗೆ ಸೇರುತ್ತದೆ. ಹಾಸು ಹೊಕ್ಕನ್ನು ಜೀವನ ಪಟಕ್ಕೆ ಹೋಲಿಸುವುದುಂಟು.

---

# ಆ ದಿನ ನೆನೆದು

**ಧಾಳಾಧೂಳಿ, ವ್ರಾತ್ಯಶುಕ**

**ಪ್ರೇಮಸಂಕೇತಗಳನೆಂದು ಧಾಳಾಧೂಳಿ/ ಯಿಂದ ಕುಣಿದೆನು ನಾನು ವ್ರಾತ್ಯಶುಕದಂತೆ (2–1, 2)**

: ಸಡಗರ; ಸಂಭ್ರಮ.

*ವ್ರಾತ್ಯ ಎಂದರೆ ಉಪನಯನದಂತಹ ಸಂಸ್ಕಾರ ಇಲ್ಲದವನು ಎಂದರ್ಥ. ನಾಮಸ್ಮರಣೆಯ ಆನಂದವನ್ನು ಕುರಿತು ಹೇಳುವಾಗ ಬೇಂದ್ರೆ ಅವರು 'ವ್ರಾತ್ಯಶುಕದಂತೆ' ತಾನು ಕುಣಿದುದಾಗಿ ತಿಳಿಸಿದ್ದಾರೆ. ಶುಕ ಯಾವುದೇ ಸಂಸ್ಕಾರಕ್ಕೆ ಒಳಗಾಗದಿದ್ದರೂ

ಸದಾ 'ರಾಮ'ನಾಮವನ್ನು ಕಲಿಸಿದಂತೆ ಉಚ್ಚರಿಸುತ್ತಿರುತ್ತದೆ. ಅದೇ ರೀತಿ, ತಾನು ನಾಮಜಪದಲ್ಲಿ ಒಂದಾಗಿದ್ದೆ ಎಂದು ಸರಳ ಗಿಳಿಪಾಠವನ್ನು ಸೂಚಿಸಿ, ಜಪದ ಅರಿವನ್ನು ಮೀರಿದ ಧ್ಯಾನಸೂಕ್ಷ್ಮವನ್ನು ಇಲ್ಲಿ ಪ್ರಕಟಿಸಿದ್ದಾರೆ.

***

ನಲಿವಿನ ನಲಿನವು ತಾನೇ ತಾನಾಗಿಯೆ ಬಿಚ್ಚೆ/ ಏಳ್ಮಡಿ ಧಾಳಾಧೂಳಿಯ ಏಳ್ಬಣ್ಣದ ಕಿಚ್ಚೇ (ಚೈತ್ಯಾಲಯ: ಪೆರುಮಾಳನ ಕೆಂದಾವರೆ)

---

## ಮನಸುಖರಾಯನ ಮಗಳು

### ಕನ್ನೆವಾಡ

**ಅರಸುಮಗಳಿಗು ಹೊರಗೆ ಹೋಗಗೊಡರೈ! ನನ್ನ/ ಕನ್ನೆವಾಡದಿ ಕೂತು ನೋಡುತಿಹೆನು (1–3, 4)**

: ಕನ್ನಿಕೆಯರ ಉಪ್ಪರಿಗೆ, –ಅಂತಃಪುರ.

* * * * * *

### ಕಿಂಕಿಲಿಸು

**ಚೊಕ್ಕ ಬೆಳ್ಳಿಯ ಕಂಕ ಕಿಂಕಿಲಿಸಿ ನುಡಿಸುತಿದೆ (4–3)**

: ಕಿಂಖಲಿಸು; ಶಬ್ದಮಾಡು.(ಮರಾ. ಕಿಂಕಳಣೇ)

[ಕವಿಗಳೊ ಹಕ್ಕಿಗಳಿದ್ದಂತೆ ಕೀರುವರು, ಗಳಪುವರು, ಕಿಂಖಲಿಸುವರು ಹಕ್ಕಿಗಳಂತೆ(ಸಾಹಿತ್ಯ ಮತ್ತು ವಿಮರ್ಶೆ–67)]

* * * * * *

### ನಾಡಾಡಿ

**ಬಲ್ಲಂತೆ ನಾನು ನಾಡಾಡಿ ಡೊಂಬತಿಯಾಗಿ/ ಗಣೆಮಿಣೆಗಳನ್ನೇರಿ ಕುಣಿಯಬಹುದು (13–3, 4)**

: ಸ್ವಲ್ಪವೂ ಗಣನೆಗೆ ಬಾರದ ವ್ಯಕ್ತಿ, ಅಲ್ಪ; ಕ್ಷುದ್ರ

* * * * * *

## ಓರಿಗೆಯ ಮೈಯೊಡನೆ

**ತಿರಿಪೆ ಅನ್ನವೆ ಇರಲಿ, ಹರಕು ಅರಿವೆಯೆ ಬರಲಿ/ ಓರಿಗೆಯ ಮೈಯೊಡನೆ ತಿರುಗಬಲ್ಲೆ (14–3, 4)**

*ಬೇಂದ್ರೆ ಅವರು ದಾಂಪತ್ಯದ ಸುಖ ಸಮೃದ್ಧಿಯನ್ನು ಅನುಭವಿಸುವ ರೀತಿಯನ್ನು ಓರ್ವ ಗೊಲ್ಲತಿಯ ಚಿತ್ರಣದಲ್ಲಿ ನೀಡಿದ್ದು, ಬಾಂಧವ್ಯದ ಅನನ್ಯತೆಯ ವಿಶ್ವರೂಪವನ್ನು ಮಾಡಿಸಿದಂತಿದೆ. ಗೊಲ್ಲತಿ ತನ್ನ ನಲ್ಲನನ್ನು ಕರೆದಿರುವುದು ಓರಿಗೆಯ ಮೈಯೊಡನೆ. ತನಗೆ ಸರಿಜೋಡಿಯಾದುದು ಓರಿಗೆ. ಅದು ತನ್ನ ಒಡಲಿನಂತಹ ತನ್ನ ಒಲವು. ಇದು ದಾಂಪತ್ಯದ ಅಂತರಾರ್ಥ ಅಭಿವ್ಯಕ್ತಿಸಿದ ಬೇಂದ್ರೆ ದರ್ಶನ.

***

ಹೆಣ್ಣು ಗಂಡಿಗೆ ಚೆಲುವು, ಗಂಡು ಹೆಣ್ಣಿಗೆ ಒಲವು/ ಇದುವೆ ಹೆಣಿಗೆಯ ಬಲವು ಮೂಲೋಕಕು(ಸಖೀಗೀತ–ಸಾಲು: 457,458)

---

# ನಿದ್ದೆ

## ಸಲ್ಲಾಗು

**ಸೊಲ್ಲಿದ್ದರೂ ನುಡಿಯ ಸೊಗಸುಸಿಗದೆಂದಿಗೂ/ ಬಲ್ಪಿದ್ದರೂ ಬಲ್ಲತನಕೆ ಸಲ್ಲಾಗುವದು (3–1, 2)**

: ಬಾಗು; ಮಣಿ

* 'ನಿದ್ದೆಯೆಂದರೆ ಕಣ್ಣುಕಟ್ಟು ಮಾಡುವ ಮೋಡಿ' ಎಂದು ಹೇಳುತ್ತ ಬೇಂದ್ರೆಯವರು 'ನಿದ್ದೆಯ ಸಂಗ ಸಾಕು ಸಾಕು' ಎಂದು 'ನಿದ್ದೆ' ಕವನ ರಚಿಸಿದ್ದಾರೆ.

ನಿದ್ದೆ ಆವರಿಸಿದಾಗ ನಮ್ಮಲ್ಲಿ ಮಾತು, ಧ್ವನಿ ಇದ್ದರೂ ಅದಕ್ಕೆ ನುಡಿಯ ಸೊಗಸು ಸಿಗದು. ನಮ್ಮಲ್ಲಿ ಬಲ್ಪು–ಬಲ, ಶಕ್ತಿ, ಸಾಮರ್ಥ್ಯವಿದ್ದರೂ ಆ ನಿದ್ದೆಯ ಬಲ್ಲತನ ಶಕ್ತಿ, ಸಾಮರ್ಥ್ಯಕ್ಕೆ ನಾವು ಸಲ್ಲಾಗುವೆವು ಬಾಗಿ, ಮಣಿಯುವೆವು.

---

# ರವದಿ

## ರವದಿ

**ಕಸದಂತೆ ಬಿದ್ದಂಥ ರವದಿ ಕಂಡೆನು ನಾನು/ ಕಸವೆಂದು ಒಗೆದಂಥ ರವದಿ ಕಸವಾಗಿತ್ತು/ ಕಸವಲ್ಲವೆಂದು ನಾನೆತ್ತಿದೆನು; ಅಂತೆಯೇ ಕಸವಾಗಲಿಲ್ಲ ರವದಿ (1–1, 2, 3)**

: ಜೋಳ ಮುಂತಾದವುಗಳ ಒಣಗಿದ ಗರಿ; ಸೊಪ್ಪು.

*ಬೇಂದ್ರೆಯವರು ಬಾಲ್ಯದಲ್ಲಿ ಕೇಳಿದ ವಿವಿಧ ನಾದತರಂಗಗಳು ಯಾವುದೇ ಮಗು ಈ ಜಗತ್ತಿಗೆ ತೆರೆದುಕೊಂಡಾಗ ಆಲಿಸಿಪಡುವ ಆನಂದ ಸ್ವರೂಪವಾಗಿದ್ದವು. ರವದಿ ಉದುರುವುದು ಚಳಿಗಾಲದಲ್ಲಿ. ಅದನ್ನು ಪ್ರೀತಿಯಿಂದ ಎತ್ತಿ ಮೃದುವಾಗಿ ಮೈಸವರಿ ಒಲ್ಮೆಯ ಮುತ್ತನಿಟ್ಟು ನಾದತರಂಗಗಳನ್ನು ಹೊಮ್ಮಿಸುವವರು ಬಡ ಗ್ರಾಮೀಣ ಮಕ್ಕಳು. ಅದನ್ನು ಊದುತ್ತಾ ಸವಿಗನಸು ಕಂಡು ನಕ್ಕು ನಲಿಯುವುದೊಂದು ಆಹ್ಲಾದ. ಅದರ ಸುಂದರ ಅನುಭವವೆಂದರೆ ಬಡವನಿಗೆ ನೀಡುವ ಮನ್ನಣೆ. ಕಸವಾದ ರವದಿ, ಕಡ್ಡಿಯು ತಾನು ಉತ್ತಮವಾಗಬೇಕು ಎನ್ನುತ್ತದೆ. ಅದಕ್ಕೆ ಬೇಕಾದ ಆವೇದ ಸಂವೇದ ಅದರಲ್ಲಿದ್ದು, ಅದು ಜೀವಂತಿಕೆಯಿಂದ ಕೂಡಿದೆ. 'ಅಂತೆಯೇ ಕಸವಾಗಲಿಲ್ಲ ರವದಿ'.

ಬೇಂದ್ರೆಯವರು ಬಾಲ್ಯದಲ್ಲಿ ಆಡಿದ ಆಟದಲ್ಲಿ ರವದಿ ಕಡ್ಡಿಗಳ ಪೊಳ್ಳಿನಲ್ಲಿ ಸುಳ್ಳಾಗಿ ಸುಳಿದ ಗಾಳಿಯು ಸವಿಮಂತ್ರವಾಗಿತ್ತು. ಕಸವಾದ ಜೋಳದ ಗರಿ ರವದಿಗೂ ಜೋಳದ ದಂಟಿಗೂ ಭವದೀಕ್ಷೆ ನೀಡುವ ಶಕ್ತಿ ಗಾಳಿಗಿದೆ. ಭವದೀಕ್ಷೆಯೆಂದರೆ ಶ್ರೀಅರವಿಂದರು ಹೇಳಿರುವ 'ಭೌತದ್ರವ್ಯವೂ ಪರಬ್ರಹ್ಮ ಸ್ವರೂಪವನ್ನು ಪ್ರಕಟಿಸುವುದು' ಎಂಬ ಚಿಂತನೆ. ಈ ಜಗದಲ್ಲಿ ಒಂದು ಸಾಧಾರಣ ರವದಿ, ಕಡ್ಡಿ ಉನ್ನತ ಸ್ತರಕ್ಕೆ ಏರುವ ಆಂತರಿಕಬಲವನ್ನು ಹೊಂದಿರುವಾಗ, ಸಮಾಜದ ನಿರ್ಲಕ್ಷಿತ ದೀನದಲಿತರು ಮೇಲೇರಬೇಕೆಂಬ ಆಕಾಂಕ್ಷೆಯನ್ನು ಬೇಂದ್ರೆಕಾವ್ಯವು ಹೊಮ್ಮಿಸಿದೆ.

**'ಪೊಳ್ಳಿನ ಸುಳ್ಳಿನ ಸುಳಿವ ಗಾಳಿಯ ನಾದ/ ಕಿವಿಮಂತ್ರ, ಸವಿಮಂತ್ರ ಓದುವುದು/ ರವದೀಗು ಭವದೀಕ್ಷೆ, ಕನಸು ಕಡ್ಡಿಗು ಇದೆ/ ಆವೇದ ಸಂವೇದ ಊದುವುದು'(ಮತ್ತೆ ಶ್ರಾವಣಾ ಬಂತು: ಬಾಲ್ಯಕಾಂಡ)**

* * * * * *

## ಹೆರಳುಭಂಗಾರ

**ಇನ್ನೂ ವಿರಾಜಿಪಿರುಳಿನ ಹೆರಳುಭಂಗಾರ (11–1)**

*ಹೆಣೆದುಕೊಂಡ ಜಡೆಯಲ್ಲಿ ಧರಿಸುವ ಜಡೆಯಾಕಾರದಲ್ಲಿ ಮಾಡಿದ ಒಂದು ಬಗೆಯ ಆಭರಣ; ಜಡೆಬಂಗಾರ.

***

**ಹೆರಳು ಬಂಗಾರದ ಬೆಳ್ಳಿ ಸೇವಂತಿಗೆಯ ಬಳಿಯಾಕೆ (ಗರಿ:ಚಳಿಯಾಕೆ)**

---

## ಜೇನುಹುಟ್ಟು

**ಹಾರುಗಾಲು**

**ಹಾರುಗಾಲಿನ ಭರದಿ ಗಿಡದಡಿಗೆ ತಲುಪಿದೆನು(6–2)**

: ನಿಂತಲ್ಲಿ ನಿಲ್ಲದೆ ಓಡಾಡುವ ಕಾಲು.

---

## ಶಾಂತಕವಿಗಳ ವಿಶ್ರಾಂತಿ

**ಜಿರಿ**

**ಮುಪ್ಪಾಗಿ ಜಿರಿಯಾದ ಬಟ್ಟೆಯನು ಬೀಸಾಡಿ (2–1)**

*ಶಾಂತಕವಿಗಳು ತೀರಿ ಹೋದಾಗ ಬೇಂದ್ರೆ ಅವರು ಬರೆದ ಕವನ– 'ಶಾಂತಕವಿಗಳ ವಿಶ್ರಾಂತಿ'. 'ಶಾಂತಕವಿ' ನಾಮದ ಕವಿಯು ಶಿಕ್ಷಕರಾಗಿದ್ದವರು. ಅವರ ಹೆಸರು ಸಕ್ಕರಿ ಬಾಳಾಚಾರ್ಯ. ಶಾಂತಕವಿಗಳ ವಯಸ್ಸಾದ ದೇಹ ಎಂಬ ಬಟ್ಟೆಯನ್ನು ಬೇಂದ್ರೆ ಅವರು 'ಮುಪ್ಪಾಗಿ ಜಿರಿಯಾದ ಬಟ್ಟೆಯ ಬೀಸಾಡಿ' ಎನ್ನುವ ಮೂಲಕ ಚಿತ್ರಿಸಿದ್ದಾರೆ. ಮನುಷ್ಯ ದೇಹದ ಅಶಾಶ್ವತತೆ ಸೂಚಿಸಿ, ಹಳೆಯದಾಗಿ ಶಿಥಿಲವಾದ, ಜೀರ್ಣವಾದ ಆ ದೇಹವನ್ನು 'ಜಿರಿ' ಎಂದಿರುವುದು ಜನರಾಡುವ ಪಕ್ಕಾ ಆಡುನುಡಿಯಾಗಿದೆ.

***

**ನರಗಳ ನೂಲಿನ/ ಪರೆಪರೆ ಚೀಲಾ/ ತೆರೆತೆರೆಯಾಗಿದೆ/ ಜಿರಿಜಿರಿಯಾಗಿದೆ/ ಅದರೊಳಗೊಂದು/ ಎಲುಬಿನ ಬಲೆಯು!(ನಾದಲೀಲೆ: ಭೂಮಿತಾಯಿಯ ಚೊಚ್ಚಿಲಮಗ)**

---

## ಚಿತ್ತಿಯ ಮಳೆಯ ಸಂಜೆ

**ಚಿತ್ತೆ**

**ಕುರುಡು ಪ್ರೀತಿಯ ಹಾಂಗ/ ಕುರುಡು ಚಿತ್ತಿಯ ಮಳೆಯೆ (1–1)**

: ಒಂದು ನಕ್ಷತ್ರದ ಹೆಸರು; ಚಿತ್ತಾನಕ್ಷತ್ರ.

*ಚಿತ್ತೆ ಮಳೆಯು ಸೂರ್ಯನು ಚಿತ್ತಾನಕ್ಷತ್ರದಲ್ಲಿ ಸಂಚರಿಸುವಾಗ ಬರುತ್ತದೆ. ಅದು ಸಾಮಾನ್ಯವಾಗಿ ಅಶ್ವಯುಜ ತಿಂಗಳಲ್ಲಿ ಬರುತ್ತದೆ. ಅದು ಅಲ್ಲಿಷ್ಟು ಇಲ್ಲಿಷ್ಟು ಖಂಡಖಂಡವಾಗಿ ಸುರಿಯುತ್ತದೆ. ಅದನ್ನು ಕುರುಡುಚಿತ್ತೆ ಎಂದು ಕರೆಯುತ್ತಾರೆ. ಗ್ರಾಮೀಣರು 'ಕುರುಡು ಚಿತ್ತೆ ಹುಯ್ದ ಕಡೆಗೆ ಹುಯ್ಯುತ್ತೆ' ಎಂದು ಹೇಳುತ್ತಾರೆ. ಅದನ್ನು ಬೇಂದ್ರೆಯವರು ಈ ನೆಲದ ಗಂಡು ಹೆಣ್ಣಿನ ಕುರುಡು ಪ್ರೀತಿಗೆ ಹೋಲಿಸಿ ಅದರಲ್ಲಿರುವ ಮುಗುಳು ನಗಿಯನ್ನು ಕಂಡಿದ್ದಾರೆ!

ಕುರುಡು ಚಿತ್ತಿಯ ಆ ಮಧುರ ನೆಲದ ಪ್ರೀತಿಯ ಹದ, ಹವಣು, ನೆನೆನೆನೆದು ನೆನೆಸಿ ಮುದಗೊಳಿಸುವುದನ್ನು-ಪ್ರಿಯಕರ ಪ್ರಿಯೆಯರಲ್ಲಿ ಬೇಂದ್ರೆ ಕಂಡಿದ್ದಾರೆ. 'ಬರುವ ಸುಗ್ಗಿಯ ಚಿತ್ರ ಅವರ ಚಿತ್ತ ಬರೆದಾವ' ಎಂದು ಚಿತ್ತೆಯಲ್ಲಿ ತೊಯ್ದ ಆನಂದಫಲವನ್ನು ದರ್ಶಿಸಿದ್ದಾರೆ.

* * * * * *

**ಹಡದಿ**

**ದುಡಿದವರ ಪಾದಕ್ಕಂತ/ ಹಡದಿ ಹಾಸ್ಯಾವ (8-3, 4)**

: (ಗುರು ಹಿರಿಯರೇ ಮೊದಲಾದ ದೊಡ್ಡವರನ್ನು ಬರಮಾಡಿಕೊಳ್ಳುವಾಗ) ನೆಲದ ಮೇಲೆ ನಡೆಯಲು ಹಾಸುವ ಮಡಿ ಮಾಡಿದ ಬಟ್ಟೆ.

---

## ಮನೆಗೆ ಹೋಗವ್ವಾ

**ತೊಂಡಿಲು**

**ಯಾಕವ್ವಾ ತೆರೆವಿ ತೊಂಡಿಲಬಾಯಿ (4-2)**

: ತೊಂಡೆ; ಒಂದು ಬಗೆಯ ಬಳ್ಳಿ ಮತ್ತು ಅದರ ಹಣ್ಣು.

* * * * * *

**ತೊಂಡೆಬಾಯ್**

**ತೊಂಡು ನಗೆಯ ತೊಂಡು ಬಾಯ/ ಕಂಡು ಕಂಡು ಮುತ್ತನಿಟ್ಟು (ನಾದಲೀಲೆ)**

: ತೊಂಡೆಯ ಹಣ್ಣಿನಂತೆ ಕೆಂಪಾಗಿರುವ ಬಾಯಿ, ತುಟಿ.

* * * * * *

### ಆರವ್ವಾ

**ಆರವ್ವಾ ಕಡೆಯ ಮೋಹವ ಹಿಡಿದು/ ಬೇರವ್ವಾ ಎಲ್ಲ ಕೂಡಲೆ ಕಡಿದು (6–1, 2)**

*ಬೇಂದ್ರೆ ಅವರು ಹೆಣ್ಣು ಉತ್ತಮ ನಡೆ ನುಡಿಯವಳಾಗಿ ತನ್ನ ಹಿಡಿತ ತಾನು ಸಾಧಿಸಿ, ನಡೆಯನ್ನು ಮೀರದೆ ಗಂಡ ಮಕ್ಕಳ ಜೊತೆ ಬಾಳಲಿ ಎಂದು 'ಮನೆಗೆ ಹೋಗವ್ವಾ' ಕವನದಲ್ಲಿ ಒಂದು ಉನ್ನತ ಚಿಂತನೆಯನ್ನು ನೀಡಿದ್ದಾರೆ.

ಆ ಹೆಣ್ಣು 'ಆರವ್ವ'ನಾಗಬೇಕು. ಅಂದರೆ, ವಿವೇಕದಿಂದ ಕೂಡಿ, ತಣಿದ ಮನದವಳಾಗಿ, ತೃಪ್ತಿಯನ್ನು ಹೊಂದಿ ಬಾಳಬೇಕು ಎಂದು ಹಾರೈಸಿದ್ದಾರೆ. 'ಆರರ ಅವ್ವ' ಎಂಬ ಅರ್ಥ ಇರುವಂತಿದೆ. ಆರು ಎಂಬುದು ಸಂಖ್ಯೆ. ಆಕೆ ಜನನದಿಂದ ಮರಣದವರೆಗಿನ ಆರು ಹಂತಗಳಲ್ಲಿ ಬೆಳೆದು ಬಾಳಬೇಕು. ಕೂಸು, ಹುಡುಗಿ, ತರುಣಿ, ನೀರೆ, ಹೆಣ್ಣು, ಮುದುಕಿ. ಇದು ಆರರ ಅವ್ವ

---

## ನಲ್ಲ ನಲ್ಲೆಯರ ಲಲ್ಲೆ

### ಲಲ್ಲೆವಾತು

**ನಲ್ಲೆ! ನಿನ್ನ ಲಲ್ಲೆವಾತು/ ಮುಗುಳುನಗೆಯಲಲ್ಲೆ ಹೂತು (1–1, 2)**

: ಪ್ರೀತಿಯ ಮಾತು; ಮುದ್ದುಮಾತು; ಸರಸ ಸಲ್ಲಾಪ.

---

## ಬೈರಾಗಿಯ ಹಾಡು

### ಇಕೋ

**ಇಕೋ  ನೆಲ–ಅಕೋ ಜಲ/ ಅದರ ಮೇಲೆ ಮರದ ಫಲ (1–1, 2)**

ಇಕೊ: ಹತ್ತಿರದ ವಸ್ತುವಿನ ಅಥವಾ ವಿಷಯದ ಕಡೆಗೆ ಗಮನ ಸೆಳೆಯಲು ಉಪಯೋಗಿಸುವ ಮಾತು.

ಅಕೊ: ದೂರದ ವಸ್ತುವಿನ ಅಥವಾ ವಿಷಯದ ಕಡೆಗೆ ಗಮನ ಸೆಳೆಯಲು ಉಪಯೋಗಿಸುವ ಮಾತು.

ಬೀದರದ ಜನ ಮಾತನಾಡುವಾಗ ಈ ಪದಗಳನ್ನು ಈಗಲೂ ಬಳಸುತ್ತಾರೆ

***

ಉಷೆ ತಂದಾಳಿಕೋ, ರವಿ ಬಂದಾನಿಗೋ/ ಆತ ಹಿಂದ ಈಕಿ ಮುಂದ ಮ್ಯುಂದ (ಮುಕ್ತಕಂಠ: ಉಷೆ ತಂದಾಳಿಕೊ)

---

# ಸಖೀಗೀತ

**ಸಖಿ, ನೆರೆವಾತು**

**ಸಖಿ! ನಮ್ಮ ಸಖ್ಯದ ಆಖ್ಯಾನ ಕಟು ಮಧುರ/ ವ್ಯಾಖ್ಯಾನದೊಡಗೂಡಿ ವಿವರಿಸಲೇ (ಸಾಲು: 1, 2)**

*ಶೃಂಗಾರರಸ ಪ್ರಧಾನವಾದ ಲಾವಣಿಯನ್ನು ಮರಾಠಿಯಲ್ಲಿ 'ಸಖೀ' ಎಂದು ಕರೆಯುತ್ತಾರೆ. ಬೇಂದ್ರೆಯವರು ರಚಿಸಿರುವ 'ಸಖೀಗೀತ'ವು 'ಗರತಿಯರೆದೆವಾತು, ನೆರೆವಾತುಗಳ ಬೆರೆತು,/ ಲಾವಣಿಯಲಂಕಾರದಲಿ ಹೊಂದಿದೆ' (ಸಾಲು 921, 922)

ಗೃಹಿಣಿ, ಪತಿವ್ರತೆಯರು ಗರತಿಯರು. ಅಂತಹ ಹದಿಬದೆಯ ಕಾವ್ಯ ಸಖೀಗೀತ. ಅದು ದಂಪತಿಗಳ ಪ್ರೇಮ, ವಿರಹಗಳ ಹೃದಯಂಗಮ ಸಮರಸಗೀತ. ಅದರಲ್ಲಿ ನೆರೆವಾತು– ಶೃಂಗಾರದಮಾತು ಸಹಜ.

ಎದೆವಾತು, ನೆರೆವಾತು ಒಂದಾಗಿ ಮೂಡುವುದು ಜನಪದ ಹಾಡು. ಅಂತಹ ಜನಪದ ಹಾಡಿನ ಲಾವಣಿಯ ಅಲಂಕಾರದಲ್ಲಿ ಈ ಕಾವ್ಯ ರೂಪುಗೊಂಡಿದೆ.

['ಇನಿಯರನೆಂದುಂ ನೆರೆಯಿಪ ಬಿನದಮೆ ತನ್ನಿಚ್ಛೆಯಾಗೆ' (ಕಬ್ಬಿಗರ ಕಾವಂ–120) ನೆರೆಯಿಪ–ರತಿಕ್ರೀಡೆಯಲ್ಲಿ ತೊಡಗಿಸು]

ಈ ಲಾವಣಿಯು ನಿಯತವಾದ ಚರಣಗಳ ಚೌಪದಿಯಲ್ಲಿದೆ. ಬೇಂದ್ರೆಯವರ ಆತ್ಮಕತೆಯೇ ಸಖೀಗೀತ. ಈ ಖಂಡಕಾವ್ಯವು ನಲವತ್ತು ವಿಶಿಷ್ಟ ವಸ್ತುವಿಭಾಗವನ್ನು ಹೊಂದಿದೆ. ಪ್ರತಿ ಭಾಗದ ಆರುನುಡಿಗಳ ಕೊನೆಯ ಎರಡು ಸಾಲುಗಳಲ್ಲಿ ಬರುವ 'ನನಗೂ ನಿನಗೂ ಅಂಟಿದ ನಂಟಿನ/ ಕೊನೆ ಬಲ್ಲವರಾರು ಕಾಮಾಕ್ಷಿಯೇ!' ಎಂಬ ಪಲ್ಲವಿಯಿಂದ ಲಾವಣಿಯ ಗತ್ತು, ನಾದದ ಸೊಬಗು ಹೆಚ್ಚಿದೆ.

ಲಯಾನ್ವಿತವಾಗಿ ಸಾಗುವ ಈ ಕಾವ್ಯ ಪ್ರಾಸ, ಒಳಪ್ರಾಸಗಳ ಅಂತರ್ಯದ ಸೊಗಸು, ರೂಪಕಾತ್ಮಕ ಬೆಡಗಿನ ರಚನೆಯಿಂದ –ಒಂದು ವಿಶಿಷ್ಟ ಬಾಗು ಬಳುಕಿನ ಒನಪನ್ನು ಹೊಂದಿದೆ. ಇದು 'ಅಕ್ಕರ ಛಂದವು ಸಾಂಗತ್ಯ–ಸಂಸ್ಕಾರ' ಹೊಂದಿದ ಹೊಸ ಕಾವ್ಯವಾಗಿದೆ. (ಸಾಲು 937)

ಶೃಂಗಾರ– ಅನುರಾಗ; ಪ್ರಣಯ. ಅದು ನವರಸಗಳಲ್ಲಿ ಒಂದು; ವಿಭಾವ, ಅನುಭಾವ ಮತ್ತು ಸಂಚಾರಿ ಭಾವಗಳಿಂದ ಪರಿಪುಷ್ಟವಾದ 'ರತಿ' ಎಂಬ ಸ್ಥಾಯಿಭಾವದಿಂದ ವ್ಯಂಗ್ಯವಾಗುವ ರಸ.

ಬೇಂದ್ರೆಯವರು 'ಸಖೀಗೀತ'ದ ಮುನ್ನುಡಿಯಲ್ಲಿ 'ನನ್ನ ಜೀವನ ಕಥೆಯ ಹಂದರದ ಮೇಲೆ ಸಾಮಾನ್ಯ ಸಂಸಾರದ ಸುಖ–ದುಃಖದ ಹಂಬನ್ನು ಹಬ್ಬಬಿಟ್ಟಿದ್ದೇನೆ.' ಎಂದು ತಿಳಿಸಿದ್ದಾರೆ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮೊಟ್ಟಮೊದಲಿಗೆ ಪತ್ನಿಯನ್ನು ಸಖಿ, ಗೆಳತಿ, ಸ್ನೇಹಿತೆಯೆಂದು ಕರೆದು ತನ್ನ ನೇಹದ ಸುಖದಿಂದ ಸಮಾನತೆಯ ಆಪ್ತತೆ ನೀಡಿದವರು ಬೇಂದ್ರೆ. ಅವರು 'ಸಖೀಗೀತ'ದ ನಾಯಕ. ಅದು 'ಕಟು–ಮಧುರ' –ಕಹಿಯಾಗಿದ್ದು, ಸಿಹಿಯಾಗಿರುವ– ವ್ಯಾಖ್ಯಾನ.

ಪ್ರಜಾಪ್ರಭುತ್ವದಲ್ಲಿ ಜನರೇ ಪ್ರಭುವಾದಕಾರಣ, ಪ್ರತಿಕುಟುಂಬವು ಅರ್ಥಪೂರ್ಣವಾಗಿ ಬಾಳಬೇಕಾದುದರಿಂದ ಅದರ ಪ್ರಮುಖ ಪಾತ್ರಗಳಾದ ದಂಪತಿಗಳು ಅರಿತು ಬಾಳುವುದು ಲೋಕಕಲ್ಯಾಣಕ್ಕೆ ಆಧಾರಭೂತವಾದುದು. ಆ ಹಿರಿಯ ಭಾವದಿಂದ ಕವಿ ಕಾವ್ಯವನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾರೆ.

'ಏಕಾಂತದ ಜಿನುಗು ಲೋಕಾಂತಕೆಳೆಯಿತು/ ಜನವು ಜನಾರ್ದನನೆಂದರಿತೇ' (ಸಾಲು: 933,934)

---

## ಹುಟ್ಟುಹಾಡು

**ಪಟ್ಟ ಪಾಡೆಲ್ಲವು ಹುಟ್ಟು ಹಾಡಾಗುತ/ ಹೊಸವಾಗಿ ರಸವಾಗಿ ಹರಿಯುತಿವೆ. (ಸಾಲು: 7, 8)**

: ಬದುಕಿನಗೀತೆ; ಜೀವನದ ಹಾಡು; ಜೀವನಗಾಥೆ.

---

## ತಾರಿ

**ತೆಪ್ಪವೊ ತಾರಿಯೊ ಹರಿಗೋಲೊ ಹಡಗವೊ/ ತೆರೆ–ತೊಡೆ–ತೊಟ್ಟಿಲನೇರೋಣ ಬಾ (ಸಾಲು: 16,17)**

: ನಾವೆ; ದೋಣಿ.

---

## ಝುಂಝೂವಾತ

**ತಾಂಡವ ನಡೆಸಿದ ಝುಂಝೂವಾತದ/ ಕಾಲಿನ ಹುಲುಗೆಜ್ಜೆ ನಾವಾಗಿರೆ (ಸಾಲು:21, 22)**

*ಬೇಂದ್ರೆಯವರ ಜೀವನವು ಕಷ್ಟಕೋಟಲೆಗಳ ಸರಮಾಲೆಯಾಗಿತ್ತು. ಅವರು ತಮ್ಮ ಬದುಕಿನ ದಾರುಣತೆಯನ್ನು 'ಝುಂಝೂವಾತದ ಕಾಲಿನ ಹುಲುಗೆಜ್ಜೆ' ಎಂದು ಉಪಮಾನಾತ್ಮಕವಾಗಿ ವರ್ಣಿಸಿಕೊಂಡಿದ್ದಾರೆ. ಮಳೆಯಿಂದ ಕೂಡಿದ ಬಿರುಗಾಳಿಯೇ ಝುಂಝೂವಾತ. ಅದರ ರಭಸಕ್ಕೆ ಸಿಕ್ಕಿ ಇಡೀ ಜೀವಜಗತ್ತು ಇನ್ನಿಲ್ಲದಂತೆ ಕೊಚ್ಚಿ ಹೋಗುತ್ತಿದೆ. ಅದು ತಾಂಡವನೃತ್ಯ ಉಂಟುಮಾಡುವ ಪರಿಣಾಮ. ಅಂತಹ ಕುಣಿತದ ಕಾಲಿನ ಹುಲುಗೆಜ್ಜೆ ಅರ್ಥಾತ್ ಅಲ್ಪವಾದ, ಬೆಲೆಯಿಲ್ಲದ ನಾವು ಎಂಬ ಅಸಹಾಯಕ ಭಾವ ಇಲ್ಲಿದೆ.

1936ರಲ್ಲಿ ಬೇಂದ್ರೆಯವರು ಈ ಕವನ ಬರೆದದ್ದು, ಆಗಲೇ ಅವರಿಗೆ 6 ಜನ ಮಕ್ಕಳು ಹುಟ್ಟಿ, 4 ಜನ ಮಕ್ಕಳು ಸತ್ತಿದ್ದರು. 1935ರಲ್ಲಿ ಎಂ.ಎ ಪಾಸು ಮಾಡಿದರೂ 8 ವರ್ಷಗಳ ಕಾಲ (1944ರವರೆಗೆ) ನೌಕರಿ ಸಿಕ್ಕಿರಲಿಲ್ಲ. ಆ ಸ್ಥಿತಿ ಬದುಕನ್ನು ಅಸಹನೀಯವಾಗಿಸಿತ್ತು. ಕಾಲನ ಬರ್ಬರತೆಯ ಮುಂದೆ ಅಸಹಾಯಕವಾಗಿದ್ದ ಅವರ ಬದುಕು ನಜ್ಜುಗುಜ್ಜಾಗಿತ್ತು. ಅದು ಹೀಗೆಯೇ ಆಗುತ್ತದೆ. ಏಕೆಂದರೆ, ತಾಂಡವಮಾಡುವ ಬೃಹದಾಕಾರದ ಕಾಲನ ಕಾಲಿಗೆ ಕಟ್ಟಿದ ಹುಲುಗೆಜ್ಜೆ ಏನು ಮಾಡೀತು?

---

## ನಂಟು

**ನನಗೂ ನಿನಗೂ ಅಂಟಿದ ನಂಟಿನ/ ಕೊನೆ ಬಲ್ಲವರಾರು ಕಾಮಾಕ್ಷಿಯೇ! (ಸಾಲು: 23, 24)**

*ಬೇಂದ್ರೆಯವರು ತನಗೂ ತನ್ನ ಪತ್ನಿಗೂ ಉಂಟಾದ ಸಂಬಂಧವನ್ನು 'ಅಂಟಿದ ನಂಟು' ಎಂದು ಕರೆದಿದ್ದಾರೆ. ಆ ನಂಟು ಪದದ ಅಂತರ್ಯದಲ್ಲಿ ಪ್ರೀತಿ; ಪ್ರೇಮದ ರಸವಿದೆ. ಇದು ಸಖ-ಸಖಿಯರ ಹಾಡು. ಇದು ನಿರಂತರವಾಗಿ ಸಾಗುತ್ತಿರುತ್ತದೆ. ಇದಕ್ಕೆ ಅಂತ್ಯವಿಲ್ಲವೆಂಬುದನ್ನು ಮೇಲಿನ ಪಲ್ಲವಿಯು ಅಚ್ಚರಿಯಭಾವದಲ್ಲಿ ಧ್ವನಿಸುತ್ತದೆ. ಬೇಂದ್ರೆಯವರು ಈ ಕಾವ್ಯದಲ್ಲಿ 'ಸಖಿ' ಎಂಬುವವಳು ಹೆಣ್ಣು ಮಾತ್ರವಾದ ಜೊತೆಗಾತಿಯಲ್ಲ. ಅವಳು ಬೌದ್ಧಿಕ ಮತ್ತು ಆಧ್ಯಾತ್ಮಿಕ ಜೊತೆಗಾತಿ ಎಂಬುದನ್ನು ಪ್ರಕಾಶಿಸಿದ್ದಾರೆ.

***

**ಅಂಟಿಗಂಟು/ ಚಿಗಿತುನಂಟು/ ಇದುವೆ ನಿತ್ಯ ನೂತನಾ/ ಸಂತತಿಯೆ ಚಿರಂತನಾ. (ಸಖೀಗೀತ: ಚಿರಂತನ)**

---

**ಮಂದಿವಾಳ**

**ಮಂತ್ರದ ತಂತ್ರದ ಮಂದಿವಾಳದ ಮದುವೆ/ ಸಂದಣಿಯಲಿ ಹೇಗೊ ಮೆರೆಯುತಿರೆ. (ಸಾಲು: 29,30)**

: ಸಡಗರ; ಸಂಭ್ರಮ.

---

**'ಅಂತಃಪಟ', ಸಾವರಿಸು**

**ಅಂತಃಪಟದಾಚೆ ವಿಧಿ ತಂದ ವಧು ನೀನು/ ಮಾಲೆಯ ಸಾವರಿಸಿ ನಿಂತಿದ್ದೀಯೆ (ಸಾಲು: 31, 32)**

: ಮದುವೆಯ ಮುಹೂರ್ತದಲ್ಲಿ ವಧೂವರರಿಗೆ ನಡುವೆ ಅಡ್ಡಲಾಗಿ ಹಿಡಿಯುವ ವಸ್ತ್ರ.

: ಸಜ್ಜುಮಾಡು; ಸಿದ್ಧಪಡಿಸು.

---

**ಮೈಸಲಿಗೆ**

**ನೀನು ದೊಡ್ಡವಳಾದೆ ಮೈಸಲಿಗೆ ಬೆಳೆಸಿದೆ/ ಏಕಾಂತಕೆಳೆಸಿದೆ ಎಲೆ ಕೆಳದಿಯೆ (ಸಾಲು: 53, 54)**

: ದೇಹದ ಸಂಗ; ಸಹವಾಸ.

---

**ಒಸಗು**

**ಕಿವಿಮಾತ ಸೊಗಸೇನು ಆಡಿದ್ದಾಡುವದೇನು/ ಹಳೆಸದ ಮುದ್ದಾಟ ಒಸಗುತಿರೆ (ಸಾಲು: 61, 62)**

: ಸಂತೋಷಪಡು; ನಲಿ; ಹಿಗ್ಗು.

---

**ತುದಿಕಳಿಸು**

**ತುದಿಕಳಿಸಿ ಬಂದಿದ್ದ ಕಣ್ಣೀರ ತಳಿಯಿಂದ/ ಕಣ್ಣೆಂಜಲು ಮಾಡಿ ಮಸಣದೊಳೆ (ಸಾಲು: 83, 84)**

: ತುದಿಗೆ ಬರು; ಕೊನೆಗೆ ನಿಲ್ಲು.

***

**ಭೂತಜಾತದ ವೇದ ತುದಿಕಳಿಸಿ ನಾಲಗೆಗೆ ಇಮ್ಮು ಚಿಮ್ಮಲಿ (ಉಯ್ಯಾಲೆ: ನೀನು ಮರೆವುದೆ ನನ್ನ?)**

---

**ಅಸಿವಸಿ**

**ಅಸಿವಸಿಯಲಿ ಕುಸಿದ ತಾಯಾಸೆ ಕತ್ತೆತ್ತಿ/ ಕಣ್ಣೆತ್ತಿ ಮತ್ತೊಮ್ಮೆ ಕುದುರದಿರೆ (ಸಾಲು:89, 90)**

*ಬೇಂದ್ರೆ ಅವರು ಆತುರ, ತ್ವರೆ, ಸಂಭ್ರಮ ಎಂಬರ್ಥದಲ್ಲಿ 'ಅಸಿವಸಿ' ಎಂಬ ಪದ ಪ್ರಯೋಗವನ್ನು ಮಾಡಿದ್ದಾರೆ. ತಾಯಿ ಗೋದುಬಾಯಿಗೆ ತನ್ನ ಸೊಸೆಯ ಚೊಚ್ಚಿಲು ಸಂಭ್ರಮ. ಆದರೆ, ಆ ಮಗು ಬದುಕುಳಿಯಲಿಲ್ಲ. ಗೋದುಬಾಯಿಯ, ಆತುರದ ಆ ಸಂಭ್ರಮ ಕಳೆಗುಂದಿತ್ತು; ಮತ್ತೆ ಅದು ಚೇತರಿಸಿಕೊಳ್ಳಲಿಲ್ಲ.

***

1. ಸುಳ್ಳು ಹೇಳುವವನಿಗೆ ಆತುರ ಜಾಸ್ತಿ, ಸಹನೆ ಕಡಿಮೆ. ಆದ್ದರಿಂದ ಕವಿಯು 'ಹುಸಿಯೇ ಅಸಿವಸಿ ಸಾಕು' ಎಂದು ಹೇಳಿದ್ದಾರೆ. (ಉಯ್ಯಾಲೆ: ಸತ್ಯ ಸಂಕಲ್ಪ)

2. ಆತುರ ತುಂಬಾ ಕೆಟ್ಟದು. ಅದು ಸಲ್ಲದು ಎಂದು ಉಪಮಾನಾತ್ಮಕವಾಗಿ ಕವಿಬೇಂದ್ರೆ ಅವರು 'ತತ್ತಿಯನೊಡೆದು ಮರಿಯನು ಹುಡುಕುವ ಅಸಿವಸಿಯ ಅವಿವೇಕವು ಅವಳಿಗೆ ಹೊರತು' ಎಂದೂ ಹೇಳುತ್ತಾರೆ. (ನಿರಾಭರಣ ಸುಂದರಿ)

---

**ತಗುಬಗೆ**

**ಬಿಸಿಗೆ ಬೆಚ್ಚಿದ ಎದೆಯು ಮರುಚಲ ಬಸಿರಿಯ/ ಬಯಕೆಗೆ ತಗುಬಗೆಯಾಗುತಿರೆ (ಸಾಲು: 91, 92)**

*ದಂಪತಿಯ ಪ್ರೇಮ ಕಾಮದ, ಬೆರಗು ಭಯವನ್ನು ತಮ್ಮ ಬಡತನದ ಕೌಟುಂಬಿಕ ಹಿನ್ನಲೆಯಲ್ಲಿ ಬೇಂದ್ರೆ ಅವರು ಚಿತ್ರಿಸಿರುವ ರೀತಿ ಜಗದ ಗಂಡು-ಹೆಣ್ಣಿನ ಬಾಳಿನ ಎಳೆ ಎಳೆಯಾಗಿದೆ. ಅವರ ಚೊಚ್ಚಲ ಮಗು ಬದುಕುಳಿಯಲಿಲ್ಲ. ಆ ನೋವಿನ ಆನಂತರ, ಪ್ರಕೃತಿಸಹಜ ದಂಪತಿಯ ಕೂಡುವಿಕೆ ಇದ್ದೇ ಇರುತ್ತದೆ. ನೂರು ವರ್ಷದ ಹಿಂದಿನ ಕೌಟುಂಬಿಕ ಪರಿಸರದಲ್ಲಿ, ಬಡತನದಲ್ಲಿ ಜೀವನ ದೂಡುವ ಕವಿಪತ್ನಿಗೆ ಮರುಚಲ

ಬಸಿರು ಅಂದರೆ ಮೊದಲ ಮಗುವಿನ ನಂತರದ್ದು ಘಾಸಿಯಾಗುತ್ತದೆ. ಅವಳಿಗೆ ಅದು ಬಳಲಿಕೆ, ಆಯಾಸ, ಕ್ಲೇಶವನ್ನುಂಟುಮಾಡುತ್ತದೆ. ಅವಳ ಆಗಿನ ದೇಹ ಮತ್ತು ಮನಸ್ಸಿನ ಸ್ಥಿತಿಯನ್ನು ಕವಿಯು 'ತಗುಬಗೆ' ಎಂಬ ನುಡಿಯಲ್ಲಿ ಧ್ವನಿಸಿದ್ದಾರೆ.

---

**ಹುದು**

**ಮಿಾಸಲು ಮುರಿಯದ ಒಲವಿಗೆ ಬಾಯ್ಬಿಡದೆ/ ಕಣ್ಣೊಡ್ಡಿ ಹುದುವಿನ ಸವಿ ಬೇಡಿದೆ (ಸಾಲು: 103, 104)**

: ಸಹವಾಸ; ಸಂಬಂಧ; ನಂಟು.

*ಇದೊಂದು ದಾಂಪತ್ಯದ ಪರಸ್ಪರ ಆಂತರ್ಯದ ಸವಿ. ಕಾವ್ಯನಾಯಕ ತನ್ನ ಪತ್ನಿಯ ಜೊತೆ ಕೂಡುವ ಸಹವಾಸದ ಅಪೇಕ್ಷೆಗಾಗಿ ಕಣ್ಣೊಡ್ಡಿ ಬೇಡುವ ದಾಂಪತ್ಯದ ಮಾಧುರ್ಯ.

---

**ಮುಕ್ಕು, ಮಸೆ**

**ತಾಳಿಕೆ ಬರುವಂಥ ಉಕ್ಕಾಗಿ ಬರುತಿರೆ/ ಮುಕ್ಕಾದ ಮೊನೆಯೀಗ ಮಸೆಯುತಿದೆ (ಸಾಲು:115, 116)**

*ದಂಪತಿಗಳು ಬಾಳಿನ ಬೆಂಕಿಯಲ್ಲಿ ಮೈ ಬೆಂದು, ಮನಸ್ಸು ನೊಂದರೂ, ಬಲ ಸಾಮರ್ಥ್ಯ ಮತ್ತು ಪ್ರೀತಿಯ ಕುಲುಮೆಯಲ್ಲಿ ಅವರು ತಾಳಿಕೆಗೆ ಬರುವಂತಹ ಉಕ್ಕಾಗುತ್ತಾರೆ. ಬೆಂಕಿಯಲ್ಲಿ ಬೇಯುವ ಕಬ್ಬಿಣ ಉಕ್ಕಾಗಿ ಮಾರ್ಪಾಡಾಗುತ್ತದೆ. ಹಾಗೆ, ಮಾರ್ಪಾಡಾಗಲು ಕಾರಣವಾಗುವುದು ಕಾವಿಗೆ ತಡೆದುಕೊಳ್ಳುವ ಅದರ ಗುಣ. ಕಾವಿಗೆ ಕಣಕಣ ಒಂದುಗೂಡಿಸುವ ಸತ್ವ ಉಂಟು.

ಉಕ್ಕು ಆಗುವ ಪ್ರಕ್ರಿಯೆಯಲ್ಲಿ ಮುಕ್ಕಾದ-ಊನವಾದ ಮೊನೆಗಳು ಭಾವನಾತ್ಮಕ ಅರ್ಥದಲ್ಲಿ ಕುಗ್ಗಿದ ಜೀವಗಳು-ಒಲುಮೆಯ ಮಸೆದಾಟದಲ್ಲಿ ಹರಿತಗೊಳ್ಳುತ್ತವೆ. ದಾಂಪತ್ಯದ ವಿರಸಭಾವವು ಇನ್ನಿಲ್ಲವಾಗಿ ರಸದ ನೆಲೆಗೆ ಸಾಗುತ್ತದೆ ಎಂಬುದನ್ನು ಬೇಂದ್ರೆ ರೂಪಕಾತ್ಮಕವಾಗಿ ಬಣ್ಣಿಸಿದ್ದಾರೆ. (ಚೂರಿ ಮುಕ್ಕಾದಾಗ ಅದನ್ನು ಕಲ್ಲಿನ ಮೇಲೆ ಮಸೆದು ಹರಿತಗೊಳಿಸುವ ಪ್ರಕ್ರಿಯೆ ಹಳ್ಳಿಗಳಲ್ಲಿ ಸಾಮಾನ್ಯ) ಇಲ್ಲಿ ಬಳಕೆಯಾದ 'ಮಸೆ' ಪದವು ಹಲವು ಭಾವಗಳ ಸಂಘರ್ಷವನ್ನು ಹೊತ್ತು, ಹೊಳಪುಗೊಳ್ಳುವ ಹರಿತವನ್ನು ವ್ಯಕ್ತಪಡಿಸುತ್ತದೆ.

---

**ಛಟ್ಟೀ ಮುಂದಿನ ಬಿಟ್ಟಿ ಮೋಡ**

**ಛಟ್ಟೀ ಮುಂದಿನ ಬಿಟ್ಟಿ ಮೋಡವು ಬಂದೊಂದು /ಗಳಿಗೆಯ ನೆರಳಾಟ ಹೂಡುವೊಲೆ (ಸಾಲು:121, 122)**

*ಬೇಂದ್ರೆ ಅವರು ತಮ್ಮ ಜೀವನದ ಕುಲುಮೆಯಲ್ಲಿ ಉಕ್ಕಾಗಿ ಠಂಕಿಸಿದ ಕಾವ್ಯಪ್ರತಿಮೆಗಳು ಅವರ ಬಾಳಿನ ಕಾವು. ಅವರಿಗೆ ಹುಟ್ಟಿದ ಮೂರನೆಯ ಕಂದ ಭಾಸ್ಕರ, ಹುಟ್ಟಿದ ವರ್ಷವೇ ತೀರಿಕೊಂಡ. ಅದನ್ನು ಪ್ರತಿಮಾತ್ಮಕವಾಗಿ ಮೇಲಿನಂತೆ ಬಣ್ಣಿಸಿದ್ದಾರೆ.

ಕಾರ್ತಿಕ ಮಾಸದಲ್ಲಿ ಛಟ್ಟಿ ಅಮಾವಾಸ್ಯೆ ಬರುತ್ತದೆ. ಆ ಕಾಲಾವಧಿಯ ಮೋಡಗಳು ಮಳೆ ತರುವುದಿಲ್ಲ. ಅವು ವ್ಯರ್ಥ ಮೋಡಗಳು. ಅದನ್ನು ಕವಿಯು 'ಬಿಟ್ಟಿ', 'ನಿರುಪಯುಕ್ತ' ಎಂದಿದ್ದಾರೆ. ತನ್ನ ಮೂರನೇ ಮಗು ಹುಟ್ಟಿತೇನೋ ನಿಜ, ಆದರೆ ಕಾಲನ ನೆರಳಿನಾಟದಲ್ಲಿ ಅದು ವ್ಯರ್ಥವಾಗಿ ಹೋಯಿತು ಎನ್ನುವ ಮೂಲಕ ಆ ಮಗುವಿನ ಸಾವನ್ನು ಧ್ವನಿಸುತ್ತಾರೆ. ಇದು ಒಂದು ಅದ್ಭುತ ರೂಪಕ.

ಆ ಮಗು ಮತ್ತೆ 'ಅತಿಥಿ'ಯ ಪ್ರತಿಮೆಯಲ್ಲಿ ಹೀಗೆ ನೋವಿನ ನೆರೆ ತಂದಿದೆ. 'ಬೆಟ್ಟಿಗೆ ಬಂದನು ಹೊಸದೊಬ್ಬ ಕಂದನು/ ಅತಿಥಿಯೋ ಎಂಬಂತೆ ತೆರಳಿದನೇ' (ಸಾಲು: 123, 124)

---

**ಪನವು**

**'ಮಾಗಿಯ ಕಾಲಕ್ಕೆ ಹೇಗಿದ್ದೆ ಕೋಗಿಲ?'/ 'ಹೋಗಿದ್ದೆ ಬನವಾಸಿ ಪನವಿನೊಳೆ' (ಸಾಲು: 173, 174)**

: ರಹಸ್ಯ ಸ್ಥಳ, ಗುಟ್ಟಾಗಿ ಗೊತ್ತುಪಡಿಸಿದ ಸ್ಥಳ.

---

**ತಾವೂರಿ-ಬಾವೂರಿ**

**'ತಾಯಿ ಕಾಣದ ಜೀವ ತಾವೂರಿ ಬಾವೂರಿ'/ ಎಂದೆನಲು ಕಂಬನಿ ಒಡೆಯುತಿರೆ/ ಹಾಯಾಗಿ ಹಾಡಿದೆವು 'ಆಡಿ ಬಾ ಎನಕಂದ'/ ಬೇರೊಂದು ತಂತಿಯು ಮಿಡಿಯುತಿರೆ (ಸಾಲು:177, 178, 179, 180)**

: ಕಳವಳ; ಅಸ್ವಸ್ಥ್ಯ.

*ಬೇಂದ್ರೆಯವರ ಜೀವ ಭಾವದಲ್ಲಿ ಜನಪದ ಬದುಕು-ಗೀತ ಒಂದಾಗಿ ಹೋಗಿತ್ತು. ಜನಪದರ ಹಾಡಿನಲ್ಲಿ ಅವರು ತಮ್ಮ ನೋವನ್ನು ಮರೆತು ನಲಿವನ್ನು ಆಲಿಂಗಿಸುತ್ತಿದ್ದರು.

ಶಿಷ್ಟಕಾವ್ಯ ರಚನೆಯಲ್ಲಿ ತಮ್ಮ ಭಾವಲಹರಿಗೆ ಇಂಬಾಗಿ 'ಗರತಿಯ ಹಾಡು' ಮುಂತಾದ ಸಂಗ್ರಹಗಳಲ್ಲಿನ ಪದಗಳನ್ನು ಬಳಸಿ, ನವೋದಯ ಕಾವ್ಯವನ್ನು ಹಿಗ್ಗಿಸಿದರು. ಅವರ ಹೃದಯ ಹೆಣ್ಣಿನ ಮಿಡಿತವಾಗಿತ್ತು. ಅವರು ತಾಯಿ ಅಂಬವ್ವನನ್ನು ಕಳೆದುಕೊಂಡು; ಹೆಣ್ಣು ತನ್ನ ತವರುಮನೆಯಲ್ಲಿ ತಾಯಿ ಇಲ್ಲದನ್ನು ನೆನಪಿಸಿಕೊಂಡು ವ್ಯಥೆಪಟ್ಟಂತೆ ಕಳವಳಗೊಳ್ಳುತ್ತಿದ್ದರು.

ಆ ಭಾವವನ್ನು 'ತಾಯಿ ಕಾಣದ ಜೀವ ತಾವೂರಿ ಬಾವೂರಿ' ಎಂದು ಸಖೀಗೀತದಲ್ಲಿ ನೆನೆದಿದ್ದಾರೆ. 'ತಾವೂರಿ ಬಾವೂರಿ' ಜೋಡಿ ಪದವು ಕಳವಳ, ಅಸ್ವಾಸ್ಥ್ಯ ಅರ್ಥವನ್ನು ಹೊಂದಿದೆ. ಅದು ತಾಯಿ ಇಲ್ಲದನ್ನು ನೆನೆದು ಎಲ್ಲ ನೋವನ್ನು ಮಡುಗಟ್ಟಿಕೊಂಡು ಹೊಮ್ಮಿ ಬಂದ ಪದವಾಗಿದೆ.

ಹಳ್ಳಿಯ ಮುಗ್ಧಹೆಣ್ಣು ತನ್ನ ತಾಯಿಯ ಸಾವನ್ನು ದೂರವಾಗಿಸಿಕೊಳ್ಳುವುದು ತನ್ನ ಮುದ್ದು ಕಂದನ ನಗುನಲಿವಿನಲ್ಲಿ. ಅದೇ ರೀತಿ, ಬೇಂದ್ರೆ ಅವರು ತನ್ನ ತಾಯಿಯ ಸಾವನ್ನು ಮರೆಯಲು ಹಾಡಿದ್ದಾರೆ: 'ಆಡಿ ಬಾ ಎನಕಂದ'. ಅದು ಗರತಿ ತನ್ನ ಮಗುವನ್ನು ಕುರಿತು ಹಾಡಿದ ನುಡಿ. ಜೀವನದ ಚಲನಶೀಲತೆಯಲ್ಲಿ ಅದು ಮತ್ತೆ ವಾತ್ಸಲ್ಯವನ್ನು ತನ್ನಲ್ಲಿ ಮೂಡಿಸುವ ಬೇರೊಂದು ತಂತಿಯಾಗಿದೆ.

---

## ಹಳವಂಡ

**ಹಳವಂಡ ಕನಸನ್ನು ಕಂಡವನು ನೆನೆನೆನೆಸಿ/ ಯಾಕೇನೊ ತಬ್ಬಿಬ್ಬಲಾಗುವೊಲೆ/ ಎದೆ ಹೊಕ್ಕು ಕಂಡರೂ ತಳ ಕಾಣದಾಗಲು/ ಕಂಗೆಟ್ಟು ಮನ ತಣ್ಣಗಾಗುತಿರೆ(ಸಾಲು:205, 206, 207, 208)**

*ಆದರ್ಶದ ಕಲ್ಪನೆಯಲ್ಲಿ ವಿಹರಿಸುತ್ತಿದ್ದ ಬೇಂದ್ರೆ ಅವರಿಗೆ ನಿರುದ್ಯೋಗದ ಕಾರಣ ತಾತ್ಕಾಲಿಕವಾಗಿ ಶಿಕ್ಷಕನ ಕೆಲಸ ಸಿಕ್ಕಿದರೂ, ಸಿಗುತ್ತಿದ್ದ ಕಡಿಮೆ ಸಂಬಳದಲ್ಲಿ ಸಂಸಾರ ನಿರ್ವಹಣೆ ತುಂಬಾ ಕಷ್ಟಕರವಾಗಿತ್ತು. ದುರ್ಬರ ಕ್ಷಣಗಳು ಅವರನ್ನು ಸದಾ ಕಾಡುತ್ತಿದ್ದವು. ಅವರನ್ನು 'ಹಳವಂಡ ಕನಸು' ತುಂಬಾ ಜಗ್ಗಾಡುತ್ತಿತ್ತು. 'ಹಗಲು ಮನಸಿನಲ್ಲಿ ಬಂದು ಹೋದದ್ದೇ ರಾತ್ರಿ ಕನಸಿನಲ್ಲಿ ವಿಕಾರವಾಗಿಯೂ ವಿಪರೀತವಾಗಿಯೂ ಬಂದರೆ ಅದು ಹಳವಂಡ ಕನಸು' ಎಂದು ಆ ಬಗೆಯ ಕನಸಿನ ವಿವರವನ್ನು ಅವರು 'ವಿಚಾರ ಮಂಜರಿ'ಯಲ್ಲಿ ತಿಳಿಸಿದ್ದಾರೆ. ಅದು ತಳಮಳವನ್ನುಂಟುಮಾಡುವ ಭ್ರಾಂತಿ; ಭ್ರಾಮಕ ಸ್ವಪ್ನ. ಅದು ಅವರನ್ನು ತಬ್ಬಿಬ್ಬಾಗಿಸಿ, ಪರಿಹಾರ ಎಂಬುದು ಸಿಗದ ಸ್ಥಿತಿಯಿಂದ ಮನಸ್ಸು ತಣ್ಣಗಾಗುತ್ತಿತ್ತು ಎಂಬ ಆಂತರಿಕ ತುಮುಲವನ್ನು ಕಾವ್ಯದಲ್ಲಿ ವ್ಯಕ್ತಪಡಿಸಿದ್ದಾರೆ.

ಮಾದರಿ ಬದುಕಿನ ಕನಸುಗಳು ಮತ್ತು ಸಂಸಾರದ ತಾಪತ್ರಯಗಳು ಮೇಳೈಸದ, ಸಹಿಸಲು ಅಸಾಧ್ಯವಾದ ಬದುಕಿನ ಗತಿಗೆ ಸಮರ್ಥ ಪ್ರತಿಮೆಯಾಗಿದೆ 'ಹಳವಂಡ'.

ಅವರು ಆತ್ಮಶೋಧಕ್ಕೆ ತೊಡಗಿದರೂ ಸಮಸ್ಯೆ ಹಾಗೇ ಉಳಿದಿದೆ. ಅದರ ಮೂಲ ಕಾಣುತ್ತಿಲ್ಲ. ಅದನ್ನು ಅವರು 'ತಳ ಕಾಣದು' ಎಂಬ ನುಡಿಗಟ್ಟಿನಲ್ಲಿ ನೀಡಿದ್ದಾರೆ. ಆ ಸಮಸ್ಯೆಯ ಮೂಲ/ತಳ ಕಂಡಾಗ ಪರಿಹರಿಸಬಹುದು ಎಂಬ ಭಾವ ಆ ನುಡಿಯ ಆಂತರ್ಯದಲ್ಲಿದೆ. ಅದರಿಂದ ಕಂಗೆಟ್ಟ ಮನಸ್ಸು ತಣ್ಣಗಾಗಿದೆ ಎಂದು 'ಹಳವಂಡ'ದ ಎಲ್ಲ ಲಕ್ಷಣಗಳನ್ನು 'ತಳಕಾಣದು' ನುಡಿಗಟ್ಟಿನ ಮೂಲಕ ಸಮರ್ಥವಾಗಿ ಪ್ರಕಟಿಸಿದ್ದಾರೆ. ಇದೊಂದು ನೋವಿನ ಜಂಜಡಕ್ಕೆ ಸಿಕ್ಕಿದ ವ್ಯಕ್ತಿಯ ಮನೋವಿಶ್ಲೇಷಣಾತ್ಮಕ ಕಾವ್ಯ.

---

**ಒಳಸೂತ್ರ**

**ಜನುಮಕು ಮರಣಕು ಒಳಸೂತ್ರ ಇರುವದ/ ಕಂಡಾಗ ಇತಿಮಿತಿಯಾಯ್ತೆನಗೆ. (ಸಾಲು:213,214)**

: ಒಳಗಿನ ಸಂಬಂಧ; ಅಂತರಂಗ ಸಂಬಂಧ.

---

**ಗುಳೆಏಳು**

**ಸುಖ ತಾನು ಬರುವಾಗ ಗುಳೆ ಎತ್ತಿ ಬರುವುದು/ ಒಂದಲ್ಲ ಎರಡಲ್ಲ, ಪರಿವಾರವೆ (ಸಾಲು: 225,226)**

: ವಲಸೆಹೋಗು; ಗಂಟು ಮೂಟೆ ಕಟ್ಟಿಕೊಂಡು ಹೊರಡು.

---

**ಅವರಾತ್ರಿ**

**ಎಳ್ಳ ಅಮಾಸಿಗೆ ಎಳ್ಳಷ್ಟು, ಅವರೆಯ/ ಕಾಳಷ್ಟು ಬೆಳೆದಿತ್ತು ಅವರಾತ್ರಿಗೆ (ಸಾಲು: 289–290)**

*ಚಳಿಗಾಲ ಕಳೆದು ಬೇಸಿಗೆ ಪ್ರಾರಂಭವಾಗುವ ತೀವ್ರತೆಯನ್ನು ಬೇಂದ್ರೆಯವರು ಎಳ್ಳ ಅಮಾಸಿ ಮತ್ತು ಅವರಾತ್ರಿಯ ಕಾಲದಲ್ಲಿಯ ಎಳ್ಳು ಮತ್ತು ಅವರೆಯ ಪ್ರತಿಮೆಗಳಲ್ಲಿ ಚಿತ್ರಿಸಿದ್ದಾರೆ. 'ಅವರಾತ್ರಿ'ಯು ಮಾಘಮಾಸದ ಅಮಾವಾಸ್ಯೆ. ಅದನ್ನು ಅಮೃತ ಅಮಾವಾಸ್ಯೆ ಎಂದೂ ಕರೆಯುವರು.

---

## ಬಾಳದ ತಂಪು

**ಬಾಳದ ತಂಪಿನ ಕಪ್ಪುರಗಂಪಿನ/ ನೀರೆ ಜೀವನವೀಗವೆನಿಸುತಿದೇ (ಸಾಲು: 309–310)**

*ಬಾಳ ಒಂದು ಬಗೆಯ ಸುಗಂಧದ ಬೇರು. ಅದನ್ನು ಮುಡಿವಾಳ, ಲಾಮಂಚ ಎಂದೂ ಕರೆಯುತ್ತಾರೆ. ಅದು A Kind of perfume or fragrant grass. ಕುದಿಯುವ ನೀರಿಗೆ ಬಾಳದ ಬೇರನ್ನು ಹಾಕಿ ಕುದಿಸಿ ಇಳಿಸಬೇಕು. ನೀರು ತಣ್ಣಗಾದ ನಂತರ ಕುಡಿದರೆ ಅದು ದೇಹಕ್ಕೆ ತಂಪನ್ನು ಉಂಟುಮಾಡುತ್ತದೆ. ಕಂಪು ಸಹಜವಾಗಿ ಅದರ ಜೊತೆಗೂಡಿ ಆಹ್ಲಾದವನ್ನುಂಟುಮಾಡುತ್ತದೆ.

'ಬಾಳ', 'ಕಪ್ಪುರ'ದ ಪ್ರತಿಮೆಗಳಿಂದ ಕವಿಯು ಪತ್ನಿ ತನ್ನ ತನುಮನದಲ್ಲಿ ಉಂಟುಮಾಡುವ ತಂಪು ಕಂಪನ್ನು ವರ್ಣಿಸಿರುವ ರೀತಿ ಅನನ್ಯವಾಗಿದೆ.

'ತಿಂಗಳ ಬೆಳಕ ಹೊಂಗೆಳತಿ'(ಗರಿ) ಸಖಿಯನ್ನು 'ನೀರೆ ಜೀವನವೀಗ'–ಚೈತನ್ಯವೀಗ ಎಂದು ಅನಿಸುವುದನ್ನು ಮುಕ್ತವಾಗಿ ವ್ಯಕ್ತಪಡಿಸಿರುವುದು ದಾಂಪತ್ಯದ ಸವಿ, ಪೋಷಕ ಗುಣಗಳ ದಿವ್ಯಾನುಭವ. ನೀರಿಗೆ ಇನ್ನೊಂದು ಹೆಸರು ಜೀವನ. ದಾಂಪತ್ಯದಲ್ಲಿ ನೀರೆ–ಪತ್ನಿಯೇ ಜೀವನದ್ರವ್ಯ.

***

ಬಡತನದಲ್ಲಿ ಜೀವನದೂಡುವಾಗ ಅದೇ ಕಾರಣವಾಗಿ ದಂಪತಿಗಳಲ್ಲಿ ಮಾತು ಮಾತು ಬೆಳೆದು ವಿರಸ ಮೂಡುತ್ತಿತ್ತು. ಆ ಬಾಳ ಬೇಸಗೆಯಲ್ಲೂ ಸಖಿ ತನ್ನ ಸಖನಿಗೆ ಬಾಳದ ತಂಪು, ಕಂಪು ಆಗಿದ್ದು ಮಂಗಲವಾಗಲಿ ಎಂದು ಆಶಿಸುತ್ತಿದ್ದಳು.

'ತಂಪು ತಣ್ಣಿಸುತಿರಲಿ ಕಂಪು ಕಮ್ಮಯಿಸಲಿ/ ಬಾಳದ ಬೇರಂತೆ ಬೇಸಿಗೆಗು/ ನಿಮ್ಮ ಜೀವನದಲ್ಲಿ ಮಂಗಲವಾಗಲಿ/ ಎಂದೆಂದು' (ಸಖೀಗೀತ–ಸಾಲು:833–836)

ಕಮ್ಮಯಿಸು: ಸುಗಂಧವನ್ನು ಬೀರು.

---

## ಚಿಗುರು ಪ್ರಾಯ

**ಮಲಮಲ ಎನ್ನುವ ಮಲ್ಲಿಗೆಯಂದದಿ/ ಚಿಗುರು–ಪ್ರಾಯದ ಮನ ಮಲರುತಿದೆ(ಸಾಲು:327,328)**

: ಎಳೆಯ ಪ್ರಾಯ.

---

## ತೊರೆಬಿಡು

**ಮೃಗಶಿರದ ಮಂಚಕೆ ಚಂದಿರ ಬರುವಾಗ/ ಚಂದ್ರಿಕೆಯ ವಾತ್ಸಲ್ಯ ತೊರೆಬಿಟ್ಟಿತ್ತು(ಸಾಲು:371,372)**

:(ಮೊಲೆತುಂಬಿ) ಹಾಲನ್ನು ಸುರಿಸು.

***

**ಆತ್ಮಾನುಬಂಧ ಆನಂದದಿಂದ ತೊರೆಬಿಟ್ಟು ತುಟಿಗೆ ಚಿಮ್ಮೆ(ಮುಕ್ತಕಂಠ: ಅಮೃತಾನುಭವ)**

---

## ಹಂಪುಗಾಲ

**ಲೋಕದ ಅನ್ನವು ಲೋಕದಂತೆಯೆ ತಾನು/ ಹಂಪುಗಾಲದ ಬೆಳೆಯು ಹಾಲುಂಡಿತ್ತು(ಸಾಲು:373,374)**

: ಅದ್ದೂರಿಯ ಕಾಲ; ವೈಭವದ ಸಮಯ.

---

## ಹೊಸ್ತಿಲ ಹುಣ್ಣಿವೆ, ಬನದ ಹುಣ್ಣಿವೆ

**ಹೊಸ್ತಿಲ ಹುಣ್ಣಿವೆಗೆ ಹೊಸ್ತಿಲ ನಡುಗಿತ್ತು/ ಬನದ ಹುಣ್ಣಿವೆಗೆಲ್ಲ ಬನ ನಡುಗಿದೆ. (ಸಾಲು:385,386)**

: ಮಾರ್ಗಶೀರ್ಷ ಮಾಸದ ಹುಣ್ಣಿಮೆ; ದೇವತೆಗಳ ಆಗಮನಕ್ಕಾಗಿ ಹೊಸ್ತಿಲನ್ನು ಪೂಜೆಮಾಡುವ ದಿನ.

: ಪುಷ್ಯಮಾಸದ 15ನೇಯ ತಿಥಿ ಬನದ ಹುಣ್ಣಿವೆ. ಬನಶಂಕರಿಯೇ ಈ ಹಬ್ಬದ ಅಧಿದೇವತೆ.

---

## ಕಂಕ, ವಿಶೃಂಖಲ

**ಕಂಕ ವಿಶೃಂಖಲ ಬಿಂಕದ ಬೆನ್ನೇರಿ/ ಬಾನೆಲ್ಲ ತಾನೊಂದೆ ಆಳುವೊಲೆ (ಸಾಲು: 393,394)**

:ಒಂದು ಜಾತಿಯ ಹದ್ದು;ರಣಹದ್ದು.

: ಸರಪಣಿಯಿಂದ ಕಟ್ಟಿಲ್ಲದ; ಸಂಕೊಲೆಯಿಂದ ಬಂಧಿತವಲ್ಲದ (ಸ್ವತಂತ್ರ)

*ಜಗತ್ತಿನ ಸೃಷ್ಟಿಕ್ರಿಯೆಯಲ್ಲಿ ಗಂಡು ತಾನು ಅಪ್ರತಿಮ ಎಂದುಕೊಂಡರೂ ಏಕಾಕಿಯಾಗಿರಲು ಸಾಧ್ಯವಿಲ್ಲ. ಆ ಗಂಡು ಕೆಳದಿಯ ಕೆಳೆ ಬಯಸಿ ಉಲಿದುಲಿದು ನಲಿ ನಲಿಯುವನು ಎಂಬುದನ್ನು 'ಕಂಕ' ಪ್ರತಿಮೆಯಲ್ಲಿ ಬೇಂದ್ರೆ ಅವರು ನೀಡಿದ್ದಾರೆ.

'ಕಂಕ'ವು ಹದ್ದು, ನಾರಾಯಣೀ ಪಕ್ಷಿ. ಅದು ತಾನು ತಡೆಯಿಲ್ಲದ, ನಿರ್ಬಂಧ ಬಿಂಕದಲ್ಲಿ ಆಕಾಶವೆಲ್ಲವನ್ನು ತಾನೊಂದೇ ಆಳುವಂತೆ ಬೀಗುತ್ತಾ ಹಾರುತ್ತಿರುತ್ತದೆ. ತೇಲುತ್ತ, ಏರುತ್ತ ಸಾಗುತ್ತಿರಲು ಅದಕ್ಕೆ ಏಕಾಕಿತನ ಬೇಸರವಾಗಿ ಕೆಳೆದಿಯ ಕೆಳೆ ಬಯಸಿ, ಕರೆಯುತ್ತಾ ಉಲಿಯುತ್ತದೆ.

---

**ಆಕಾಶಪುಷ್ಪ**

**ಆಕಾಶಪುಷ್ಪವು ಅರಳಿತ್ತು ಹೊರಳಿತ್ತು/ ತೆರಳಿದ ದಿಟ್ಟಿಯು ಒಂದು ಕಡೆ (ಸಾಲು:399, 400)**

: ಅತ್ಯಂತ ಅಸಂಭವವಾದ ವಸ್ತು, ಗಗನ ಕುಸುಮ.

---

**ತಾಲಮಾನ**

**ಕಾಲಮಾನದ ಹಾಗೆ ತಾಲಮಾನವ ಪ/ ಲ್ಲಟಿಸುತ್ತ ಹೆಜ್ಜೆಯ ಹಾಕುವೊಲು (ಸಾಲು:435, 436)**

: (ಸಂಗೀತ) ಸಂಗೀತದಲ್ಲಿ ಕಾಲಗಣನೆ. ಹಾಡುವಾಗ ಕಾಲ ಪ್ರಮಾಣವನ್ನು ಕೈಯಿಂದ ಹೊಡೆದು ತೋರಿಸುವುದಕ್ಕೆ ತಾಳ(ಲ)ವೆಂದು ಹೆಸರು. ತಕಾರಕ್ಕೆ ಶಂಕರ ಅಧಿದೇವತೆ. ಲಕಾರಕ್ಕೆ ಪಾರ್ವತಿ ಅಧಿದೇವತೆ. ಇವರಿಬ್ಬರ ಸಂಯೋಗದಿಂದ ತಾಲ(ಳ) ಪದ ಉಂಟಾಗಿದೆ.

---

**ಚಿತ್ರಕ ಶಕ್ತಿ**

**ನನ್ನ ಚಿತ್ರಕ-ಶಕ್ತಿ ಉತ್ಪ್ರೇಕ್ಷೆಯನ್ನೇರಿ/ ಬಣ್ಣ ಬಣ್ಣದ ಬಣ್ಣನೆಗೆ ಒಲೆದಿತು. (ಸಾಲು: 443, 444)**

: ಚಿತ್ರವನ್ನು ಕಲ್ಪನೆ ಮಾಡಿಕೊಳ್ಳುವ ಶಕ್ತಿ; ಕಲ್ಪನಾ ಶಕ್ತಿ.

---

**ಪಾರವಾರ/ಪಾರಾವಾರ**

**ಅಪರಂಪಾರದ ಪಾರವಾರವು ಕೂಡ/ ಎದೆಯ ತೆರೆತೆರೆ ತೆರೆದು ಹಾರುವುದು/ ಎಷ್ಟಾಳವಿದ್ದರು ಗಂಭೀರ ಕಾಸಾರ/ ಸೂರ್ಯ ಕಿರಣಕೆ ತಳ ತೋರುವುದು (ಸಾಲು:489, 490, 491, 492)**

: 1. ನದಿ, ಸಮುದ್ರ ಮೊದಲಾದವುಗಳ ಎರಡು ದಂಡೆಗಳು, ತೀರಗಳು.

2. ಸಮುದ್ರ; ಕಡಲು.

*ಆ ಪಾರವಾರ ಅಪರಂಪಾರವಾದುದು. ಅರ್ಥಾತ್ ಅನಂತವಾದುದು. ಅದು ತನ್ನ ಎದೆ ತೆರೆದು ಉಕ್ಕುವುದು. ಅವರ ಪತ್ನಿ ಸಂಸಾರದಲ್ಲಿ ಬೆಂದು ನೊಂದು ಮೌನ ತಾಳಿದ್ದು, ಕವಿಗೆ ಆಕೆಯ ಮೌನ ಮನದ ತಳ ಕಾಣಲು ಆಗುತ್ತಿಲ್ಲ. ಒಂದು ಸರೋವರ ಎಷ್ಟೇ ಆಳವಾಗಿದ್ದರೂ ಸೂರ್ಯಕಿರಣಕ್ಕೆ ಅದರ ತಳ ಕಾಣಿಸುತ್ತದೆ ಆದರೆ, ತನ್ನ ಸಖಿಯ ಸಮುದ್ರದಂತಹ ಎದೆಯ ಬಡಿತದಲ್ಲಿ ಅದರ ತಳ ನೋವಿನಮೂಲ ಕಾಣದಾಗಿದೆ. ಎಂದು ಆಕೆಯ ಮೌನವನ್ನು ಸಮುದ್ರ ಮತ್ತು ಸರೋವದ ಹೋಲಿಕೆಯಲ್ಲಿ ಬೇಂದ್ರೆ ಚಿತ್ರಿಸಿದ್ದಾರೆ.

ನಿರುದ್ಯೋಗ ಕಾರಣವಾಗಿ ಬಡತನ ತಂದ ನೋವು ಅವರ ದಾಂಪತ್ಯ ಜೀವನವನ್ನು ಅಲುಗಾಡಿಸಿದೆ. ಕವಿ ಪತ್ನಿ ಮೌನಿಯಾದರೂ ಕವಿ ಹಾಗೆ ಇರಲಾರನಷ್ಟೆ. ತನ್ನನ್ನು ಆವರಿಸಿರುವ ದುಃಖವನ್ನು ಕವಿ ಬೇಂದ್ರೆ ಮತ್ತೊಂದು ಸಂದರ್ಭದಲ್ಲಿ ಹೀಗೆ ಹೇಳಿಕೊಂಡಿದ್ದಾರೆ.

'ತಲೆಗೆ ಭಾರವಾಗಿಹುದು ಅಪರಂಪಾರ/ ವಾದ ದುಃಖದ ರಾಶಿ, ಬೆಂಡು ಹೂ ಬಾಸಿಂಗ/ ದಂತೆ ತೋರಿಕೆಯಿಂದ ಮೆರೆದು ಹಣೆಯೊತ್ತುವದು (ಉಯ್ಯಾಲೆ:ಪತಿತ)

---

**ಗುಂಗುಣಿಸು**

**ಮನದೆಲ್ಲ ಮಾತನ್ನು ಮೌನದಿ ನೆನೆವಂತೆ/ ಎಳೆಯೆಣಿಸಿ ಗುಂಗುಣಿಸಿ ಬಿಡಿಸುವುದು. (ಸಾಲು:515, 516)**

: ತನ್ನಷ್ಟಕ್ಕೆ ಮೆಲ್ಲಗೆ ಹಾಡಿಕೊಳ್ಳು.

---

**ಹೂವಿಸು, ಪಣ್ಣಿಸು**

**ಚಿಗುರಿಸಿ ಹೂವಿಸಿ ಕಾಯಿಸಿ ಪಣ್ಣಿಸಿ (ಸಾಲು:517)**

: ಹೂವಾಗುವಂತೆ ಮಾಡು.

: ಹಣ್ಣಾಗುವಂತೆ ಮಾಡು; ಪಕ್ವ ಫಲವನ್ನಾಗಿ ಮಾಡು.

---

## ಭೋರಂಗ

**ಅಕ್ಕೆಕ್ಕಿ ಭೋರಂಗ ಆಡಿಸಲು ಬೇಕೆಷ್ಟು?/ ನೂಲಿನ ಎಳೆಯೊಂದು ಸಾಕಿಲ್ಲವೇ? (ಸಾಲು: 529, 530)**

: ಬೋರಂಟಿ; ಹಾರುವಾಗ ಶಬ್ದ ಮಾಡುವ, ಬೇರೆ ಬೇರೆ ಆಕಾರದ ಒಂದು ಬಗೆಯ ಗಾಳಿಪಟ.

*ಬೇಂದ್ರೆ ಅವರು ತಮ್ಮ ಕಾವ್ಯದಲ್ಲಿ ಪ್ರಯೋಗಿಸಿರುವ ದೇಸಿ ಪದಗಳು ಅರ್ಥವಾದರೆ ಅವರ ಕಾವ್ಯ ರಚನಾ ಗಾರುಡಿ ಗೊತ್ತಾದಂತೆಯೇ. ನನ್ನಲ್ಲಿರುವ ಸಮಾಜ ಪುಸ್ತಕಾಲಯ ಧಾರವಾಡ ಅವರು 1975ರಲ್ಲಿ ಪ್ರಕಟಿಸಿರುವ ಷಷ್ಠಮಾವೃತ್ತಿಯ 'ಸಖೀಗೀತ' ಕಾವ್ಯದ 529ನೇ ಸಾಲಿನಲ್ಲಿ 'ಅಕ್ಕೆಕ್ಕಿ ಭೋರಂಗಿ ಆಡಿಸಲು ಬೇಕೆಷ್ಟು? ನೂಲಿನ ಎಳೆಯೊಂದು ಸಾಕಿಲ್ಲವೇ?' ಎಂಬಲ್ಲಿನ ಭೋರಂಗಿಯ ಪದದ ಅರ್ಥ ತಿಳಿಯಲು ಪ್ರಯತ್ನಪಟ್ಟೆ. ಭೋರಂಗಿ ಎಂದರೆ ಜೀರುಂಡೆ. ಅದನ್ನು ಆಡಿಸಿ ಹಿಂಸೆಪಡಿಸುವ ಭಾವ ಅಲ್ಲಿ ಕಾಣಲಿಲ್ಲ. ಅನಂತರದ ಸಾಲು 'ಕಣ್ಣನರಳಿಸೆ ಒಂದು ಕಿರಣವು ಸಾಕಿದೆ' ಎಂಬುದು ಜೀವನ ಸಂತಸದ ಕ್ಷಣ ಸೂಚಿಸುತ್ತದೆ. ಈ ಆಭಾಸ ವ್ಯಕ್ತವಾದುದರಿಂದ ಯಾವುದು ಸರಿ ಎಂದು ಪರಿಶೀಲಿಸಲು ವರಕವಿ ದ. ರಾ. ಬೇಂದ್ರೆ ಸಂಶೋಧನಾ ಸಂಸ್ಥೆ 2003ರಲ್ಲಿ ಪ್ರಕಟಿಸಿರುವ ಅಂಬಿಕಾತನಯದತ್ತರ ಸಮಗ್ರ ಕಾವ್ಯ ಸಂಪುಟ-3ನ್ನು ನೋಡಿದೆ. ಅದರ ಪುಟ ಸಂಖ್ಯೆ 108ರ ಸಖೀಗೀತದ ಭಾಗ 23ರಲ್ಲಿ 'ಅಕ್ಕೆಕ್ಕಿ ಭೋರಂಗಿ ಆಡಿಸಲು ಬೇಕೆಷ್ಟು?' ಎಂದು ಮುದ್ರಿತವಾಗಿರುವುದನ್ನು ಕಂಡೆ. ಈ ಸಮಸ್ಯೆಯನ್ನು ನನ್ನ ಗುರುಗಳಾದ ಕೆ. ಅನಂತರಾಮು ಅವರಿಗೆ ತಿಳಿಸಿದೆ. ಅವರು 'ಇತ್ತೀಚಿನ ಬೇಂದ್ರೆ ಕಾವ್ಯದ ಮುದ್ರಣಗಳಲ್ಲಿ ಮುದ್ರಾರಾಕ್ಷಸನ ಹಾವಳಿ ಜಾಸ್ತಿಯಾಗಿದೆ. ನೀವು ಮೊದಲ ಅಥವಾ ಎರಡನೆಯ ಮುದ್ರಣ ನೋಡಿ ಅನಂತರ ಈ ಪದ ಕುರಿತು ವಿಚಾರ ಮಾಡೋಣ' ಎಂದು ಹೇಳಿದರು. ಆ ಪ್ರತಿಗಾಗಿ ಹುಡುಕುತ್ತಾ ಪಿ.ವಿ ನಾರಾಯಣ ಅವರನ್ನು ಕಂಡೆ. ಅವರು ತುಂಬಾ ಆಸಕ್ತಿ ವಹಿಸಿ, ಮಾಧವನ್ ಸನ್ಸ್ ಬೆಂಗಳೂರು ಪ್ರಕಾಶಿಸಿರುವ 1946ರ 2ನೇ ಮುದ್ರಣದ ಪ್ರತಿಯನ್ನು ಒದಗಿಸಿದರು. ಅದರ ಪುಟ ಸಂಖ್ಯೆ 87ರಲ್ಲಿ 'ಅಕ್ಕೆಕ್ಕಿ ಭೋರಂಗ ಆಡಿಸಲು ಬೇಕೆಷ್ಟು?' ಎಂದು ಮುದ್ರಿತವಾಗಿತ್ತು. 'ಭೋರಂಗಿ' ಅಲ್ಲ ಎಂದು ನನ್ನ ಸಂಶಯ ದೃಢಪಟ್ಟಿದ್ದಕ್ಕೆ ಸಂತೋಷವಾಯಿತು. 'ಭೋರಂಗ' ಪದದ ಅರ್ಥ ಹುಡುಕಲು ಹೊರಟೆ.

'ಭೋರಂಗ'ದ ಮೊದಲು ಬೇಂದ್ರೆ ಅವರು 'ಅಕ್ಕೆಕ್ಕಿ' ಪದ ಬಳಸಿದ್ದಾರೆ. 'ಅಕ್ಕೆಕ್ಕಿ'ಯ ಮೂಲ ರೂಪ ಅಣ್ಕೆ(ಅಣ್+ಕೆ). ಅಣ್ ಎಂದರೆ ಅಂಟು, ಅದು ಅಂಟನ್ನು ಸವರಿ ಮಾಡಿದ ಭೋರಂಗ. ಹಾರುವಾಗ ಶಬ್ದ ಮಾಡುವ ಒಂದು ಬಗೆಯ ಗಾಳಿಪಟ. ಈಗ ಬೇಂದ್ರೆ ಕಾವ್ಯ ಅರ್ಥವಾಯಿತು.

ಅಕ್ಕೆಕ್ಕಿ ಭೋರಂಗ ಆಡಿಸಲು ಬೇಕೆಷ್ಟು?/ ನೂಲಿನ ಎಳೆಯೊಂದು ಸಾಕಿಲ್ಲವೆ?'.

ಸಶಬ್ದ ಗಾಳಿಪಟ ಆಡಿಸುವುದಕ್ಕೆ ಒಂದು ನೂಲಿನ ಎಳೆ ಸಾಕು. ಕಣ್ಣನ್ನು ಅರಳಿಸಲು ಕಣ್ಣಿನ ಮೇಲೆ ಪ್ರತಿಫಲಿಸಲು ಒಂದು ಕಿರಣ ಸಾಕು. ಹಾಗೆ ಜೀವದ ಆಳದಿಂದ ಬಂದ ಒಂದು ನುಡಿ ಜೀವನವನ್ನು ಸಾಕಿದೆ ಎನ್ನುತ್ತಾರೆ ಬೇಂದ್ರೆ.

---

## ಸೊಪ್ಪು-ಸವದಿ

**ಒಣ ಎಲೆ ಹುಡಿ-ಮಣ್ಣು ಸೊಪ್ಪು-ಸವದಿಗಳೆಲ್ಲ/ ಮೋಡಗಳಾಡುವ ಎಡೆ ಕಂಡವು. (ಸಾಲು: 555, 556)**

: ಎಲೆ, ತರಗು, ಬೇರು ಮುಂತಾದವು.

---

## ನಚ್ಚಿಗೆ

ಬೆಳಕಿನ ಕೆಚ್ಚನು ಕತ್ತಲೆಯ ಕಿಚ್ಚನು/ ಮುಗುದದ ಗವಿಯಲ್ಲಿ ನೆರೆ ಕಂಡೆವು/ ಹುಚ್ಚಾಗಿ ನಕ್ಕೆವು ನಚ್ಚಿಗೆ ಸಿಕ್ಕೆವು/ ನೆಚ್ಚಿಗೆಯಾತರದಿದೆ? ಎಂದೆವು (ಸಾಲು: 601 ರಿಂದ 604)

*ಧಾರವಾಡ ಸಮೀಪದ ಮುಗದ ಗ್ರಾಮದಲ್ಲಿ ಬ್ರಿಟಿಷರಿಂದ ನಜರಬಂಧಿಯಾಗಿ (1932) ವಾಸಿಸುವಾಗ ಬೇಂದ್ರೆ ಅವರು ಆತ್ಮಾವಲೋಕನಕ್ಕೆ ಒಳಗಾದರು. ಅವರ ಕುಟುಂಬವಿದ್ದ ಮನೆಯಲ್ಲಿನ ಜಂತಿಯಲ್ಲಿ ಹಾವುಗಳು ನೇತಾಡುತ್ತಿದ್ದವಂತೆ. ಅದಕ್ಕೆ ಗಾಬರಿಯಾಗದೆ ಸಮಾಧಾನವಾಗಿ ಬೇಂದ್ರೆ ಅವರು ಹೆಂಡತಿ ಮಕ್ಕಳಿಗೆ ಧೈರ್ಯ ಹೇಳುತ್ತಾ ಒಂದು ಸಹಜ ಸತ್ಯ ಮನನವಾಗುವಂತೆ ಮಾಡಿದ್ದಾರೆ. 'ಇದು ಸರ್ಪಗಳ ವಾಸಸ್ಥಳ. ನಾವು ಅವುಗಳಿರುವ ಜಾಗದಲ್ಲಿ ವಾಸ ಮಾಡಲು ಬಂದಾಗ ನಾವು ಅವುಗಳಿಗೆ ಹೊಂದಿಕೊಳ್ಳಬೇಕು. ಅವು ಏನೂ ಮಾಡುವುದಿಲ್ಲ'. ಅಲ್ಲಿರುವತನಕ ಹಾವುಗಳಿಂದ ಅವರಿಗೇನೂ ತೊಂದರೆಯಾಗಲಿಲ್ಲವಂತೆ. ವಾಮನ ಬೇಂದ್ರೆಯವರು ಮತ್ತು ನನ್ನ ಕುಟುಂಬ ಜೊತೆಯಾಗಿ ಒಮ್ಮೆ ಮುಗದ ಗ್ರಾಮಕ್ಕೆ, ಅಲ್ಲಿನ ಪ್ರೌಢಶಾಲೆಯಲ್ಲಿ ತಾರೀಖು 19-8-2000ದಂದು 'ಬೇಂದ್ರೆ ಗೀತಗಾಯನಸ್ಪರ್ಧೆ' ಹಮ್ಮಿಕೊಂಡು ಹೋಗಿದ್ದೆವು. ಆಗ ವಾಮನ ಬೇಂದ್ರೆ ಅವರು ಈ ಮೇಲಿನ ವಿಷಯವನ್ನು ತಿಳಿಸಿದರು.

ಆ ಘೋರ ದಿನಗಳನ್ನು ಬೇಂದ್ರೆ ಅವರು 'ಸಖೀಗೀತ' ಕಾವ್ಯದಲ್ಲಿ 'ಬೆಳಗಿನ ಕೆಚ್ಚನು ಕತ್ತಲೆಯ ಕಿಚ್ಚನು! ಮುಗದದ ಗವಿಯಲ್ಲಿ ನೆರೆ ಕಂಡೆವು' ಎಂದು ಹೇಳಿದ್ದಾರೆ. ಅಲ್ಲಿ ಅವರಿಗೆ ಆಸರೆಯಾಗಿದ್ದುದು ಆ ದಂಪತಿಗಳಲ್ಲಿದ್ದ ನಚ್ಚಿಗೆ ಪ್ರೀತಿ, ಮೆಚ್ಚು, ಮೋಹ. ಆದರೆ ಬ್ರಿಟಿಷರ ಕಾನೂನಿನಿಂದ ಬಿಡುಗಡೆ ಹೊಂದುವ ನೆಚ್ಚಿಗೆ ನಂಬಿಕೆ, ಭರವಸೆ ಅವರಲ್ಲಿ ಇರಲಿಲ್ಲ. ಹೀಗೆ, 'ನಚ್ಚಿಗೆ' ಮತ್ತ 'ನೆಚ್ಚಿಗೆ' ಪದಗಳನ್ನು ಒಂದೇ ಸಮಯದಲ್ಲಿ ಉಂಟಾದ ಭಿನ್ನಭಾವಗಳ ಅಭಿವ್ಯಕ್ತಿಗೆ ಸಮರ್ಥವಾಗಿ ಬಳಸಿದ್ದಾರೆ.

---

## ಹೆಕ್ಕಳಿಸು, ಜಕ್ಕಲಿಸು

**ಮಕ್ಕಳ ಮುಖದಲ್ಲಿ ಹೆಕ್ಕಳಿಸಿ ಹರಿಯುವ/ ಜೀವಕಳೆ ಮುಪ್ಪು ಜಕ್ಕುಲಿಸುತಿದೆ. (ಸಾಲು: 635, 636)**

: ಅಧಿಕವಾಗು; ಉಲ್ಬಣಿಸು.

: ಹಿಮ್ಮೆಟ್ಟಿಸು.

*ಬ್ರಿಟಿಷರಿಂದ ಸೆರೆಯಾಗಿ ಮುಗದ ಗ್ರಾಮದಲ್ಲಿ ನಜರಬಂಧಿಯಾಗಿದ್ದಾಗ ಅವರಿಗೆ ಜೀವನದ ಆಸೆ ಮುರುಟಿ ಹೋಗಿತ್ತು. ಆಗ ಅವರಿಗೆ ಆಶಯದ ಕಿರಣವೆಂದರೆ ಮಕ್ಕಳು ಮಾತ್ರವಾಗಿದ್ದರು. ಮಕ್ಕಳ ಮುಖದಲ್ಲಿ 'ಹೆಕ್ಕಳಿಸಿ' ಅತಿಶಯವಾಗಿ ಹರಿಯುವ ಜೀವಕಳೆ, ತನ್ನ ಮನದ ಮುಪ್ಪನ್ನು ಹಿಮ್ಮೆಟ್ಟಿಸಿತು ಎಂದು ಹೇಳಲು 'ಜಕ್ಕುಲಿಸುತಿದೆ' ಪದವನ್ನು ಪ್ರಯೋಗಿಸಿದ್ದಾರೆ.

---

## ಮೀಸಲ ನಗೆ

**ಕೂಸುಗಳು ಸೂಸುವ ಮೀಸಲ ನಗೆಯಲ್ಲಿ/ ಮಿಂದರು ಮಾಸಲು ಮನವುಳಿದಿರೆ (ಸಾಲು: 645, 646)**

*ಬೇಂದ್ರೆ ಅವರಿಗೆ ಮಕ್ಕಳೆಂದರೆ ದೇವರು ಕರುಣಿಸಿದ ಫಲ. ಅವರಿಗೆ ಮಕ್ಕಳ ನಗೆ 'ವಾತ್ಸಲ್ಯದ ಮಸ್ತಕ ಮಣಿ'. ಅವರಿಗೆ ಕೂಸುಗಳು ಸೂಸುವುದು 'ಮೀಸಲ ನಗೆ'/ಅಚ್ಚ, ಅಪ್ಪಟ ಮತ್ತು ಪವಿತ್ರವಾದ ನಗೆ. ಅಂತಹದರಲ್ಲಿ ಮಿಂದ ಮೇಲೆ ಎಲ್ಲ ಮನಸ್ಸಿನ ಮಾಸಲು, ಕೊಳೆ ಇನ್ನಿಲ್ಲದಂತೆ ತೊಳೆದುಹೋಗಬೇಕು. ತಂದೆ ತಾಯಿಗಳ ಮನಸ್ಸು ಪವಿತ್ರವಾಗಬೇಕು. ಹಾಗಾಗದೇ, ಮಾಸಲಾಗಿಯೇ ಉಳಿದಿದೆಯಲ್ಲ ಎಂದು ಬೇಂದ್ರೆ ಅವರು ವ್ಯಥೆಪಟ್ಟಿದ್ದಾರೆ.

---

## ಎದೆ ಮುಳುವು

**ನನ್ನ ಜೀವನದಲ್ಲಿ ಹೆಸರಲ್ಲೆ ನಿಂತಂಥ/ ಸಂತಾನ ಒಂದಿದೆ ಎದೆ-ಮುಳುವು (ಸಾಲು:711, 712)**

: ದುಃಖದ ಮೂಲ, ಸಂತಾಪದ ಕಾರಣ.

*ಬೇಂದ್ರೆ ಅವರ ಐದನೇ ಮಗು ಲಲಿತಾ ಹುಟ್ಟಿದ್ದು ಮತ್ತು ತೀರಿ ಹೋಗಿದ್ದು 1934ರಲ್ಲಿ. 'ನರಬಲಿ' ಕವನ ಬರೆದು ಹಿಂಡಲಗಾ ಜೈಲಿನಲ್ಲಿ ಸೆರೆವಾಸ ಅನುಭವಿಸಿದ್ದು 1932ರಲ್ಲಿ. ಬೇಂದ್ರೆ ಅವರಿಗೆ ಯಾರೂ ಕೆಲಸ ಕೊಡಬಾರದು ಎಂದು ಬ್ರಿಟಿಷರು ಆಜ್ಞೆ ಮಾಡಿದಾಗ ಅವರು ಎಂ.ಎ ಅಭ್ಯಾಸಕ್ಕಾಗಿ ಪೂನಾಕ್ಕೆ ಹೋದರು. ಅಲ್ಲಿ ಚಿಕ್ಕಪ್ಪ ಬಂಡೋಪಂಥರ ಮನೆಯಲ್ಲಿದ್ದರು. ಉದ್ಯೋಗವಿಲ್ಲದೆ ಎಲ್ಲದಕ್ಕೂ ಚಿಕ್ಕಪ್ಪನನ್ನೇ ಅವಲಂಬಿಸುವ ಬದುಕು ಅವರದಾಗಿತ್ತು. ಆದರ್ಶ ದೇಶಭಕ್ತ ಕವಿಯ ತುಂಬಾ ದುಃಖದ ದಿನಗಳವು. ಆಗ ಹುಟ್ಟಿದ ಮಗಳು ಲಲಿತಾ. ಬೇಂದ್ರೆ ಅವರಿಗೆ 'ಲಲಿತಾ' ದೈವದ ಆರಾಧನೆಯಂತೆ, ಕಾವ್ಯದ ಲಲಿತ ಭಾವವು ಪಂಚೇದ್ರಿಯಗಳಲ್ಲಿ ಹೊಮ್ಮುವ ಅನುಭವ. ಅಂತಹ ಹೆಸರನ್ನು ಕೂಸಿಗೆ ಇಟ್ಟು ಕಾಪಾಡಲಾಗದ ತನ್ನ ಅಸಹಾಯಕ ಸ್ಥಿತಿಯನ್ನು ಕುರಿತು ಬೇಂದ್ರೆ ರಚಿಸಿರುವ ಈ ಕಾವ್ಯ, ಕನ್ನಡ ಕಾವ್ಯ ಪರಂಪರೆಯಲ್ಲಿಯೇ ವಿಶಿಷ್ಟವಾದುದು. ಮಗಳನ್ನು ನೋಡಿಕೊಳ್ಳಲಾಗದ ಅಸಹಾಯಕ ಸ್ಥಿತಿ ಅವರನ್ನು ಎದೆಯ ಮುಳ್ಳಾಗಿ ಚುಚ್ಚುತ್ತಿತ್ತು ಎಂಬ ಅರ್ಥದಲ್ಲಿ 'ಎದೆ ಮುಳುವು' ಪದ ಬಳಕೆಯಾಗಿದೆ.

ಬೇಂದ್ರೆ ಒಬ್ಬ ಸತ್ಯದ ಆರಾಧಕ. ಅವರು ತಾನು ಸಾಂಸಾರಿಕ ಜವಾಬ್ದಾರಿ ನಿರ್ವಹಿಸಲಾಗದ ಅಸಹಾಯಕ ಪುರುಷ ಎಂಬ ನೋವಿಗೆ ಒಳಗಾಗಿದ್ದರು. ತನ್ನ ಪತ್ನಿ ಮಕ್ಕಳನ್ನು ಪೋಷಿಸಲಾಗದ, ಆರ್ಥಿಕ ಆಧಾರವಿಲ್ಲದ ವ್ಯಕ್ತಿ ಎಂಬ ಭಾವ ಅವರನ್ನು ತೀವ್ರವಾಗಿ ಕಾಡುತ್ತಿತ್ತು. ಪದವೀಧರನಾಗಿ, ಕವಿಯಾಗಿ, ಸಮಾಜದಲ್ಲಿ ಮಾನ್ಯತೆ ಪಡೆದ ವ್ಯಕ್ತಿಯಾಗಿದ್ದು; ತನ್ನ ಕುಟುಂಬಪೋಷಣೆ ಮಾಡಲಾಗದ, ಹುಟ್ಟಿದ ಮಗುವಿಗೆ ಹಾಲು-ಅನ್ನ ಒದಗಿಸಲಾಗದ ಹೀನಾಯ ಸ್ಥಿತಿಗೆ ತುಂಬಾ ನೊಂದು ಬೆಂದು ಹೋಗಿದ್ದರು. ಅದನ್ನು ಕಾವ್ಯವಾಗಿ ಹರಿಸಿದರು;

'ಹುಲ್ಲನಿತ್ತಾದರೂ ಸಲುಹಲಾರದಗೇಕೊ/ ಮಾಯೆ ಮಮತೆಯು? ಬಿಡಿಸಬರದ ಗಂಟು!/ ಕಾಯುವದದೆಂತು? ಸರಿ, ಸಾಯುವುದೆ ಮೇಲಾಯ್ತು/ ಕೊಲುವ ಯಮನಿಗು ಕೊಂಚ ಕರುಣೆಯುಂಟು (ಉಯ್ಯಾಲೆ: ಲಲಿತಾ)

ಕವಿಯ ಪೂರ್ಣ ಅಸಹಾಯಸ್ಥಿತಿ 'ಹುಲ್ಲನಿತ್ತಾದರೂ ಸಲುಹಲಾರದೆ' ನುಡಿಯಲ್ಲಿ ಮಡುಗಟ್ಟಿದೆ. ಅನ್ನವಿಲ್ಲದೆ ಸೊರಗಿದ ಬಾಣಂತಿ, ಹಾಲಿಲ್ಲದೆ ಉಳಿಯಲಾಗದ ಕೂಸು. ಹಣ ಮತ್ತು ಅನ್ನವನ್ನು ಹಿಡಿತದಲ್ಲಿಟ್ಟುಕೊಂಡಿರುವ ಶ್ರೀಮಂತರು ಮತ್ತು ಅದನ್ನು ಪೋಷಿಸುವ ಆಡಳಿತ ವ್ಯವಸ್ಥೆ ಸೃಷ್ಟಿಸುವ ದಾರುಣ ಸ್ಥಿತಿ. 'ಲಲಿತಾ' ಹೆಸರಿನ ಸಂತಾನ

ಅವರ ಎದೆಯಲ್ಲಿ ಚಿಟಿಕೆ ಮುಳ್ಳಾಡಿಸುತ್ತಿತ್ತು. ಅದು ಅವರಲ್ಲಿ ಉಳಿದುಹೋದ ಆಂತರಿಕ ವೇದನೆ.

---

## ಅಗ್ನಿದಿವ್ಯ

**ಜೀವದ ಪಣ ಸೋತು, ಅಗ್ನಿ ದಿವ್ಯದ ಮಾತು/ ನಾ ನೀನು ಆಡಿದ್ದು ನೆನಪಿದೆಯೇ? (ಸಾಲು:717, 718)**

*ಬೇಂದ್ರೆ ಅವರು ರಾಷ್ಟ್ರಪ್ರೇಮಿಗಳಾಗಿ ಒಂದು ದಿವ್ಯ ಆದರ್ಶಕ್ಕಾಗಿ ಬಾಳಿದವರು. ಅವರ ಜೀವ ಧ್ಯೇಯಪೂರ್ಣವಾಗಿತ್ತು. 'ಜೀವಪಣ' ಅರ್ಥಾತ್ ತಮ್ಮ ಜೀವನವನ್ನೇ ಪಣವಾಗಿಟ್ಟ ವರಕವಿ ಅವರು.

ಓರ್ವ ಸಾಧಾರಣ ಶಾಲಾ ಶಿಕ್ಷಕರಾಗಿದ್ದ ಬೇಂದ್ರೆ ಅವರು ರಾಷ್ಟ್ರಪ್ರೇಮಿಗಳಾಗಿದ್ದರು. ಯಾವುದೇ ಆಸೆ ಆಮಿಷಗಳಿಗೆ ಬಲಿಯಾಗದೆ ಜೀವವನ್ನು ಜಿದ್ದಿನಿಂದ ರಾಷ್ಟ್ರಾಭಿಮಾನದ ಸ್ಪರ್ಧೆಗೆ ಒಡ್ಡಿದ್ದರು. 'ಪಣ' ಪದವು ಒತ್ತೆ, ಪಂಥ ಎಂಬ ಅರ್ಥಗಳನ್ನು ಹೊಂದಿದೆ. ಕಾವ್ಯದಲ್ಲಿ ಈ ಪಣ ಪದವು ಅವೆಲ್ಲವನ್ನೂ ಒಳಗೊಂಡು 'ಜೀವಪಣ' ಎಂಬ ಭಾವನಾಮವಾಗಿ ಪ್ರಯೋಗವಾಗಿದೆ. ದೇಶಕ್ಕಾಗಿ ಒಡ್ಡಿಕೊಂಡ ಜೀವ ಅದಾಗಿದೆ. ನಿಶ್ಚಯ ಮನದ ಅಭಿವ್ಯಕ್ತಿ ಅಲ್ಲಿದೆ. ಅದು ಸೋತಾಗ ಆ ದಂಪತಿ ಅಗ್ನಿದಿವ್ಯದ ಮಾತಾಡಿದ್ದರು. ಅಗ್ನಿದಿವ್ಯ ಎಂಬುದು ಅಗ್ನಿಪರೀಕ್ಷೆ ಎಂಬ ಅರ್ಥವನ್ನು ಹೊಂದಿದೆ. ಜೀವದ ಜಂಜಾಟದಿಂದ ಬೇಸತ್ತ ಅವರ ಮನಸ್ಸು ಆತ್ಮಹತ್ಯೆಯ ವಿಚಾರ ಮಾಡಿತ್ತು ಎಂಬುದು ಇಲ್ಲಿ ಮುಖ್ಯ. ಅದನ್ನು ಕವಿ ಬೇಂದ್ರೆ ಅವರು ತಮ್ಮ ಅರ್ಧಾಂಗಿಯ ಹತ್ತಿರ ಹೇಳಿ ಅಂದಿನ ಬರ್ಬರ ದಿನಗಳನ್ನು ನೆನಪಿಸಿಕೊಂಡಿದ್ದಾರೆ.

---

## ಕುರುಡು ಗಾಜು

**ಆ ಕಣ್ಣು ಎಂದಾರೆ ಈ ಕಣ್ಣ ತಾಗಿದರೆ/ ಗೊಂಬಿ ಮೂಡದ ಕುರುಡು ಗಾಜಾಗಿರೆ (ಸಾಲು: 741, 742)**

:ಕಾಣಿಸದ ಗಾಜು; ಮಸುಕಾದ ಕನ್ನಡಿ.

---

## ಜೇವಡೆ

**ಜೀವನ ರಣರಂಗ ನಮಗದೆ ನವರಂಗ/ ಅಲ್ಲಿ ಸಾವಿನ ಸಂಗ ದಿನದಿನವು/ ಆ ಶ್ರುತಿಗೆ**

**ಜೀವಡೆವ ಪ್ರಾಣ-ಪ್ರಾಥಕೆ/ ಆ ಮಹಾತಾಲ ಭಾವದ ಲಯವು. (ಸಾಲು: 753 ರಿಂದ 756)**

*ಬಡತನ, ಸಂಕಟಗಳ ಮಧ್ಯೆ ಬೇಂದ್ರೆ ಅವರ ಜೀವನವೇ ಒಂದು ರಣರಂಗವಾಗಿತ್ತು. ಅದೇ ಅವರಿಗೆ ಪ್ರತಿದಿನ ಹೊಸ ರಂಗಶಾಲೆಯಾಗಿತ್ತು. ಅಲ್ಲಿ ಅವರು ಸಾವಿನ ಸಂಗದಲ್ಲಿ ದಿನ ದೂಡಬೇಕಾಗಿತ್ತು. ಅಂತಹ ಘೋರ ಜೀವನದಲ್ಲಿ ಪ್ರಾಣವೆಂಬ ಘನವಸ್ತು ಬಿಲ್ಲನ್ನು ಹೋರಾಟದ ಹಗ್ಗಕ್ಕೆ ಹೆದೆಏರಿಸಿ-ಜೀವಡೆದು, ಶ್ರುತಿ ಹಿಡಿಯುವುದು ಪ್ರತಿ ದಿನದ ರೀತಿ. ಅಂತಹ ಹೆಣಗಾಟದಲ್ಲಿ ನಾಶವಾಗುವುದು ಮನುಜರ ಒಳಗಿನ ಮಧುರ ಭಾವ, ತಾಲಗಳು! ಇದು ವ್ಯವಸ್ಥೆಯ ದಾಳವಾದ ವ್ಯಕ್ತಿಯ ಭಾವನಾಶದ ಚಿತ್ರಣ.

---

## ನಿರಸ

**ಸರಸ ವಿರಸವಾಗಿ ಮೌನ ನಿರಸವಾಗಿ/ ಒಗಟೆಯಾಗುವ ಬಾಳು ಒಡೆಯದಿದೆ.(ಸಾಲು:811, 812)**

*ಬೇಂದ್ರೆಯವರು ತಮ್ಮ ದಾಂಪತ್ಯದಲ್ಲಿ ಸರಸವು ವಿರಸವಾಗಿ ಮೌನ ಆವರಿಸಿದ್ದನ್ನು ನೆನೆಯುತ್ತ ಆ ಮೌನ ಗೌಣವಾದುದರಿಂದ (ನಿರಸ), ತಮ್ಮ ಒಗಟೆಯಾಗುವ/ಕಗ್ಗಂಟಾಗಿ ಸಮಸ್ಯೆಯಾಗುವ ಬಾಳು ಒಡಯದಿದೆ ಎಂದು ಹೇಳಿಕೊಂಡಿದ್ದಾರೆ. ವಿರಸದ ಅತಿ ಘೋರ ದಿನಮಾನದಲ್ಲಿ ಮೌನವನ್ನು ಗೌಣವಾಗಿಸುವುದು ದಿವ್ಯ ಔಷಧ.

---

## ಡಿಳ್ಳ

**ಝುಲ್ಲೆಂದ ಹೃದಯದ ಜೊಳ್ಳು ನಾದವ ಕೇಳಿ/ ಡಿಳ್ಳವಾಯಿತು ಬಾಳು ನಾನೆಂದೆನೇ (ಸಾಲು:813, 814)**

: ಅಸಮರ್ಥವಾಗು; ವ್ಯರ್ಥವಾಗು.

*ಆರ್ಥಿಕ ಕಾರಣದಿಂದಲೇ ತಮ್ಮ ದಾಂಪತ್ಯದಲ್ಲಿ ವಿರಸ ಹೆಚ್ಚುತ್ತಿರುವುದನ್ನು ಬಲ್ಲವರಾಗಿದ್ದ ಬೇಂದ್ರೆ ಅವರು, ಪತ್ನಿ ಲಕ್ಷ್ಮೀಬಾಯಿಯ ನೋವುಭರಿತ ಮೌನವನ್ನು ಅರ್ಥಮಾಡಿಕೊಂಡಿದ್ದರು. ಅದನ್ನು ಎದುರಿಸಿ ನಿಂತ ಕವಿಯ ಗಟ್ಟಿಬಾಳುವೆಯ ರೀತಿ ಅಚ್ಚರಿ ಮೂಡಿಸುತ್ತದೆ. ಇದಕ್ಕೆ ಕಾರಣ ಅವರ ನಿಷ್ಕಲ್ಮಷ ರಾಷ್ಟ್ರಪ್ರೇಮ, ನೈತಿಕ ನಿಲುವು, ಸತ್ಯದ ನಡೆನುಡಿ. ಅದಕ್ಕೆಂದೇ ಅವರು, ಹೃದಯ ಝುಲ್ಲೆನ್ನುವ ಸಂದರ್ಭದಲ್ಲೂ ಎದೆಗುಂದಲಿಲ್ಲ, ಅಸಮರ್ಥ ಭಾವಕ್ಕೆ ಒಳಗಾಗಲಿಲ್ಲ. ಹೃದಯ ಝುಲ್ಲೆನ್ನುವುದು ಕವಿಗೆ ಜೊಳ್ಳುನಾದವಾಗಿ ಕೇಳಿಬಂದದ್ದು, ಬರ್ಬರ ಸ್ಥಿತಿಯನ್ನು ಎದುರಿಸುವ ಕವಿಯ

ಅಂತಃಸತ್ವವನ್ನು ತೋರುತ್ತದೆ. ಅವರು, 'ಬಡತನ, ಒಡೆತನ ಕಡೆತನಕುಳಿದಾವೇನ/ ಎದೆ ಹಿಗ್ಗು ಕಡೆಮುಟ್ಟ' ಎಂದು ಎದೆ ಹಿಗ್ಗಿನಲ್ಲಿ ಬಾಳು ನಡೆಸಿದರು. ಡಿಳ್ಳವಾಗಿಸಿಕೊಳ್ಳಲಿಲ್ಲ.

---

## ಕನವರಿಕೆ, ನನವರಿಕೆ

**ನಾನಾಗೆ, ತಾನಾಗಿ ಹುಡುಗ–ಪ್ರಾಯದ ಹುಚ್ಚು/ ಕನವರಿಕೆ ನನವರಿಕೆಗಳ ಕಂಡೆನು(ಸಾಲು: 853,854)**

: 1. ನಿದ್ದೆಯಲ್ಲಿ ತನ್ನಷ್ಟಕ್ಕೆ ತಾನೇ ಮಾತಾಡಿಕೊಳ್ಳುವಿಕೆ, ಬಡಬಡಿಸುವಿಕೆ.

2. ಮತ್ತೆ ಮತ್ತೆ ಒಂದೇ ವಿಷಯವನ್ನು ಯೋಚಿಸುವಿಕೆ, ಹಳವಂಡ (ಉ.ಕ)

: ಉತ್ಕಟವಾದ ಧ್ಯಾನ, ಹಂಬಲ.

---

## ಸಂಜೆ ಕಾವಳ

**ನೆಲೆಯಾದ ದೈವವು ತಪ್ಪಿತೊ ತಪ್ಪಿತು!/ ಸಂಜೆ ಕಾವಳ ಕಣ್ಣನಣಕಿಸಿತು.(ಸಾಲು:867,868)**

* 'ನರಬಲಿ' ಕವನ ಬರೆದ ಬೇಂದ್ರೆ ಅವರಿಗೆ ಉದ್ಯೋಗ ಕೊಡಬಾರದು ಎಂದು ಬ್ರಿಟಿಷರು ಆಜ್ಞೆ ಮಾಡಿದಾಗ ಬೇಂದ್ರೆ ಅವರು ತಮ್ಮ ಜೀವನ ನಿರ್ವಹಣೆಗೆ ಪರಿತಪಿಸುತ್ತಾರೆ ಎಂಬುದನ್ನು ಈಗಾಗಲೇ ತಿಳಿದಿದ್ದೇವೆ. 'ಅಪ್ಪನಪ್ಪನ ಹಾಗೆ ಅಪ್ಪನೇ ಅಪ್ಪಂತೆ! ಚಿಕ್ಕಪ್ಪ ನೆರವಾಗಿ ನೆಲೆಗೊಟ್ಟನು' ಎಂದು ಅವರು ತಮ್ಮ ಹೆಂಡತಿ, ಮಕ್ಕಳೊಡನೆ ಎಂ.ಎ ವಿದ್ಯಾಭ್ಯಾಸಕ್ಕಾಗಿ ಪುಣೆಗೆ ಹೋಗುತ್ತಾರೆ. ಅಲ್ಲಿ ಚಿಕ್ಕಪ್ಪ ಬಂಡೋಪಂತರ ಆಶ್ರಯದಲ್ಲಿ ಜೀವನ ದೂಡುತ್ತಾರೆ. ಎರಡುವರ್ಷ ಎರಡುನಿಮಿಷದಂತೆ ಕಳೆದು ಹೋಗಲು ಅವರಿಗೆ ನೆಲೆಯಾಗಿದ್ದ ದೈವ ಚಿಕ್ಕಪ್ಪ ತೀರಿಹೋಗುತ್ತಾರೆ(1935). ಆಗ ಅವರು ತಮ್ಮ ಸ್ಥಿತಿಯನ್ನು 'ಸಂಜೆ ಕಾವಳ ಕಣ್ಣನಣಕಿಸೀತು' ಎಂದು ಕಾವ್ಯವಾಗಿಸಿದ್ದಾರೆ.

'ಸಂಜೆ ಕಾವಳ' ಪದವನ್ನು ಕನ್ನಡ ಕಾವ್ಯಪರಂಪರೆಯಲ್ಲಿ ಬೇಂದ್ರೆ ಮೊದಲ ಬಾರಿಗೆ ಪ್ರಯೋಗಿಸಿದ್ದಾರೆ. ಅವರ ಜೀವನದ ನೋವಿನ ಅನುಭವ ಅವರಿಂದ ಆ ನುಡಿಯನ್ನು ರೂಪಿಸಿದೆ.

ಕಾವಳ/ ಮಬ್ಬು, ಕತ್ತಲೆ. ಚಿಕ್ಕಪ್ಪ ಸತ್ತಾಗ ಅವರ ಇರುವಿಕೆಗೆ, ಅಸ್ತಿತ್ವಕ್ಕೆ, ಆಧಾರವಿಲ್ಲದಂತಾಗಿ ಇಡೀ ಬದುಕು ಕತ್ತಲೆಯಲ್ಲಿ ಮುಳುಗಿತು. ಅವರಿಗೆ ಅಂಧಕಾರ ಆವರಿಸಿತು. ಅವರಿಗೆ ಆಗ 39 ವರ್ಷ ಮಧ್ಯವಯಸ್ಸು. ಹಾಗಾಗಿ ಅವರು ಹೀಗೆ ನುಡಿದದ್ದು.

---

## ಬಂಭ್ರಮಿಸು

**ಕಂಗಳು ಬಂಭ್ರಮಿಸಿ, ಹಮ್ಮುಕ್ಕಿ ಜಂಗಮಿಸಿ/ ಎದೆ-ಮೊಗ ಕೆಳಗಿಳಿಸಿ ನೋಡುತಿರೆ (ಸಾಲು:905-06)**

*ಗಂಡಿಗೆ ಹೆಣ್ಣಿನ ಬಗ್ಗೆ ಉಂಟಾಗುವ ಶೃಂಗಾರ ಭಾವವನ್ನು ವರ್ಣಿಸುತ್ತ ಬೇಂದ್ರೆಯವರು ಹೀಗೆ ತಿಳಿಸಿದ್ದಾರೆ.

**'ಹೆಸರದಕೆ ಪ್ರೀತಿಯು, ಹಿಗ್ಗಿನ ರೀತಿಯು/ ಆತ್ಮದ ನೀತಿಯು ಮಧುಸಂಗಮ' (ಸಾಲು:903-904)**

ಆ ಮಧು ಸಂಗಮದಲ್ಲಿ ಕಣ್ಣುಗಳು ಬಂಭ್ರಮಿಸಿ/ ಅತಿಶಯವಾಗಿ ತಿರುಗುತ್ತ, ಹಮ್ಮುಕ್ಕಿ/ಬೆರಗುಂಟಾಗಿ; ತಾನು ಎಂಬ ಕೇಂದ್ರೀಕೃತ ಭಾವ ಇಲ್ಲವಾಗಿಸಿಕೊಂಡ ತನ್ನತನವು ಚಲನಶೀಲವಾಗಿ ಉಕ್ಕಿ ಹರಿಯುತ್ತ ಪ್ರೀತಿ ಮಾಗಿದೆ. ಆಗ 'ಎದೆ-ಮೊಗ ಕೆಳಗಿಳಿಸಿ' ಬಿಂಕವನ್ನು ಬಾಗಿಸಿಕೊಂಡು ಸುಂದರ ನೆಲದ ಬದುಕನ್ನು ನೋಡುತ್ತಾರೆ. ಅಲ್ಲಿ ಭ್ರಮರ ಭ್ರಮರಿ, ಹಂಸ ಹಂಸಿ, ಕಮಲ ಕಮಲಿನಿ ಮುಂತಾದ ಎಲ್ಲ ಜೀವಿಗಳು, 'ನಾದದ ಸೆಳೆಮಿಂಚು, ಸಮತೆಯ ಗೆಳೆಸಂಚು/ ಎಸಳಿನ ಎಳೆಯಂಚು ಎಳೆದೀತೆನೇ' ಪ್ರಣಯದಲ್ಲಿ ಲೀನವಾಗಿರುವುದು ಗೋಚರಿಸುತ್ತದೆ. ಎಲ್ಲ ಜೀವಿಗಳಲ್ಲಿ 'ಸಮತೆಯ ಗೆಳೆಸಂಚು' ನೇಹದ ದಿವ್ಯತೆ ಪ್ರಕಾಶಿಸುತ್ತಿರುತ್ತದೆ. ದಾಂಪತ್ಯದ ಒಟ್ಟು ಅರ್ಥ. 'ನಾನೂ ನೀನೂ ಸಖ-ಸಖಿ ಸಮ-ಸುಖಿ' (ಸಾಲು: 895)

---

## ಗೋಪು, ಕೋಪು

**ಅಂತಃಕರಣದ ಗೋಪು ಭಾವದ ಕೋಪು/ ಎಲ್ಲರ ಕೊರಳೆದೆ ಸಿಂಗರಿಸಿದೆ. (ಸಾಲು:931, 932)**

: ಕೊರಳಲ್ಲಿ ಧರಿಸುವ ಒಂದು ಬಗೆಯ ಆಭರಣ.

: ಛತ್ತೀಸ/ 36 ಬಗೆಯ ಒಲವಿನ ನೋಟ, ಚೌಷಷ್ಠಿ/ 64ಕುಶಲ ವಿದ್ಯಾ ಕಲೆಗಳ ಭಾವಾಭಿನಯ.

*ಇದು ಕವಿ ಹಾಗೂ ಕವಿಪತ್ನಿಯ 'ಸಖೀಗೀತ' ಮಾತ್ರವಲ್ಲ; ಜಗದೆಲ್ಲ ದಂಪತಿಗಳ ಆನಂದ. ಹಾಗಾಗಿ, ಈ ಕಾವ್ಯ 'ಎಲ್ಲರ ಕೊರಳೆದೆ ಸಿಂಗರಿಸಿದೆ'.

***

ಛತ್ತೀಸ ದೃಷ್ಟಿ ಚೌಷಷ್ಠಿ ಹಸ್ತಂಗಳಂ ಬಿತ್ತರಿಸುವುದು ಕೋಪೆನಿಕ್ಕು (ಅಭಿನವ ಮಂಗರಾಜ- ಅಭಿನವಾಭಿದಾನಂ-25.9).

---

**ಅಕ್ಕುಮಿಕ್ಕು**

**ಅಕ್ಕರ ಛಂದವು ಸಾಂಗತ್ಯ-ಸಂಸ್ಕಾರ/ ಹೊಂದಿಲ್ಲಿ ಬಂದಿದೆ ಹೊಸ ಹೊಸದು/ ಅಕ್ಕರೆಯದಾಯಿತು ಅಕ್ಕರಿಗರಿಗೆಲ್ಲ/ ಅಕ್ಕುಮಿಕ್ಕೆನುವಂತೆ ಕೊನೆವರೆಗು (ಸಾಲು:937 ರಿಂದ 40)**

*ದೇಸಿ ಅಕ್ಕರ ಛಂದದ, ಸಾಂಗತ್ಯ ಸಂಸ್ಕಾರದ ಸಖೀಗೀತ ಕಾವ್ಯವು ವಿದ್ಯಾವಂತರಿಗೆಲ್ಲ ಅತಿಶಯವಾಗಿ ಪ್ರಿಯವಾಯಿತು ಎಂಬ ಅರ್ಥದಲ್ಲಿ ಅಕ್ಕು ಮಿಕ್ಕು ಪದ ಬಳಸಿದ್ದಾರೆ.

---

**ಪಾಡು**

**ಅಂಬಿಕಾತನಯನ ಜಂಭದ ಪಾಡಳಿದು/ ನಂಬಿಕೆಯ ಹಾಡಾಗಿ ಬಂತಿಲ್ಲಿಗೆ (ಸಾಲು:953-54)**

: ಹಣ್ಣಿಗೆ ಬರುತ್ತಿರುವ ಕಾಯಿ; ಪಕ್ವವಾಗುತ್ತಿರುವ ಕಾಯಿ; ದೋರೆಗಾಯಿ.

* ಬೇಂದ್ರೆ ಅವರು 'ಪಾಡು' ಪದವನ್ನು ಆಯಾ ಸಂದರ್ಭದ ಭಾವಲಹರಿಗೆ ತಕ್ಕಂತೆ ಬಳಸಿದ್ದಾರೆ. 'ಜಂಭದ ಪಾಡಳಿದು' ಎಂಬ ವಾಕ್ಯಭಾಗದಲ್ಲಿಯ 'ಪಾಡು' ಅವರ ಜಂಭದ ಸ್ಥಿತಿ, ಅವಸ್ಥೆಗಳನ್ನು ಸೂಚಿಸುತ್ತದೆ.

ಆ ಜಂಭದ ಸ್ಥಿತಿ ಅವಸ್ಥೆಯೇ ವ್ಯಕ್ತಿಯಲ್ಲಿ ನಾಶವಾದಾಗ ಅವನು ಶುದ್ಧನಾಗುತ್ತಾನೆ. ಆ ನಿರ್ಮಲ ಮನಸ್ಥಿತಿಯಲ್ಲಿ ಅವನಿಗೆ ತನ್ನಲ್ಲಿ ನಂಬಿಕೆಯುಂಟಾಗುತ್ತದೆ. ಅದು ಬೊಮ್ಮವನ್ನು ಅರಿತ ಮನುಜನ ಸ್ಥಿತಿ. ಆಗ ಹೊಮ್ಮುವ ಹಾಡು ಆ ಕವಿಯ ಹಾಡು ಮಾತ್ರವಾಗಿರುವುದಿಲ್ಲ, ಅದು ಜಗದ ಹಾಡಾಗುತ್ತದೆ. ಹಾಗೆ, ಬೇಂದ್ರೆಯ ನಂಬಿಕೆಯ ಹಾಡು ಸಹೃದಯನಲ್ಲಿ ಅವನ ನಂಬಿಕೆಯನ್ನು ಹೆಚ್ಚಿಸಿ ಅವನ ಮನದ ಹಾಡೂ ಆಗುತ್ತದೆ. ಜಂಬದ ಪಾಡಳಿಯುವ ಸ್ಥಿತಿ ಎಂದರೆ ಹುಳಿಯನ್ನು ಕಳೆದುಕೊಂಡ ಹಣ್ಣಿನ ಅವಸ್ಥೆಯಂತಹ ಪಕ್ವ ಮನಸ್ಥಿತಿ, ಏರುಗತಿ.

***

**ನಿನ್ನಿನದು ಕಸುಗಾಯಿ ಇಂದಿನದು ತುಸುಪಾಡು ನಾಳೆ ಹಣ್ಣಾದಾಗ ಬಂದೀತು ಹಾಡು(ಜೀವಲಹರಿ: ನಮ್ಮ ಬಾಳು ತೋರಿಕೆ)**

---

# ೫. ಉಯ್ಯಾಲೆ (೧೯೩೮)

## ಅಷ್ಟಷಟ್ಪದಿ

**ಅಷ್ಟಷಟ್ಪದಿ, ಜೀಕು**

**ಅಷ್ಟಷಟ್ಪದಿಯಲ್ಲಿ ಉಯ್ಯಾಲೆಯಾಡುತಿದೆ/ ಕೌತುಕದ ಬಗೆ; ಹಾಗೆ ಇದು, ಹೀಗೆ ಇದು, ಎನುತ/ ಜೀಕುಜೀಕಿನ ವಿಲಾಸದಲಿ ತನ್ಮಯವಾಗಿ (1–1, 2, 3)**

: (ಛಂದ)(ಎಂಟು ಸಾಲುಗಳ ಒಂದು ಅಂಶವೂ ಆಮೇಲೆ ಆರು ಸಾಲುಗಳ ಮತ್ತೊಂದು ಅಂಶವೂ ಬರುವ ಒಟ್ಟು) ಹದಿನಾಲ್ಕು ಸಾಲುಗಳುಳ್ಳ ಪದ್ಯ ಜಾತಿ; ಸಾನೆಟ್(ಚತುರ್ದಶ ಪದಿ: ಗೋವಿಂದ ಪೈ)

: ತೂಗಾಟ; ಹೊಯ್ದಾಟ.

* 'ನಾನು ನಾಲ್ಕು ಷಟ್ಪದಿಗಳಿಂದ ಸಾನೆಟ್ ಸದೃಶವಾದ ನಾಲ್ವರಿಗಳನ್ನು ಬರೆದೆ. ಅವುಗಳ ಉದಾಹರಣೆಗಳು 'ಗರಿ'ಯಲ್ಲಿವೆ. ಆದರೆ, ಹದಿನಾಲ್ಕು ಸಾಲುಗಳು–ಅದರಲ್ಲಿಯೂ ಎಂಟು ಸಾಲಿನ ಒಂದು ಖಂಡ, ಆರು ಸಾಲಿನದಿನ್ನೊಂದು, ಈ ಎರಡು ಖಂಡಗಳಲ್ಲಿ ಒಂದು ಭಾವದ–ವಿಚಾರದ ತಿರುಪು, –ಸಾನೆಟ್ ಸಂಪ್ರದಾಯದ ಪ್ರಾಸ ರಚನೆ, ಈ ಲಕ್ಷಣಗಳುಳ್ಳ ಈ ಕವನರೂಪವು ಕನ್ನಡದಲ್ಲಿ ನೆಲೆಗೊಳ್ಳುವಂತೆ ತೋರುತ್ತದೆ... ನನ್ನೀ ಅಷ್ಟಷಟ್ಪದಿಗಳಲ್ಲಿ ಪ್ರಾಸ ರಾಹಿತ್ಯ, ಪಾದಾಂತ ಯತಿಯ ನಿಯತರಾಹಿತ್ಯ ತಿರುಪಿನ ವೈಚಿತ್ರ್ಯ, ಇವು ಹೊಸ ಲಕ್ಷಣಗಳಾಗಿವೆ.' ಎಂದು ಬೇಂದ್ರೆ ಅವರು 'ಉಯ್ಯಾಲೆ' ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಇದು ಅವರ ಮನಸ್ಸು ಅಷ್ಟಷಟ್ಪದಿ ರಚನೆಯಲ್ಲಿ ತೊಡಗಿಕೊಂಡು ಪ್ರಯೋಗಶೀಲವಾಗಿದ್ದನ್ನು ತಿಳಿಸುತ್ತದೆ. ಅಷ್ಟಷಟ್ಪದಿ ರಚನೆಯ ಕುತೂಹಲದಲ್ಲಿ ತನ್ನ ಮನಸ್ಸು ಹೊಯ್ದಾಟ ನಡೆಸುತ್ತಾ, ತೂಗುಯ್ಯಾಲೆ ಯಾಡುತ್ತಿದ್ದುದನ್ನು ಇದು ಪ್ರಕಟಪಡಿಸಿದೆ.

* * * * * *

**ಮಿಣಿ, ಕೊಲ್ಲಟಗಿತ್ತಿ**

**ಮಿಣಿಯಲ್ಲಿ ಮಣಿವ ಕೊಲ್ಲಟಗಿತ್ತಿ ತನ್ನ ಜೋ/ ಕೆಯ ತೂಕದಲ್ಲಿ ತೂಗಾಡುವಳು (2–1, 2)**

: ಚರ್ಮದ ಪಟ್ಟಿಗಳನ್ನು ಹೆಣೆದು ಮಾಡಿದ ಹಗ್ಗ; ತೊಗಲಿನ ಹಗ್ಗ.

: ಡೊಂಬರವಳು; ಡೊಂಬರ ಹೆಂಗಸು.

*ದೊಂಬರವಳು ಮಿಣಿಯ ಮೇಲೆ ಜೋಕೆಯ ತೂಕದಲ್ಲಿ ನಡೆಯುವುದು ತೋಲತಪ್ಪದ ಎಚ್ಚರ. ಅಂತಹ ಎಚ್ಚರದ ರಚನೆ ಅಷ್ಟಷಟ್ಪದಿ ಕಾವ್ಯ ಎಂದು ರೂಪಕಾತ್ಮಕವಾಗಿ ತಿಳಿಸಿದ್ದಾರೆ.

---

## ಪ್ರಳಯ ಸೃಷ್ಟಿ

**ಶಾಲಗ್ರಾಮ**

**ದಿವ್ಯ ಶಾಲಗ್ರಾಮ/ ಶಿಲೆಯೊಳುದಿಸಿದ ಕೊಳಲ ಕೃಷ್ಣಮೂರ್ತಿಯ ಮಧುರ/ ಮುರಲಿ ನಾದವು ತಮದ ಕಣ ಕುಣಿಸುತಿದೆ (2–2, 3, 4)**

: ವಿಷ್ಣುವಿನ ಸ್ವರೂಪವೆಂದೂ ಪೂಜಾರ್ಹವೆಂದು ಭಾವಿಸಲಾದ, ಪ್ರಮುಖವಾಗಿ ಗಂಡಕೀನದಿಯಲ್ಲಿ ದೊರೆಯುವ ಕಪ್ಪನೆಯ ದುಂಡುಕಲ್ಲು; ಸಾಲಿಗ್ರಾಮ.

* 'ಪ್ರಳಯದ ಅಂತರಂಗದಲ್ಲಿಯೇ ಸೃಷ್ಟಿಯ ಬೀಜ ಅಡಗಿರುತ್ತದೆ'. ಎಂಬುದನ್ನು ಶಾಲಗ್ರಾಮ ಶಿಲೆಯ ಕೃಷ್ಣಮೂರ್ತಿಯ ಮುರಲೀನಾದದಲ್ಲಿ ರೂಪಕಾತ್ಮಕವಾಗಿ ಕವಿ ಬಣ್ಣಿಸಿದ್ದಾರೆ.

---

## ಕರುಳು

**ತಾಮ್ರಪರ್ಣಿ, ಕುಂಗ**

**ತಾಮ್ರಪರ್ಣಿಯ ಒಡಲ ರಾಜಮೌಕ್ತಿಕದ ಭಂ/ ಡಾರ ಮುದ್ರೆಯನೊಡೆಯೆ, ದಿನವು ನೀರನು ಧುಮುಕು/ ವಂಥ ಕುಂಗನು ಪಡೆವುದೇನು? (1–1, 2, 3)**

: ಮಲಯ ಪರ್ವತದಲ್ಲಿ ಹುಟ್ಟಲಾಗಿದೆ ಎಂದು ಹೇಳಲಾದ (ಮುತ್ತುಗಳಿಗೆ ಹೆಸರಾದ) ಒಂದು ನದಿ.

: ಮೀನುಗಾರ.

*ಮುತ್ತಿಗಾಗಿ ತಾಮ್ರಪರ್ಣಿಯಲ್ಲಿ ಹುಡುಕಿ ದುಡಿದು ಆಯಾಸಪಟ್ಟು ದ್ರವ್ಯವನ್ನು ಸಂಪಾದಿಸುವ ಮೀನುಗಾರ ತನ್ನ ಹೊಟ್ಟೆಪಾಡಿಗಾಗಿಯಷ್ಟೇ ದುಡಿಯುವುದಿಲ್ಲ. 'ತಾಯಿ ಮಡದಿಯ ಹರ್ಷಭಾಷ್ಪವೇ ಅವನ ಬದುಕಿನ ಹುರುಳು' ಎಂದು ಬೇಂದ್ರೆ ಅವರು ತಿಳಿಸಿದ್ದಾರೆ.

---

# ಸುಖಸ್ಪರ್ಶ

**ನೊಸಲು, ಸುಸಿಲಾಡು, ಕಣ್ಚಿವುಟು**

**ನೊಸಲು ನೊಸಲಿನಲಿರಿಸಿ ಸುಸಿಲಾಡುವವು ಹೂವು/ ಹೊಳೆ ನೀರ ಬಳಿಗೆ; ಪಡಿನೆಳಲನೆದೆಯೊಳಗಿರಿಸಿ/ ಮಧುರ ಸಲಿಲ ಸಲೀಲ ನಲಿದಾಡುವದು; ಚಿತ್ರ/ ರತಿಯ ನೋಡುತ ಚಿಕ್ಕೆ ಕಣ್ಚಿವುಟುವವು (1–1, 2, 3, 4)**

: ಹಣೆ; ಲಲಾಟ.

: (ಆಲಂ) ಸರಸವಾಡು

: ಕಣ್ಣು ಮಿಟುಕಿಸು; ಕಣ್ಣಿನಿಂದ ಸನ್ನೆಮಾಡು; ಕಣ್ಣು ಹೊಡೆ; ಕಣ್ಣಿಕ್ಕು.

*ಬೇಂದ್ರೆ ಅವರು ಹೆಣ್ಣು ಗಂಡಿನ ಕಾಮ ಸಹಜವಾದ ಪ್ರೀತಿಯು ಪ್ರಕೃತಿ ಪೋಷಕವಾದುದು ಎಂದು ತಿಳಿಸಲು 'ಸುಖಸ್ಪರ್ಶ' ಕವನದ ಮೊದಲಭಾಗದಲ್ಲಿ ಪ್ರಕೃತಿಯ ನಡೆಯನ್ನು ಚಿತ್ರಿಸಿದ್ದಾರೆ. ಹೊಳೆನೀರಿನ ಬಳಿ ನೊಸಲು ನೊಸಲಿನಲಿರಿಸಿ ಸುಸಿಲಾಡುವ ಹೂವುಗಳನ್ನು ಹೆಣ್ಣು ಗಂಡಿಗೆ ಸಾದೃಶ್ಯವಾಗಿ ನೀಡಿ– ಅದನ್ನು ಪೋಷಿಸುವ ಅರ್ಥಾತ್ ನಿಸರ್ಗವನ್ನೇ ಪೊರೆಯುವ ಇತರ ಪ್ರಕೃತಿಗಳನ್ನು ಬಣ್ಣಿಸುತ್ತಾ ಸಾಗಿದ್ದಾರೆ. ಆ ಹೂವುಗಳ ಪಡಿನೆಳಲನ್ನು ತನ್ನ ಎದೆಯೊಳಗಿರಿಸಿ ನೀರು ನಲಿದಾಡುತ್ತಿದೆ. ಆ ಚಿತ್ರರತಿಯನ್ನು ನೋಡಿ ಚಿಕ್ಕೆಗಳು ಕಣ್ಣು ಮಿಟುಕಿಸುತ್ತಿವೆ. ಅವುಗಳ ಕಂಪಿನ ಸವಿಮಾತನ್ನು ಗಾಳಿ ಪಿಸುಗುಡುತ್ತಿದೆ. ಅವುಗಳ ರತಿ ಸುಗಮವಾಗಲು ಸಂಜೆ ಕತ್ತಲ ಯೌವನವನ್ನು ಆವರಿಸುತ್ತಿವೆ.(ಸಂಜೆ ಬಾಸಣಿಸಲಿದೆ ತಿಮಿರ ಜವನಿಕೆ)

ಪ್ರಕೃತಿಯಲ್ಲಿ ಸಹಜವಾಗಿರುವ ದೃಶ್ಯ– ಹೂವುಗಳ ಸುಸಿಲಾಡು. ಇದು ಜೀವಜಗತ್ತು ಸುಖವನ್ನು ಸಹಜವಾಗಿ ಅನುಭವಿಸುವ ಪರಿ. ಅದನ್ನು ಕಂಡೇ ಕವಿಯು 'ಏನು ಒಗೆತನದ ಸೊಗವೊ!' ಎಂದು ಉದ್ಗರಿಸಿದ್ದಾರೆ. ಅಷ್ಟಕ್ಕೆ ಸುಮ್ಮನಾಗದೆ ಮನುಷ್ಯನ ಸಣ್ಣತನವನ್ನು ಕಂಡು 'ಅರರೆ, ಈ ನರಪಿಂಡ ಹುಲ್ಲು ಹೂವಿಗೂ ಕೀಳೆ?' ಎಂದು ಪ್ರಶ್ನಿಸಿ ಸುಸಿಲಾಡುವ ಹೂವುಗಳಂತೆ ಜೀವನದ ಸವಿ ಸವಿಯಲಾಗದ ಮನುಷ್ಯನ ವಿಕೃತಿಗೆ ಕವಿ ಬೇಂದ್ರೆ ನೊಂದಿದ್ದಾರೆ.

***

ಬಣ್ಣಗೊಂಡು ಬಗೆಬಗೆಯಲಿ/ ಕಣ್ಣು ಚಿವುಟಿ ಕಳೆದು ಹೋದ/ ಕನಸುಗಳೇ ಬನ್ನಿ (ನಾದಲೀಲೆ: ಬನ್ನಿ ಬನ್ನಿ ಕನಸುಗಳೇ!)

## ಪಾಶ

**ಜಾಲಗಾರ, ತನಿಜಿನುಗು ದನಿ, ಗಸಿಗಿಳಿಸು.**

**ಜಾಲಗಾರನು ಉಸುಕು ಜಾಳಿಸುವ ಹಾಗೆ, ಜೊತೆ/ ಗಾರ ತನಿಜಿನುಗು ದನಿಯಲಿ ಸೋಸುತಿಹನು, ಹಿ/ ನ್ನೋಟ ಮುನ್ನೋಟದಲಿ ಗಸಿಗಿಳಿಸುತಿರೆ (2–1, 2, 3)**

: ಬೆಸ್ತ; ಅಂಬಿಗ.

: ಮಧುರವಾಗಿ ಗುಣಿಗುಣಿಸುವ ಧ್ವನಿ; ಇಂಪಾದ ಮೆಲುಧ್ವನಿ.

: ಸೋಸು; ಶೋಧಿಸು.

*ವಿರಸ ಸಂಸಾರದಲ್ಲಿ ಸತಿಯನ್ನು ಸೆಳೆಯಲು ಪತಿಯಾದವನು ಮಧುರನುಡಿ ಹೊಮ್ಮಿಸುವುದನ್ನು 'ಜಾಲಗಾರ ಉಸುಕು ಜಾಳಿಸುವ' ಉಪಮಾನದಲ್ಲಿ ಚಿತ್ರಿಸಿದ್ದಾರೆ. ಆದರೂ ಆ ಮಾನಿನಿ ನಗೆ ಹೊಮ್ಮಿಸುವುದಿಲ್ಲ.

---

## ಹರಕೆ

**ತೊಪ್ಪಲು, ನೆರೆಗೆಂಪು**

**ಉಡುಗಿ/ ಮೈ ನಯದ ನೆಯ್ಗೆ ತೊಪ್ಪಲು; ಹರೆಯ ಚಿಗುರಡಗಿ/ ನೆತ್ತರದ ನೆರೆಗೆಂಪು ಹಳಸುತಿದೆ ಭರದಲ್ಲೆ. (1–2, 3, 4)**

: ಮರಗಿಡಗಳ ಎಲೆ, ಚಿಗುರು ಮೊದಲಾದುವು; ಸೊಪ್ಪು.

: ಹೆಚ್ಚಾದ ಕೆಂಪು ಬಣ್ಣ; ಅಧಿಕವಾದ ಅರುಣವರ್ಣ.

*ಹೆಣ್ಣು ಮಕ್ಕಳ ಬಗ್ಗೆ ವಿಶೇಷ ಕಾಳಜಿ ಹೊಂದಿದವರು ಬೇಂದ್ರೆ. ತಮ್ಮ ಕಣ್ಮುಂದೆ ಹುಟ್ಟಿ ನೋಡ ನೋಡುತ್ತಿದ್ದಂತೆ ಬೆಳೆದು ದೊಡ್ಡವರಾಗುತ್ತಿದ್ದ ಬಾಲೆಯರ ಬಾಳು ಸುಖ ಸಂತೋಷದಿಂದಿರಲಿ ಎಂದು ಆಶಿಸಿ ಬರೆದ ಕವನ 'ಹರಕೆ'. ಚಿಗುರಿದ ಮೃದು ಎಲೆಯಂತಿದ್ದ ಅವರ ಮೈನಯ ಬೆಳೆಯುತ್ತ ಕುಗ್ಗಿ ತಗ್ಗುವುದನ್ನು, ಹೊಳಪಿನ ಬಣ್ಣ ಮಾಸುವುದನ್ನು ಪ್ರತಿಮಾತ್ಮಕವಾಗಿ ಇಲ್ಲಿ ಚಿತ್ರಿಸಿದ್ದಾರೆ.

---

## ಒಡಲು

**ಒಗೆತನ, ಉರವಣಿಗೆ**

**ಅವಳೋ ಇವರ ಒಗೆತನವ/ ಕಿಳ್ಳಿಕೇತನು ಗೊಂಬೆ ಕುಣಿಸುವೊಲು ಕುಣಿಸುವಳು/ ಸರಸದುರವಣಿಗೆ ಮೆರವಣಿಗೆ. (1–4, 5, 6)**

: ಕೂಡಿ ಬಾಳುವೆ ಮಾಡುವುದು; ಸಂಸಾರ ಮಾಡುವುದು.

: ಉಪದ್ರವ; ಪೀಡೆ.

* 'ಒಡಲು–ಒಡೆಯನು ತೀರಿಕೊಳಲು ಹುಟ್ಟಿದ ಮನೆಗೆ ಬಂದ ಹೆಣ್ಣಿನ ಹಾಗೆ'. ಎಂದು ಈ ಶರೀರದ ನಡೆಯನ್ನು ಈ ಕವನ ವ್ಯಂಗ್ಯಾತ್ಮಕವಾಗಿ ಚಿತ್ರಿಸಿದೆ.

* ವಿಧವೆ ಸಹೋದರಿ ತನ್ನ ಗಂಡನ ಆಸ್ತಿ ಪಾಸ್ತಿಯೊಂದಿಗೆ ಬಂದು ಸಹೋದರರ ಸಂಸಾರದಲ್ಲಿ ವಿಚಿತ್ರವಾಗಿ ಬೀಗುತ್ತಾಳೆ. ಅವರನ್ನು 'ಕಿಳ್ಳಿಕೇತನು ಗೊಂಬೆ ಕುಣಿಸುವೊಲು ಕುಣಿಸುವಳು.' ಎಂದು ಉಪಮಾನಾತ್ಮಕವಾಗಿ ಚಿತ್ರಿಸಿ, ಅವರ ಸರಸವು ಉಪದ್ರವದ ಮೆರವಣಿಗೆ ಎಂದಿದ್ದಾರೆ.

---

## ನೀನು ಮರೆವುದೆ ನನ್ನ?

**ಇಟ್ಟಳಿಸು, ಇಮ್ಮು**

**ನುಡಿಸುತಿರು ಏಕನಾದವ ಗುರುವೆ! ಜೀವಲಹ/ ರಿಯ ಭೇದ ಒಡೆದು ಕಾಣಲಿ, ಅಭೇದದ ಕಟ್ಟ/ ಡವು ಇಟ್ಟಳಿಸಿ ಬರಲಿ, ಭೂತ ಜಾತದ ವೇದ/ ತುದಿಕಳಿಸಿ ನಾಲಗೆಗೆ ಇಮ್ಮು ಚಿಮ್ಮಲಿ (2–1, 2, 3, 4)**

: ಗುಂಪಾಗು; ಸಂದಣಿಸು; ಒಟ್ಟಾಗಿ ಸೇರು.

: ಅಮೃತಮಯವಾದ ಇಂಪು, ಸೊಗಸು.

***

ಮಾನವ ಲೋಕವೆಲ್ಲ ಹಸಿದು ನೀರಡಿಸಿರುವುದು ಅಲ್ಲಿಯ ಇಮ್ಮುಮಮ್ಮಿಗಾಗಿ, ಆ ಸೋಮರಸಕ್ಕಾಗಿ, ಆ ಅಮೃತಕ್ಕಾಗಿ. (ಸಾ.ವಿ.ಸ್ವ 13)

ಇಮ್ಮು ಮಮ್ಮು= ಸವಿಯಾದ ಆಹಾರ.

---

## ಅಲ್ಲಮ ಪ್ರಭು

### ಹುಸಿನೀರು

**ಮನದ ಬಯಲಲಿ ಬವಣೆಗೊಂಡೆ, ಬಿಸಿಲಿನ ಝಳದೆ/ ಹುಲ್ಲೆ ಹಂಗಿಸುವ ಹುಸಿನೀರ ಕಾಂಬೊಲು ಕಂಡೆ. (1–1, 2)**

: ಮರೀಚಿಕೆ; ಬಿಸಿಲುಗುದುರೆ; ಮೃಗಜಲ.

*ಬೇಂದ್ರೆಯವರು ಸೂರ್ಯನ ಕಿರಣಗಳಿಂದುಂಟಾಗುವ ನೀರಿನ ಭ್ರಮೆಯಾದ ಮರೀಚಿಕಾ ಜಲವನ್ನು 'ಹುಸಿನೀರು' ಎಂದು ಕರೆದಿದ್ದಾರೆ. ಮರೀಚಿಕಾ ಎಂಬ ಸಂಸ್ಕೃತ ಪದಕ್ಕೆ ಸಮನಾಗಿ 'ಹುಸಿನೀರು' ಎಂಬ ಕನ್ನಡ ಪದವನ್ನು ಟಂಕಿಸಿರುವುದು ಇಲ್ಲಿಯ ವಿಶೇಷ. ಅದು ದಾಹದಿಂದ ಬಳಲಿದ ಹುಲ್ಲೆಯನ್ನು ಹಂಗಿಸುತ್ತದೆ. ಹಾಗೆ ಅಲ್ಲಮಪ್ರಭು ಮನದ ಬಯಲಲ್ಲಿ ಬವಣೆಗೊಂಡಿದ್ದಾರೆ.

* * * * * *

### ಹುಟ್ಟುಗಟ್ಟು, ಹದುಳ

**ಶೂನ್ಯದಲಿ/ ಹುಟ್ಟುಗಟ್ಟಿತು ಹದುಳದೊಂದು ಹುಣ್ಣಿಮೆ (2–3, 4)**

: ಉಂಟಾಗು; ಜನ್ಮ ತಾಳು.

: ಸಂತೋಷ; ಹಿಗ್ಗು, ಕ್ಷೇಮ, ಸಮಾಧಾನ.

*ವಚನಕಾರರು ಪರಮಾತ್ಮನ ಸ್ವರೂಪವನ್ನು ಬಯಲು, ಶೂನ್ಯ ಎಂದು ಕರೆದಿರುವರು. ಅಲ್ಲಮನ ಚಿಂತನೆ ಆ ಅರಿವಿನಲ್ಲಿ ಹುಣ್ಣಿಮೆಯ ಸಂತಸದಂತೆ ಜನ್ಮತಾಳಿತು.

---

## ರತ್ನಾಕರ

### ಜಾತಿರಸಿಕ

**ಜಾತಿರಸಿಕನೆ ನೀನು 'ಹಿಡಿದುದೇ ತಿರುಳು, ನುಡಿ/ ದುದೆ ಹುರುಳು' (1–7, 8)**

: ಹುಟ್ಟು ಗುಣವಾಗಿ ಬಂದ ರಸಿಕತೆಯುಳ್ಳವನು; ಉತ್ತಮನಾದ ರಸಿಕ.

*ಬೇಂದ್ರೆ ಅವರು ಮಹಾಕವಿ ರತ್ನಾಕರವರ್ಣಿಯನ್ನು 'ಜಾತಿರಸಿಕ' ಎಂದು ಕರೆದಿದ್ದಾರೆ. ಈ ಮಾತಿಗೆ ಮಾನವ ಹಾಗೂ ದೈವೀಭಾವದ ಬೆಸುಗೆಯನ್ನು ಬೆಸೆದ ಮತ್ತು ಸೃಷ್ಟಿಸಿದ

ಕವಿಯೆಂಬ ಆಶಯವೂ ಇಲ್ಲಿ ಅಭಿಪ್ರೇತವಾಗಿದೆ. ಭಾವಧ್ಯಾನ ಮತ್ತು ಲೋಕಧ್ಯಾನಗಳು ರತ್ನಾಕರನಲ್ಲಿ ಸಂಗಮವಾಗಿದೆ.

---

## ಗಂಧವತಿ

**ಮುಕುಲ**

**ಗಿರಿಶಿಖರ/ ಮುಕುಲದೊಲು ಮೊಗವನೆತ್ತಿವೆ ನಭದಲಲ್ಲಲ್ಲಿ; (1–2, 3)**

:ಅರಳುತ್ತಿರುವ ಮೊಗ್ಗು; ಮುಗುಳು; ಕುಟ್ಮಲ.

*ಗಿರಿಶಿಖರಗಳು ನಭದಲ್ಲಿ ಮೊಗವೆತ್ತಿರುವುದನ್ನು ಅರಳುತ್ತಲಿರುವ ಮೊಗ್ಗು ಎಂದು ಬಣ್ಣಿಸಿದ್ದಾರೆ.

---

## ರಸಿಕ:–ವೇದಾಂತಿಗೆ

**ನಗೆಯಾಡು**

**ನಗೆಯಾಡದಿರು ನನ್ನ ನಲುಮೆ ಒಲುಮೆಯ ಕುರಿತು. (1–1)**

: ಗೇಲಿ ಮಾಡು; ಪರಿಹಾಸ ಮಾಡು; ಅಪಹಾಸ್ಯ ಮಾಡು.

* 'ಸತ್ಯ ಮಿಥ್ಯವನರಸೆ, ಸಾಕು ಪ್ರೇಮದ ಯುಕ್ತಿ' ಎಂದು ಈ ನೆಲದ ಬದುಕನ್ನು ಅರ್ಥೈಸಿದವರು ಬೇಂದ್ರೆ. 'ಒಲವೆ ನಮ್ಮ ಬದುಕು' ಎಂಬುದು ಅವರ ಚಿಂತನೆ. ಹಾಗಾಗಿ ರಸಿಕರಾದ ಅವರು ವೇದಾಂತಿಗೆ 'ನನ್ನ ನಲ್ಮೆ ಒಲ್ಮೆಯನ್ನು ಗೇಲಿಮಾಡಬೇಡ' ಎಂದಿದ್ದಾರೆ.

* * * * * *

**ಚಿನ್ನಾಟ**

**ಮಧುಚುಂಬ/ ನವು ಕುನ್ನಿ ಚಿನ್ನಾಟ (1–3, 4)**

: ಹುಡುಗಾಟ, ಚೆಲ್ಲಾಟ.

*ಈ ನೆಲದ ಗಂಡು–ಹೆಣ್ಣಿನ ಪ್ರೀತಿ ಆಟದಲ್ಲಿ ಮಧುಚುಂಬನ ಸಹಜ ಆನಂದದಾಟ ಎಂದಿದ್ದಾರೆ.

---

## ಕೃತಿ

**ಪಂಥಗಾರ**

**ನಿರ್ದೋಷಕೃತಿಯ ನಿರ್ಮಿಸುವೆನೆನ್ನುವ ಪಂಥ/ ಗಾರ! (1-1, 2)**

: ಪ್ರತಿಜ್ಞೆ ಮಾಡುವವನು; ಪಣ ತೊಡುವವನು.

* 'ಕೃತಿ' ಅಷ್ಟಷಟ್ಪದಿಯಲ್ಲಿ 'ಕೃತಿಯ ರಚಿಸದೆ ಕೃತಾರ್ಥವೇ ಜೀವ? ರಸವಿಮರ್ಶೆಯು ರಸದ ಯೋಗ ಕೊಡಬಲ್ಲುದೆ?' ಎಂದು ಬೇಂದ್ರೆಯವರು ವಿಮರ್ಶಕರನ್ನು ಪ್ರಶ್ನಿಸಿದ್ದಾರೆ. ದೋಷರಹಿತ ಕೃತಿ ರಚಿಸುವೆನೆಂದು ಪಣತೊಡುವವನೆ-ಕೃತಿ ಬೆಳಕು, ವಿಮರ್ಶೆ ನೆರಳು- ಎಂಬುದನ್ನು ತಿಳಿ ಎಂದು ಪ್ರತಿಮಾತ್ಮಕವಾಗಿ ಹೇಳಿದ್ದಾರೆ.

---

## ಒಡನುಡಿ

**ಒಡನುಡಿ, ಉಃಶಾಪ**

**ಸಿಡಿದು/ ಪೂರ್ವ ವೈಭವವು ಉಃಶಾಪ ಕೋರುವ ಕಲ್ಲು. (1-7, 8)**

: ಸ್ಪಷ್ಟವಾದ ಮಾತು; ಬಿಚ್ಚು ನುಡಿ.

: ಶಾಪದ ನಿವೃತ್ತಿ; ಶಾಪವನ್ನು ನಿವಾರಿಸುವ ವರ.

* 'ಒಡನುಡಿ' ಕವನವು ಕನ್ನಡಿಗರ ಮತ್ತು ಕರ್ನಾಟಕದ ಬಗೆಗಿನ ಬಿಚ್ಚುನುಡಿಯಾಗಿದೆ. ಕರ್ನಾಟಕದ ಸ್ಥಿತಿಯನ್ನು 'ಕನ್ನಡದ ಕನ್ನಡಿಯು ಒಡೆದು ಬೆಸೆಯ ಬರದಂತೆ ದೆಸೆದೆಸೆಗೆ ಬಿದ್ದಿದೆ' ಎಂದು ಉಪಮಾನಾತ್ಮಕವಾಗಿ ಚಿತ್ರಿಸಿದ್ದಾರೆ. ಕನ್ನಡಿಗರನ್ನು 'ದನದ ಜಂಗುಳಿಯಂತೆ ಹಿಂಡಾಗಿ' ಎಂದು ಛೇಡಿಸಿದ್ದಾರೆ.

ನಾಡು ಪೂರ್ವ ವೈಭವ ನೆನೆದು ಈಗಿನ ಸ್ಥಿತಿಗೆ ನೊಂದು, ಶಾಪವನ್ನು ನಿವಾರಿಸುವ ವರ ಬೇಡುವ ಕಲ್ಲಾಗಿ ಕುಳಿತಿದೆ ಎಂದು ವ್ಯಥೆ ಪಟ್ಟಿದ್ದಾರೆ.

---

## ಸುಹೃದ

**ಉಸಿರು**

**ಎಲೆ ಸುಹೃದ, ಸರ್ವ ಭೂತಾಂತರಸ್ಥನೆ, ನರನ/ ನಾರಾಯಣನೆ, ನಿನ್ನ ಮೈತ್ರಿಯ ಉಗಾಭೋಗ/ ಉಸಿರು ಈ ಹಕ್ಕಿಯಲಿ; ತುಂಬು ಜೀವವ ದೇವ. (1-1, 2, 3)**

*ಸರ್ವ ರಾಗ ತಾಳಗಳಲ್ಲಿ ಹಾಡಲು ಯೋಗ್ಯವಾದ ಹಾಡುಗಳು 'ಉಗಾಭೋಗ'ಗಳು. ಅದು ಜನಪ್ರಿಯ ಹಾಡಿನ ರೂಪ. ಆ ಪ್ರಿಯಭಾವ ಕವಿ ಮತ್ತು ಸಹೃದಯರನ್ನು ಬಂಧಿಸಿರುವ ತಂತು. ಶ್ವಾಸ, ಪ್ರಾಣವಾಯು, ಜೀವ ಎಂಬ ನಾಮಪದದ ಅರ್ಥವನ್ನು 'ಉಸಿರು' ಹೊಮ್ಮಿಸುತ್ತದೆ. ಅದು ಕವಿಗೆ ಸುಹೃದನು ಜೀವ ಚೈತನ್ಯವಾಗಿರುವುದನ್ನು ಧ್ವನಿಸುತ್ತದೆ.

ಅದೇ ಉಸಿರು ಪದ ಹೇಳು, ಧ್ವನಿ ಮಾಡು ಎಂಬ ಕ್ರಿಯಾಪದವಾಗಿ ಕವಿಯಾದ ಹಕ್ಕಿಯಲ್ಲಿ ಸುಹೃದನಾಗಿ ಹಾಡು ಎಂಬ ಅರ್ಥವನ್ನು ನೀಡುತ್ತದೆ.

* * * * * *

**ಯುಗಜುಗ, ಹದ**

**ಯುಗಜುಗದ ಪರಿಪಾಕದಿಂದ ಬರಲಿರುವಂಥ/ ಸ್ನೇಹಸಾರದ ಹದವನರಿವೆವೇ? (1–4, 5)**

: ಯುಗಜುಗ, ಯುಗಯುಗ (ದ್ವಿರುಕ್ತಿ)

: ಪಕ್ವಗೊಂಡ ಸ್ಥಿತಿ; ಪಕ್ವತೆ.

* ಸುಹೃದನ ಸ್ನೇಹವೆನ್ನುವುದು ಯುಗಯುಗದ ಪರಿಪಾಕದಿಂದ ಬರುವ ಹದ.

---

## ಗಾರುಡಿಗ

**ಗರುಡನ ಗೆರೆ**

**ಕಂಡಿಲ್ಲವೇನೊ ಅಂಗೈಯ ಗರುಡನ ಗೆರೆಯ! (2–6)**

: ಮನುಷ್ಯರ ಹಸ್ತದಲ್ಲಿರುವ ಒಂದು ರೇಖೆ,–ಗುರುತು. ಹಸ್ತದಲ್ಲಿ ಈ ರೇಖೆಯುಳ್ಳವರಿಗೆ ಹಾವು ಸುಲಭವಾಗಿ ವಶವಾಗುತ್ತದೆಂದು ಪ್ರತೀತಿ.

* ಕೆಲವು ವಿಮರ್ಶಕರು ರಸಿಕರಂತೆ ಎದುರು ತಲೆದೂಗಿ ಅನಂತರ ವಿಷಕಾರುವ ಮಾತಾಡುವರು. 'ರಸಿಕನೆನೆ ಚಂದ ತಲೆದೂಗಿ ನಾಳೆ ಕಾರುವೆ ಗರಳ!' ಎಂದು ವಿಷ ಸರ್ಪಕ್ಕೆ ಹೋಲಿಸಿದ್ದಾರೆ. ಮತ್ತು ಅಂತಹವರಿಗೆ ತನ್ನ ಸಾಮರ್ಥ್ಯ ಕುರಿತು ಪ್ರತಿಮಾತ್ಮಕವಾಗಿ 'ಕಂಡಿಲ್ಲವೇನೊ ಅಂಗೈಯ ಗರುಡನ ಗೆರೆಯ!' ಎಂದು ಎಚ್ಚರಿಸಿದ್ದಾರೆ.

---

## ಹಾಳಿ ಹಡಗ

**ಪಿಸಿ**

**ಒಡಲು ಉಡಿಗೆಗಳಂತೆ ಮಾಸಿ ಪಿಸಿವುದು (2–1)**

: (ಬಟ್ಟೆ, ಮುಂತಾದವು) ಹಿಂಜು; ಹರಿದು ಹೋಗು; ಕಿತ್ತು ಹೋಗು.

* ಈ ಶರೀರ ತೊಟ್ಟ ಬಟ್ಟೆಯಂತೆ ಜೀರ್ಣವಾಗಿ ಹೋಗುವುದನ್ನು ಕವಿ ಉಪಮಾನಾತ್ಮಕವಾಗಿ ಹೇಳಿದ್ದಾರೆ. 'ಪಿಸಿ' ಎಂಬ ಪದವನ್ನು ದಕ್ಷಿಣ ಕರ್ನಾಟಕದಲ್ಲಿ 'ಪಿಂಜಿ, ಹಿಂಜಿ' ಎಂಬುದಾಗಿ ಬಳಸುತ್ತಾರೆ. 'ಪಿಂಜಿ ಹೋದ ಬಟ್ಟೆ ಹೊಲಿದು ಉಪಯೋಗವಿಲ್ಲ' ಎಂಬ ನಾಣ್ಣುಡಿ ಇದೆ.

ಈ ಶರೀರ ಹರಿದು ಹೋಗುವುದು ದಿಟ. ಆದರೆ ಮನಸ್ಸು ತನ್ನ ಸುಂದರ ಕಲ್ಪನೆಯಲ್ಲಿ ಮುಗಿಲ ಮಲ್ಲಿಗೆಯನ್ನು ಕೊಯ್ದು ಮೂಸಿ ಉಲ್ಲಾಸಗೊಳ್ಳುತ್ತದೆ. ಚಿತ್ತದಲ್ಲಿ ಮೂಡುವ ಚಿತ್ರಗಳಲ್ಲಿ ಚಿತ್ರಕಳೆ ತುಂಬಿ ಸ್ವರ್ಗವನ್ನು ಹಡೆದು ಪಡೆಯುತ್ತದೆ.

---

## ರಸಿಕ

**ಕ್ಷಾರೋದಧಿ**

**ನನ್ನದೆಯು–ನಿನ್ನದೆಯು; ನಡುವೆ ಕ್ಷಾರೋದಧಿಯು! (1–1)**

: ಕ್ಷಾರಾಂಬುಧಿ; ಉಪ್ಪಿನ ಸಮುದ್ರ.

* ಬೇಂದ್ರೆ ಅವರು ರಸಿಕ ಹೃದಯಕ್ಕೆ ಕೆಳೆಯ ಬೇಕು ಎಂಬ ಚಿಂತನೆಯನ್ನು ಈ ಕವನದಲ್ಲಿ ನೀಡಿದ್ದಾರೆ. ನನ್ನ ನಿನ್ನ ನಡುವೆ ಉಪ್ಪಿನ ಸಮುದ್ರವಿದೆ. ಎಲ್ಲರೂ ತಮ್ಮ ತಮ್ಮ ದುಃಖದಲ್ಲಿ ಮುಳುಗಿದರೆ 'ಕೆಳೆಯ ಬೇಡುವ ಎದೆಗೆ ಯಾರು ಜೋಡು?' ಎಂದು ಪ್ರಶ್ನಿಸಿದ್ದಾರೆ.

---

## ಗೃಹಿಣಿ

**ಕಿವಿಯೂದು**

**ಗುರಿಯಿಟ್ಟ ಕಣ್ಣುಗಳ, ಕಿವಿಯೂದಿ, ಹೊರಳಿಸುತ/ ತಾನೆ ತನ್ನಷ್ಟಕ್ಕೆ ಹಾಡಿದಾಕೆ (1–3, 4)**

: ಕಿವಿಯಲ್ಲಿ ಗುಟ್ಟಾಗಿ ಹೇಳು; ಬೋಧಿಸು.

* ಮೃಗನಾದ ಪುರುಷನು ಮಾನವನಾಗುತ್ತ ಮಗುವನ್ನು ಮುದ್ದಾಡಿ ಪ್ರೀತಿ, ಸಹನೆ, ಶಾಂತಿ ಪಡೆದು 'ಗುರಿಯಿಟ್ಟ ಕಣ್ಣು'ಗಳಿಂದ ನೋಡಿ–to think of, to take aim, to keep in view, ಆದಾಗ ಸ್ತ್ರೀಯು ಅವನನ್ನು ಗೃಹಸ್ಥನನ್ನಾಗಿ ಮಾಡಿದಳು. 'ಕಿವಿಯೂದಿ ಹೊರಳಿಸುತ ತಾನೆ ತನ್ನಷ್ಟಕ್ಕೆ ಹಾಡಿ' ಗೃಹಿಣಿಯಾದಳು. ಹೀಗೆ ಮಾನವರು ಕುಟುಂಬ ರೂಪಿಗಳಾಗಲು ಹೆಣ್ಣೇ ಕಾರಣ.

---

## ಸಾಹಿತ್ಯ–ಕೇಳಿ

### ಪಲ್ಲ, ಕೇಳಿ

**ಒಂದು ಹಿಗ್ಗಿನ ಪಲ್ಲ, ಹಲವು ನುಡಿಯಲಿ ಹರಿಯೆ/ ಆಟಪಾಟದ ಹಾಡು ಕಳಸವಿಟ್ಟಂತೆ! (2–3, 4)**

: (ಸಂಗೀತ) ಹಾಡಿನ ಆರಂಭದಲ್ಲಿದ್ದು ನುಡಿಗೊಂದು ಸಲ ಪುನರಾವರ್ತನೆಗೊಳ್ಳುವ ಭಾಗ.

: 1. ಗುಂಪು; ಹಿಂಡು.

2. ಆಟ; ಲೀಲೆ; ವಿನೋದ; ಕ್ರೀಡೆ.

* ಬೇಂದ್ರೆ ಅವರಿಗೆ ಸಾಹಿತ್ಯವು ಒಂದು ವಿನೋದವಾಗಿ ಎಳೆಯ ಗೆಳೆಯರ ಜೊತೆ, ಶಾರದಾಮಂಡಲದಲ್ಲಿ, ಗೆಳೆಯರ ಗುಂಪಿನಲ್ಲಿ ಒಂದು ಕೇಳಿಯಂತಿತ್ತು. ಅದನ್ನು ಉಪಮಾನಾತ್ಮಕವಾಗಿ– ಓರ್ವ ಕವಿಯ ಪಲ್ಲವಿ ಹಲವರಲ್ಲಿ ಹಾಡಾಗಿ ರಚನೆಗೊಂಡು ಆಟಪಾಟಕ್ಕೆ ಕಳಸವಿಟ್ಟಂತೆ ಇತ್ತು– ಎಂದು ಹೇಳಿದ್ದಾರೆ. ಅವರ ಸಾಹಿತ್ಯ ಗುಂಪಿನ ಕ್ರೀಡೆಯಾಗಿತ್ತು.

---

## ದಬ್ಬಾಳಿಕೆಗೆ

### ಹಿಂಬರಿಕೆ, ತೊತ್ತಳಿಗೊಳ್

**ಹಿಂಬರಿಕೆಯಡಿಯಲ್ಲಿ ಸಿಕ್ಕು ತೊತ್ತಳಿಗೊಂಡು/ ಸಾವವರ ನರಳಿಕೆಯ ಕಿವುಡುಗೇಳಿ (1–3, 4)**

: ಹಿಂದಕ್ಕೆ ಓಡುವಿಕೆ,– ಚಲಿಸುವಿಕೆ.

: ನಜ್ಜುಗುಜ್ಜಾಗು; ಅಜಿಗಿಜಿಯಾಗು.

*ಬಂಡವಾಳಶಾಹಿ ಮತ್ತು ಅಧಿಕಾರಶಾಹಿಯವರಿಗೆ ಕಣ್ಣು ನೆತ್ತಿಯಲ್ಲಿದ್ದಂತೆ ಕುರುಡು ಆವರಿಸಿರುತ್ತದೆ. ಅವರ ದಾಳಿಗೆ ಸಿಕ್ಕು ಹಿಂದಕ್ಕೆ ಓಡುವವರು ನಜ್ಜುಗುಜ್ಜಾಗುತ್ತಿದ್ದಾರೆ. ಹಾಗೆ ಸಾಯುವವರ ನರಳಿಕೆ ಕೇಳದಂತಹ ಕಿವುಡರು ಆಳುವವರಾಗಿದ್ದಾರೆ.

---

## ರೋದನ

### ಉಗೆ

**ಹಣ್ಣೆಲೆಯು ಹಾರುತಿರೆ, ನೀರಿನುಗೆಯಾಗುತಿರೆ/ ದಿನದ ಬಿಸಿಲಿಗೆ ಹೂವು ಬಾಡುತಿರಲು (1–1, 2)**

: ನೀರಿನ ಹಬೆ, ಆವಿ.

*ದಯಾಹೀನವಾದ ಈ ಲೋಕದಲ್ಲಿ ಕರುಣೆಗೆ ಆಶಿಸಿ ಕೂಗುತ್ತಿರುವ ನೋವು 'ರೋದನ' ಕವನ. ಹಣ್ಣೆಲೆ ವೃದ್ಧರು, ಹೂವು ಮಕ್ಕಳು–ಕರುಣೆಯಿಲ್ಲದ ಜನರ ನೀರಿನ ಹಬೆಯಲ್ಲಿ ಒದ್ದಾಡುವುದನ್ನು ರೂಪಕಾತ್ಮಕವಾಗಿ ಚಿತ್ರಿಸಿದ್ದಾರೆ.

---

## ಪ್ರಾಣಿ ಜೀವನ

### ಮೀಂಬುಲಿಗ

**ಮೀಂಬುಲಿಗ ಬೆಳ್ಳಕ್ಕಿ ಬೇಟೆಯಾಡಲು ಅಡವಿ; (2–1)**

: ಮೀನನ್ನು ಹಿಡಿದು ತಿನ್ನುವ ಕೊಕ್ಕರೆ ಮೊದಲಾದ ನೀರು ಹಕ್ಕಿ.

*ಕೊಕ್ಕರೆ, ಬೆಳ್ಳಕ್ಕಿ ಮೊದಲಾದವು ಬೇಟೆಯಾಡಲು ಮೀನುಗಳ ಹುಟ್ಟು, ಮನೆಯಾದ ಕೆರೆ ಕೊಳದಲ್ಲಿ ನೆರೆಯುವವು. ಬೇಟೆಗಾರರಿಗೆ ಅದು ಹಕ್ಕಿಗಳ ಜೀವಕ್ಕೆ ಗುರಿಯಿಡುವ ಆಟದ ಜಾಗ.

---

## ವನಸುಮ

### ಉಗ್ಗು

**ಬೆಟ್ಟದೆದೆಯನು ಬಿರಿದು ಬಾಳಹಿಗ್ಗಿನ ಬುಗ್ಗೆ/ ಉಗ್ಗಿ ಬಹದದು (2–3, 4)**

: ಉಕ್ಕಿ ಬರು; ನುಗ್ಗಿ ಬರು.

*ಸಹಜವಾಗಿ ಬೆಟ್ಟದೆದೆಯಲಿ ನೀರು ಉಗಮಿಸುವುದನ್ನು ಕವಿ ಪ್ರಕೃತಿಯ 'ಬಾಳಹಿಗ್ಗು' ಎಂದು ಕರೆದಿದ್ದಾರೆ.

---

## ಜೀವ–ಜೀವವೇ

### ಗಿರುಕಿಸು

**ದಿನಬೆಳಗೂ ನಿರುಕಿಸುವೆ,/ ದೆಸೆದೆಸೆಗೂ ಗಿರುಕಿಸುವೆ (2–1, 2)**

: ಸುತ್ತಿಸು; ತಿರುಗಿಸು.

* 'ಗರ್ಭವತಿ ಸ್ತ್ರೀಯ ಮನಸ್ಸಿನ ಸ್ಥಿತಿಯ ವರ್ಣನೆ' ಎಂಬ ಭಾವಸಂದರ್ಭ ಈ ಕವನಕ್ಕಿದೆ.

---

## ದೊಡ್ಡವರು

### ಕೈವಾಡ

**ಕನ್ನಡರ ಕೈವಾಡದಿಂದ್ರ ಜಾಲಕೆ ಕಲ್ಲು/ ಕುಸುರಿತು! (2–1, 2)**

: ಕೈ ಚಳಕ; ಹಸ್ತ ಕೌಶಲ.

*ಬೇಂದ್ರೆಯವರು ಕನ್ನಡಿಗರ ಶಿಲ್ಪಕಲಾ ನೈಪುಣ್ಯದ ಕೈಚಳಕ, ಸೂಕ್ಷ್ಮ ಕುಸುರಿಕಲೆಯ ಹಸ್ತಕೌಶಲವನ್ನು ಕೈವಾಡ ಎಂದು ಕರೆದಿದ್ದಾರೆ. ಆ ಇಂದ್ರ ಜಾಲಕ್ಕೆ ಕಲ್ಲು ಕುಸುರಿತು/ ಕಡೆಯಲ್ಪಟ್ಟಿತು.

* * * * * *

**ಪಡು**

**ಚಕ್ರವರ್ತಿಗಳ/ ಸಿಂಹ ಪೀಠವು, ಜಗದ್ಗುರು ಪೀಠ, ಕಲ್ನಾಟಿ/ ಸಿದ ವೀರರಾಡಿದಾಡುಂಬೊಲವು, ಮಾಸತಿಯ/ ನಿಸದಿಗೆಯ ಭೂಮಿ, ಪಾಳ್, ಪಡು, ಬರಡು. (2-4, 5, 6, 7)**

: ವ್ಯವಸಾಯ ಮಾಡದೆ ಪಾಳುಬಿದ್ದ ಭೂಮಿ; ಬೀಳುನೆಲ.

*ಕಾಲ ಚಕ್ರವು ಉರುಳಿದಂತೆ ಹಿಂದಿನದೆಲ್ಲಾ ಹಾಳಾಗಿ ಬೀಳು ನೆಲವಾಯಿತು.

---

## ಬೇರೊಬ್ಬರ ಮಕ್ಕಳಿಗಾಗಿ

**ನೀಟುಗಾರ**

**ನೀಟುಗಾರರರನೆಲ್ಲ ನಾಡೆ ನಾಚಿಸುವಂಥ/ ಮಾಟಮಾಡುವ ಕಣ್ಣು (ಸಾಲು:9, 10)**

: ಚೆಲುವ; ಸುಂದರ.

*ಸುಂದರರರನ್ನೆಲ್ಲ ನಾಚಿಸುವಂಥ ಮಾಟಮಾಡುವ ಕಣ್ಣಿದ್ದ ಮಕ್ಕಳು- ಎಂದು ಮರಣ ಹೊಂದಿದ ಆಪ್ತರ ಮಕ್ಕಳನ್ನು ನೆನೆದು ನೊಂದು ಕಾವ್ಯ ರಚಿಸಿದ್ದಾರೆ.

---

## ತಡಸಲು

**ತಡಸಲು**

**ತಡಸಲು ತಡಸಲು ಅಗೊ ಅಲ್ಲಿ,/ ದಡದಡ ಎನುವದು ಎದೆ ಇಲ್ಲಿ/ ದಿಡುಗದೊ ಗುಡು ಗುಡು ಗುಡುಗುತಿದೆ (ಸಾಲು: 1, 2, 3)**

: ಎತ್ತರದಿಂದ ಆಳಕ್ಕೆ ಧುಮುಕುವ ನೀರು; ಅಬ್ಬಿ; ಜಲಪಾತ; ಧಬಧಬೆ.

*ಜಲಪಾತವನ್ನು 'ದಿಡುಗು' ಎಂದು ಕರೆಯುತ್ತಾರೆ.

---

## ಜೀವದ ಗೆಳತಿ

**ನೂಗು**

**ನೂಗುತೊಂದೇ ದುಃಖ, ತೂಗುತೊಂದೇ ಸುಖವ,/ ಬಾಗು ಬಾಗಿದ ಹಾಗೆ ಮುಗಿಲನೊಡಲೊಳಗಿರಿಸಿ/ ಸಾಗೋಣ ಕೂಡಿ ಕೂಡಿ. (4–2, 3, 4)**

*ನೂಗು ಪದ ತಳ್ಳು, ದಬ್ಬು, ಎಂಬ ಅರ್ಥವನ್ನು ಮುಂಚಾಚಿದರೂ ಈ ನುಡಿಯಲ್ಲಿ ಬೇಂದ್ರೆ ಅವರು ಅದನ್ನು ಸಹಿಸು, ತಾಳು ಎಂಬ ಅರ್ಥದಲ್ಲಿ ಬಳಸಿದ್ದಾರೆ.

---

## ಪತಿತ

**ಗೂಡಿಸು**

**ಜನ್ಮದಿಂ ಜನ್ಮಕ್ಕೆ ಉಡುಗಿ ಗೂಡಿಸಿ ತಂದ/ ತೊಡಕುಗಳ ಮಾಲೆ ನಮ್ಮೆದಿಯಲ್ಲಿ ಜೋಲಾಡುತಿದೆ (1–3, 4, 5)**

: ರಾಶಿ ಹಾಕು; ಒಟ್ಟಿಗೆ ಸೇರಿಸು.

---

## ಅರ್ಪಣ–ತರ್ಪಣ

**ಕಳಿಲು**

**ಕೊಳಲಾಗಬಹುದಿತ್ತು, ಕಳಿಲಿದ್ದಾಗಲೇ ಕಡಿದ ಕಾಳ! (1–1)**

: ಬಿದಿರಿನ ಮೊಳಕೆ,–ಕುಡಿ.

*ಕರುಳಿನ ವಚನಗಳಲ್ಲಿ ಕವಿಯ ಮನದ ಭಾವವೆಲ್ಲ ಮಿಡಿಯಾಗಿ ಕಂಪು ಸೂಸಿ, ಶಬ್ದ ಶಬ್ದ ನಾದದಲೆಯಲ್ಲಿ ತೂಗಿ, ವಾತ್ಸಲ್ಯ ದರ್ಶನವನ್ನು ನೀಡುತ್ತದೆ. ಜೊತೆ ಜೊತೆಗೆ ವಾತ್ಸಲ್ಯ ಗೀತದ ಹಿಂದೆ ಜೀವ ಕುಲುಮೆಯ ತಿದಿಯಲ್ಲಿಯ ಕಾವು, ನೋವು, ಸಿಡಿದ ಕಿಡಿಯೂ ಇದೆ. ಆರುಜನ ಮಕ್ಕಳನ್ನು ಕಳೆದುಕೊಂಡು ನೋವು ನುಂಗಿದ ಕವಿ ಮಗ ಕ್ಷೇಮೇಂದ್ರನು ಮರಣ ಹೊಂದಿದಾಗ ರಚಿಸಿದ್ದು 'ಅರ್ಪಣ ತರ್ಪಣ'.

ಆ ಮಗು ಕೂಸಾಗಿರುವಾಗಲೇ ತೀರಿ ಹೋಗಿದ್ದನ್ನು ರೂಪಕಾತ್ಮಕವಾಗಿ 'ಕಳಲಿದ್ದಾಗಲೇ ಕಡಿದ ಕಾಳ' ಎಂದು ಚಿತ್ರಿಸಿದ್ದಾರೆ.

---

## ಮೊಲೆ

**ಗೋದಲೆ**

**ನನ್ನ ಬಾಲಗೋಪಾಲನ ಗೋದಲೆಗಳವ್ವಾ ಇವು (1–1)**

: ದನಗಳ ಹಟ್ಟಿ; ಕೊಟ್ಟಿಗೆ.

*ತಾಯಿಯ ಮೊಲೆ ತನ್ನ ಮಕ್ಕಳಿಗೆ ಗೋದಲೆ.

---

## ಲಲ್ಲೆ

**ಬೇಳೆಯ ಮಣಿ**

**ನನ್ನ ಬೇಳೆಯ ಮಣಿಯೊಳಗಿನ ಬಂಗಾರವಲ್ಲವೆ ನೀನು? (2–3)**

: ತಾಳಿಯ ಜೊತೆಗೆ ಹಾಕಿಕೊಳ್ಳುವ ಬೇಳೆಯಾಕಾರದ ಚಿನ್ನದ ಮಣಿ.

*ದಾಂಪತ್ಯದ ಫಲ ಸಂತತಿ. ಅದನ್ನು ಕವಿ ರೂಪಕಾತ್ಮಕವಾಗಿ 'ಬೇಳೆಯ ಮಣಿಯೊಳಗಿನ ಬಂಗಾರ' ಎಂದು ವರ್ಣಿಸಿದ್ದಾರೆ.

---

## ರಹಸ್ಯ

**ಜಿನುಗು, ಜೀನುಗಾರ**

**ಬಣ್ಣದಲ್ಲಿ ಮಿಗಿಲಾದ ನಿನ್ನ ಕಣ್ಣ ನೋಡುತ್ತಲೆ/ ಕಾಣುವುದು–ಜೀನುಗಾರರ ಜಿನುಗಿನ ಗೊತ್ತು. (2–2, 3)**

: ನಯವಾದ ಕೆಲಸ; ಕುಸುರಿ ಕೆಲಸ.

: ಚಿತ್ರಗಾರ; ಶಿಲ್ಪಿ; ಬಣ್ಣಗಾರ.

*ಈ ಜಗದ ಸೃಷ್ಟಿಕಾರರನ್ನು ಬೇಂದ್ರೆ ಜೀನುಗಾರ ಎಂದು ಕರೆದು ಮಗು ಅವನ ಕುಸುರಿ ಕೆಲಸ ಎಂದು ಬಣ್ಣಿಸಿದ್ದಾರೆ.

* * * * * *

**ಗಾಡಿಕಾರ, ಕೈವಾಡ, ಕೈ ಚಳಕ, ಮೇಲು ಪಂಜ್ತಿ**

**ಗಾಡಿಗಾರ ತಾವರೆಯ ಎಸಳಿನ/ ಮೋಡಿಯ ಮಾಟಕ್ಕಿಂತಲೂ/ ನಿನ್ನ ಕೈಕಾಲ್ ಬೆರಳುಗಳ ಮಾಟವ ನೋಡಿ ಹೊಳೆಯುವುದು/ ಕೈವಾಡದವರ ಕೈಚಳಕದ ಕುಸುರಿನ ಮೇಲು ಪಂಜ್ತಿ. (4–1_5)**

: ಸೊಗಸುಗಾರ; ಚೆಲುವ; ಸುಂದರ.

: ಕುಶಲ ಕೆಲಸ.

: ಕೈಯ ಚಮತ್ಕಾರ; ಹಸ್ತಕೌಶಲ; ಹಸ್ತ ಚಾತುರ್ಯ.

: (ಅನುಕರಿಸಲು ಯೋಗ್ಯವಾದ) ಉತ್ತಮವಾದ ಮಾದರಿ; ಉಚಿತವಾದ ಆದರ್ಶ.

*ಜನಪದರು ಮಗುವನ್ನು 'ಮರದಲ್ಲಿ ಮರಹುಟ್ಟಿ ತಿನ್ನಬಾರದ ಹಣ್ಣು ಬಲು ರುಚಿಯು' ಎಂದು ಹೇಳಿ ನೋಡಿ ನೋಡಿ ಸವಿದಿದ್ದಾರೆ, ಅಂತಹ ಸವಿಯ ಅನುಭವ ಇಲ್ಲಿ ಕಾವ್ಯವಾಗಿ ಹರಿದಿದೆ.

---

## ಅಂಗೈ

**ಮುಟ್ಟಿಗೆ**

**ನನ್ನ ಮಗುವಿನ ಮುಚ್ಚಿದ ಮುಟ್ಟಿಗೆಯಲ್ಲಿ/ ಮೂಲೋಕದೊಡೆತನವಿರಬಹುದು. (1–1, 2)**

: ಮುಚ್ಚಿದ ಅಂಗೈ; ಮುಷ್ಟಿ.

*ಎಳೆಯ ಮಕ್ಕಳು ಮುಚ್ಚಿದ ಅಂಗೈನಲ್ಲಿರುತ್ತವೆ. ಅದರಲ್ಲಿ ಇರಬಹುದಾದ ಭಾಗ್ಯ ತಾಯಿಗೆ ರಹಸ್ಯವಾಗಿ ಅವಳ ಕಲ್ಪನೆ ಗರಿಗೆದರಿ ಉಲ್ಲಾಸ ಪಡುತ್ತದೆ.

---

## ಮುಖರಸ

**ಮುಖರಸ, ಮಿಗು, ಒಗು, ತೊರೆಗರೆಯಿಸು**

**ನಕ್ಕು ನಕ್ಕು ನಲಿವಾಗ ಬಿಕ್ಕಿ ಬಿಕ್ಕಿ ಅಳುವಾಗ/ ಮಿಗುವ ಸೊಲ್ಲು ಒಗುವ ಜೊಲ್ಲು/ ವಾತ್ಸಲ್ಯದ ಸೆಲೆಯ ನೆಲೆದೋರಿತು/ ನಿದ್ದೆಯೊಳಗಿಂದ ಎಚ್ಚರಿಸಿತ್ತು/ ಬಂಜೆಗೆ ತೊರೆಗರೆಯಿಸಿತ್ತು–ಈ ಮುಖರಸ (2–1_5)**

: ಜೊಲ್ಲು; ಲಾಲಾಜಲ.

: ಹೆಚ್ಚಾಗು; ಅಧಿಕವಾಗು.

: ಹೊರಸೂಸು; ಚೆಲ್ಲು; ಸುರಿ.

: ಹಾಲನ್ನು ಸುರಿಸುವಂತೆ ಮಾಡು.

*ಬೇಂದ್ರೆ ಅವರು ಮಗುವಿನ ಜೊಲ್ಲನ್ನು 'ಮುಖರಸ' ಎಂದು ಕರೆದಿದ್ದಾರೆ. ಮಗು ನಗುವಾಗ ಮತ್ತು ಅಳುವಾಗ ಹೆಚ್ಚಾಗುವ ಧ್ವನಿ, ಬಾಯಿಯಿಂದ ಸುರಿವ ಜೊಲ್ಲಿನಲ್ಲಿ ವಾತ್ಸಲ್ಯ ಸೆಲೆಯ ನೆಲೆ ಕಂಡು– ಬಂಜೆಗೆ ಮಗು ಹೆರುವ ಬಯಕೆಯಾಯಿತು. ಅವಳನ್ನು ತೊರೆಗರೆಯಿಸಿತು.

***

**'ಸೊಲ್ಲು ಎಂಬುದು ನಾದ, ಭಾವದಲ್ಲಿದೆ ಸ್ವಾದ' (ಸೂರ್ಯಪಾನ: ಸಂಖ್ಯಾಂಕಿತ)**

---

## ನಗೆ

### ಕೆಲೆ, ಅಟ್ಟಹಾಸ, ಗಲ್ಲಿಸು, ತುಳುಕಾಡು

**ನನ್ನ ಕಂಡು ಕುಣಿಕುಣಿದು/ ಕೆಲೆಕೆಲೆವ ನಿನ್ನ ಅಟ್ಟಹಾಸವು/ ಗಗನಕ್ಕೇರಿ ಗಲ್ಲಿಸಿ ತಾರೆಗಳನು ತುಳುಕಾಡಿಸಿತು (5–1, 2, 3)**

: ಉತ್ಸಾಹದಿಂದ ಕೂಗು.

: ತುಂಬ ಗಟ್ಟಿಯಾದ ನಗು.

: ಪೀಡಿಸು; ಕಾಡಿಸು; ಕಷ್ಟ ಪಡಿಸು.

: ಅಲ್ಲೋಲ ಕಲ್ಲೋಲವಾಗು; ಕದಡು; ಕ್ಷೋಭೆಗೊಳ್ಳು.

ತಾಯಿಯು ಮಗು ತನ್ನನ್ನು ಕಂಡು ಉತ್ಸಾಹದಿಂದ ಕೂಗುವ ಅಟ್ಟಹಾಸವು ಗಗನಕ್ಕೇರಿ ನಕ್ಷತ್ರಗಳನ್ನು ಕಾಡಿಸಿ ಅಲ್ಲೋಲ ಕಲ್ಲೋಲವನ್ನುಂಟು ಮಾಡಿತು ಎಂದು ಕವಿಯು ಉತ್ಪ್ರೇಕ್ಷಾಲಂಕಾರದಲ್ಲಿ ಬಣ್ಣಿಸಿದ್ದಾರೆ.

---

# ತಿಲ್ಲಾಣ

## ತಾರಮ್ಮಯ್ಯ, ತಿಲ್ಲಾಣ

**ಕೈಯ ತಾರಮ್ಮಯ್ಯಕ್ಕೆ ತೊದಲು ನುಡಿಯ ತಿಲ್ಲಾಣ (ಸಾಲು:5)**

: ಸಣ್ಣ ಮಕ್ಕಳನ್ನು ಆಡಿಸುವ ಒಂದು ಬಗೆಯ ಆಟ ಮತ್ತು ಆಗ ಹೇಳುವ ಹಾಡು.

: (ಸಂಗೀತ) ಒಂದು ಬಗೆಯ ಸಂಗೀತ ಕೃತಿ; (ಅರ್ಥಕೊಡದ)ಧ್ವನಿಗಳ ಬಹು ಇಂಪಾದ ಹೊಂದಾಣಿಕೆ.

*ಮಗುವನ್ನು ಪುಟ್ಟ ಪುರಂದರ ವಿಠಲಾ ಎಂದು ಕರೆದ ಕವಿಯು-ಮಕ್ಕಳನ್ನು ಆಡಿಸುವ ತಾರಮ್ಮಯ್ಯಕ್ಕೆ ಆ ಮಕ್ಕಳು ತೊದಲು ನುಡಿಯಿಂದ ತಿಲ್ಲಾಣದ ಹೊಂದಾಣಿಕೆ ನೀಡುತ್ತಿರುತ್ತವೆ- ಎಂದು ಸಂಗೀತ ಭಾವದಲ್ಲಿ ವಾತ್ಸಲ್ಯವನ್ನು ಮಿಡಿದಿದ್ದಾರೆ. ತಿಲ್ಲಾಣ ಎಂಬುದು ಸಂಗೀತದಲ್ಲಿ ಬಳಕೆಯಾಗುವ ಪದ. ಇಲ್ಲಿ ಸ್ವರಗಳ ಮಾಲೆಯೇ ಇರುತ್ತದೆ. ವಿಧ ವಿಧ ಸ್ವರಗಳಿಂದ ಸಂಗೀತಗಾರ ಹಾಡುತ್ತಾನೆ. ಇಲ್ಲಿ ಕಲ್ಪನೆಗೇ ಪ್ರಧಾನ್ಯ.

* * *

## ವಾಚಾಮಗೋಚರ

**ತಿಲ್ಲಾಣದಲ್ಲಿ ಪಲ್ಲವಿಸಿ, ಮುಂದೆ ಪಾಡಿಗೆ ಬರುವ ನಿನ್ನೀ ಪಾಡು/ ವಾಚಾಮಗೋಚರವೇ-ಈ ನಿನ್ನ ಧ್ವನಿಕಾವ್ಯ. (ಸಾಲು-17, 18)**

: ಮಾತಿಗೆ ಸಿಗದುದು; ಶಬ್ದಕ್ಕೆ ನಿಲುಕದುದು.

*ಬೇಂದ್ರೆ ಅವರು ಮಗುವಿನ ಅರ್ಥಕೊಡದ ಆದರೆ ಬಹು ಇಂಪಾದ ಹೊಂದಾಣಿಕೆ ಹೊಂದಿದ ಧ್ವನಿಗಳನ್ನು 'ತಿಲ್ಲಾಣ'ವೆಂದು ಕರೆದಿದ್ದಾರೆ. ಅದು 'ಮಾತಿನ ಸೂತಕವಿಲ್ಲದ ನಾದವ ನಾದುವ ಸೊಲ್ಲು;/ಅರ್ಥದ ಪಾತಕವಿಲ್ಲದ ಜೀವದ ಭಾವದ ಸೊಲ್ಲು.'

ತಿಲ್ಲಾಣದ ನಂತರ ಪಲ್ಲವಿ ಹಾಡಬೇಕು. ಮಗುವಿನ ದನಿಯಲ್ಲಿ ಪಲ್ಲವಿಯೂ ಹೊಮ್ಮುತ್ತದೆ. ಅನಂತರ ಮಾತಿಗೆ ಸಿಗದ, ಶಬ್ದಕ್ಕೆ ನಿಲುಕದ ವಾಚಾಮಗೋಚರವಾದ ಪಾಡು ಹೊಮ್ಮುತ್ತದೆ. ಮಗುವಿನ ಆ ಹಾಡನ್ನು ಬೇಂದ್ರೆ ಅವರು ಧ್ವನಿಕಾವ್ಯ ಎಂದು ಕರೆದಿದ್ದಾರೆ.

---

# ಅಲೌಕಿಕ

## ಮದಗ

**ನನ್ನ ಮಾನಸದ ಮದಗವೆ/ ಮುಳುಗಿ ನೋಡಿದೆ, ಮುದ್ದಿಸಿ ನೋಡಿದೆ./ ಮೂಸಿ ನೋಡಿದೆ./ ಮುಟ್ಟಿ ನೋಡಿದೆ. ದಿಟ್ಟಿಸಿ ನೋಡಿದೆ./ ನಿನ್ನಳವು ಅಸದಳವು. (ಸಾಲು:7 ರಿಂದ 11)**

* 'ಅಲೌಕಿಕ' ಕವನವನ್ನು ವಿಮರ್ಶಿಸುತ್ತಾ ಕೀರ್ತಿನಾಥ ಕುರ್ತಕೋಟಿ ಅವರು 'ತಾಯಿ ಮತ್ತು ಮಗುವಿನ ಸಂಬಂಧವನ್ನು ಇಲ್ಲಿಯ ರಹಸ್ಯಮಯತೆಯನ್ನು ಈ ಕವಿತೆಯಲ್ಲಿ ನಿರೂಪಿಸಲಾಗಿದೆ. ಮಗು ತಾಯಿಯ ಮಾನಸದ ಮದಗಜ ನಿಜ. ಆದರೂ ಮಗು ಅವಳಿಗೆ ಒಡೆಯಲು ಬಾರದ ಒಡಪಿನಂತೆ, ಮತ್ತು ಬಿಡಿಸಲು ಬಾರದ ತೊಡಕಿನಂತೆ' ಎಂದು ಹೇಳಿದ್ದಾರೆ. [ಆಯ್ಕೆ ಮತ್ತು ಅರ್ಥ ವಿವೇಚನೆ: ಕೀರ್ತಿನಾಥ ಕುರ್ತಕೋಟಿ, ಡಾ. ವಾಮನಬೇಂದ್ರೆ, ಪುಟಬಂಗಾರ, ಸಂಪುಟ–5, ಶ್ರಾವಣಪ್ರತಿಭೆ, ಮನೋಹರ ಗ್ರಂಥಮಾಲಾ. ಧಾರವಾಡ, 1987, ಪು–48]

ಕುರ್ತಕೋಟಿ ಅವರು ಬಳಸಿರುವ 'ಮದಗಜ' ಪದವು ಕವನದ ಭಾವನೆಗೆ ವ್ಯತಿರಿಕ್ತವಾಗಿದೆ ಎನಿಸಿತು. ತಾಯಿ ಎಂದಿಗೂ ತನ್ನ ಮಗುವನ್ನು 'ಮದಗಜ' ಎಂದು ಕರೆಯುವುದಿಲ್ಲ. 'ಮುದ್ದು ಆನೆಮರಿ' ಎಂದು ಮುದ್ದಿಸುತ್ತಾಳೆ ಎಂಬುದನ್ನು ಗಮನಿಸಬೇಕು. ಬೇಂದ್ರೆ ಅವರು ತಾಯಿಯ ಸ್ಥಾಯಿಭಾವದಲ್ಲಿ ನಿಂತು 'ನನ್ನ ಮಾನಸದ ಮದಗವೆ' ಎಂದು ಮಗುವನ್ನು ಕರೆದಿರುವುದು ಸ್ಪಷ್ಟವಿದೆ.

ನನ್ನ ಈ ಅಭಿಪ್ರಾಯವನ್ನು ಮೈಸೂರಿನ ಸಾಹಿತ್ಯ ಮಿತ್ರರೊಡನೆ ಚರ್ಚಿಸಿದೆ. ಅದರಿಂದ ಸಮಾಧಾನವಾಗಲಿಲ್ಲ. ನನ್ನ ಪತ್ನಿಯನ್ನು ಮದಗ ಪದ ನಿಮ್ಮ ಹಳ್ಳಿಯಲ್ಲಿ ಬಳಕೆಯಲ್ಲಿದೆಯೇ? ಎಂದು ಕೇಳಿದೆ. ಆಕೆ 'ನಾನು ಚಿಕ್ಕವಳಿದ್ದಾಗ ಹೆಸರುಘಟ್ಟ ಕೆರೆ ತುಂಬಿದಾಗ ನಮ್ಮಜ್ಜಿ, ನಮ್ಮಪ್ಪ, ಕೆರೆ ಮದಗ್ತಾಯಿದೆ ಎಂದು ಹೇಳಿದ್ದನ್ನು ಕೇಳಿದ್ದೆ' ಎಂದಳು. ಅಲ್ಲಿಯೂ 'ಮದಗ' ಪದದ ಅರ್ಥ ಸ್ಪಷ್ಟವಾಗಲಿಲ್ಲ. ನನ್ನ ಮೋಟಾರು ವಾಹನ ನಿರೀಕ್ಷಕ ಹುದ್ದೆಯಲ್ಲಿಯ ಸಹೋದ್ಯೋಗಿ ಕಾಳಯ್ಯ ಕೆ. ಆರ್. ಪೇಟೆಯವರು. ಅವರಲ್ಲಿ ಈ ಪದದ ಬಳಕೆ ಹಾಗೂ ಅರ್ಥವನ್ನು ಕೇಳಿದೆ. ಆತ ತಕ್ಷಣ 'ಕೆರೆತುಂಬಿ, ತೂಬಿನಿಂದ ಹರಿಯುವ ನೀರು ಮದಗ' ಎಂದೇಬಿಟ್ಟರು. ನನಗೆ ತುಂಬಾ ಸಂತೋಷವಾಯಿತು. ಬೇಂದ್ರೆ ಅವರು ಜನಪದರ ನುಡಿಯನ್ನು ಮಗು ಹೆರುವ ತಾಯಿಯ ಅಲೌಕಿಕ ಅನುಭವವನ್ನು ಚಿತ್ರಿಸಲು ರೂಪಕವಾಗಿ ಬಳಸಿರುವ ಅದ್ಭುತ ಪ್ರತಿಭೆಗೆ ನಾನು ಆಶ್ಚರ್ಯಪಟ್ಟೆ.

ತಾಯಿಯ ರೂಹು, ಲಾವಣ್ಯ, ಭಾವ, ಲಕ್ಷಣವೆಲ್ಲವೂ ಆಗಿ ಅವಳಿಂದ ಹೊರಹೊಮ್ಮಿದ ಮಗು– ಮದಗ. ಅದು ತಾಯಿಯ ವಾತ್ಸಲ್ಯದ ಕೆನೆ. ಅದಕ್ಕೆ ಆಕೆ ಮುದ್ದಿಸಿ, ದಿಟ್ಟಿಸಿ,

ಮುಳುಗಿ, ಮೂಸಿ ನೋಡಿದ್ದೇ ನೋಡಿ ಕುತೂಹಲಗೊಂಡು ಅಭಿಮಾನದೊಂದಿಗೆ 'ನಿನ್ನಳವು ಅಸದಳವು' ಎಂದು ಹೆಮ್ಮೆಪಟ್ಟಿದ್ದಾಳೆ.

---

## ಕೊನೆಯ ಹೇಳಿಕೆ

**ಇಂಗಡಲು**

**–ಬೇಡಿ ಮಾಡುವದೇನು?/ ಬಂದಂದು, ಬಾ, ನೀನು/ ಹಿಗ್ಗಿನಿಂಗಡಲ ಮನೆಯೇ! (1–1, 2, 3)**

: ಕ್ಷೀರ ಸಾಗರ; ಹಾಲ್ಗಡಲು.

* ತಾಯಿಗೆ ಮಗು ಹಿಗ್ಗಿನ ಕ್ಷೀರಸಾಗರದ ನೆಲೆ.

***

ಸಂಸ್ಕೃತಿ ಸಂಗಮದಿಂಗಡಲಾಗಿರುವೆ ಕಾವ್ಯ ವಿಹಂಗಮನೇ(ಮುಗಿಲ ಮಲ್ಲಿಗೆ: ಓಂ ನಮೋ ಸತ್ಯಾ)

* * * * * *

**ಕನಿ**

**ಕನಿಯ ಬಿಳಿಹರಳ ಗಣಿಯೇ! (3–3)**

: ಮಿಂಚು; ಹೊಳಪು; ಕಾಂತಿ.

*ಮಗುವೆ, ನೀನು ಹೊಳಪಿನ ಬಿಳಿ ಹರಳ ಗಣಿ. ದೊರೆವಂದು ದೊರೆ ಎಂದು ತಾಯಿ ಅಮೂಲ್ಯ ನಿಧಿ ಮಗುವಿನ ಅಪೇಕ್ಷೆಯಲ್ಲಿದ್ದಾಳೆ.

---

## ೬. ನಾದಲೀಲೆ (೧೯೩೮)

## ನಾದಲೀಲೆ

**ಪಾಡು**

**ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ/ ನೀಡುವೆನು ರಸಿಕ! ನಿನಗೆ!/ ಕಲ್ಲುಸಕ್ಕರೆಯಂಥ ನಿನ್ನೆದೆಯು ಕರಗಿದರೆ/ ಆ ಸವಿಯ ಹಣಿಸು ನನಗೆ! (ನಾಂದಿ ಕವನ)**

*ಈ ಚಿಂತನೆಯ ಸಾಲಿನಲ್ಲಿ ಬೇಂದ್ರೆಯವರು 'ಪಾಡು' ಪದವನ್ನು ತನಗೆ ಸಂಬಂಧಪಟ್ಟ ಸ್ಥಿತಿ, ಕಷ್ಟ, ತೊಂದರೆ ಎಂಬ ಅರ್ಥದಲ್ಲಿ ಬಳಸಿದ್ದಾರೆ.

* * * * * *

**ತರಳ ಎರಳೆ**

**ತರಳ ಎರಳೆ, ಚಿಗುರ ಚಿಗುರೆ, ಹೂವು ಹೂವು ಹುಲ್ಲೆ (1–2)**

*ಜಿಂಕೆಯನ್ನು (ಎರಳೆ) ಬೇಂದ್ರೆ ಅವರು ಬಣ್ಣಿಸುವಾಗ ತರಳ ಎರಳೆ ಎಂದಿದ್ದಾರೆ. 'ತರಳ' ಪದವು ಎಳೆವಯಸ್ಸಿನ, ಅತ್ತಿತ್ತ ಚಲಿಸುವ, ಚಂಚಲವಾದ, ಹೊಳೆಯುತ್ತ ಮಿಂಚಿ ಮಿರುಗುವ, ಬೆರಗನ್ನುಂಟುಮಾಡುವ ಎಲ್ಲ ಅರ್ಥವನ್ನು ಹೊಂದಿದೆ.

* * * * * *

**ಮಣಕ**

**ಕರೆವ ಕರುವು, ಕುಣಿವ ಮಣಕ, ತೊರೆವ ಗೋಗಭೀರೆ (2–2)**

: (ಪ್ರಾಯಕ್ಕೆ ಬರುತ್ತಿರುವ) ಹಸು, ಎಮ್ಮೆ ಮೊದಲಾದ ಪ್ರಾಣಿಗಳ ಕರು; ಪಡ್ಡೆ; ಕಡಸು.

---

## ಶುಭ ನುಡಿಯೆ ಶಕುನದ ಹಕ್ಕಿ

**ಉಳುಕು**

**ಗಳಕನೊಂದು ಉಳುಕುತಲಿತ್ತ (4–4)**

: ಆಕಾಶದಿಂದ ಕೆಳಗೆ ಬೀಳುವ ತೇಜಃಪುಂಜವಾದ ಉಲ್ಕೆ.

*ಜೀವನವು ಎಷ್ಟೇ ನೆಮ್ಮದಿಯಿಂದ ಶಾಂತವಾಗಿದೆ ಎಂದರೂ, ಯಾವುದೇ ಘಳಿಗೆಯಲ್ಲಿ ಅನಿರೀಕ್ಷಿತವಾಗಿ ನೋವುಂಟು ಮಾಡುವ ಕ್ಷಣಗಳು ಎರಗಿ ಮಾನಸ ಸರೋವರವನ್ನು ಕದಡುತ್ತವೆ ಎಂಬುದು ಕಾವ್ಯಧ್ವನಿ. ಈ ಹಿನ್ನೆಲೆಯಲ್ಲಿ ಬೇಂದ್ರೆ ಅವರು ನೀರವ, ಹಿತಕರ ರಾತ್ರಿಯನ್ನು ಚಿತ್ರಿಸುತ್ತಾ, 'ಕತ್ತಲೆಯ ಕೆಸರಿನ ತಳಕೆ ಮಿನಮಿನುಗುವ ಹರಳುಗಳಂತೆ ಚಿಕ್ಕೆ ತೊಳಗುತಲಿರಲು' ಎಂಬ ಭಾವ ಅನುಭವಿಸುತ್ತಿರುತ್ತಾರೆ. ಒಂದು ವಸ್ತು ನೀರಿನಲ್ಲಿ ಬಿದ್ದು 'ಗಳಕ್' ಎಂದು(ಅನುಕರಣ) ಶಬ್ದ ಮಾಡುವಂತೆ 'ಉಳುಕು ಬಿತ್ತು' ಎನ್ನುವ ಮೂಲಕ ಶಾಂತತೆಯನ್ನು ಕದಡಿದ ಯಾವುದೋ ಒಂದು ಭಾವ ಕವಿಯ ಅನುಭವಕ್ಕೆ ಬಂದಿದೆ; ಅದೇ ಉಳುಕು. ಈ ಉಳುಕು ಆಕಾಶದಿಂದ ಕೆಳಗೆ ಬೀಳುವ ತೇಜಪುಂಜವಾದ ವಸ್ತು ಉಲ್ಕೆ.

* * * * * *

## ಎಸರು

**ಒಳಗಿನಾವ ಚಿಂತೆಯ ಎಸರೋ/ ತಂತಾನೆ ಕನವರಿಸುತಿತ್ತ (5–3, 4)**

*ಹಳ್ಳಿಗಳಲ್ಲಿ ಈಗಲೂ ಈ ಪದ ಬಳಕೆಯಲ್ಲಿದೆ. ನನ್ನವ್ವ 'ಮುದ್ದೆಗೆ ಎಸರಿಟ್ಟಿದ್ದೇನೆ. ಇನ್ನೂ ಕುದಿ ಬಂದಿಲ್ಲ' ಎಂದು ಹೇಳುತ್ತಿದ್ದರು. ಅಡುಗೆಗಾಗಿ ಕುದಿಯಲಿಟ್ಟ ನೀರು–ಎಸರು.

ಬೇಂದ್ರೆ ಅವರು ತಮ್ಮ ಮನದ ಒಳಗಿನ ಚಿಂತೆಯ ನಿದ್ದೆಯಲ್ಲಿ ಕನವರಿಕೆಯಾಗುವುದನ್ನು ದೇಸಿ ಪದ 'ಎಸರು' ಬಳಸಿ, ಚಿಂತೆಯ ಕುದಿ, ತಳಮಳವನ್ನು ಚಿತ್ರಿಸಿದ್ದಾರೆ.

***

ಉಗೆಯಿಲ್ಲ, ನಗೆಯಿಲ್ಲ, ಹೊಗೆಯಿಲ್ಲದೀ ನೀರು/ ಬಿಸಿಲುಗುದುರೆಯ ಹಾಗೆ ಎಸರುತಿಹುದು (ಜೀವಲಹರಿ: ದೈವ ಯೋಜನೆ)

* * * * * *

## ಹಾಲಕ್ಕಿ

**ಚಿಲೀ ಪಿಲೀ ಚಿಲಿಪಿಲಿ ಎಂದು/ ಹಾಲಕ್ಕಿ ಉಲಿಯುತಲಿತ್ತ ಶುಭ ನುಡಿಯೆ/ ಶುಭನುಡಿಯೆ ಶಕುನದ ಹಕ್ಕಿ। ಶುಭನುಡಿಯೇ। (8–3, 4, 5)**

*ರಾತ್ರಿಯಲ್ಲಿ ಸಂಚರಿಸುವ ಗೂಬೆಯ ಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ; ಶಕುನದ ಹಕ್ಕಿ; ಶುಭಾಶಯಗಳನ್ನು ಸೂಚಿಸುವ ಹಕ್ಕಿ; ಪಿಂಗಲಿ. 'ಹಾಲಕ್ಕಿ ಆದರೆ ಹಾಲು ಕರೆದೀತೇ?' (ಗಾದೆ)

## ಏಳುಕನ್ನಿಕೆಯರು

**ಅಡಕ**

**ನಡುಕ ಮಿಡುಕು ತೋರಗೊಡದೆ/ ಅಡಕದಿಂದ ನಿಂತೆ, ತಪಕೆ (5–1, 2)**

: ವಶದಲ್ಲಿಟ್ಟುಕೊಳ್ಳುವುದು; ಸಂಯಮ; ಹಿಡಿತ.

*ಕಾವ್ಯ ನಾಯಕನು ಏಳು ಕನ್ನಿಕೆಯರ ಪರೀಕ್ಷೆಗೆ ಒಳಗಾದಾಗ ತನ್ನ ಸಂಯಮ, ಹಿಡಿತ ಸಾಧಿಸಿದ್ದನ್ನು 'ಅಡಕ' ಪದ ವ್ಯಕ್ತಪಡಿಸಿದೆ.

* * * * * *

**ಡೊಳ್ಳುಬೀಳು**

**ಡೊಳ್ಳು ಬಿದ್ದ ತಂತಿಯಿಂದ/ ಜೊಳ್ಳು ನಾದವೆದ್ದಿತೋ–ಜೊಳ್ಳು ನಾದವೆದ್ದಿತು. (8–3, 4)**

: ಜೋಲುಬೀಳು; ಸಡಿಲವಾಗಿ ನೇತಾಡು; ಅಳ್ಳಕವಾಗು

* * * * * *

**ಚಳಕ**

**ಬೆಳಕಿನ ಕುಡಿ ಆರುವಂತೆ/ ಚಳಕದ ಕನ್ಯೆಯರು ಹಾರೆ (9–1, 2)**

*ಕಾವ್ಯ ನಾಯಕನು ತನ್ನ ಇಂದ್ರಿಯ ನಿಗ್ರಹವನ್ನು ಪರೀಕ್ಷಿಸಿದ ಏಳು ಕನ್ಯೆಯರಲ್ಲೊಬ್ಬಳು ತೊಡೆ ಮೀಂಟಿದಾಗ ಸೋಲುತ್ತಾನೆ. ತಕ್ಷಣ ಆ ಚಳಕದ ಅಂದರೆ ಜಾಣ್ಮೆಯ, ಚತುರ ಕನ್ಯೆಯರು ಚಮತ್ಕಾರದಂತೆ ಇಲ್ಲವಾಗುತ್ತಾರೆ. ಅದನ್ನು ಕವಿ 'ಬೆಳಕಿನ ಕುಡಿ ಆರುವಂತೆ' ಎಂಬ ಉಪಮಾನದಲ್ಲಿ ಚಿತ್ರಿಸಿದ್ದಾರೆ.

---

## ಮಲ್ಲಾಡದ ಗಿಣಿಯೆ!

**ಇಂಬು**

**ರೆಂಬಿ ನಂಬಿಕೆ ಏಸು? । ಇನ್ನ/ ಇಂಬಿಲಿ ಮುಗಿಲ ಮನಿಯ ಹುಡುಕ$_s$ । (12–1, 2)**

: ಎಡೆ; ಆಶ್ರಯ; ನೆಲೆ; ಅವಕಾಶ.

: ಇಂಬಿಟ್ಟುಕೊಳ್= ಚೆನ್ನಾಗಿ ಇಟ್ಟುಕೋ, ಕಾಪಾಡು.

*ತನಗೆ ಅನುಕೂಲವಾಗುವ ಹಾಗೆ, ಆಶಯ ಈಡೇರುವ ಹಾಗೆ, ಸೂಕ್ತ ನೆಲೆಯನ್ನು 'ಇಂಬಿಲಿ' ನಿರ್ಮಿಸಿಕೋ. ಇನ್ನೆಷ್ಟು ದಿನ ರೆಂಬೆಯ ಮೇಲೆ ನಂಬಿಕೆ ಇಟ್ಟು ಬದುಕೋದು? ಎಂಬ ಭಾವ ಇಲ್ಲಿ ತುಂಬಿ ನಿಂತಿದೆ.

ನೆಲೆ ಕಾಣಬೇಕೆಂಬ ಹಂಬಲಕೆ ಇಂಬಿಟ್ಟು/ ನೆಲಕೆ ಅಂಟಿಸುವುದುಂಟೇನು ಅಡಿಗಳನು?(ನಾದಲೀಲೆ: ನಿರ್ಭಯಾ!) (4–3, 4)

*ಜೀವನದಲ್ಲಿ ನೆಲೆ ಕಂಡುಕೊಳ್ಳುವ ಹಂಬಲವನ್ನು ಚೆನ್ನಾಗಿ ಕಾಪಾಡಿಕೊಂಡು ತಾನಿದ್ದಲಿಂದ ಗುರಿಯೆಡೆಗೆ ಸಾಗಲು ಪ್ರಯತ್ನಿಸಬೇಕಾಗುತ್ತದೆ. ಆ ಅರ್ಥದಲ್ಲಿ, ಪಾದಗಳನ್ನು ನೆಲಕ್ಕೆ ಅಂಟಿಸಿಕೊಂಡು ಕುಳಿತರೆ ಗುರಿಸಾಧನೆ ಅಸಾಧ್ಯ ಎಂಬ ಭಾವ ಇಲ್ಲಿದೆ.

*      *      *      *      *      *

**ಹಾರಯಕೀ**

**ಹಾರಯಕೀಯ ಹರಿದು । ಇನ್ನು/ ಹಾರ, ಗಿಣಿಯೆ, ನೀನ್ಸ ಹಿರಿದು । (17–1, 2)**

: ಬಯಕೆ; ಅಪೇಕ್ಷೆ.

*ಹಾರೈಕೆ ಪದ ಗ್ರಾಮೀಣರ ಮಾತಿನಲ್ಲಿ 'ಹಾರಯಿಕೀ' ಆಗಿದೆ. ಅಪೇಕ್ಷೆ ಮನುಷ್ಯನಿಗೆ ಸಹಜವಾದುದು. ಆದರೆ ಅದರ ಈಡೇರಿಕೆಗಾಗಿ ವ್ಯಕ್ತಿ ಇನ್ನೊಬ್ಬರ ನಿರೀಕ್ಷೆ ಬಿಟ್ಟು, ತನ್ನತನದಲ್ಲಿ ನಂಬಿಕೆ ಇಡಬೇಕು. ಗುಣಲಕ್ಷಣಗಳಲ್ಲಿ ತಾನು ದೊಡ್ಡವನು ಎಂಬ ಅರಿವಿನಲ್ಲಿ ಮುನ್ನಡೆಯಬೇಕು ಎಂಬ ಭಾವ.

---

## ನಾಯಕ

**ಎರೆಯ**

**ನೆರೆಹೊರೆಯಲ್ಲಿದ್ದಂಥ ಎರೆಯನನ್ನು/ ಗುರುತಿಸುವೆ ಮೂಸಿಟ್ಟು, ಆಲಿಸುವೆ ಕಿವಿಗೊಟ್ಟು (1–2, 3)**

: ಒಡೆಯ; ಯಜಮಾನ; ಪ್ರಭು.

*ಅನಂತಶಕ್ತನಾದ ಜಗದ ಯಜಮಾನನನ್ನು ಕುರಿತು ಬರೆದ ಒಂದು ಅನುಭಾವದ ತುಡಿತ ಈ ಕವನ. ನಾಯಿ ತನ್ನ ಒಡೆಯನನ್ನು ಮೂಸಿಟ್ಟು ಗುರುತಿಸುವಂತೆ ಕವಿಯು ತನ್ನ ಒಡೆಯ/ಎರೆಯನನ್ನು ಗುರುತಿಸುವೆ ಎಂದು ಹೇಳಿದ್ದಾರೆ.

***

ತುಕಾರಾಮರು 'ಅನಂತಯುಗಾಚಾ ದೇವ್ಹಾರಾ' 'ಅನಂತಯುಗಗಳಿಂದ ಬಂದ ದೇವರ ಮಂಟಪ' ಎಂಬ ತಮ್ಮ ಹೆಸರಾದ ಅಭಂಗವೊಂದರಲ್ಲಿ ತಾವು ದೇವರನಾಯಿ, ದೇವರು ತನ್ನನ್ನು ಬಗುಳ ಹಚ್ಚಿದನು ಎಂದು ಹೇಳಿದ್ದಾರೆ. ನಾವು ಪ್ರತಿಕ್ರಿಯಾತ್ಮಕವಾಗಿ, ತಾವಾಗಿ ತಿಳಿಯದೆಯೆ, ದೇವರ ನಾಮವನ್ನು ಬಗುಳಿದೆವೆಂದರೆ– ಉಚ್ಚರಿಸಿದೆವೆಂದರೆ, ನಾವು ದೇವರ ನಾಯಿಗಳೆಂದು ಯಥಾರ್ಥವಾಗಿ ಕರೆಯಿಸಿಕೊಳ್ಳಬಹುದು.(ಕನ್ನಡ ಸಂತರ ಪರಮಾರ್ಥ ಪಥ– ರಾನಡೆ. ಆರ್.ಡಿ., (ಅನು)ದೇಶಪಾಂಡೆ ಎಂ.ಎಸ್.,ಪುಟ:161,162)

* * * * * *

**ಹಮ್ಮು**

**ಮತ್ತೆ ಇದಿರಾಗೆಂದು/ ಬಿತ್ತರಿಪ ಹಮ್ಮಿನಾ ಕರೆ ಅದೊಂದು (2–3, 4)**

: ಹಮ್ಮು–ಹೆಮ್ಮೆಯ; ಹಿರಿಮೆಯ ಕರೆ.

* 'ತನ್ನ ಬಳಿಗೆ ಬಾ' ಎಂದು ನಾಯಿಯ ಭಾವದ ಭಕ್ತನಿಗೆ ಭಗವಂತ ಕೊಡುವ ಆಮಂತ್ರಣವಿದು. ಒಡೆಯನು ನೀಡುತ್ತಿರುವ ಕರೆ ಕುತೂಹಲವನ್ನುಂಟುಮಾಡಿ ಬೆರಗು, ದಿಗ್ಭ್ರಮೆಯೊಡನೆ ಮೈಮರೆಸುವುದನ್ನು 'ಹಮ್ಮು' ಪದ ಹೊಮ್ಮಿಸುತ್ತದೆ.

* * * * * *

**ಮುಂಗಾಳು**

**ಅರೆವೀದಿಯಲ್ಲಿಯೇ ಮುಂಗಾಳು, ಮುಸುಕಿತ್ತೈ (4–3)**

: ಮುಂಗಳ್ತಲೆ; ಸೂರ್ಯನು ಮುಳುಗಿದಾಕ್ಷಣ ಬರುವ ಸಂಧ್ಯಾಸಮಯದ ಕತ್ತಲೆ; ಮುಸ್ಸಂಜೆಯ ಕತ್ತಲೆ.

---

## ಎದೆಯ ಒಕ್ಕಲಿಗ

**ಬೆದೆ**

**ಬೆದೆಯರಿತು ಹದಮಾಡು ಹೃದಯದೀ ಹೊಲವನ್ನು/ ಹದ ಬೆದೆಯನರಿತಂಥ ಹೃದಯವಾಸೀ (1–1, 2)**

: ಬೀಜ ಬಿತ್ತಲು ಯೋಗ್ಯವಾದ; ಮಳೆಬಿದ್ದ, ಭೂಮಿಯ ಹದ. ಹದಬೆದೆ= ಬಿತ್ತಲು ಯೋಗ್ಯವಾದ ಕಾಲ; ವ್ಯವಸಾಯಕ್ಕೆ ತಕ್ಕ ಕಾಲ.

'ಬೆದೆ ನೋಡಿ ಬಿತ್ತು, ಹದ ನೋಡಿ ಹರಗು'-(ಗಾದೆ)

* * * * * *

**ಕರಲು**

**ಕಾಡಿನಂದದಿ ಕರಲು- ಕಲ್ಲಿನಂದದಿ ಎದೆಯು/ ಕಾಡುವದು ಕಾಣದೇ ಹಗಲು ಇರುಳೂ (2-1, 2)**

: ಚೌಳು ನೆಲ; ಸೌಳು ನೆಲ; ಉಪ್ಪುನೆಲ.

*ನೆಲ ಕರಲಾಗಿದೆ ಅರ್ಥಾತ್ ಚೌಳು ನೆಲವಾಗಿದೆ. ಎದೆಯು ಸಂವೇದನಾರಹಿತ ಕಲ್ಲಾಗಿದೆ. ಇಂತಹ ಸ್ಥಿತಿಗೆ ತಲುಪಿದ ಕವಿಗೆ ಹಗಲು-ಇರುಳು ಯಾವುದೆಂದು ದಿಕ್ಕು ತೋಚುತ್ತಿಲ್ಲ ಎಂಬ ಕೊರಗು ಕಾಡುತ್ತಿದೆ.

* * *

**ಕೋರಪಾಲು**

**ಕೋರಪಾಲಿನ ಮಾತು ಮಾಡಿಕೊಟ್ಟೆನು ನಿನಗೆ/ ಯಾರೇಕೆ ಮಧ್ಯಸ್ಥರಿಲ್ಲಿ ಬೇಕು?(3-1,2)**

* 'ಕೋರಪಾಲು' ಪದ ರೈತ ಮತ್ತು ನೆಲದ ಒಡೆಯನು ಬಂದ ಬೆಳೆಯನ್ನು (ಸಮಪಾಲು)ಅರ್ಧರ್ಧ ಪಾಲು ಮಾಡಿಕೊಳ್ಳುವ ವ್ಯವಸ್ಥೆಯಲ್ಲಿ ಬಳಸುವ ಗ್ರಾಮೀಣ ಪದವಾಗಿದೆ.

ಹೃದಯವಾಸಿ ಭಗವಂತನೊಂದಿಗೆ ಕವಿ ಮಾಡಿಕೊಂಡ ಅರ್ಧ ಪಾಲುದಾರಿಕೆಯ ಒಪ್ಪಂದ ಸಮಭಾವದ ಆತ್ಮ-ಪರಮಾತ್ಮನ ಅದ್ವಿತೀಯ ಅಭಿವ್ಯಕ್ತಿಯಾಗಿದೆ. ಇದು ಸಾಧನಾಪಥದ ಒಂದು ವಿಶಿಷ್ಟ ಬಗೆ.

---

## ಬನ್ನಿ ಬನ್ನಿ ಕನಸುಗಳೇ!

**ಕುರುಡುಗಳೆ**

**ತಿರುಳುಗೊಂಡ ಮನಗಳೇ/ ಕುರುಡುಗಳೆದ ದಿನಗಳೇ/ ಜಾರಿಹೋದ ಕನಸುಗಳೇ/ ಹಾರಿ ತಿರುಗಿ ಬನ್ನಿ (4-4, 5, 6)**

:(ಆಲಂ)ಅಜ್ಞಾನವನ್ನು ಕಳೆ.

---

## ನಿಗಿ ನಿಗಿ ಮುಗಿಲು

### ನಿಗಿ ನಿಗಿ

**ನಿಗಿ ನಿಗಿ ಮುಗಿಲು/ ನಿಗಿ ನಿಗಿ ಹಗಲು/ ಕೆಂಡವ ಕಾರುವದು (1–1, 2, 3)**

: ನಿಗಿ ನಿಗಿ–ಪ್ರಜ್ವಲಿಸುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ; (ದ್ವಿರುಕ್ತಿ)

ಮುಗಿಲಿನಿಂದ ಹೊಮ್ಮುವ ಹಗಲಿನ ತೀವ್ರ ಬಿಸಿಲ ಉರಿಯು ಕೆಂಡದಂತೆ ಪ್ರಜ್ವಲಿಸಿ ಉರಿಯುತ್ತಿದೆ ಎಂದು ಕವಿ ಬಣ್ಣಿಸಿದ್ದಾರೆ. ಆ ಪದವು ಸೂರ್ಯನ ಕಾವಿನ ಝಳ ತಟ್ಟಿದ ಅನುಭವವನ್ನು ನಿಗಿನಿಗಿಯಾಗಿ ನೀಡುತ್ತದೆ.

* * * * * *

### ಕಾಲೂರು

**ಕಾಲೂರಿತು ಮಳೆ,/ ಕತ್ತೆತ್ತಿತು ಬೆಳೆ,/ ಹನಿಯೊಡೆಯಿತು ಮೋಡ (3–1, 2, 3)**

: ಕಾಲನ್ನು ಊರು; ಕಾಲಿಡು; ಪ್ರವೇಶಿಸು.

*ಇದು ಕಾವ್ಯಾನುಭವ ಸಹಜೋಕ್ತಿ.

---

## ಪಾರಿಜಾತ

### ಕಳೆ

**ಹೊಳೆವ ಹುರುಳ ಹಾಡಿನಂತೆ/ ಹೆಣ್ಣಿನ ಕಳೆ ಪಾಡಿನಂತೆ (3–1, 2)**

: 1. ಜಾಣ್ಮೆ; ಕೌಶಲ್ಯ; ಚಾತುರ್ಯ.

2. ಕಾಂತಿ; ತೇಜಸ್ಸು; ಶೋಭೆ; ಹೊಳಪು.

* * * * * *

### ಹೂವುತನ

**ಸುರರ ಬನದ ಹೂವುತನದ/ ತಿಳಲು, ಮನದ ಅರಿವಿದು (4–3, 4)**

: ಹೂವಾಗಿರುವಿಕೆ; ಮೃದುವಾಗಿರುವುದು.

---

## ಋತುಗಾನ

**ಕಾರ್ನೀರು, ಎರೆ, ಎಲರು, ತೀಟ**

**ಪಡು ಮೂಡಲ ಕಾರ್ನೀರನು ಎರೆವೆಲರಿನ ತೀಟ (2–2)**

: ಮಳೆಯ ನೀರು.

: ಸುರಿ; ಹೂಯ್ಯು; ಹಾಕು.

: ಗಾಳಿ; ವಾಯು

: (ಗಾಳಿ) ತೀಡುವಿಕೆ; ಬೀಸುವಿಕೆ

---

## ಚಿಗುರೆ

**ಹೊಗರುಗಣ್ಣು**

**ಹೊಗರುಗಣ್ಣು, ನಿಗುರಿದ ಕಿವಿ/ ಹಗುರ ಮೈಯ್ಯ ಚಿಗುರೆಯು (1–1, 2)**

: ಹೊಳಪಿನಿಂದ ಕೂಡಿದ ಕಣ್ಣು; ಕಾಂತಿಯುಕ್ತವಾದ ಕಣ್ಣು.

---

## ಮನುವಿನ ಮಕ್ಕಳು

**ಭಾಗಾದಿ**

**ಮಲಸಂಬಂಧದ ಭಾಗಾದಿ/ ಹದ್ದಿಗೆ ಹಳೆ ಹಾದಿ (5–1, 2)**

: ದಾಯಾದಿ.

---

## ಯಜ್ಞ

**ಮೀಸಲನ್ನು ಮುರಿ**

**ಗಂಗೆ ಮೀಸಲನ್ನು ಮುರಿಯೆ/ ಮೀನ ಮೊಸಳೆಗುಂಟೆ ಬಾಯಿ? (2–11, 12)**

: ಉಪಯೋಗಗೊಳ್ಳು; ಉಪಭೋಗಗೊಳ್ಳು.

*ಗಂಗೆ ಪಾವನೆ. ಅಂತವಳು ಅಪವಿತ್ರಳಾದರೆ ಅಲ್ಲಿ ಮೀನು ಮೊಸಳೆಗಳು ಉಳಿಯುವುದಿಲ್ಲ ಎಂದು ಕವಿಭಾವ.

***

ಎಳನಗೆಯಲಿ, ಇಳೆ ಚಿಗಿಯಲಿ, ಮರುಕೊಳಿಸಲಿ ಹೂವು। ಹಿಮ ಶಿಶಿರದ ಸ್ಮೃತಿ ಕಳಚಲಿ, ಇದೋ ಇಗೊ ಈ ಠಾವು। ತುಂಬಲಿ ತುಳುಕದೆ ಸೂಸಲಿ, ಮೀಸಲು ಮುರಿಯದೆಯೆ। ಮಿಕ್ಕಲಿ, ಒಕ್ಕಲುಗೊಳ್ಳಲಿ, ಆ ನಾವೂ ನೀವೂ(ಸೂರ್ಯಪಾನ-ವಿಶ್ವರೂಪ ದರ್ಶನ)

ಈ ಜಗತ್ತಿನಲ್ಲಿ ಬೆಳೆ ಸಮೃದ್ಧಿಯಾಗಲಿ. ಮೀಸಲು ಮುರಿಯದೆಯೇ ಅರ್ಥಾತ್ ಆ ಬೆಳೆ ಅಶುದ್ಧವಾಗಿ ಅಪವಿತ್ರವಾಗದೇ ವ್ಯರ್ಥಗೊಳ್ಳದಿರಲಿ, ಜಗತ್ತಿನ ಅನ್ನ ಅಶುದ್ಧವಾಗದಿರಲಿ ಎಂದು ಕವಿ ಆಶಿಸಿದ್ದಾರೆ. ಆ ವಿಶ್ವಾತ್ಮಕವಾದ ಸಕಲ ಜೀವ ರಾಶಿಯ ಒಳಿತನ್ನು ಆಶಿಸುವುದೇ ವಿಶ್ವರೂಪ ದರ್ಶನ.

*     *     *     *     *     *

**ಕಾಳುಕಡಿ**

**ಉಳಿದ ಹಾಳು ಬಾಯಿಗಳಿಗೆ/ ಕಾಳು ಕಡಿಯು ಹುಟ್ಟಲಿಲ್ಲ (2-20, 21)**

: ಧಾನ್ಯ ಮತ್ತು ಹುಲ್ಲು.

---

## ಕುರುಡು ಕಾಂಚಾಣಾ

**ಕುರುಡು ಕಾಂಚಾಣಾ**

**ಕುರುಡು ಕಾಂಚಾಣಾ ಕುಣಿಯುತಲಿತ್ತು/ ಕಾಲಿಗೆ ಬಿದ್ದವರ ತುಳಿಯುತಲಿತ್ತೋ॥ ॥ಪ॥**

: ವಿವೇಚನೆಯಿಲ್ಲದ ಸಂಪತ್ತು; ನಿರ್ದಯವಾದ ಐಶ್ವರ್ಯ.

*     *     *     *     *     *

**ಸಾಬಾಣ**

**ಬಾಣಂತಿಯೆಲುಬ ಸಾ/ ಬಾಣದ ಬಿಳುಪಿನಾ/ ಕಾಣದ ಕಿರುಗೆಜ್ಜಿ ಕಾಲಾಗ ಇತ್ತೋ (1-1, 2, 3)**

*ನನಗೆ ಕುರುಡು ಕಾಂಚಾಣ ಪದ್ಯದ 'ಬಾಣಂತಿಯೆಲುಬ ಸಾಬಾಣದ ಬಿಳುಪಿನಾ' ಸಾಲಿನ 'ಸಾಬಾಣ' ಗೊತ್ತಿರಲಿಲ್ಲ. ಹಾಗಾಗಿ ಬೇಂದ್ರೆ ಅವರು ಚಿತ್ರಿಸಿರುವ ಶೋಷಣೆ ನನಗೆ ಪೂರ್ತಿ ಅರ್ಥವಾಗಿರಲಿಲ್ಲ.

1988ರಲ್ಲಿ ನಿಂಗಣ್ಣ ಸಣ್ಣಕ್ಕಿ ಅವರ ಗೋಕಾಕದ ಶಾಲೆಯಲ್ಲಿ 'ದ.ರಾ ಬೇಂದ್ರೆ ಗೀತ ಗಾಯನ ಸ್ಪರ್ಧೆ' ನಡೆಸಿದಾಗ ಮುಖ್ಯ ಅತಿಥಿಗಳಾಗಿ ವಾಮನ ಬೇಂದ್ರೆ ಅವರು ಬಂದಿದ್ದರು. ಅವರನ್ನು ಈ ಪದದ ಅರ್ಥ ಕೇಳಿದೆ. 'ನೀವು ಸೋಪ್ ಅನ್ನು ಸಾಬೂನು ಎನ್ನುತ್ತೀರಿ, ನಾವು ಸಾಬಾಣ ಎನ್ನುತ್ತೇವೆ' ಎಂದರು. ಆಗ ಶೋಷಣೆಯ ಪರಾಕಾಷ್ಠೆಗೆ ಬೇಂದ್ರೆ ಅವರು ಬಳಸಿದ ಪದ 'ಸಾಬಾಣ'ದ ವ್ಯಾಪ್ತಿ ಅರ್ಥವಾಯಿತು. ಸೋಪ್ ಹಚ್ಚಿ ತೊಳೆದ ಬಟ್ಟೆ ಬೆಳ್ಳಗಾಗುವಂತೆ ಮಗು ಹೆತ್ತು ನಿಸ್ತೇಜವಾಗಿರುವ ಹೆಣ್ಣು ಬಿಳುಚಿಕೊಂಡಿದ್ದಾಳೆ. ಇಂತಹವಳನ್ನು ಶೋಷಕರು ಹಣ ಮತ್ತು ಅನ್ನದ ಇಕ್ಕಳದಲ್ಲಿ ಸಿಕ್ಕಿಸಿ ಸಾಯಿಸುತ್ತಾರೆ. ಸಾಬಾಣದ ಬಿಳುಪನ್ನು ಹೋಲುವ ಅವಳ ಎಲುಬನ್ನು ಕಿರುಗೆಜ್ಜೆಯಾಗಿ ಮಾಡಿಕೊಂಡು ಅಟ್ಟಹಾಸಗೈಯುತ್ತಾರೆ. ಆ ಕಿರುಗೆಜ್ಜೆ ಬಾಣಂತಿಯ ಎಲುಬು ಎಂಬುದು ಜಗತ್ತಿನ ಶೋಷಣೆಯನ್ನು ಅದರ ಅತಿ ವಿಕಾರದೊಡನೆ ಚಿತ್ರಿಸಿದ ವಿಶಿಷ್ಟ ಕಾವ್ಯ ರೀತಿ.

* * * * * *

## ಬಡಬ್ಯಾನಲ

**ಬಡವರ ಒಡಲಿನ/ ಬಡಬ್ಯಾನಲದಲ್ಲಿ ಸುಡು ಸುಡು ಪಂಜು ಕೈಯೊಳಗಿತ್ತೋ (2-1, 2, 3)**

: ಬಡಬಾಗ್ನಿ; ಸಮುದ್ರದೊಳಗಿರುವ ಕುದುರೆಯ ಮುಖದಿಂದ ಹುಟ್ಟಿದುದೆಂದು ಭಾವಿಸಲಾದ ಬೆಂಕಿ.

* * * * * *

## ಮಂಗಾಟ

**ಹ್ಯಾಂಗಾರೆ ಕುಣಿಕುಣಿದು/ ಮಂಗಾಟ ನಡೆದಾಗ ಅಂಗಾತ ಬಿತ್ತೋ, ಹೆಗಲಲಿ ಎತ್ತೋ. (4-1, 2, 3)**

: ಮಂಗಾಟ ಪದದ ವಾಚ್ಯಾರ್ಥ ಕೋತಿಚೇಷ್ಟೆ. ಆದರೆ, ಬೇಂದ್ರೆಯವರು ಅದನ್ನು ಬುದ್ಧಿಹೀನತೆಯಿಂದ ಮಾಡುವ ಕೆಲಸ; ವಿವೇಕವಿಲ್ಲದೆ ಮಾಡುವ ಕಾರ್ಯ ಎಂದು ಆಲಂಕಾರಿಕವಾಗಿ ಬಳಸಿದ್ದಾರೆ.

* 'ಕುರುಡು ಕಾಂಚಾಣ ಒಂದು ಅದ್ಭುತವಾದ ಪ್ರತಿಮಾ ಭಾವಗೀತೆ' ಎಂದು ಹೇಳುತ್ತ ಪ್ರಭುಶಂಕರ ಅವರು 'ಪಾಶ್ಚಾತ್ಯ ಸಾಹಿತ್ಯವನ್ನು ಬಲ್ಲವರು ಹೇಳುತ್ತಾರೆ, ಅಲ್ಲಿಯೂ ಇಷ್ಟು

ಕಿರಿದರಲ್ಲಿ ಈ ತತ್ತ್ವ ಇಷ್ಟು ಶಕ್ತಿಪೂರ್ಣವಾಗಿ ರಸವ್ಯಂಜಕವಾಗಿ ನಿರೂಪಿತವಾಗಿಲ್ಲ' ಎಂದು ತಿಳಿಸಿದ್ದಾರೆ. (ಕನ್ನಡದಲ್ಲಿ ಭಾವಗೀತೆ)

ವಿಶ್ವದ ಹಲವಾರು ಬಂಡವಾಳಶಾಹಿ ಬ್ಯಾಂಕುಗಳು, ಕಂಪನಿಗಳು ಮೋಸ ವಂಚನೆಯ ವ್ಯವಹಾರದಿಂದ ಮನಸೋ ಇಚ್ಛೆ ಕುಣಿದು ವಿಶ್ವವಾಣಿಜ್ಯ ವ್ಯವಸ್ಥೆ ಕುಸಿಯಲು ಕಾರಣವಾದವು. ನಮ್ಮ ದೇಶದಲ್ಲಿ ಹೇಗಾದರೂ ಹಣ ಮಾಡುವ ಪ್ರವೃತ್ತಿಗೆ ಒಳಗಾದ ಸತ್ಯಂ ಕಂಪ್ಯೂಟರ್ ಕಂಪನಿಯು 'ಹ್ಯಾಂಗಾರೆ ಕುಣಿ ಕುಣಿದು ಮಂಗಾಟ ನಡೆಸಿದಾಗ' ಅದು ತಾನೇ ತಾನಾಗಿ ಕುಸಿದು ಅಂಗಾತ ಬಿತ್ತು. ಆಗ ಅದನ್ನು ಎತ್ತಿ ಒಗೆಯಬೇಕಾಯಿತು. ಸ್ವಾತಂತ್ರ್ಯ ನಂತರ ಆಳುವವರು, ಬಂಡವಾಳಶಾಹಿಗರು, ಗುತ್ತಿಗೆದಾರರು ನಿರ್ದಯ ನಡೆಯಿಂದ ವಿವೇಚನೆ ಇಲ್ಲದೆ ಹಣ, ಐಶ್ವರ್ಯ ಸಂಗ್ರಹಿಸಿ ದೀನ ದಲಿತರು ಈ ನಾಡಿನಲ್ಲಿ ಎರಡು ಹೊತ್ತಿನ ಕೂಳಿಗೆ ಪರದಾಡುವಂತೆ ಮಾಡಿದ್ದಾರೆ. ಅದನ್ನು ಅರಿತ ಕೇಂದ್ರ ಸರ್ಕಾರ 2016ರ ವರ್ಷದ ಕೊನೆಯಲ್ಲಿ ರೂ500 ಮತ್ತು ರೂ1000 ಮುಖಬೆಲೆಯ ನೋಟುಗಳನ್ನು ಅಪಮೌಲ್ಯೀಕರಣ ಮಾಡಿತು. ಅದು 'ಹ್ಯಾಂಗಾರೆ ಕುಣಿಕುಣಿದು ಮಂಗಾಟ ನಡೆದಾಗ ಅಂಗಾತ ಬಿತ್ತೋ, ಹೆಗಲಲ್ಲಿ ಎತ್ತೋ' ಎಂಬ ಕ್ರೂರ ವಾಸ್ತವವನ್ನು ತಿಳಿಸಿತು. ಈ ಹಿನ್ನೆಲೆಯಲ್ಲಿ ಹಸಿವು ಅನ್ನವನ್ನು ಹಿಡಿತದಲ್ಲಿಟ್ಟುಕೊಂಡ ಶೋಷಕರ ಮರ್ಮ ಅರಿತಿದ್ದ ವಿಶ್ವವ್ಯಾಪಕ ಚಿಂತನಶೀಲ ವ್ಯಕ್ತಿತ್ವವುಳ್ಳ ಬೇಂದ್ರೆಯವರು ಶೋಷಕರು ತಮ್ಮ ತೋಲತಪ್ಪಿದ ವರ್ತನೆಯಿಂದ ತಾವೇ ಕುಸಿದು ನಾಶವಾಗುವುದನ್ನು ಸಮರ್ಥವಾಗಿ ಈ ಕವನದಲ್ಲಿ ಪ್ರತಿಮಾತ್ಮಕವಾಗಿ ಚಿತ್ರಿಸಿದ್ದಾರೆ. ಇದು ಭೂತದಲ್ಲಿ ನಿಂತು ವರ್ತಮಾನಕ್ಕೆ ಬಂದು ಭವಿಷ್ಯತ್ತನ್ನು ನುಡಿಸುವ ಬಗೆ.

---

## ಸಿಟ್ಟು–ಸಾಂತಿ

### ಗೊರಟ

**ಪ್ರಳಯದ ಬಸಿರೊಳಗದರೊಂದು ಗೊರಟ/ ಸಿಕ್ಕಿತು, (1, 2–1)**

: (ಮಾವಿನ ಹಣ್ಣಿನ ಒಳಗಿರುವ) ಬೀಜ; ಓಟೆ.

***

*ಗೊರಟವನ್ನೇನು ಕಂಡು ಮೂಗು ಮುರಿಯುವಿ? ಕಾಣು ತುದಿಯ ತನಿವಣ್ಣನ್ನು (ವಿಚಾರ ಮಂಜರಿ–69)

---

## ಸಾಂತಿ

**ರಾವುಮುಖ**

**ಪ್ರೇತ ಕಳೆಯ ನಿನ್ನ ರಾವುಮುಖ ನೋಡಿ/ ಸಾವೆ ಸತ್ತಿತೊ ಏನೊ (2–3, 4)**

: ಗರ ಬಡಿದಂತಿರುವ ಮುಖ; ಭಯದಿಂದ ವಿಕಾರವಾದ ಮುಖ.

---

## ಮೊದಲಗಿತ್ತಿ

**ಅಂಡಲೆ**

**ಹಿಂಡಾಗಿ ಪುಂಡರು ಅಂಡಲೆಯಲು ನಿನ್ನ/ ನೆತ್ತರು ಒರೆಹಚ್ಚಿ ನೋಡಿರುವೆ/ ಪಾತಾಳಕಂಡರು ಕೆಲ ತಾಯಿಗ್ಗಂಡರು/ ಅವರನ್ನೂ ಮಡಿಲಾಗ ಮಡಗಿಸಿಹೆ (1–1, 2, 3, 4)**

: ಕಾಡು; ಹಿಂಸೆ ಮಾಡು.

*ಬೇಂದ್ರೆಯವರ ಭಾವದಲ್ಲಿ ಭೂಮಿತಾಯಿಯು ಸದಾ ಮದುಮಗಳು, ನವವಧು, ಮೊದಲಗಿತ್ತಿ. ಅವರು 'ಮೊದಲಗಿತ್ತಿ' ಕವನದಲ್ಲಿ ಆ ತಾಯಿ ಸದಾ ನವನವೀನೆ ಎಂದು ಮಾತೃಪ್ರಧಾನ ಮೌಲ್ಯಗಳಾದ ತಾಳ್ಮೆ, ಪ್ರೀತಿ, ವಾತ್ಸಲ್ಯ, ಅಂತಃಕರಣ, ಸಮೃದ್ಧಿಯನ್ನು ಚಿತ್ರಿಸಿದ್ದಾರೆ.

ಭೂಮಿತಾಯಿಯನ್ನು ಆಳುವವರನ್ನು 'ಪುಂಡರು' ಎಂದು ಬೇಂದ್ರೆ ಹೇಳಿ, ಅವರು ನಡೆಸುವ ಆಕ್ರಮಣದ ಹಿಂಸೆ, ಕಾಟವನ್ನು 'ಅಂಡಲೆ'ಯಲು ಎಂದು ಕರೆದಿದ್ದಾರೆ. ಹಾಗೆ ಅಂಡಲೆದವರ ನೆತ್ತರನ್ನು ಆಕೆ ಒರೆಹಚ್ಚಿ ನೋಡಿದ್ದಾಳೆ ಎಂದಿದ್ದಾರೆ.

ಭೂಮಿತಾಯಿಯನ್ನು ಆಳುವ ಮನೋಭಾವದ ಪುರುಷಾದಾರ್ಷ್ಟ್ಯದ ಪೃಥ್ವೀವಲ್ಲಭರನ್ನು 'ತಾಯಿಗ್ಗಂಡರು' ಎಂಬ ಪ್ರತಿಮೆಯಲ್ಲಿ ಬಣ್ಣಿಸಿದ್ದಾರೆ. ಸರ್ವನಾಶವಾದ ಅಂತಹವರನ್ನು ಆಕೆ ತನ್ನ ಮಡಿಲಲ್ಲಿ ಮಲಗಿಸಿಕೊಂಡಿದ್ದಾಳೆ ಎಂದು ಹೇಳಿ ತಾಯಿತನವನ್ನು ಪ್ರಕಾಶಿಸಿದ್ದಾರೆ.

* * * * * *

**ಒಕ್ಕುಡಿತೆ, ಪಾನಿಪತ್ತು**

**ಒಕ್ಕುಡಿತೆ ಅರೆಮುಕ್ಕು ಎನುತೆನುತೆ ಹಲಕೆಲವು/ ಪಾನಿಪತ್ತುಗಳನ್ನು ಮುಕ್ಕುಳಿಸುವೆ (2–1, 2)**

: ಒಕ್ಕುಡಿತೆ–ಒಂದು ಕುಡಿತೆಯಷ್ಟು; ಒಂದು ಬೊಗಸೆ.

: ದಿಲ್ಲಿ ಮತ್ತು ಅಂಬಾಲಗಳ ನಡುವೆ ಇರುವ ಐತಿಹಾಸಿಕ ಪ್ರಸಿದ್ಧಿಯುಳ್ಳ ಒಂದು ಯುದ್ಧಭೂಮಿ–ಪಾನಿಪತ್ತು. ಬೇಂದ್ರೆಯವರು ಬಳಸಿರುವ 'ಪಾನಿಪತ್ತು' ಪದವು ಯುದ್ಧದಲ್ಲಿ ಉಂಟಾಗುವ ರಕ್ತಪಾತವನ್ನು ಧ್ವನಿಸುತ್ತದೆ.

*ಪಾನಿಪತ್ತಿನಂತಹ ಯುದ್ಧಗಳು ಭೂಮಿತಾಯಿಗೆ 'ಒಕ್ಕುಡಿತೆ' ಎಂದರೆ ಒಂದು ಕುಡಿತೆಯಷ್ಟು; ಒಂದು ಬೊಗಸೆ. ಕೆಲವೊಮ್ಮೆ ಅರೆಮುಕ್ಕು/ ಅರ್ಧ ಹಿಡಿಯಷ್ಟು. ಈ ಜಗದ ಇತಿಹಾಸದಲ್ಲಿ ಈ ನೆಲದ ಮಕ್ಕಳಾದವರು ಭೂಪಾಲಕರೆಂದು ಮೆರೆದು 'ಪಾತಾಳ ಕಂಡರು ಕೆಲ ತಾಯಿಗಂಡರು' ಅವರ ಕೆಟ್ಟನಡೆ, ದುಷ್ಟ ಧೋರಣೆ, ಅಮಾನವೀಯ ವರ್ತನೆ ಅವರ ನಾಶಕ್ಕೆ ಕಾರಣವಾಯಿತು ಎಂದು ಬೇಂದ್ರೆ ತಿಳಿಸಿದ್ದಾರೆ.

---

# ನಿದ್ದೆ

## ನೇರಿತು, ನಿಚ್ಚಳ

**ಈ ಎಚ್ಚರದೀ ಹೆಚ್ಚಳ/ ಈ ನೇರಿತು ಈ ನಿಚ್ಚಳ/ ಮೂಡಲಿಲ್ಲಿ ಅರಸು ನಾನು,/ ನಿಂತ ನೆಲೆಯೆ ಲೋಕ ತಾನು. (2–1, 2, 3, 4)**

: ನೇರವಾದುದು; ಋಜುವಾದುದು.

: ನಿರ್ಮಲವಾದುದು; ಶುದ್ಧವಾದುದು.

*ಬೇಂದ್ರೆ ಅವರ ಆಧ್ಯಾತ್ಮಿಕ ಕವನಗಳು ಸ್ಪಷ್ಟ ವಿಚಾರಗಳಿಂದ ಊರ್ಧ್ವಗಾಮಿ ಚಿಂತನೆಗಳ ರಸಸ್ಥಾನವಾಗಿವೆ. ಅವು ಇರವು ಮತ್ತು ಅರಿವು ಮುಮ್ಮುಖವಾಗಿ ನಿಂತು ಪ್ರತಿಫಲನಗೊಂಡ ಬೆಳಕು. ಅವರ ಕಲ್ಪನಾಲಹರಿಯ ಕಾವ್ಯದ ಒಡಲಲ್ಲಿ ಅಚಿಂತ್ಯಾನುಭವದ ನಿಷ್ಕರ್ಷೆ ಇದ್ದು, ಪ್ರತಿ ಪದವು–ಓದುಗನ ಅನುಭವದ ಫಲಕ್ಕೆ ತಕ್ಕಂತೆ ಅರ್ಥ ನೀಡುವ ವಿಶಿಷ್ಟ ಲಕ್ಷಣವನ್ನು ಹೊಂದಿದೆ. ಅರ್ಥರಹಿತ, ಬರಿಯ ಜಪಿಸುವ ಶಬ್ದಜಾಲವಾಗದೆ ಅಂತರಾಳವನ್ನು ಪ್ರವೇಶಿಸುವ ಧ್ಯಾನ ಶೀಲ ಗುಣವನ್ನು ಹೊಂದಿದೆ.

ಎಚ್ಚರ, ಅರಿವು–ನಿಚ್ಚಳವಾಗಿದೆ. ಅದು ನೇರಿತು/ಋಜುವಾದುದು, ನೇರವಾದುದು ಆಗಿದೆ. ಬೇಂದ್ರೆ ಅವರು ಸೆರೆವಾಸದಲ್ಲಿದ್ದಾಗ ಅವರ ಚಿಂತನೆಗಳು ಊರ್ಧ್ವಗಾಮಿಯಾಗಿದ್ದವು.

* * * * * *

**ಕಣ್ಣರಿಕೆ**

**ಹೆಡೆ ಬೆಳಕಲಿ ಹಾದಿ ಕಂಡು /ಕೇಳಿಕೆ ಕಣ್ಣರಿಕೆಯಂದು. /ಹುಡುಕುವುದೇನಿನ್ನೆಲ್ಲಿ?/ ಇದೆ ಅದು ಅಂಗೈನೆಲ್ಲಿ. (3–1, 2, 3, 4)**

:ಸಾಕ್ಷಾತ್ ಲಕ್ಷ್ಯವಹಿಸುವಿಕೆ; ಪ್ರತ್ಯಕ್ಷವಾದ ಮೇಲ್ವಿಚಾರಣೆ; ದೇಖ ರೇಖಿ(ಉ.ಕ)

*ಬೇಂದ್ರೆ ಅವರು ಅರಿವನ್ನು ಹೊಂದಿದ್ದು ತಮ್ಮ ಆಂತರ್ಯದಿಂದ ಹೊಮ್ಮಿದ ಬೆಳಕು ಹಾಗೂ ಶ್ರವಣದಿಂದ. ಅಧ್ಯಾತ್ಮ ಜೀವಿ ಗುರುಗಳು ಕಣ್ಣರಿಕೆಯಲ್ಲಿ/ ಸಾಕ್ಷಾತ್ ಲಕ್ಷ್ಯವಹಿಸಿ ತಿಳಿಸಿದ ಚಿಂತನೆ ಅವರಿಗೆ ದೊರಕಿದ ಭಾಗ್ಯ. ಅಚಿಂತ್ಯಾನುಭವ ಅವರಿಗೆ ಅಂಗೈನೆಲ್ಲಿಯಾಗಿತ್ತು.

***

**ಸತ್ಯಸೂರ್ಯನ ಇದಿರುಗೊಂಡು ಕಣ್ಣರಿಕೆಯಲಿ/ ಗರುಡನೊಲು ಅಮೃತಕ್ಕೆ ಹಾರುತಿಹುದು. (ಜೀವಲಹರಿ: ನೆನವು)**

---

## ಸಚ್ಚಿದಾನಂದ

**ಜೀವಾಳ**

**ಸಿಗಲೊಲ್ಲಿ ಬೇಕು ನೀ ನನಗ ಜೀವ ಜೀವಾ಼ಳಾ಼।/ ರಾಜಘನನೀಳಾ॥ (3–8, 9)**

: ಹುರುಳು: ಸತ್ವ; ಸಾರ

* * * * * *

**ಚದುರು, ನದರು**

**ಇದು ಯಾವ ಸೀಮೆಯಾ ಚದುರು।/ ನಿಂತಿ ನನ್ನಿದುರು।/ ಬಿಟ್ಟ ನಿನ ನದರೋ। ಬಿಟ್ಟ ನಿನ ನದರು। (4–3, 4, 5)**

: ಜಾಣತನ; ಚಾತುರ್ಯ; ಕೌಶಲ; ಬುದ್ಧಿವಂತಿಕೆ.

: ದೃಷ್ಟಿ; ನೋಟ; ಲಕ್ಷ್ಯ; ಗಮನ.

*ಜೀವಾತ್ಮ ಪರಮಾತ್ಮರ 'ಶರಣಸತಿ, ಲಿಂಗಪತಿ' ತತ್ತ್ವವು ಸಂವಾದವಾಗಿ ಹರಿದು 'ಸಚ್ಚಿದಾನಂದ'ವಾಗಿದೆ. ಅತ್ಯಂತ ನಿಗೂಢವಾದ ಜಗತ್ತಿನೊಳಗೆ ಬೆಳಕಿನ ಮುಂಜ ಉಂಟು. ಅದು ಕಾಣುವವರಿಗೆ ಮಾತ್ರ ಅನುಭವಕ್ಕೆ ಬರುತ್ತದೆ. ಈ ಕಾಣ್ಕೆಯ ಅನುಭವ

ನಿನ್ನದಾಗಲಿ ಎಂದು ಸಚ್ಚಿದಾನಂದನನ್ನೇ ಸತಿಭಾವದ ಜೀವಿ ಕೇಳಿಕೊಳ್ಳುತ್ತದೆ. ಸಚ್ಚಿದಾನಂದನ ಮಹಿಮೆಯು ಜೀವಕ್ಕೆ ಅತ್ಯಾಶ್ಚರ್ಯವನ್ನುಂಟುಮಾಡುತ್ತದೆ. ಯಾವ ಚಾತುರ್ಯದಿಂದ ನನ್ನೆದುರು ನಿಂತು, ನಿನ್ನ ದೃಷ್ಟಿಯನ್ನು ನನ್ನ ಮೇಲೆ ಬಿಟ್ಟಿರುವೆ ಎಂದು ಜೀವಿ ಪ್ರಶ್ನಿಸುತ್ತದೆ.

ಸಚ್ಚಿದಾನಂದ ಜೀವಿಯ ಕಡೆಗೆ ಲಕ್ಷಿಸಿದಾಗ, ಜೀವಿ ಅದರ ಬೆಳಕಿನ ಆನಂದದಲ್ಲಿ ಸುಖಿಸುತ್ತದೆ.

---

## ಅವರ್ಣನೀಯ ಅರ್ವಾಚೀನ ಸೌಂದರ್ಯ

### ಅರ್ವಾಚೀನ, ತಿಗಳಿ, ಕಲಪು

**ಏನು ತಲೆ ಬಣ್ಣಿಸಲಿ ತಿಗಳಿ ಮೇಯುವ ಹೊಲವ?/ ಕಲಪನ್ನು ಕಾಣವೇ ನನ್ನ ಕಣ್ಣು? (1–3, 4)**

: ಇತ್ತೀಚಿನ; ಹೊಸದಾದ.

: ಕಣ್ಣಿಗೆ ಕಾಣದ ಬಹುಸೂಕ್ಷ್ಮವಾದ ಕ್ರಿಮಿ ತಿಗಳಿ.

: (ಉ.ಕ)ಕೂದಲು ಕರ್‍ರಗೆ ಕಾಣುವಂತೆ ಲೇಪಿಸುವ ಬಣ್ಣ.

* 'ತಿಗಳಿ'ಯನ್ನು 'ತೇಗಣಿ' ಎಂದೂ ಕರೆಯುತ್ತಾರೆ. ಇದು ತಲೆ ಮೇಯುತ್ತದೆ. ಮೇದ ಜಾಗ ಪೂರ್ತಿ ಕೂದಲು ರಹಿತವಾಗಿ ಸಪಾಟಾಗುತ್ತದೆ.

ಕವಿಯು ಅರ್ವಾಚೀನ ಸುಂದರಿಯನ್ನು ವಿಡಂಬಿಸಲು 'ತಿಗಳಿ' ಪದ ಬಳಸಿರುವುದು ಅವರ ಗ್ರಾಮೀಣ ಹಾಸ್ಯಪ್ರಜ್ಞೆಯ ದ್ಯೋತಕ. ಅದಕ್ಕೆ ಕಲಪು ಹಚ್ಚಿದರೆ, ಇನ್ನೂ ಹೆಚ್ಚು ನಗೆಗೆ ಕಾರಣವಾಗುತ್ತದೆ.

---

## ನಾನೊಂದು ನೆನೆದರೆ

### ಅರಸ ತೂಕ

**ಅರಸ ತೂಕದ ಹೆಣ್ಣ ಸರಸವ್ಯಾತಕಿನ್ನ/ ವಿರಸವಾದೀತ ನನ ಮನಸು (2–1, 2)**

: ಶ್ರೇಷ್ಠವಾದ ತೂಕ; ಅತಿಶಯವಾದ ಮಹತ್ವ.

* * * * * *

**ಮಗ ಮಗ**

**ಹಾಸಿಗಿ ಮಗಮಗ, ಮಂಚ್ಯಕ ಝುಗ ಝುಗ/ ನನ್ನ ಎದಿ ಮಾತ್ರ ಧಗ ಧಗ/ ಉರಿದೀತು (3-1, 2, 3)**

: ಸುವಾಸನೆ; ಪರಿಮಳ

---

## ಪೋರಿ ಪೋರ

**ಕಡೆಬಾಳು**

**ಹೆಣ್ಣು ಮಣ್ಣು ಹ್ಯಾಳಂತ್ಯ/ ಬಣ್ಣ ಕಡೆಬಾಳದಂತ್ಯ/ ಬಾಳುವೀ ಸುಳ್ಳಾಟಂತ್ಯ/ ಹೆದರಲಿಲ್ಲಾ। (3-1, 2, 3, 4)**

: ಕೊನೆಯವರೆಗೆ ಬಾಳು; ಶಾಶ್ವತವಾಗಿರು, ರಾಜಗಾಂಭೀರ್ಯ.

*ಯೌವ್ವನಾವಸ್ಥೆಯಲ್ಲಿ ಪೋರ-ಪೋರಿ ಕೂಡುವಾಗ ಜೀವನದ ಗಂಭೀರತೆಗೆ ಸಂಬಂಧಿಸಿದ ಯಾವ ತತ್ವವೂ ಅವರಿಗೆ ತಿಳಿದಿರುವುದಿಲ್ಲ. ಹೆಣ್ಣು ಮಣ್ಣು ಹಾಳು; ಬಾಳು ಸುಳ್ಳು ಎಂಬುದು ಅವರ ಹತ್ತಿರ ಸುಳಿದಾಡುವುದಿಲ್ಲ. ಯೌವನದ ವೈಭವವನ್ನು ಪುಷ್ಟೀಕರಿಸುವ ಯಾವುದೇ ಬಣ್ಣ ಬೆಡಗು, ಅಂದ ಚೆಲುವು ಶಾಶ್ವತವಲ್ಲ ಎಂಬುದು ಅವರಿಗೆ ತಿಳಿದಿರುವುದಿಲ್ಲ. ಈ ಕುರಿತು ಅವರು ಹೆದರಲಿಲ್ಲ, ಅವರನ್ನು ಯಾರೂ ಹೆದರಿಸಲಿಲ್ಲ.

ಕಡೆಬಾಳುವ ಗೆಲುವು ಬೇಕಾದವರು ಈ ಧರ್ಮವನ್ನು ಪಾಲಿಸಬೇಕು. (ವಿಚಾರಮಂಜರಿ)

---

## ನೀ ಹಿಂಗ ನೋಡಬ್ಯಾಡ ನನ್ನ

**ಕಪ್ಪರಿಸಿ**

**ಮುಗಿಲ್ಯನ ಕಪ್ಪರಿಸಿ ನೆಲಕ ಬಿದ್ದರ ನೆಲಕ ನೆಲಿ ಎಲ್ಲಿನ್ನ, (3-3)**

* ಪತಿಯನ್ನು ಪೂರ್ಣವಾಗಿ ಅವಲಂಬಿಸಿ ನಡೆಯುವ ಪತ್ನಿಯ ಚಿತ್ರಣವನ್ನು ಬೇಂದ್ರೆ ಅವರು ಇಲ್ಲಿ ಸಾದೃಶ್ಯವಾಗಿ ನೀಡಿದ್ದಾರೆ. ಭೂಮಿಯಾದ ಅವಳಿಗೆ ಪತಿಯು ಮುಗಿಲು. ಅವರದು ಭುವಿ-ಬಾನು ಸಂಬಂಧ.

ಮುಗಿಲು ಕಪ್ಪರಿಸಿ ಬಿದ್ದರೆ ಅರ್ಥಾತ್ ಕತ್ತರಿಸಿಕೊಂಡು ಒಮ್ಮೆಲೆ ಬಿದ್ದರೆ ತನಗೆ ನೆಲಿ(ಆಧಾರ) ಎಲ್ಲಿ ಎಂದು ತಿಳಿದು ನೀನು ನನ್ನನ್ನು ಹೀಗೆ ನೋಡಬ್ಯಾಡ. ನಾನು ದೇವರೆಂದು ತಿಳಿಯಬೇಡ ಎಂದು ಕಾವ್ಯ ನಾಯಕ ಹೇಳುತ್ತಿದ್ದಾನೆ. ಇದು ದಾಂಪತ್ಯದ ಅನುಪಮ ಸವಿ.

* * * * * *

## ಕವಳಿಕಂಟಿಯಾ ಹಣ್ಣು

**ಇಬ್ಬನ್ನಿ ತೊಳೆದರೂ ಹಾಲು ಮೆತ್ತಿದಾ ಕವಳಿಕಂಟಿಯಾ ಹಣ್ಣು/ ಹೊಳೆ ಹೊಳೆವ ಹಾಂಗ ಕಣ್ಣಿರುವ ಹೆಣ್ಣ, ಹೇಳು ನಿನ್ನವೇನ ಈ ಕಣ್ಣು? (4–1, 2)**

*ಕವಳಿ ಹಣ್ಣುಗಳು ಕಣ್ಣಿನ ಗುಡ್ಡೆ ಗಾತ್ರ ಇರುತ್ತವೆ. ಆ ಹಣ್ಣಿನ ತೊಟ್ಟಿನಿಂದ ಬೀಳುವ ಹಾಲು ಜಿಗುಟಾಗಿರುತ್ತದೆ. ಆ ಶುಭ್ರಹಾಲು ಹಣ್ಣಿಗೆ ಅಂಟಿಕೊಳ್ಳುತ್ತದೆ. ಅದು ಕಣ್ಣಿನ ಬಿಳಿ ಮತ್ತು ಕರಿ ಗುಡ್ಡೆಯನ್ನು ಪ್ರತಿಮಿಸುತ್ತದೆ. ಆಡುವ ಮಕ್ಕಳು ಮಲಗದೆ ಎಚ್ಚರದಲ್ಲೆ ಇದ್ದಾಗ ತಾಯಂದಿರು 'ಕಣ್ಣು ಕವಳಿ ಹಣ್ಣಿದ್ದಂಗಿದ್ದಾವೆ. ಈ ಮಗು ಮಲಗುತ್ತದೆಯೇ?' ಎಂದು ಮಾತಾಡಿಕೊಳ್ಳುತ್ತಾರೆ. ಆ ಹಣ್ಣು ಹೊಳೆ ಹೊಳೆಯುವ ಕಣ್ಣಿನ ಹೊಳಪನ್ನು ಹೊಂದಿವೆ.

ತಾನು ವಿವಾಹವಾದಾಗ ಹೊಳೆಹೊಳೆಯುವ ಕವಳಿಕಂಟಿಯ ಹಣ್ಣಿನಂತಿದ್ದ ಪತ್ನಿಯ ಕಣ್ಣು ಸಂಸಾರದಲ್ಲಿ ನೊಂದು ಬೆಂದು ತನ್ನ ಕಾಂತಿಯನ್ನು ಕಳೆದುಕೊಂಡಿದೆ ಎಂದು ಕವಿ ದುಃಖಿಸಿದ್ದಾರೆ. ಅದಕ್ಕೆ ತಾನೇ ಕಾರಣ ಎಂಬ ಆತ್ಮಶೋಧದಲ್ಲಿ ಈ ಕವನವನ್ನು ರಚಿಸಿದ್ದಾರೆ.

***

ಸಾಹಿತಿ ಡಿ.ಎನ್. ಅಕ್ಕಿ ಅವರ ಗೋಗಿ ಪಟ್ಟಣಕ್ಕೆ ನಾನು ಬೇಂದ್ರೆ ಕಾರ್ಯಕ್ರಮಕ್ಕೆ ಹೋಗಿದ್ದೆ. ಆಗ ಇನ್ನೊಂದು ಬಗೆಯ ಕವಳಿಕಂಟಿಯ ಹಣ್ಣನ್ನು ಆ ಪ್ರದೇಶದಲ್ಲಿ ನೋಡಿದೆ. ಅದು ಕಾಡಿನಲ್ಲಿ ಬೆಳೆಯುವ ಖತರ್ನಾಕ್ ಮುಳ್ಳು ಹೊಂದಿದ ಪೊದೆಯ ಜಾತಿಗೆ ಸೇರಿದ ಗಿಡ. ಅದು ಹಲಸಂದಿಗಿಂತಲೂ ತುಸು ಹೆಚ್ಚು ಗಾತ್ರದಲ್ಲಿದ್ದು ಕಣ್ಣಿನಂತೆ ಹೊಳೆ ಹೊಳೆಯುತ್ತಿರುತ್ತದೆ. ಇದು ನನಗೆ ವಿಸ್ಮಯವನ್ನು ಉಂಟುಮಾಡಿತು.

* * * * * *

## ಎವೆಬಡಿಸು, ಬಿಕ್ಕ

**ಎವೆಬಡಿಸಿ ಕೆಡವು, ಬಿರಿಗಣ್ಣು ಬ್ಯಾಡ, ತುಟಿಕಚ್ಚಿ ಹಿಡಿಯದಿರು ಬಿಕ್ಕ (5–4)**

: ಕಣ್ಣು ರೆಪ್ಪೆಯನ್ನು ಬಡಿಯುವಂತೆ ಮಾಡು.

: ಬಿಕ್ಕಳಿಸು(ದುಃಖ, ಭಯ, ಸಂತೋಷಾತಿರೇಕಗಳಿಂದ) ಮಾತು ತಡವರಿಸು, ಗದ್ಗದಿಸು.

---

## ನಾನು ಬಡವಿ

### ರಂಗಸಾಲೆ

**ಹತ್ತಿರಿರಲಿ ದೂರವಿರಲಿ/ ಅವನೆ ರಂಗಸಾಲೆ (2–1)**

: ನಾಟಕರಂಗ; ನಾಟ್ಯವೇದಿಕೆ.

*ಭಾರತೀಯ ಕುಟುಂಬದ ಆಧಾರವಾಗಿರುವ ಹೆಣ್ಣಿಗೆ ಅವಳ ಸಂತಸದ ನಾಟ್ಯವೇದಿಕೆ ಪತಿ ಎಂದು ವರ್ಣಿಸಿರುವುದು ಅನನ್ಯವಾಗಿದೆ. ದಾಂಪತ್ಯದ ಹಲವು ರಂಗಿನ, ಹಲವು ಕುಣಿತ ಭಣಿತ ಮಾತು ಮೌನದ ಪ್ರತಿಮೆಯಾಗಿ ಬೇಂದ್ರೆ ಅವರು 'ರಂಗಸಾಲೆ' ಎಂದು ಚಿತ್ರಿಸಿರುವ ನಾಟಕರಂಗ ದಾಂಪತ್ಯಾನುಭವದ ಪ್ರತೀಕ.

* * * * * *

### ಮೆಚ್ಚಿನೋಲೆ

**ಕಣ್ಣು ಕಟ್ಟುವಂಥ ಮೂರ್ತಿ/ ಕಿವಿಗೆ ಮೆಚ್ಚಿನೋಲೆ (2–3, 4)**

* ಬಡವಿಯಾದ ಕಾವ್ಯನಾಯಕಿಗೆ 'ಕಣ್ಣು ಕಟ್ಟುವಂಥ ಮೂರ್ತಿ'ಯಾದ ಪತಿಯೆ ಅವಳ ಮೆಚ್ಚಿನ ಓಲೆ. ಅವಳಿಗೆ ಹಿತವಾದ, ಹಿಡಿಸಿದ, ಅವಳ ಬೆಳಕಾಗಿ ಅವಳನ್ನು ಅಲಂಕರಿಸಿದ ಓಲೆ ಅವನು. ಮುತ್ತಿನೋಲೆ, ರನ್ನದೋಲೆಯನ್ನು ಮೀರಿದ ಮೆಚ್ಚಿನ ಓಲೆ. ಮೆಚ್ಚು-ಒಬ್ಬರಿಗೊಬ್ಬರು ಬಯಸಿ, ಅನುರಕ್ತಗೊಂಡ ಪ್ರೀತಿ. ಬೇಂದ್ರೆಯವರು ಅವಳ ಕಿವಿಯ ಆಭರಣವಾಗಿ ಅವನನ್ನು 'ಮೆಚ್ಚಿನೋಲೆ'ಯಾಗಿಸಿರುವುದು ಬಡತನದಲ್ಲಿ ಬಾಳಿನ ಬೆಳಕು ಪ್ರತಿಫಲನಗೊಂಡ ರೀತಿ. ಕಾವ್ಯದಲ್ಲಿ ಪ್ರಕಟಗೊಂಡ ದಾಂಪತ್ಯ ದೀಪ್ತಿ.

* * * * * *

### ನವಿರು,

**ಅದೇ ಗಳಿಗೆ ಮೈಯ ತುಂಬ/ ನನಗೆ ನವಿರುಬಟ್ಟೆ (3–3, 4)**

: ರೋಮಾಂಚ; ಪುಳಕ.

*ಸತಿಯು ಪತಿಯನ್ನು ಅವಲಂಬಿಸಿರುವ ಪರಾಕಾಷ್ಠೆಯ ಪ್ರತೀಕವಾಗಿ ಈ ಸಾಲುಗಳಿವೆ. ಯಾವುದೇ ಋತುಮಾನದಲ್ಲೂ ಹಿತ, ಮುದನೀಡುವ ಪತಿಯ ಮನಃಸ್ಥಿತಿಯನ್ನು(ಹದನ) ಬಣ್ಣಿಸುವ ಸತಿಯು, ಆತನ ಸಂಪರ್ಕದಲ್ಲಿದ್ದರೆ ಸಾಕು

ಎಂದು ಹೇಳುವ ಮೂಲಕ ತನ್ನ ಸಂತೃಪ್ತ ಜೀವನದ ಆಶಯವನ್ನು ತಿಳಿಸುತ್ತಾಳೆ. ಅತ್ಯಂತ ಸೂಕ್ಷ್ಮ, ದುಬಾರಿ, ಕುಸುರಿ ಕೆಲಸದ ಮೃದು ಮೈ-ಮನಕ್ಕೆ ಹಿತವೆನಿಸುವ ನವಿರು ವಸ್ತುವನ್ನು ಧರಿಸಿದಾಗ ಆಗುವ ಆನಂದವು ಪತಿಯ ಸಾಮೀಪ್ಯ ನೀಡುತ್ತದೆ ಎಂಬ ಪುಳಕದ ಭಾವ. ರೋಮಾಂಚನವನ್ನು 'ಮೈಯ ತುಂಬ ನವಿರುಬಟ್ಟೆ' ರೂಪಕದಲ್ಲಿ ಚಿತ್ರಿಸಿದ್ದಾರೆ. ಅದು ಪತಿಯ ಪ್ರೀತಿಯ ಭಾವ ಸ್ಪರ್ಶವೇ ಹೌದು!

* * * * * *

## ವಸ್ತು

**ಆತ ಕೊಟ್ಟ ವಸ್ತು ಒಡವೆ/ ನನಗೆ ಅವಗೆ ಗೊತ್ತು(4–1,2)**

*ಈ ಜಗದ ಅತಿಸಹಜ ದಾಂಪತ್ಯಪ್ರೀತಿಯನ್ನು ಮುಕ್ತವಾಗಿ ಜನರಿಗೆ ಉಣಬಡಿಸುವ ಶ್ರೇಷ್ಠ ಕಾವ್ಯವಿದು. ಮನೆಯ ಎಲ್ಲ ಹಿರಿಕಿರಿಯರು, ಬಂಧು ಬಾಂಧವರು ಕೇಳಿ ಸವಿಯುವ ಪ್ರೀತಿಯ ಎಲೆ ಅಡಿಕೆಯ ಕಂಪು, ಕೆಂಪು, ಭೋಗ. ಜಗತ್ತಿನಲ್ಲಿ ಇಂತಹ ಕಾವ್ಯ ಅಪರೂಪ. ಗಂಡು-ಹೆಣ್ಣಿನ ಪ್ರೀತಿ ಪ್ರಣಯವನ್ನು ಮುಕ್ತವಾಗಿ ಸಾರುತ್ತಾ ಅದರ ಒಟ್ಟುಗೂಡಿಕೆಯನ್ನು ಕಾವ್ಯಪಲ್ಲಕ್ಕಿಯಲ್ಲಿ ತೂಗಿ ನಲಿಯುವ ಶೀಲ.

* 'ವಸ್ತು' ಪದಕ್ಕೆ ದ್ರವ್ಯ, ಧನ, ಸಂಪತ್ತು ಎಂದು ಪ್ರಕಟವಾಗಿ ಹೇಳಿದರೆ, ಅದರ ಆಂತರ್ಯದಲ್ಲಿ essence ಇದೆ. ಅದು ಪುರುಷ ಗಂಧ. ಲಕ್ಷ್ಮೀಶ ಕವಿ ಹೇಳಿರುವ ಎಲೆ ಅಡಿಕೆ ಎಂಬ ರಾಗ ಹೊಮ್ಮಿಸುವ ಭೋಗ್ಯವಸ್ತು.

"ತಮ್ಮಿಂದ ವಸ್ತುವಂ ಪಡೆಯಲ್ಕೆ ಸಂಯೋಗವಮ್ಮಾಳ್ಪವೋಲೆ ನಾಗವಲ್ಲಿಗಳ್ ಭಾರದಿಮ್ಮೆರೆವ ಪೂಗವೃಕ್ಷಂಗಳಂ ಪರ್ವಿ ಕಂಗೊಳಿಸಿದವು ನಂದನದೊಳ್(ಲಕ್ಷ್ಮೀಶ 8–18)

---

# ಅಷ್ಟು ಪ್ರೀತಿ ಇಷ್ಟು ಪ್ರೀತಿ

## ತನ್ವಂತರ

**ಸಪ್ತನಾಕ ಸಪ್ತನರಕ ಅದರ ಬೆಳಕು ಕತ್ತಲು/ ಮನ್ವಂತರ ತನ್ವಂತರ ಅದರ ಕೋಟೆ ಕೊತ್ತಲು(3–1ರಿಂದ 4)**

*ಸ್ವರ್ಗ ನರಕ ಎಂಬುದು ಬೆಳಕು ಕತ್ತಲು. ಜೀವಿ ಒಂದು ಜನ್ಮದಲ್ಲಿ ಆರ್ಜಿಸಿದ ಪಾಪ ಪುಣ್ಯದಂತೆ ಮರುಜನ್ಮದಲ್ಲಿ ಅದರ ಫಲ ಎಂಬುದು ಪುನರ್ಜನ್ಮ ಸಿದ್ಧಾಂತ. ಹಾಗೆ ಮನ್ವಂತರಗಳಲ್ಲಿ ಬೇರೆ ಬೇರೆ ದೇಹ ಧರಿಸುವುದು ತನ್ವಂತರ. ಆಗ ಆ ಜೀವಿ ಆಯಾ

ದೇಹದಲ್ಲಿ ಅನುಭವಿಸುವುದು ಅದು ಕಟ್ಟಿಕೊಂಡ ಕೋಟೆ ಕೊತ್ತಲದ ಫಲ. ತನ್ವಂತರ ಎಂಬುದು ಬೇಂದ್ರೆಯವರ ಶಬ್ದಪ್ರತಿಮೆಯಿಂದ ರೂಪಿತಗೊಂಡ ನೂತನ ಪದರೂಪ.

---

# ದೀಪ

**ಕಂತು, ಚಂದ್ರಹಾಸ**

**ಬಂತಿದೊ ಶೃಂಗಾರ ಮಾಸ/ ಕಂತು ನಕ್ಕ ಚಂದ್ರಹಾಸ/ ಎಂತು ತುಂಬಿತ್ಯಾಕಾಶ/ ಕಂಡವರನು ಹರಸಲು (1-1, 2, 3, 4)**

: 1. ಮನ್ಮಥ; ಕಾಮ.

2. ಹೃದಯ; ಸಂತೋಷ.

: ಬೆಳುದಿಂಗಳಿನಂತಹ ನಗೆ.

*ಬೇಂದ್ರೆ ಅವರು ನೀಡಿರುವ ಕವನಗಳ ಭಾವ ಸಂದರ್ಭಗಳು ಕೆಲವು ಕವನಗಳ ನಾಡಿಮಿಡಿತವನ್ನು ಅರಿಯಲು ಸಹಾಯವಾಗುತ್ತದೆ. 'ಫಾಲ್ಗುಣ ಪೂರ್ಣಿಮೆಯ ಸುಮಾರಿಗೆ ಗಂಗೋಘದಲ್ಲಿ ದೀಪ ತೇಲಿಬಿಟ್ಟು, ಅದು ತೇಲುವುದೋ ಮುಳುಗುವುದೋ ಎಂದು ಸಭಯ ಆಶೆಯಿಂದ ನಿರೀಕ್ಷಿಸುವ ದಂಪತಿಗಳಿಗೆ ಸಂಸಾರ ಪ್ರವಾಹದಲ್ಲಿ ಪ್ರೇಮದ ಗತಿಯೂ ಹೀಗೇ ಎಂದು ಒಮ್ಮೊಮ್ಮೆ ಹೊಳೆಯುವುದುಂಟು. ಕಾಶಿಯಾತ್ರೆಯಲ್ಲಿ ಬರೆದ ಗೀತ' ಎಂಬ ಹಿನ್ನೆಲೆ ಈ ಕವನ ಹೊಂದಿದೆ. ಅದನ್ನು ಅಭ್ಯಾಸ ಮಾಡಿದಾಗ 'ದೀಪ'ವು ದಂಪತಿಗಳು ತಮ್ಮ ಜೀವನದಲ್ಲಿ ಕಾಣಬೇಕಾದ ಬೆಳಕಿನ ಜೀವನೋನ್ನತಿಯ ಪ್ರತಿಮೆಯಾಗಿರುವುದು ಕಂಡುಬರುತ್ತದೆ. ದಂಪತಿಗಳು ಜೊತೆಗೂಡಿ ಹೊರಟಂತೆ ತರಳೆ ಇರುಳು ತನ್ನ ಪತಿಯನ್ನು ಹುಡುಕಲು ಹೊರಟ ರೂಪಕ ಇಡೀ ಪ್ರಕೃತಿಯನ್ನು ಆವರಿಸಿದ ಶೃಂಗಾರದ ಉಲ್ಲಾಸವನ್ನು ಪರಿಚಯಿಸುತ್ತದೆ.

ಫಾಲ್ಗುಣ ಅವರಿಗೆ ಶೃಂಗಾರ ಮಾಸವಾಗಿದೆ. ಶೃಂಗಾರ ನವರಸಗಳಲ್ಲಿ ಒಂದು. ವಿಭಾವ, ಅನುಭಾವ ಹಾಗೂ ಸಂಚಾರಿ ಭಾವಗಳಿಂದ ಪರಿಪುಷ್ಟವಾದ 'ರತಿ' ಎಂಬ ಸ್ಥಾಯಿಭಾವದಿಂದ ವ್ಯಂಗ್ಯವಾಗುವ ರಸ.

ಆ ಮಾಸದ ಪೂರ್ಣಿಮೆಯಲ್ಲಿಯ ಚಂದ್ರನನ್ನು 'ಕಂತು ನಕ್ಕ ಚಂದ್ರಹಾಸ' ಎಂದು ಬೇಂದ್ರೆ ಬಣ್ಣಿಸಿದ್ದಾರೆ. ಶೃಂಗಾರಭಾವದ ಹೃದಯ, ಸಂತೋಷ, ಕಾಮ, ಚಂದ್ರ ಎಂಬ ಅರ್ಥವನ್ನು ಬೇಂದ್ರೆ ಅವರು 'ಕಂತು' ಪದದಲ್ಲಿ ಅಡಗಿಸಿಟ್ಟಿದ್ದಾರೆ. ಸಂತೋಷದಿಂದ ನಕ್ಕ ಚಂದ್ರಹಾಸ ಗೋಚರವಾಗುತ್ತಿದ್ದಂತೆ, ಕಾಮ ನಕ್ಕು ಚಂದ್ರನಲ್ಲಿ ಉಲ್ಲಾಸವನ್ನುಂಟು ಮಾಡಿ ನಲಿಯುತ್ತಿದ್ದಾನೆ ಎಂಬ ಭಾವವೂ ಹೊಮ್ಮುತ್ತದೆ. ಆ ಶೃಂಗಾರಭಾವ

ಆಕಾಶವನ್ನು ತುಂಬಿದೆ. ಅದನ್ನು ನೋಡಿ ಮೈ ಮನಸ್ಸುಗಳಲ್ಲಿ ತುಂಬಿಕೊಂಡವರನ್ನು ಅದು ಹರಸಿದೆ. ಶೃಂಗಾರದ ಪ್ರಕೃತಿಯಲ್ಲಿ ತಮ್ಮ ದಾಂಪತ್ಯ ಸುಖ ಕಂಡವರನ್ನು ಆನಂದದ ಉತ್ಕಟತೆಗೆ ಕೊಂಡೊಯ್ದು ತೃಪ್ತಿಯನ್ನು ಉಂಟುಮಾಡಿದೆ.

'ಕಂಡವರ ಬಾಳು ಮರಿಸ್ಯದ/ ತಣ್ಣಗಿರಿಸ್ಸದ/ ಇದು ಮಾಯಾಕಾರರ ಬೀಡ/ ಬೆಳದಿಂಗಳ ನೋಡ್ಸ (ಬೆಳುದಿಂಗಳ ನೋಡ)

ಬೇಂದ್ರೆ ಶ್ರಾವಣ ಕವಿ. ಆ ಮಳೆಗಾಲದಲ್ಲಿ 'ಶ್ರಾವಣ ಬಂದ ಕಿವಿ ತೆರಿ ಅಂದ' ಎಂಬುದು ಬೇಂದ್ರೆ ಅವರು 'ಆಡಿಟರಿ ಇಮ್ಯಾಜಿನೇಶನ್'ಗೆ ಒಳಗಾದ ಅನುಭಾವ. ಕಾವ್ಯದ ಅಮೃತತ್ವಕ್ಕೆ ಏರಿದ ಹಿಗ್ಗು.

ಬೇಂದ್ರೆ ಅವರಿಗೆ ಶ್ರಾವಣದ ಮಳೆ ಎಂದರೆ ಇಡೀ ಜಗತ್ತನ್ನು ತನ್ನತ್ತ ಸೆಳೆದು ತುಂಬಿ ತೊಯ್ಯುವ, ಹರ್ಷ ಉಲ್ಲಾಸದಲ್ಲಿ ನಲಿಸುವ ಫಲವಂತಿಕೆ. ಈ ಫಲವಂತಿಕೆಯೆ ಕಾಮ. ಅದನ್ನು ಬೇಂದ್ರೆ ಅವರು ಬೌದ್ಧಿಕ ಸೌಂದರ್ಯದಲ್ಲಿ ಹಿಡಿದಿಟ್ಟ ಪ್ರತಿಮೆ: 'ಮೈದಾಳಿದಂತೆ ಕಂತು'

***

**ಇದು ವಿಶ್ವಜೀವದಾಕರ್ಷ/ ಹೊಮ್ಮಿತೋ ಹರ್ಷ/ ಏನು ಪ್ರತಿವರ್ಷ/ ದಂತೆ ಬಂತು / ಮೈದಾಳಿದಂತೆ ಕಂತು (ಸೂರ್ಯಪಾನ: ಪ್ರತಿ ವರ್ಷದಂತೆ ಬಂತು ಶ್ರಾವಣ)**

* * * * * *

## ಪಂಥ, ಪಾಂಥ

**ಪಂಥದಿಂದ ಮನೆಯ ತೊರೆದು/ ಪಾಂಥ ನೆನೆದನತ್ತು ಕರೆದು;/ ಇಂಥ ಸಮಯ ಬೇರೆ ಬರದು /ದಂಪತಿಗಳಿಗಾರಿಗು! (4–1, 2, 3, 4)**

*ಈ ನುಡಿಯು ಅರ್ಥವಾಗಬೇಕಾದರೆ ಬೇಂದ್ರೆಯವರ ಜೀವನ ಸಂದರ್ಭ ಗೊತ್ತಿರುವುದು ಅವಶ್ಯ. "1933ರಲ್ಲಿ ಬೇಂದ್ರೆಯವರು ನಿರುದ್ಯೋಗಿಗಳಾಗಿದ್ದರು. ಪುಣೆಯ ಕಕ್ಕನ ಆಶ್ರಯದಲ್ಲಿದ್ದು ಎಂ.ಎ ಪದವಿ ಪಡೆಯುವ ಪಂಥ ತೊಟ್ಟು ಹೆಂಡತಿ ಹಾಗೂ ಇಬ್ಬರು ಮಕ್ಕಳೊಂದಿಗೆ ಪುಣೆ ತಲುಪಿದರು. ಪ್ರತಿ ದಿನದ ವೆಚ್ಚವೂ ಕಕ್ಕನ ಹಣದಿಂದ. ಈ ವ್ಯಥೆ ಬೇಂದ್ರೆಯವರ ಮನಸ್ಸಿಗೆ ಯಾವಾಗಲೂ ಕಾಡುತ್ತಿದ್ದಿತು. ಇಂಥ ಸಮಯದಲ್ಲಿ ಮನೆಯವರೆಲ್ಲರೂ ಕಾಶಿಗೆ ಹೊರಟರು. 'ಇಂಥ ಸಮಯ ಬೇರೆ ಬರದು' ಎಂಬ ಭಾವದಿಂದ ಬೇಂದ್ರೆಯವರೂ ಪತ್ನಿಸಹಿತ ಕಾಶಿಯಾತ್ರೆಗೆ ಹೋದರು. ಗಂಗಾ ಯಮುನೆಯ ಸಂಗಮದಲ್ಲಿ ದಂಪತಿಗಳು ದೀಪ ತೇಲಿಬಿಡುವ ಸಂಪ್ರದಾಯ ಅತ್ಯಂತ ಔಚಿತ್ಯಪೂರ್ಣ. ಆ ದೀಪದ ವೆಚ್ಚ ಕಕ್ಕನದು, ತನ್ನದಲ್ಲ ಎಂಬ ವ್ಯಥೆ ದೀಪ ತೇಲಿಬಿಡುವಾಗಲೂ ಬೇಂದ್ರೆಯವರಿಗೆ ಕಾಡುತ್ತಿತ್ತು ಎಂಬುದು ಕವನ ಮುಕ್ತಾಯದ

'ದೀಪ ತೇಲಿಬಿಟ್ಟೆವೆ? ದೀಪ ತೇಲಿಬಿಟ್ಟೆವು'. ಎಂಬ ಸಾಲುಗಳಲ್ಲಿ ಪ್ರತಿಬಿಂಬಿತವಾಗಿದೆ. ಕಕ್ಕ ಕಕ್ಕಿಯ ಆದೇಶದಂತೆ ದೀಪ ತೇಲಿ ಬಿಡುತ್ತಿದ್ದೇವೆ. ಈ ದೀಪಕ್ಕಾಗಿ ಕೊಟ್ಟ ಹಣ ತನ್ನ ಸಂಪಾದನೆಯದಲ್ಲ ಎಂದ ಮೇಲೆ ಇದು ತನ್ನ ದೀಪವೇ ಎಂಬ ವ್ಯಥೆ ಇದೆ. 'ಇಂಥ ಸಮಯ ಬೇರೆ ಬರದು' ಎಂಬ ಒಂದೇ ಕಾರಣದಿಂದ ಪಾಂಥ–ಬೇಂದ್ರೆ–ಅತ್ತು ಕರೆದು; ಕಣ್ಣೀರು ನುಂಗಿ, ನಗುತ್ತ ಪತ್ನಿಯೊಂದಿಗೆ ದೀಪವನ್ನು ತೇಲಿಬಿಟ್ಟರು. ಮುಂದೆ ಎಂದೂ ಬೇಂದ್ರೆಯವರು ಕಾಶಿಗೆ ಹೋಗಲಿಲ್ಲ" ಎಂಬುದಾಗಿ ವಾಮನ ಬೇಂದ್ರೆಯವರು ಈ ಕವನದ ಔಚಿತ್ಯವನ್ನು ನೆನಪಿಸಿಕೊಳ್ಳುತ್ತಾರೆ.

---

## ಮನದನ್ನೆ

**ಅಡಕ**

**ಅಡಗಿ ಅಡಕದೆ ಮನವ ಮಡಗಬೇಡ (1–14)**

*ಬೇಂದ್ರೆ ಅವರು ತಮ್ಮ ಪತ್ನಿಯ ಮನಸ್ಸು ಹಗುರವಾಗಬೇಕು. ಅವಳು ಹಿಂದೆ ನಡೆದುಹೋದ ಅಹಿತಕರ ಘಟನೆಗಳ ಭಾರದಲ್ಲಿ ಕುಸಿಯಬಾರದು ಎಂದು ಆಶಿಸಿದ್ದಾರೆ. 'ಅಡಗಿ ಅಡಕದೆ ಮನವ ಮಡಗಬೇಡ' ಎಂದು ಆಕೆಯನ್ನು ಕೇಳಿಕೊಂಡಿದ್ದಾರೆ. ಅಡಗಿ ಎಂಬ ಪದವು ಇಲ್ಲಿ ಅವಳು ಮೌನಧಾರಿಯಾಗಿ ಅವಿತುಕೊಂಡ ಭಾವದಲ್ಲಿ ಮರೆಯಾದಂತೆ ಇರುವ ಸ್ಥಿತಿಯನ್ನು ಸೂಚಿಸುತ್ತದೆ. ಹಾಗೆ ಮಾತಾಡದೇ ಎಲ್ಲ ಅಹಿತಕರ ಘಟನೆಗಳನ್ನು ಅಡಕದೇ ಅಂದರೆ ಒಂದರಮೇಲೊಂದು ಪೇರಿಸಿ ರಾಶಿಯಾಗಿಸಿಕೊಂಡು ಕಂಪ್ರೆಸ್ಡ್ ಸ್ಟೇಟ್–ಕಂಡಿಶನ್‌ಗೆ ಒಳಗಾಗಬೇಡ. ಅಂತಹದನ್ನು ಮನದಲ್ಲಿ ಮರೆಮಾಡಿಕೊಂಡು ಇಟ್ಟುಕೊಳ್ಳಬೇಡ– 'ಮನವ ಮಡಗಬೇಡ' ಅದು ನಿನ್ನ ಆರೋಗ್ಯದ ದೃಷ್ಟಿಯಿಂದ ಹಾಗೂ ಸಂಸಾರದ ಸ್ವಾಸ್ಥ್ಯದ ದೃಷ್ಟಿಯಿಂದ ಸರಿಯಾದುದಲ್ಲ ಎಂದು ಹೇಳಿದ್ದಾರೆ. ಅಡಗಿಸಿಕೊಂಡ ತಿರುಳು ಅಡಕ ಎನ್ನಬಹುದು. ದುಃಖ, ಚಿಂತೆ ಅಡಗಿಸಿಟ್ಟರೆ ಆ ವ್ಯಕ್ತಿಗೆ ಅಪಾಯ, ಅದನ್ನು ಬಿಚ್ಚಿ ಹೇಳಿದಾಗಲೇ ಅಪಾಯದಿಂದ ದೂರ.

* * * * * *

**ಸೈಪು**

**ನಿನ್ನ ತಾಯ್ತನದ ಸೈರಣೆಯ ವಿತರಣೆ ಬೇಕು /ನಿನ್ನ ತಾಳ್ಮೆಯ ಸೈಪಿನೊಂದು ಕರುಣೆಯು ಸಾಕು (4–5, 6)**

: ಪುಣ್ಯ; ಸುಕೃತ.

*ಬೇಂದ್ರೆ ಅವರ ದಾಂಪತ್ಯ ಗೀತೆ ಮನುಜರ ಕೌಟುಂಬಿಕ ಸಾಮರಸ್ಯದ ಕೀಲಿಕೈ. ಬೇಂದ್ರೆ ಅವರಂತೆ ತನ್ನ ತಪ್ಪನ್ನು ಅರಿತು, ಪತ್ನಿಯಲ್ಲಿ ಕರುಣೆ ಆಶಿಸಿದ ಕವಿ ಜಗತ್ತಿನಲ್ಲಿ ಬೇರೊಬ್ಬನಿಲ್ಲ ಎನಿಸುತ್ತದೆ. ಪುರುಷದರ್ಪವನ್ನು ಧಿಕ್ಕರಿಸಿ ಅರ್ಧನಾರೀಶ್ವರಭಾವವರಿತು ತನ್ನ ಜೀವ ಪೋಷಕ ಅರ್ಧಾಂಗಿಯನ್ನು ತುಂಬುಮನದಿಂದ ಆದರಿಸಿದ ಕವಿ ಅಪರೂಪ.

ಅವರು ಮಕ್ಕಳ ತಾಯಿಯಾದ ತನ್ನ ಪತ್ನಿಯನ್ನು ತಾಯಿಯ ನೆಲೆಯಲ್ಲಿ ಕಂಡಿರುವುದು ಅವರಲ್ಲಿ ಒಂದಾದ 'ಅಂಬಿಕಾತನಯದತ್ತ'ನ ಗುಣ. ತಾಯಿಯಾದವಳಿಗೆ ಅವಳು ಹಡೆದ ಮಕ್ಕಳು ಮೊದಲು. ತಾಯಿ ಎಂದರೆ ಸೈರಣೆ. ತಾಳ್ಮೆ, ಸಹನೆ, ಸಂಯಮದ ಪ್ರತೀಕ. ಆ ತಾಯಸೈರಣೆಯನ್ನು, ನೀನು ನಿನ್ನ ಮಕ್ಕಳಿಗೆ ನೀಡಿದಂತೆ ನನಗೂ ವಿತರಿಸು ಎಂದು ಕೇಳಿಕೊಂಡಿರುವುದು ಹೆಣ್ಣನ್ನು ಬೇಂದ್ರೆ ಅವರು ಗೌರವಿಸಿದ ಉತ್ತುಂಗ ರೀತಿ.

ತಾಳ್ಮೆ ಎಂಬುವುದು ಸೈಪು/ಪುಣ್ಯ. ಅದು ತಾಯಿಯಾದ ಹೆಣ್ಣಿನಲ್ಲಿ ಮಾತ್ರ ಇರುವ ಶ್ರೇಷ್ಠನಿಧಿ. ಅದು ಕರುಣೆಯ ನೆಲೆ. ಅಂತಹ ಒಂದು ಕರುಣೆ ನನಗೆ ಸಾಕು ಎಂದು ಹೇಳಿಕೊಂಡಿದ್ದಾರೆ.

---

## ಹೆಣದಹಿಂದೆ

### ಜಂಭ, ಜಂಬರ

**ಅತ್ತ ಮೇಲೆ ಕಣ್ಣು ತೆರೆವ/ ದೇವನೆಂಬ ತಂದೆಯಿನ್ನು/ ಮುಗಿಲನಾಚೆಯಿಂದ ಬರುವ/ ಜಂಭ ಜಂಬರಂಗಳಿಲ್ಲ (8-16 ರಿಂದ 19)**

: ಹೆಮ್ಮೆ; ಬಿಂಕ; ಸೊಕ್ಕು.

: ಕೆಲಸ; ಉದ್ಯೋಗ.

*ಮೇಲಿನ ದೇವರೆಂಬ ತಂದೆ ಯಾವುದೇ ಬಿಂಕ ಬಿಗುಮಾನ ಜಂಬರವಿಲ್ಲದೆ ಬಂದು ಕಾಯುತ್ತಾನೆ.

***

ನಿಃಸಂಗ ಮುಕ್ತಿಗೆ ಭವದ ಜಂಬರವೇ?

(ಮುಗಿಲ ಮಲ್ಲಿಗೆ: ಓಂತತ್‌ಸತ್)

***

'ಜಂಭ ನೀನೆ ಕಾಯಿ' ಎಂದು/ ತುಂಬಿ ನಿನ್ನಡಿದಾವರೆಗಾದಾ(ಸಖೀಗೀತ: ಧಾರವಾಡದ ತಾಯಿ)

---

## ಬೆಳುದಿಂಗಳ ನೋಡಽ

### ಹೂಳಿ

**ದನಕರದ ಕಾಲಿನ ಧೂಳಿ/ ಸಂಜೆಯ ಹೂಳಿ/ ಮುಗಿಲ ಮುಟ್ಟುದ/ ಮುಗಿಲ ಮುಟ್ಟ್ಯದ (1-1, 2, 3, 4)**

: ತುಂಬಿಹೋಗು; ಆವರಿಸಲ್ಪಡು; ಮುಚ್ಚಿಹೋಗು.

*ಬೇಂದ್ರೆ ಅವರು ಬೆಳುದಿಂಗಳನ್ನು ಹೊತ್ತು ತರುವ ಸಂಜೆಯನ್ನು ವರ್ಣಿಸಿರುವ ರೀತಿಯಲ್ಲಿಯೇ ಬೆಳುದಿಂಗಳು ಸೃಷ್ಟಿಮಾಡುವ ಮಾಯಕಾರರ ಮೋಡಿಗೆ ಮುನ್ನುಡಿ ಹಾಡಿದ್ದಾರೆ.

ಕಾಡಿನಲ್ಲಿ ಬೆಳಗಿನಿಂದ ಸಂಜೆತನಕ ಮೇಯ್ದು ದನಕರುಗಳು ಹಳ್ಳಿಯನ್ನು ಪ್ರವೇಶಿಸುವ ಸಮಯ ಗೋಧೂಳಿ. ದನಕರುಗಳು ಮನೆಗೆ ಹಿಂದಿರುಗುವಾಗ ನೆಲದಿಂದ ಏಳುವ ಧೂಳು. ಅದು ಸಾಯಂಸಂಧ್ಯೆ.; ಸಂಧ್ಯಾಸಮಯ. ಆ ಧೂಳು 'ಸಂಜೆಯ ಹೂಳಿ' ಸಂಜೆಯನ್ನು ಆವರಿಸಿ ತುಂಬಿಹೋಗಿದೆ. ಮುಗಿಲನ್ನು ಮುಟ್ಟಿದೆ.

ಅದು ನೆಲ ಮುಗಿಲ ಪ್ರೀತಿಯ ಕಾಲ. ಬೇಂದ್ರೆ ಅವರು ಸಂಜೆ ಕೊಟ್ಟ ಐಂದ್ರಯಿಕ ಸೌಂದರ್ಯವನ್ನು ಅನುಭವಿಸುತ್ತಾ ಕಾಲ್ಪನಿಕ ಸೌಂದರ್ಯದಲ್ಲಿ ಧ್ಯಾನಾಸಕ್ತರಾದುದರ ಫಲ-'ರಾಗರತಿ' ಕಾವ್ಯ. ಅದು ನೆಲ ಮುಗಿಲ ಪ್ರೀತಿಯ ರಂಗು, ಕುಣಿತ, ಭಣಿತ.

***

**ಮುಗಿಲ ಮಾರಿಗೆಽ ರಾಗರತಿಯ ನಂಜ ಏರಿತ್ತಽ/ ಆಗ ಸಂಜೆಯಾಗಿತ್ತ/ ನೆಲದ ಅಂಚಿಗೆ ಮಂಜಿನ ಮುಸುಕು ಹ್ಯಾಂಗೋ ಬಿದ್ದಿತ್ತಽ/ ಗಾಳಿಗೆ ಮೇಲಕ್ಕೆದ್ದಿತ್ತಽ. (ಗರಿ:ರಾಗರತಿ)**

ಗೋವುಗಳು ಮನೆಗೆ ಮರಳುವ ಕಾಲದ ಮುಹೂರ್ತ: ಗೋಧೂಳಿ ಲಗ್ನ. ಸಾಯಂಕಾಲದಲ್ಲಿ ಇರುವ ಪ್ರಶಸ್ತವಾದ ಮುಹೂರ್ತ. ಅಂತಹ ಮುಹೂರ್ತದಲ್ಲಿ ಬೇಂದ್ರೆ ಚಂದ್ರಿಕೆ, ಚಂದ್ರಮರ ಮದುವೆ ಮಾಡಿಸಿದ್ದಾರೆ.

**ಗೋಧೂಳಿ ಲಗ್ನಕ ಇತ್ತ/ ಕೈಯ ಹಿಡಿದಿತ್ತ/ ಕೈಯ ಹಿಡಿದಿತ್ತಽ / ಚಂದ್ರಿಕೀ ಚಂದ್ರಮರ ಜೋಽಡಽ/ ಬೆಳುದಿಂಗಳ ನೋಡಽ**

ಬೇಂದ್ರೆ ಅವರು ಪ್ರಕೃತಿಯ 'ರಾಗರತಿ'ಯನ್ನು ಸೂಕ್ಷ್ಮವಾಗಿ ಅವಲೋಕಿಸಿ ಅಲೌಕಿಕ ಪ್ರಕೃತಿಯ ಬೆಡಗನ್ನು ಕಾವ್ಯವಾಗಿಸಿದ್ದಾರೆ. ಸೌಮ್ಯ, ಶಾಂತ, ಲಾವಣ್ಯವತಿ ಚಂದ್ರಿಕೆ/ಬೆಳದಿಂಗಳು. ಅವಳು ಚಂದ್ರಮರ ಜೋಡಿಯಾಗಿ ಕೈ ಹಿಡಿದು ಸಾಗಿದ ಸೊಬಗು–'ಬೆಳುದಿಂಗಳ ನೋಡ$_s$' ಕಾವ್ಯ.

***

ಬೇಂದ್ರೆ ಅವರು 'ಹೂಳಿ' ಪದವನ್ನು ಇನ್ನೊಂದು ಅರ್ಥದಲ್ಲಿ 'ಅರಳು ಮರಳು' ಕಾವ್ಯದಲ್ಲಿ ಪ್ರಯೋಗಿಸಿದ್ದಾರೆ. 'ಮುಚ್ಚಿದೆರಡು ತುಟಿಗಳಲ್ಲಿ ಅರ್ಥವೆಲ್ಲ ಹೂಳಿದೆ'(23–8) ಇಲ್ಲಿ 'ಹೂಳಿ'ಯು ಅಡಗು, ಹುದುಗು ಎಂಬ ಅರ್ಥವನ್ನು ಹೊಂದಿದೆ.

* * * * * *

## ಗೋಧೂಳಿ ಲಗ್ನ, ಚಂದ್ರಿಕೆ

**ಗೋಧೂಳಿ ಲಗ್ನಕ ಇತ್ತ/ ಕೈ ಹಿಡಿದಿತ್ತ/ ಕೈಯ ಹಿಡಿದಿತ್ತ$_s$/ ಚಂದ್ರಿಕ ಚಂದ್ರಮರ ಜೋ$_s$ಡ$_s$ (1–5 ರಿಂದ 8)**

: ಸಾಯಂಕಾಲದಲ್ಲಿ ಇರುವ ಒಂದು ಪ್ರಶಸ್ತವಾದ ಮುಹೂರ್ತ.

: ಬೆಳುದಿಂಗಳು; ತಿಂಗಳ ಬೆಳಕು.

* * * * * *

## ರೋಹಿಣಿ, ಕೆಂಪೆಳ್ಳು, ಕೃತ್ತಿಕೆ

**ರೋಹಿಣಿಯು ಎದೆಯ ಕೆಂಪೆಳ್ಳು/ ಗೆಳತಿ ಅವನವಳು/ ನಲೀತಾಳ ಮುಂದ$_s$/ ನಲೀತಾಳ ಮುಂದ/ ಹಾಕ್ಯಾರ ಚಿಕ್ಕಿ ಗೆಳತ್ಯಾರ/ ಕೃತ್ತಿಕಿ ಹಾರ/ ಕೃತ್ತಿಕೀ ಹ್ಯಾ$_s$ರ$_s$/ ಕಳಿಲಾಕ ಇದ್ದ ಬಿದ್ದ ಕೇ$_s$ಡ$_s$ (3–1 ರಿಂದ 8)**

: 1. ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ನಾಲ್ಕನೆಯದು.

2. ಚಂದ್ರನನ್ನು ರೋಹಿಣಿವಲ್ಲಭ ಎಂದು ಕರೆಯುವರು.

: ಎದೆಯ ಚರ್ಮದ ಮೇಲೆ ಇರುವ ಕೆಂಪುಬಣ್ಣದ ಚುಕ್ಕೆ.

: ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಮೂರನೆಯದು; ಆರು ತಾರೆಗಳನ್ನೊಳಗೊಂಡ ಒಂದು ನಕ್ಷತ್ರ ಪುಂಜ.

* ಚಂದ್ರನ ಮುಂದೆ ನಲಿದಾಡುವಾಗ ಚಿಕ್ಕಿ ಗೆಳತಿಯರೆಲ್ಲ ಸೇರಿ ರೋಹಿಣಿಗೆ ದೃಷ್ಟಿಯಾಗಬಾರದೆಂದು, ಇದ್ದ ಬಿದ್ದ ಕೇಡು ಕಳೆಯಲು ಅವಳಿಗೆ ಕೃತ್ತಿಕಿ ಹಾರವನ್ನು

ಹಾಕಿದ್ದಾರೆ ಎಂದು ಬೇಂದ್ರೆ ಅವರು ಬೆಳುದಿಂಗಳ ರಾಗಭಾವವನ್ನು ನವನವೀನವಾಗಿ ನೀಡಿದ್ದಾರೆ.

* 'ಕೃತ್ತಿಕೆಯಲ್ಲಿ ಬಿತ್ತಿದರೆ ಕುರಿತಷ್ಟು ಎಳ್ಳು' ಎಂಬ ಗಾದೆ ಇದೆ. ಕೃತ್ತಿಕಾ ನಕ್ಷತ್ರದಲ್ಲಿ ಬರುವ ಮಳೆ ಸಮೃದ್ಧ ಬೆಳೆ ತರುವುದು. ಮೃತ್ತಿಕೆ/ಮಣ್ಣು, ಇಳೆ.

***

"ಇಳೀ ಮಳೀ ಬೇಕು ಅಂತಿತ್ತು/ ಮಳೀ ಇಳೀಬೇಕು ಅಂತಿತ್ತು"(ತಾ ಲೆಕ್ಕಣಿಕೆ ತಾ ದೌತಿ: ಮಾಡಾ) ಎಂಬ ಪ್ರಕೃತಿಯ ಸಹಜ ನೇಹ ಅವುಗಳದು. ಹಾಗಾಗಿ, ಬೇಂದ್ರೆ ಪ್ರಶ್ನಿಸಿದ್ದಾರೆ:

**ಕೃತ್ತಿಕೆಗು ಮೃತ್ತಿಕೆಗು। ಯಾರ ಹೋಲಿಕೆ ಬೇಕು? (ಮುಕ್ತಕಂಠ:ಬಿಡಿ ಮುತ್ತು)**

* * * * * *

**ಟಿಂಹಕ್ಕಿ, ಬೆಪ್ಪು**

**ಸೂಸಿರುವ ನಗಿಯ ಬಗಿಹೀರಿ/ ಮದಾ ತಲಿಗೇರಿ/ ಧಾಂಗ ಟಿಂಹಕ್ಕಿ/ ಹಾಂಗ ಟಿಂಹಕ್ಕಿ/ ಚೀರ್ತ್ಸದ ಗಿಡಾ ಬಿಟ್ಟೋಡಿ/ ಗಿಡಕ ಸುತ್ತಾಡಿ/ ಗಿಡಕ ಸುತ್ತಾ್ಸಡಿ್ಸ/ ಬೆಪ್ಪಾಗೆದ ಕಾಡೂಮೇ್ಸಡ್ಸ(6–1 ರಿಂದ 8)**

: ಟೀಂವ್ ಟೀಂವ್ ಎಂದು ಕೂಗುವ ಒಂದು ಬಗೆಯ ಹಕ್ಕಿ; ಟೀವನಹಕ್ಕಿ.

: 1. ಬೆಳ್ಪು; ಬಿಳುಪು; ಬಿಳಿಬಣ್ಣ; ಶ್ವೇತವರ್ಣ; ಧವಳತೆ.

2. ಕಾಂತಿ; ಹೊಳಪು.

*ಬೆಳುದಿಂಗಳ ನಗೆಯನ್ನು ಹೀರಿ ಮದತಲೆಗೇರಿ ಟೀಂಹಕ್ಕಿಯು ಹಾರಿ ಚೀರಿಡುವಾಗ ಕಾಡುಮೇಡಲ್ಲ ಬಿಳುಪಾಗಿದೆ!

ಬೇಂದ್ರೆಯವರು ಬೆಳುದಿಂಗಳ ಧವಳತೆಗೆ ಕಾಂತಿ, ಹೊಳಪು ಮಿಂಚಿ ಹರಿಯುವುದನ್ನು ಟೀಂಹಕ್ಕಿಯಲ್ಲಿ ಪ್ರತಿಮಾತ್ಮಕವಾಗಿ ಚಿತ್ರಿಸಿರುವ ರೀತಿ ಅನನ್ಯವಾಗಿದೆ.

***

ಟಿಂಹಕ್ಕಿಯ ಆನಂದ ಕವಿಯ ಆನಂದವಾಗಿ ಅದರೊಡನೆ ಒಂದಾಗಿ ಬೆಪ್ಪಾದ, ಬೆಪ್ಪಾಗಿಸಿದ ಬಗೆ ಮೂರ್ತ ಟಿಂಹಕ್ಕಿ ಬೆಳುದಿಂಗಳ ನಗೆಯನ್ನು ಸಹೃದಯನಲ್ಲಿ ಹರಿದಾಡಿಸಿ, ಬೆಪ್ಪಾಗಿಸಿದ ಭಾವವನ್ನೂ ಇದು ಹೊಮ್ಮಿಸುತ್ತದೆ.

* * * * * *

### ಮಾಯಕಾರ

**ಇದು ಮಾಯಕಾರರ ಬೀ$_s$ಡ$_s$ (5–7)**

: ಗಾರುಡಿಗ, ಯಕ್ಷಿಣೀವಿದ್ಯೆಯನ್ನು ಬಲ್ಲವನು.

* * * * * *

### ಸವಿರಾಗ

**ಸವಿರಾಗ ಬೆರಸಿದ$_s$ ಉಸಿರು (11–5)**

: ಒಳ್ಳೆಯ ಅನುರಾಗ; ಪ್ರೀತಿ.

---

## ತಾಯಿ

### ತೊಂಡು

**ತೊಂಡು ನಗೆಯ ತೊಂಡೆಬಾಯ (5–2)**

: ಅಂಕೆ; ಹತೋಟಿ.

*ಮಗುವಿನದು ತೊಂಡೆಬಾಯಿ. ತೊಂಡೆಯ ಹಣ್ಣಿನಂತೆ ಕೆಂಪಾಗಿರುವ ಬಾಯಿ–ತುಟಿ. ಅದರ ನಗೆಯೋ ತೊಂಡು ನಗೆ. ಮಗುವಿನ ನಗು ಸದಾ ಒಂದು ಅಂಕೆ, ಹತೋಟಿಯಲ್ಲಿರುವುದು. ಇದು ಬೇಂದ್ರೆ ಅನುಭವಿಸಿದ ಮಗುವಿನ ತೊಂಡು ನಗೆ.

* * * * * *

### ನಲ್ಲನಿತ್ತ ಮುತ್ತು

**ನಲ್ಲನಿತ್ತ ಮುತ್ತನೊಂದ/ ತನ್ನ ಹಾಲಿನಿಂದ ತೊಳೆದು/ ಕಣ್ಣ ಬೆಳಗಿನಿಂದ ಬೆಳಗಿ/ ಕುಣಿದರಾರೋ ನನ್ನ ಚೆನ್ನ? (7–1, 2, 3, 4)**

* 'ನಲ್'ದಲ್ಲಿ ರಸ, ಪ್ರೀತಿ, ಸೌಂದರ್ಯ, ಆನಂದಗಳು ಅಡಕವಾಗಿವೆ. 'ನಲ್' ಬೀಜದಿಂದ ನಲಿವು= ಆನಂದ; ನಲುಮೆ=ಪ್ರೀತಿ; ನಲ್ಲ=ಸುಂದರ; ನಾಲಗೆ=ರಸಜ್ಞೆಯಾದ ಜಿಹ್ವೆ; (ನಾನ್=ಆರ್ದ್ರವಾಗು); ನಲ್ಲೆವಾಲು=ಸವಿಯಾದ ಹಾಲು, ಹೀಗೆ ಶಬ್ದ ಸಿದ್ಧಿಯಾಗಿದೆ"(ಸಾಹಿತ್ಯದ ವಿರಾಟ್ ಸ್ವರೂಪ–ಪು, 191)

ತಾಯಿಗೆ ಪ್ರಿಯವಾದ ಮಗ ನಲ್ಮೆಯವನು. ಆ ಪ್ರೀತಿಯ ಮಗ 'ನಲ್ಲನಿತ್ತ ಮುತ್ತ'ನ್ನು ಅಂದರೆ ಮೊಲೆಯುಣ್ಣಲು ಇತ್ತ ಮುತ್ತನ್ನು ತನ್ನ ಹಾಲಿನಿಂದ ತೊಳೆದು ತನ್ನ ಕಣ್ಣ

ಬೆಳಕಿನಿಂದ ಅವನನ್ನು ಬೆಳಗಿ ಕುಣಿದವಳು ತಾಯಿ ಎಂದು ತಾಯಿಯ ನಲ್ಮೆಯನ್ನು ಬಣ್ಣಿಸಿದ್ದಾರೆ.

* * * * * *

**ಕುಟುಕ**

**ಹಾಡಿನೊಂದ ಗುಟುಕ ಕುಡಿಸಿ/ ಕಥೆಯದೊಂದು ಕುಟುಕ ಹಾಕಿ/ ನೋಡಲಾಡಲೋಡ ಕಲಿಸಿ (9–1, 2, 3, 4)**

*ಮಗುವಿನ ಮನಸ್ಸಿಗೆ ಹಾಡು ದ್ರವರೂಪದಲ್ಲಿ ಗುಟುಕಾಗಿ ಸರಾಗ ಪ್ರವೇಶಿಸುತ್ತದೆ. ಆದರೆ, ಕಥೆ ಕುಟುಕಾಗಿ ತುತ್ತಿನಂತೆ ಸವಿಸವಿದು ನಿಧಾನವಾಗಿ ಮಗುವಿನ ಮನಸ್ಸಿನಾಳಕ್ಕೆ ಇಳಿಯುತ್ತದೆ. ಹಾಡು ಮತ್ತು ಕಥೆ ಮಗುವಿನ ಮನಸ್ಸು ತಟ್ಟುವ ಭಿನ್ನಭಿನ್ನ ವೇಗದ ಸೂಚಕವಾಗಿ 'ಗುಟುಕು' ಮತ್ತು 'ಕುಟುಕು' ಬಳಕೆಯಾಗಿದೆ. ಅದು ಏನೇ ಆದರೂ, ಗುಟುಕ–ಕುಟುಕ; ಈ ಎರಡೂ ಸವಿಯುವ ಆಹಾರವಾಗಿದೆ.('ಗ'ಕಾರಕ್ಕೆ 'ಕ' ಕಾರವೂ ಆಗಿದೆ)

---

## ಕವನ

**ಬೆಟ್ಟಿತು**

**ಅದರ ಕಿರಿನುಡಿ ಬೆಟ್ಟಿತು/ ಕಲ್ಲೆದೆಯೊಳೂ ನಟ್ಟಿತು (2–1, 2)**

*ಕವನ ಸತ್ಯ. ಅದರ ಕಿರಿನುಡಿ ಕಲ್ಲೆದೆಯಲ್ಲಿ ನಾಟುತ್ತದೆ. ಆ ನಾಟುವಂತೆ ಮಾಡುವ ಕ್ರಿಯೆ ಜನನುಡಿಯಲ್ಲಿ ಬೆಟ್ಟು. ಬೆಟ್ಟು ಪದವು ಗಾಢ ಪ್ರವೇಶವನ್ನು ಸೂಚಿಸುತ್ತದೆ.

* * * * * *

**ಕೊಂಡೆನಾಲಗೆ**

**ಕೊಂಡೆನಾಲಗೆ ಸುಟ್ಟಿತು/ ಹುಸಿಯ ಕೆಡವಿತು ಕುಟ್ಟಿತು। (2–3, 4)**

: ಚಾಡಿ ಹೇಳುವ ನಾಲಗೆ.

* 'ಕವನ' ಜನಮಾನಸದಲ್ಲಿ ಒಂದಾಗಿರುವುದಕ್ಕೆ ಕಾರಣ ಅದು ಸತ್ಯವನ್ನು ಹೇಳುತ್ತದೆ. ಸತ್ಯವೇ ಕಾವ್ಯ, ಕಾವ್ಯವೇ ಸತ್ಯ. ಕಾವ್ಯವು ಚಾಡಿ ಹೇಳುವ ನಾಲಗೆಯನ್ನು ಸುಡುತ್ತದೆ. 'ಹುಸಿ' ಎಂಬ ಪದವು ತನ್ನಲ್ಲಿ 'ಸುಳ್ಳು' ಎಂಬ ಅರ್ಥವನ್ನು ಪ್ರಕಟಿಸುವಂತೆ, ಅದು ಸೋಗಿನ ಕೃತ್ರಿಮತೆಯನ್ನು ಒಳಗೊಂಡ, ಸಾರವಿಲ್ಲದ್ದು ಎಂಬ ಅರ್ಥವನ್ನು

ಒಳಗೊಂಡಿದೆ. ಕಾವ್ಯವು ಅಂತಹ ಹುಸಿಯನ್ನು 'ಕೆಡವಿತು, ಕುಟ್ಟಿತು' ಎಂದು ಬೇಂದ್ರೆ ತಿಳಿಸಿದ್ದಾರೆ. ಕಾವ್ಯ ಮಾಡಬೇಕಾದ ಕೆಲಸವಿದು.

***

**ಕೊಂಡೆ ಬಾಯಿಯ/ ಮುಳ್ಳು ಮುರಿದಿದೆ/ ರಸವೆ ಆಗಿದೆ ಆಮಿಷ (ಸಂಚಯ)**

* 'ಕೊಂಡೆ' ಎಂಬುದು ಪಿಸುಣ, ಚಾಡಿಯ ಮಾತು ಎಂಬ ಅರ್ಥವನ್ನು ಹೊಂದಿದೆ. 'ಕೊಂಡೆಬಾಯಿಯ ಮುಳ್ಳು ಮುರಿದಿದೆ' ಎಂದು ಬೇಂದ್ರೆ ಅವರು ಹೊಸ ನುಡಿಗಳನ್ನು ಸೃಷ್ಟಿಸುವಲ್ಲಿ ಕೊಂಡೆಬಾಯಿಯ 'ಕೊಂಡೆ' ಪದವು ದರ್ಪ, ಔದ್ಧತ್ಯ, ಉದ್ಧಟತನವನ್ನು ಹೊಂದಿದ್ದು, ಅದರ ದರ್ಪ ಮುರಿದಿದೆ ಎಂದು ಹೇಳುವ ಭಾವವಿದೆ. ಆ ಉದ್ಧಟತನದ ಮುಳ್ಳು ಮುರಿದಾಗ ಆ ನಾಲಿಗೆಯಲ್ಲಿ ರಸ ಹೊಮ್ಮಿ ಅದು ಸುಖದ ಸವಿಯಾಗುತ್ತದೆ.

* * * * * *

## ಬಟ್ಟಿತು

**ಅದರ ನೋಟವು ಬಟ್ಟಿತು/ ನಾಕ ನರಕವ ಮುಟ್ಟಿತು। (3–1, 2)**

: ವರ್ತುಲಾಕಾರವಾದುದು; ಗುಂಡಾಗಿರುವುದು; ದುಂಡಾದುದು.

*ಕವನದ ನೋಟವು ಎಲ್ಲವನ್ನೂ ಆವರಿಸಿಕೊಂಡು, ವರ್ತುಲಾಕಾರವಾದುದನ್ನು 'ಬಟ್ಟಿತು' ಎಂಬ ಪದದಲ್ಲಿ ಧ್ವನಿಸಿದ್ದಾರೆ. ಆಗ ಅದು 'ನಾಕ, ನರಕವ ಮುಟ್ಟಿತು' ಎನ್ನುತ್ತಾರೆ.

* * * * * *

## ಒಟ್ಟಿತು

**ಪೂತ ಚೆಲುವಲಿ ಪಟ್ಟಿತು/ ಒಲವಿನೊಲವನು ಒಟ್ಟಿತು (3–5, 6)**

*ಕವನವೆಂದರೆ ಬೇಂದ್ರೆ ಅವರಿಗೆ ಅರಳಿದ ಹೂವು. ಅದು ಕಂಪು ಬೀರಿ ಚೆಲುವನ್ನು ಅನುಭವಿಸುತ್ತದೆ. ಅದು ಪೂತ ಚೆಲುವು; ಅರ್ಥಾತ್ ಶುದ್ಧ, ಪವಿತ್ರ ಸೌಂದರ್ಯ. ಅದೇ ಅದರ ಸಂತಸ. ಅದರ ಕಂಪು ಸವಿದ ರಸಿಕನ ಸಂತೋಷಾನುಭವವೇ ಅವನ ಮನುಜ ಜನ್ಮದ ಸಾಫಲ್ಯ. ಹೀಗೆ, ನಿಸರ್ಗ ನೀಡಿದ ಪಂಚೇಂದ್ರಿಯಗಳ ಆನಂದದಲ್ಲಿ ಮನುಷ್ಯ ನಲಿಯುತ್ತಾನೆ. ಆ ನಲಿವು ಅವನನ್ನು ಪ್ರೀತಿಯ ಹದಕ್ಕೆ ತರುತ್ತದೆ. 'ನಲ್'ನ ಆಹ್ಲಾದದಲ್ಲಿ ಒಲವನ್ನು ಕಾಣುತ್ತಾ ಪ್ರಕೃತಿಯಲ್ಲಿ ಒಂದಾಗುತ್ತಾನೆ.

ಕವನವು 'ಒಲವಿನೊಲವನು ಒಟ್ಟಿತು' ಎಂಬ ಸೂಕ್ಷ್ಮಾತಿಸೂಕ್ಷ್ಮ ಭಾವಕ್ರಿಯೆಯನ್ನು ಉಂಟುಮಾಡುತ್ತದೆ. 'ಕವನ' ಎಂಬುದು ತೂರಿಕ್ಕಿದ ಧಾನ್ಯ. ಅದು ಒಲವಿನಿಂದ ಒಕ್ಕಿದ-ಒಟ್ಟುಗೂಡಿಸಿ, ರಾಶಿ ಮಾಡಿದ, ಸ್ವಚ್ಛಮನದ ಭಾವ. ಜೀವ ಪೋಷಕ ದ್ರವ್ಯ.

* * * * * *

**ಓತು**

**ಜೀವ ಜೀವ್ಗಳನೋತವು। ಸವಿಯ ಸುಗ್ಗಿಗೆ ಸೋತವು। (4–5, 6)**

: 1. ಪ್ರೀತಿಸು.

2. ಅಪ್ಪಿಕೊಳ್ಳು.

*ಕವನಮಾಡುವ ಅದ್ಭುತ ಕೆಲಸವೆಂದರೆ ಜೀವಜೀವಗಳು ಒಲಿಯುವ ಹಾಗೆ ಮಾಡುವುದು. ಅದು ಉಂಟು ಮಾಡುವ ಸವಿ ಎಂದರೆ ಸುಗ್ಗಿಗೆ ಸೋತು ಅದರಲ್ಲಿ ಆನಂದ ಆಹ್ಲಾದ, ನೆಮ್ಮದಿಪಡುವ ಶಾಂತಸ್ಥಿತಿ.

ಬೇಂದ್ರೆ ಅವರು, ತಮ್ಮ ಕಾವ್ಯದಲ್ಲಿ 'ಓತು'ಪದ ಬಳಸಿದಾಗ 'ಸೋತು' ಎಂಬ ಪದವನ್ನು ತಪ್ಪದೇ ಸೇರಿಸಿದ್ದಾರೆ. ಅದು ಪ್ರಾಸಕ್ಕಾಗಿ ಸೇರ್ಪಡೆಯಾದುದು ಎಂದು ಮೇಲ್ನೋಟಕ್ಕೆ ಕಾಣುತ್ತದೆ. ಆದರೆ, ಆಂತರ್ಯದಲ್ಲಿ ಒಲವಿನಲ್ಲಿ ಒಂದಾದ ಜೀವಿಗಳು ಪರಸ್ಪರರಿಗೆ ಸೋಲುವುದು ಸಹಜ. ಹಾಗಾಗಿ, ಆ ಪ್ರೀತಿಯ ಸೆಳೆತದಲ್ಲಿ ಸೋಲುವ ಹಾಗೆ ಸೋತು ಗೆಲ್ಲುವ ಪ್ರೇಮದ ನವಿರು ಅಲ್ಲಿದೆ. ಅದು ದಾಂಪತ್ಯದ ಸಹಜ ಪ್ರೇಮಲಹರಿಯ ಏರು, ಇಳಿವು. ಓತು ಪದವು 'ಅಪ್ಪಿಕೊಳ್ಳು' ಎಂಬ ಅರ್ಥವನ್ನು ಹೊಂದಿದೆ. ಅದು ಆಪ್ತತೆಯ ಪ್ರಕಟರೂಪ.

***

**ಓತು ಆಡಿದ ಮಾತು /ಸೋತು ಆಡಿದ ಮಾತು /ಒಲವಿನೋತಪ್ರೋತವಾದ ಮಾತು(ನಮನ:ತೂತು ಮಾತು)**

***

**ನಲ್ಲೆ, ನಿನ್ನ ಲಲ್ಲೆವಾತು /ಮುಗುಳು ನಗೆಯಲಲ್ಲೆ ಹೂತು /ಸೋತು, ಓತು, ಬಂತು ಹೋತು /ನಲ್ಲೆ, ನಿನ್ನ ಲಲ್ಲೆವಾತು (ಸಖೀಗೀತ: ನಲ್ಲ ನಲ್ಲೆಯರ ಲಲ್ಲೆ)**

***

ಪಾಂಚಾಲಿ ಓತು ಪಾಂಡವರನೊಲಿಸಿ ಹದಿಬದೆಯ ಬೈತಲೆವಣಿಯೆನಿಸಿದಳು (ಹದಿ ಬದೆಯ ಧರ್ಮ: 3–48)

---

# ಕನ್ನಡದ ಕಂದವ್ವನ ಲಾಲಿ

## ಮುಗುಳು

**ಹುಚ್ಚು ಹಿಡಿಸುವ, ಕಣ್ಣ ಮುಚ್ಚಿದರೆ ನಗೆಯುಳ್ಳ ನನ್ನ ಎದೆಮುಗುಳೆ ಜೋಜೋ! (1–4)**

*ಭಾರತಾಂಬೆಗೆ ಮಗಳು ಕನ್ನಡದ ಕಂದವ್ವ ಎದೆಮುಗುಳು. ಬೇಂದ್ರೆ ಅವರು ತಮ್ಮ ಮಗಳನ್ನು ಕುರಿತು ಬಣ್ಣಿಸುವಾಗ 'ಎದೆ ಮುಗುಳು' ಎನ್ನುತ್ತಾರೆ. ತಂದೆಯಾದವನಿಗೆ ತುಂಬಾ ಪ್ರಿಯವಾದವಳು–ಮಗಳು. ಮಗಳನ್ನು ನೋಡಿದ ತಕ್ಷಣ ತಂದೆಯ ಎದೆಯಲ್ಲಿ ಅಮೃತಭಾವ ಮೂಡಿ, ಅದು ಮೊಳೆತು ಅಂಕುರಿಸಿದ ಭಾವಕ್ಕೆ ಕವಿ ಒಳಗಾಗುತ್ತಾನೆ. ಮರಾಠಿಯ ಆಡುನುಡಿಯಲ್ಲಿ 'ಮುಗುಳು' ಎಂದರೆ 'ಮೊಗ್ಗು'. ಅಲ್ಲಿ, ಮಾವಿನ ಹೂಗೊಂಚಲಿಗೂ 'ಮುಗುಳು' ಎನ್ನುತ್ತಾರೆ. ಈ ಪದವು ಕಂಪು, ಸೊಂಪನ್ನು ಹೊಮ್ಮಿಸುತ್ತವೆ. ಬೇಂದ್ರೆ ಅವರ ಸುಖದ ಚಿಲುಮೆಯೇ– ಮಗಳು.

* 'ಮಗಳೋ ನನ್ನೆದೆಯ ಮುಗುಳೋ' ಎಂದು ತನ್ನ ಮಗಳು ಮಂಗಳೆಯನ್ನು ಕವಿ ಬಣ್ಣಿಸಿದ್ದಾರೆ.

* * * * * *

## ಸದ್ದಮುದ್ದು

**ಸದ್ದಮುದ್ದಾಗಿದ್ದ ಮೋಹ ಮಮತೆಯ ಮೂರ್ತಿ (5–1)**

: ಏನೂ ತಿಳಿಯದುದು; ಮುಗ್ಧವಾದುದು.

*ಜನಬಳಕೆಯ ಈ ನುಡಿ ಕನ್ನಡ ಕಾವ್ಯದಲ್ಲಿ ಬೇಂದ್ರೆ ಹಾಡಿದ ಹೊಸ ಬಗೆಯ ಜೋಗುಳದೊಂದಿಗೆ ಸೇರಿಹೋಗಿದೆ.

---

# ಭಾವಗೀತೆ

## ಭೃಂಗ, ಬೆನ್ನೇರು

**ಭೃಂಗದ ಬೆನ್ನೇರಿ ಬಂತು ಕಲ್ಪನಾವಿಲಾಸ (1–1)**

: ತುಂಬಿ; ಬಂಡುಣಿ.

: ಅನುಸರಿಸು; ಹಿಂಬಾಲಿಸು.

*ಕನ್ನಡದ ತುಂಬಿಯೇ ಭೃಂಗ. ಬೇಂದ್ರೆಯವರ ಕಲ್ಪನಾವಿಲಾಸವು ತುಂಬಿಯ ಬೆನ್ನೇರಿ ಹೊರಟಿದೆ. 'ಭೃಂಗ'ವು ಹೂವಿನ ಮಕರಂದ ಸಂಗ್ರಹದಿಂದ ಅದನ್ನು ಮಧುವಾಗಿಸುವವರೆಗಿನ ಒಂದು ಪೂರ್ಣಪ್ರಕ್ರಿಯೆ ಬೇಂದ್ರೆ ಅವರಿಗೆ 'ಭಾವಗೀತ' ಸೃಷ್ಟಿಯ ರೂಪಕವಾಗಿ ಕಂಡಿತು. ಕವಿಯ 'ಭಾವಗೀತ' ತುಂಬಿಯಂತೆ ಸಹೃದಯನನ್ನು ಹೊಕ್ಕು ಅವನನ್ನು ಮಧುರ ಭಾವನೆಗೆ ಒಳಗಾಗಿಸಿ ಮಧುವಾಗಿಸುವ ಲೀಲೆಯೆನಿಸಿತು. ಆ ಲೀಲೆಯಲ್ಲಿ ರಸಿಕ ಸಹೃದಯ ತುಂಬಿಯಂತೆ ನಲಿದು ಲಯಾನ್ವಿತ ನರ್ತನ ನಡಿಗೆಯಲ್ಲಿ ನಾದಕ್ಕೆ ತಕ್ಕಂತೆ ಓಲಾಡಿ ತಣಿವುದೇ ಆಹ್ಲಾದ, ಕಾವ್ಯದ ಸಾರ್ಥಕತೆ ಎನಿಸಿತು.

* * * * * *

**ಏಕತಾನ**

**ಕವಿಯ ಏಕತಾನ ಕವನದಂತೆ ನಾದಲೀನಾ (2–3)**

: ಒಂದೇ ತಾನ, –ಶ್ರುತಿ.

* * * * * *

**ದೈವರೇಷೆ**

**ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ/ ತನ್ನ ದೈವರೇಷೆ ಬರೆಯುವಂತೆ ತಾನೆ ಭಾಲಾ (3–1)**

: ಅದೃಷ್ಟದ ಗೆರೆ,–ಬರೆಹ; ಹಣೆಬರಹ; ಭಾಗ್ಯರೇಖೆ.

## ೭. ಹಾಡು ಪಾಡು (೧೯೪೬)

## ನರಕದಲ್ಲಿ ಸ್ವರ್ಗ

**ಅಪ್ಪುಗೈದೋಟಿ**

**ನೆತ್ತರದ ಓಕುಳಿಯೆ, ಅಪ್ಪುಗೈದೋಟಿಯೇ/ ಆಹ ಸ್ವರ್ಗವೆ ಎಂದೆ ನರಕ ತೆರೆಯೆ (2–3, 4)**

: ಒಬ್ಬರನ್ನೊಬ್ಬರು ತೋಳುಗಳಿಂದ ಹಿಡಿದುಕೊಂಡು ಮಾಡುವ ಜಗಳ; ದ್ವಂದ್ವಯುದ್ಧ. (ಅಪ್ಪುಗೈ+ತೋಟಿ)

---

## ಕಾಮೋದೆ

**ತುರುಗು**

**ತಾರಕೆ ಮಿರುಗೆ ಆಗಸ ತುರುಗೆ/ ಹುಲ್ಲಲ್ಲೊರಗುವಳು (13–1, 2)**

: ದಟ್ಟೈಸು; ಸಂದಣಿಸು; ಇಟ್ಟಣಿಸು.

---

## ದವನದ ಹುಣ್ಣಿವೆಯ ಜಾತ್ರಿಯ ರಾತ್ರಿ

**ಒಡಮುರಿ**

**ಹರದಾರಿ ಹಬ್ಬಿದೆರಿಹೊಲದ ಎದಿಮ್ಯಾಲ ಕಟ್ಟಿತೇನೊ ಕವನ ಒಡಮುರಿದು ಎದ್ದ ದವನ. (5)**

: ಭೇದಿಸಿಕೊಂಡು ಹೊರಬರು; ಮೊಳಕೆಯೊಡೆ.

---

## ಕಲ್ಪವೃಕ್ಷ ವೃಂದಾವನಂಗಳಲಿ

**ಮುದ್ದುಗರೆ**

**ಪಾರಿಜಾತಗಳು ಮುದ್ದುಗರೆಯುವವು ಹವಳದುಟಗಳಿಂದ (8–1, 2)**

*ಮುದ್ದುಗರೆ ಪದವು ಅಕ್ಕರೆಯನ್ನು ತೋರಿಸು, ಲಲ್ಲೈಸು ಎಂಬ ಅರ್ಥಗಳನ್ನು ಹೊಂದಿದ್ದರೂ, ಮೇಲಿನ ಸಾಲಿನಲ್ಲಿ ಚುಂಬಿಸು ಎಂಬ ಅರ್ಥವೇ ಪ್ರಧಾನವಾಗಿದೆ. ಆ ಅರ್ಥವನ್ನೇ ಹೊಮ್ಮಿಸುತ್ತಿದೆ.

* * * * * *

**ಆನಂದ ನಾಡಿ**

**ಸ್ಪಂದಿಸುವದು ಹೃದ್ಬಂಧ ತುಂಬಿದಾ/ ನಂದ ನಾಡಿಯಿಂದ॥ (8–5, 6)**

: ಸಂತೋಷವು ತುಂಬಿರುವ ನಾಡಿ; ಆನಂದವುಂಟಾದಾಗ ಪ್ರತಿಕ್ರಿಯೆಯನ್ನು ಸೂಚಿಸುವ ನಾಡಿ.

---

## ಶ್ರಾವಣ

**ಝೂರಿ**

**ಹೊಡೆದ ಝೂರಿಗೆ ಜೋಕಾಲಿ ಏರಿ/ ಅಡರ್ಯಾವ ಮರಕಹಾರಿ. (3–1, 2)**

: ಜೀಕ; ಒಂದು ಸಲ ತೂಗಿ ಬಿಡುವಿಕೆ.

* * * * * *

**ಕುತನಿ**

**ಬೆಟ್ಟ ತೊಟ್ಟಾವ ಕುತನಿಯ ಅಂಗಿ। ಹಸಿರು ನೋಡ ತಂಗಿ॥ (5–1, 2)**

: ಅರ್ಧಹತ್ತಿ ಮತ್ತು ಅರ್ಧ ರೇಶ್ಮೆಯಿಂದ ತಯಾರಿಸಿದ ಬಟ್ಟೆ; ಸಾಟೀನು ಬಟ್ಟೆ.

---

## ನಾವು ಬರತೇವಿನ್ನ

**ತೋಲು, ಮೋಲು**

**ಜೋಲಿ–ಹೋದಾಗ ಆದಿರಿ ಕೋಲು/ ಹಿಡಿದಿರಿ ನಮ್ಮ ತೋಲು/ ಏನು ನಿಮ್ಮ ಮೋಲು–ಲೋಕದಾಗ?/ ನಾವು–ಮರೆತೇವದನ ಹ್ಯಾಂಗ? (ಒಂದು:6–1, 2, 3, 4)**

: ಸಮಸ್ಥಿತಿ; ಸಮತೋಲನ.

: ಬೆಲೆ; ಕಿಮ್ಮತ್ತು; ಮೌಲ್ಯ( ಮರಾ.ಹಿಂ. ಮೋಲ್/ ಸಂ. ಮೌಲ್ಯ)

* * * * * *

**ದಾಯಿ**

**ಕನ್ನಿ–ಗೆಳತಿ–ಮಡದಿ–ದಾಯಿ–ಸಾಕುದಾಯಿ (ಒಂದು:7–2)**

: ಸಾಕುತಾಯಿ; ಮಕ್ಕಳನ್ನು ಸಾಕುವವಳು.

* * * * * *

**ಚುಣುಕು**

**ನಿಮ್ಮ ಹೊಟ್ಟೀ ಕರುಳಿನಾ ತುಣುಕು/ ಅಂತನ್ಸ ಚುಣುಕು/ ತೋರಿಸಿದಿರಿ ಮಿಣುಕು (ಎರಡು:7–1, 2, 3)**

: ಅತಿ ಸೂಕ್ಷ್ಮವಾದುದು; ತೀರ ಸಣ್ಣದಾಗಿರುವುದು.

---

## ಸೂರ್ಯನ ಹೊಳಿ

**ಅಗುರು, ತಿಗುರು**

**ಘಮ ಘಮ ಅಗುರು/ ಗಂಧದ ತಿಗುರು/ ಅರಳ್ಯದ ಹೊತ್ತ ಹೂ ಹಗುರು. (2–2, 3, 4)**

: ಅಗಿಲ್ ಒಂದು ಜಾತಿಯ ಸುಗಂಧದ ಮರ. ಅದರಿಂದ ಸಿದ್ಧಪಡಿಸಿದ ಪರಿಮಳ ವಸ್ತು; ಸುಗಂಧ ದ್ರವ್ಯ.

: ಸುಗಂಧ ವಸ್ತು; ಲೇಪನ ವಸ್ತು; ಪರಿಮಳ ದ್ರವ್ಯ.

---

## ಪಾಡು

**ನಗೆಬಗೆ, ಲಗುಬಗೆ**

**ನಿನ್ನ ನಗೆಬಗೆ– ಎಂಥ ಲಗುಬಗೆಯಿಂದ ಕಣ್ಮರೆ ಸಂದೆಯೋ (2–4)**

: ಹಾಸ್ಯದ ರೀತಿ, ಕ್ರಮ, ಸೊಗಸು.

: ಅವಸರ; ಆತುರ; ತ್ವರೆ(ಮರಾ. ಲಗ್‌ಬಗ್)

* * * * * *

**ಮಿಡುಕ**

**ತಮ್ಮದಿರ ಎದೆ ತಬ್ಬಿನೋಡಲೆ, ಮಿಡುಕ ನಡುಕಕ್ಕೆಳೆದಿದೆ. (4–2)**

: ಅಳಲು; ದುಃಖ; ವೇದನೆ.

* * * * * *

**ತಗ್ಗು**

**ತೆರೆಯಲಾರೆನು ಮರೆಯಲಾರೆನು ದೈವವಿತ್ತೀ ಕಷ್ಟವ/ ತಗ್ಗು ಸಾರುತಲಿರಲಿ ಸ್ಮಾರಕವಾಗಿ ಹಿಗ್ಗಿನ ನಷ್ಟವ. (8–1, 2)**

* 'ತಗ್ಗು' ಪದವು ರೂಪಕಾತ್ಮಕವಾಗಿ 'ಕಷ್ಟಕಾಲ'ವನ್ನು ಧ್ವನಿಸಿದೆ.

* * * * * *

**ನಿದ್ದೆನೆಲೆ**

**ನಿದ್ದೆನೆಲೆ ನಮಗಿಲ್ಲ; ತಿಳಿದೀತೆಂತು ಸಾವಿನ ಆಳವು? (10–4)**

: ನಿದ್ರೆಯ ಆಳ, ರಹಸ್ಯ; ಮರ್ಮ; ತಳ, ಬುಡ ಎಲ್ಲ ಅರ್ಥವೂ 'ನೆಲೆ'ಯಲ್ಲಿದ್ದು, ಅದು ನಮಗೆ ಗೊತ್ತಿಲ್ಲ. ತಿಳಿದೀತೆಂತು ಸಾವಿನ ಆಳವು? ಎಂದು ಮಾರ್ಮಿಕವಾಗಿ ಬೇಂದ್ರೆ ಪ್ರಶ್ನಿಸಿದ್ದಾರೆ.

* * * * * *

**ಸನಗು**

**ಸನಗು ತೀರಿದ ಮೇಲೆ ತಡವೇ? ಕುಯ್ದು ಕೂಡಲೆ ತಡೆವುದು. (12–4)**

: ಬಟ್ಟೆ; ವಸ್ತ್ರ.

* * * * * *

**ಪಾತಾಳಖಾತ**

**ಉರುಳಿದೆನೊ ಪಾತಾಳಖಾತಕೆ ಎಂದು ಎದೆಯೊಳಗಾಗಿರೆ (21–1)**

: ಬಹಳ ಆಳವಾದ ಕಂದಕ.

***

ಮಸುಕು ಮಸುಕು ಹಿಂದೆಲ್ಲ, ಮುಂದೆ ಪಾತಾಳಖಾತ ಸಿಂಧು ಗೊತ್ತು ಗುರಿಯಿಲ್ಲ. (ಚೈತ್ಯಾಲಯ:ಅನಂತಸಾಹಸ)

* * * * * *

**ಕವಳಿ ಹತ್ತು**

**ಬಳಲಿ ಬವಣೆಗೆ ಕವಳಿ ಹತ್ತಲು ನಿದ್ರಿಸುತ್ತಿದೆ ಮನವಿದು (27–4)**

: ಎಚ್ಚರದಪ್ಪು.

* * * * * *

**ಸಮಕಾಣು**

**ಯಾರ ದುಃಖಕೊ ಯಾರೆ ಅತ್ತರು ಎಲ್ಲರಿಗು ಸಮಕಂಡಿದೆ (35–4)**

: ಒಂದೇ ರೀತಿಯಾಗಿ ಕಾಣು.

* * * * * *

**ಉರಿನೀರು**

**ಮನದ ತುರಿಯ ನಿವಾರಿಸಲು ಉರಿನೀರ ಸುರಿವಿದ ಹಾಗಿದೆ (38–4)**

*ಬೇಂದ್ರೆಯವರು ತನ್ನ 'ಎದೆಯ ಹತ್ತಿರ ಹೆಗಲ ಎತ್ತರ ಬೆಳೆದು ಬೆಂಬಲವಾಗುತ' ಇದ್ದ ಹಿರಿಯ ಮಗ ರಾಮನು ತೀರಿಹೋದಾಗ ಬರೆದ ಖಂಡಕಾವ್ಯ 'ಪಾಡು'. ಆ ನೋವಿನಿಂದಾದ ಮನದ ತುರಿಯ ಅಂದರೆ ಕಡಿತ, ಕೆರೆತ, ನವೆಯನ್ನು ನಿವಾರಿಸಿಕೊಳ್ಳಲು ಸಾಧ್ಯವಿಲ್ಲ. ಅದು ತೀವ್ರವಾಗುತ್ತಿದೆ ಎಂಬುದನ್ನು ಉಪಮಾನಾತ್ಮಕವಾಗಿ 'ಮನದ ತುರಿಯ ನಿವಾರಿಸಲು ಉರಿನೀರ ಸುರಿವಿದ ಹಾಗಿದೆ'. ಎಂದು ಹೇಳಿ ಕುದಿಯುವ ನೀರು– ಉರಿನೀರ ಉರಿಯಲ್ಲಿ ಬೆಂದಿದ್ದಾರೆ.

* * * * * *

**ತನಿವಿಷ**

**ರಾಮನಾಮಕೆ ತಣಿಯಲಿಲ್ಲವೆ ಶಿವನ ಗಂಟಲ ತನಿವಿಷ (52–3)**

: ತೀಕ್ಷ್ಣವಾದ ನಂಜು; ಘೋರವಿಷ.

ತಣಿ= ಆರಿ ತಣ್ಣಗಾಗಿ, ಅಡಗಿ ಹೋಗಲಿಲ್ಲವೆ.

*ಶಿವನ ಗಂಟಲ ತನಿವಿಷ– ತೀಕ್ಷ್ಣವಾದ ನಂಜು. ರಾಮನಾಮಕೆ ಆರಿ ತಣ್ಣಗಾಗಿ ಅಡಗಿ ಹೋಗಿದ್ದನ್ನು ತಣಿಯಲಿಲ್ಲವೆ ಎಂಬ ಪದದಿಂದ ಅಭಿವ್ಯಕ್ತಿಸಿರುವ ರೀತಿಯಲ್ಲಿ ಜನಪದ ನುಡಿಯ ಸೊಗಸಿದೆ.

---

## ಗಾಯತ್ರೀ ಸೂಕ್ತ

### ೧

**ಲಯದ ಬಸಿರ ಬಯಲಲ್ಲಿ ದೇವ ಭವ ಬೀಜ ಬಿತ್ತಿದಾಕೆ**

ಲಯದ ಬಸಿರಲ್ಲಿ ಅಥವಾ ಬಸಿರೆಂಬ ಬಯಲಲ್ಲಿ ಲಯವೇ ಹುಟ್ಟುವುದು. ಇಂತಹ ಬಯಲಲ್ಲಿ, ಭೂಮಿಯಲ್ಲಲ್ಲ, ಅವಳು ಬೀಜವನ್ನು ಬಿತ್ತಿರುವಳು. ಆ ಬೀಜ ದೇವರದ್ದೂ ಅಲ್ಲ ಭವಿಗಳದ್ದೂ ಅಲ್ಲ ಎರಡರ ಸಮನ್ವಯದ ಬೀಜ ಅದು.

ಸರ್ವಧಾರಾ ಸುಪ್ರತಿಷ್ಠಾ ಸದಸದ್ರೂಪಧಾರಿಣೀ (ಎಲ್ಲವನ್ನೂ ಧರಿಸಿದವಳು, ದೃಢವಾಗಿ ನೆಲೆನಿಂತವಳು ಸತ್–ಅಸತ್ ಎರಡೂ ರೂಪಗಳನ್ನು ಧರಿಸಿದವಳು ಎಂದು ಸಾರುತ್ತದೆ ಲಲಿತಾ ಸಹಸ್ರನಾಮ)

**ಮೂಕು ಮೊಗ್ಗೆ ಮುನ್ನೂಕಿ ಬಂಡಿನಲಿ ತಲೆಯನೆತ್ತಿದಾಕೆ**

ಬಂಡು ಅಂದರೆ ಜೇನಿನಲ್ಲಿ/ರಸದಲ್ಲಿ ಅವಳು ತಲೆಯೆತ್ತಿರುವಳು. ಅದು ಮೂಕ ಮೊಗ್ಗು ಅರಳಿದಾಗ ಉತ್ಪತ್ತಿಯಾಗುವ ಬಂಡು ಅಥವಾ ಜೇನು.

**ರಸವ ಮೀರಿ ತಾನಾರಿದಾತನಿಗೆ ಹೇಗೋ ರುಚಿಸಿದಾಕೆ**

ಇಂತಹ ರಸದಲ್ಲಿ ಜನಿಸಿದ ತಾಯಿಯು ರಸವನ್ನು ಮೀರಿದವನಿಗೂ ಅಂದರೆ ಬ್ರಹ್ಮನಿಗೂ ರುಚಿಸುವಳು. ರಸಸ್ಥಿತಿ ಅಧ್ಯಾತ್ಮದ ಕೊನೆಯ ಸ್ಥಿತಿಯಲ್ಲ ಎಂಬ ಅಲ್ಲಮನ ಮಾತೊಂದಿದೆ. ಆ ರಸಸ್ಥಿತಿಯನ್ನು ಅವನು 'ಸುಖಸಮಾಧಿ' ಎಂದು ಕರೆಯುತ್ತಾನೆ.

ಚಿರಾದಂತಃಶಲ್ಯಂ ದಹನಕೃತಮುನ್ಮೀಲಿತವತಾ ತುಲಾಕೋಟಿಕ್ವಾಣೈಃ ಕಿಲಿಕಿಲಿತಮೀಶಾನ ರಿಪುಣಾ(ಶಿವ ಪಾರ್ವತಿಗೆ ಮನಸೋತಾಗ ಅವಳ ಕಾಲ್ಗೆಜ್ಜೆ ನಾದ ಕಾಮನ ನಗುವಿನಂತೆ ಕೇಳಿಸುತ್ತದೆ) – ಸೌಂದರ್ಯ ಲಹರಿ.

**ಸಾಕ್ಷಿಪುರುಷನಾ ಅಕ್ಷಿಯಲ್ಲಿ ಪ್ರತ್ಯಕ್ಷ ರಚಿಸಿದಾಕೆ**

ಪ್ರತ್ಯಕ್ಷ (ಪ್ರತಿ+ಅಕ್ಷಿ) ಎಂದರೆ ಕಣ್ಣಿನ+ಎದುರು ಎಂದರ್ಥ. ಕಣ್ಣೆದುರು ಜಗತ್ತಿರುವ ಕಾರಣ ಪ್ರತ್ಯಕ್ಷವೆಂದರೆ ಜಗತ್ತು. ಸಾಕ್ಷಿಪುರುಷ ಅಥವಾ ಬ್ರಹ್ಮ ಜಗತ್ತಿನ ಸೃಷ್ಟಿಕರ್ತನಾಗಿರುವನು. ಈಕೆ ಅಂತಹ ಸೃಷ್ಟಿಕರ್ತನಿಗೇ ಒಂದು ಜಗತ್ತನ್ನು ರಚಿಸಿ ಕೊಡುತ್ತಿರುವಳು

ಮಹಾಸಂಹಾರೇsಸ್ಮಿನ್ ವಿಹರತಿ ಸತಿ ತತ್ಪತಿರಸೌ (ಮಹಾ ಪ್ರಲಯವಾದಾಗ ಎಲ್ಲ ದೇವತೆಗಳೂ ನಾಶವಾಗುತ್ತಾರೆ, ಶಿವನೊಬ್ಬನೇ ಆ ಪ್ರಲಯಕ್ಕೆ ಸಾಕ್ಷಿಯಾಗುತ್ತಾನೆ)- ಸೌಂದರ್ಯ ಲಹರಿ.

೨

**ಜಗದ ಪ್ರಾಣಗತಿ ಜಡಿದು ಮಿಡಿದು ಸ್ವರ ಮೇಳ ಕೋದಿದಾಕೆ**

ಜಗತ್ತನ್ನು ರಚಿಸಿಕೊಡುವುದಷ್ಟೇ ಅಲ್ಲ ಆ ಜಡಜಗತ್ತಿನ ಪ್ರಾಣಗತಿಯನ್ನೂ ಸ್ವರ ಮೇಳದೊಂದಿಗೆ ಅವಳೇ ರೂಪಿಸುತ್ತಿರುವಳು

ಚಿಚ್ಛಕ್ತಿಶ್ಚೇತನಾರೂಪಾ ಜಡಶಕ್ತಿರ್ಜಡಾತ್ಮಿಕಾ (ಚಿಚ್ಛಕ್ತಿಯು ಚೇತನಳು, ರೂಪರಹಿತಳು, ಜಡಶಕ್ತಿ ಮತ್ತು ಜಡಾತ್ಮಿಕೆ) - ಲಲಿತಾ ಸಹಸ್ರನಾಮ

**ಕೋಟಿ ಚಿಕ್ಕೆ ಪುಟಕಿರುವ ಬಯಲ ಹೊತ್ತಿಗೆಯನೋದಿದಾಕೆ**

ಅಂತರಿಕ್ಷವೆಂಬ ಬಯಲ ಹೊತ್ತಿಗೆಯ ಮೇಲೆ ಮೂಡಿರುವ ಕೋಟ್ಯಂತರ ನಕ್ಷತ್ರಗಳೆಂಬ ಅಕ್ಷರವನ್ನು ಓದಿದವಳು. ಅವ್ಯಕ್ತವಾದುದನ್ನೂ ಸರಾಗವಾಗಿ ವ್ಯಕ್ತಪಡಿಸಬಲ್ಲವಳು

ಅನೇಕ ಕೋಟಿ ಬ್ರಹ್ಮಾಂಡ ಜನನೀ ದಿವ್ಯವಿಗ್ರಹಾ-ಲಲಿತಾ ಸಹಸ್ರನಾಮ

**ಪಿಂಡಗಳನು ಬ್ರಹ್ಮಾಂಡಗಳನು ಮಣಿಮಾಲೆ ಮಾಡಿದಾಕೆ**

ಆ ಅಂತರಿಕ್ಷದ ಹಾಳೆಯ ಮೇಲೆ ಮೂಡಿರುವ ಅಕ್ಷರಗಳನ್ನು (ಅಂದರೆ ಪಿಂಡಾಂಡ, ಬ್ರಹ್ಮಾಂಡಗಳನ್ನು) ಓದುವುದಷ್ಟೇ ಅಲ್ಲ, ಅದನ್ನೇ ತನ್ನ ಆಭರಣವನ್ನಾಗಿ ಮಾಡಿಕೊಂಡವಳು; ಬ್ರಹ್ಮಜ್ಞಾನ ಅವಳ ಪರಿಶ್ರಮದ ಕೆಲಸವಲ್ಲ ಅವಳ ಅಲಂಕಾರವಾಗಿದೆ, ಅವಳ ಸೊಬಗಾಗಿದೆ.

ತವಕ್ಷಯೋಃ ಅಣುರಂಶುಮಾಲೀ ತವೈವ ಮಂದಸ್ಮಿತ ಬಿಂದುರಿಂದುಃ (ಸೂರ್ಯನು ನಿನ್ನ ಕಣ್ಣಿನ ಒಂದು ಅಣು ಮಾತ್ರನು, ಚಂದ್ರ ನಿನ್ನ ಮಂದಹಾಸದ ಒಂದು ಬಿಂಬ) - ಸೌಂದರ್ಯ ಲಹರಿ

**ನಿನ್ನ ತಾಳಗತಿಯಲ್ಲಿ ವಿಶ್ವಗಳ ಗೀತ ಹಾಡಿದಾಕೆ**

ಅಲಂಕಾರ, ಸೊಬಗುಗಳಷ್ಟೇ ಅಲ್ಲ ಅವಳ ಸಂಭ್ರಮದ ಕಾರಣವೂ ಆಗಿದೆ. ಗೀತವನ್ನು ತಾಳಗತಿಯಲ್ಲಿ ಹಾಡುವ ಮೂಲಕ ಅವಳು ಸಂಭ್ರಮಿಸುವಳು – ಲೋಕವೆಂಬುದು ಅವಳ ಪರಿಶ್ರಮವಾಗಿದೆ, ಅವಳ ಸೊಬಗಾಗಿದೆ ಮತ್ತು ಅವಳ ಸಂಭ್ರಮದ ತಾಣವಾಗಿದೆ.

೩

**ಕೀಟ ಕೀಟದಲಿ ಮಾಟ ಮಾಡಿ ಹಲಚೆಲುವು ತೂರಿದಾಕೆ**

ಕೀಟ ಎಂಬ ಪದಕ್ಕೆ ಹುಳು ಎಂಬ ಅರ್ಥದ ಜೊತೆಗೆ ದ್ವೇಷ, ಕೆಡುಕು ಎಂಬ ಅರ್ಥವೂ ಉಂಟು (ಕಿಟೆಲ್). ಕೆಡುಕಿನಲ್ಲಿಯೂ ಬೆಡಗ ಮೂಡಿಸಿ ಹಲವು ಬಗೆಯ ಚೆಲುವನ್ನು ತೂರಬಲ್ಲಳು. ಏಕೆಂದರೆ ವೈರುಧ್ಯಗಳಿದ್ದಾಗ ಮಾತ್ರ ಚೆಲುವು ಮೈದೋರೀತು.

**ಪಶುವಿನಿದುರು ಮರಿದೂಡಿ ಮೋಡಿಯಲಿ ಒಲವ ಹೀರಿದಾಕೆ**

ಹಸುವಿನೆದುರಿನ ಕರುವೂ ಅವಳೇ, ಮೋಡಿಯಿಂದ ಆ ಹಸುವಿನ ಒಲವನ್ನು (ಕೆಚ್ಚಲ ಹಾಲನ್ನು) ಹೀರುವವಳೂ ಅವಳೇ.

**ಹಾವ ಭಾವದಲಿ ಭೋಗ ಯೋಗದಲಿ ನಲಿವ ತೋರಿದಾಕೆ**

ಬೆಡಗಿನ ನಡತೆ ಮತ್ತು ಬೆಡಗಿನ ಭಾವಗಳಲ್ಲಿ, ಭೋಗ–ಯೋಗಗಳಲ್ಲಿ ಸಂತತವಾದ ಆನಂದವನ್ನೇ ಕಾಣಿಸುವವಳು.

**ಸಕಲ ವಿಕಲಗಳ ಕಲೆಯ ಜಾಲದಲಿ ಬಲವ ಮೀರಿದಾಕೆ**

ಎಲ್ಲ ವೈಕಲ್ಯ, ವೈರುದ್ಧ್ಯಗಳಿಂದ ಕೂಡಿರುವ ಸಮಗ್ರವಾದ (ಜಾಲದಲಿ) ಕಲೆಯಲ್ಲಿ ಅವಳ ಬಲವಿಲ್ಲ (ಪ್ರಯತ್ನಪಟ್ಟು ಬಲವಂತದಿಂದ ಮಾಡುವುದಿಲ್ಲ) ಇವೆಲ್ಲ ಅವಳ ಸಹಜ ಲೀಲೆಯಾಗಿದೆ.

೪

**ಚತುರ್ಮುಖನ ನಾಲಗೆಯ ಹಾಸಿ ತುಟಿದಿಂಬು ಮಾಡಿದಾಕೆ**

ಬ್ರಹ್ಮನ ನಾಲ್ಕು ಮುಖದಿಂದ ನಿರಂತರವಾಗಿ ನಾಲ್ಕು ವೇದಗಳ ಪಠಣವಾಗುತ್ತದೆ ಎಂಬ ಪ್ರತೀತಿ ಉಂಟು. ಅವನ ನಾಲಗೆ ತುಟಿಗಳನ್ನೇ ಹಾಸಿಗೆ ದಿಂಬು ಮಾಡಿಕೊಂಡು ಆ ವೇದದ (ಜ್ಞಾನದ) ನಾದವನ್ನು ಆನಂದಿಸುತ್ತ ಆ ಗಾಯತ್ರಿ ಮಾತೆ ನಿದ್ರಿಸುತ್ತಿರುವವಳು.

**ವತ್ಸಲಾಂಛನದ ಹೃದಯಕಮಲದಲಿ ಮನೆಯ ಹೂಡಿದಾಕೆ**

ಹರಿದಾಸರು ಮಹಾವಿಷ್ಣುವನ್ನು ವತ್ಸಲಾಂಛನನೆಂದು ವರ್ಣಿಸಿರುವರು. ಅವನು ಹಾಲ್ಗಡಲ ಮನೆಯಲ್ಲಿ ಪವಡಿಸಿರುವನು, ಅಂತಹವನ ಹೃದಯಾಕಾಶವೆಂಬ ಮನೆಯಲ್ಲಿ ಇವಳು ಮಲಗಿದ್ದಾಳೆ.

**ಹರನ ಮೈಯನರೆದುಂಬಿ ಲೀಲೆಯಲಿ ತಲೆಯನೇರಿದಾಕೆ**

ಹರಿಯ ಹೃದಯದಲ್ಲಷ್ಟೇ ಅಲ್ಲ, ಹರನ ಅರ್ಧ ದೇಹವನ್ನೂ, ಜೊತೆಗೆ ಅವನ ತಲೆಯನ್ನೂ ಏರಿ ಕುಳಿತವಳು. ಹರನ ಮೈಮನಸ್ಸುಗಳನ್ನು ಬಿಡದಂತೆ ವ್ಯಾಪಿಸಿರುವವಳು.

**ಹೀಗೆ ಕುಣಿಯೆ ಆನಂದ ಲಹರಿ ಈ ಜೀವ ಸೇರಿದಾಕೆ**

ಇವಳ ಈ ಭವ್ಯಲೀಲೆಯನ್ನು ಕಂಡು ಹಿಗ್ಗಿ ಕುಣಿವ ಕವಿಜೀವದೊಳಗೆ ಆನಂದದ ಅಲೆಯಾಗಿ ಪ್ರವೇಶಿಸುತ್ತಿದ್ದಾಳೆ.

೫

**ಹಾಡಿದವನ ಕಾಪಾಡಲೆಂದು ಕೈ ಹತ್ತು ಎತ್ತಿದಾಕೆ**

ಕವಿಜೀವದೊಳಗೆ ಪ್ರವೇಶಿಸುವುದಷ್ಟೇ ಅಲ್ಲ, ಹತ್ತು ಕೈಗಳಿಂದ (ಗಾಯತ್ರಿಗೆ ಐದು ಮುಖ ಮತ್ತು ಹತ್ತು ಕೈಗಳು) ಕವಿಯ ಹೆಡೆದಲೆಯಲ್ಲಿ ನಿಂತು ಪೊರೆಯುತ್ತಿರುವವಳೂ ಅವಳೇ.(ಗಾಯಂತುಂ ತ್ರಾಯತೇ ಇತಿ ಗಾಯತ್ರೀ = ಹಾಡುವವನ ಕಾಪಾಡುವವಳು ಗಾಯತ್ರೀ)

**ಎತ್ತ ಕಿವಿಯದಿರುವಿದರು ಅತ್ತ ಐಮೊಗದಿ ಮುತ್ತಿದಾಕೆ**

ಹೀಗೆ, ಅವಳ ಅನುಗ್ರಹದಲ್ಲಿ ಮಿಂದ ಕವಿಗೆ ಎತ್ತೆತ್ತ ತಿರುಗಿ ನೋಡಿದರೂ ಅಲ್ಲೆಲ್ಲ ಅವಳ ಐದು ಮುಖಗಳೇ ಪ್ರತ್ಯಕ್ಷವಾಗುತ್ತವೆ.

**ತಮವು ಹಬ್ಬಿದತ್ತತ್ತ ನಿನ್ನ ಸುಳಿಬೆಳಕು ಸುತ್ತಿದಾಕೆ**

ತತ್ಪರಿಣಾಮವಾಗಿ ಕವಿ ಎಲ್ಲೆಲ್ಲಿ ಕತ್ತಲೆಗೆ ಎಡತಾಗುವನೋ ಅಲ್ಲೆಲ್ಲ ಅವಳ ಸುಳಿಬೆಳಕು ಅವನನ್ನು ಸುತ್ತಿ ಬಂಧಿಸುತ್ತದೆ

**ಇರುಳ ಕೋಟಿ ಹೆಡೆ ಮೆಟ್ಟಿ ಮಣಿಗಳೊಲು ಚಿಕ್ಕಿಯೊತ್ತಿದಾಕೆ**

ಇರುಳ ತಾರೆಗಳು ಕವಿಕಣ್ಣಿಗೆ ಕಾರ್ಗತ್ತಲೆಯ ಸರ್ಪದ ಹೆಡೆಯ ಮೇಲಿನ ಮಣಿಗಳಂತೆ

ಕಾಣಿಸುತ್ತವೆ. ಆ ತಾರೆಗಳು ನಾಗಮಣಿಗಳಲ್ಲ, ಕಾರ್ಗತ್ತಲೆಯ ಸರ್ಪದ ಹೆಡೆಯನ್ನು ಮೆಟ್ಟಿದ ಅವಳ ಬೆಳಕಿನ ಹೆಜ್ಜೆಗಳಾಗಿ ಕವಿಗೆ ಗೋಚರಿಸಿವೆ.

೬

ಈ ಕೊನೆಯ ಪದ್ಯದ ಮೂರು ಸಾಲುಗಳು ಗಾಯತ್ರೀ ಧ್ಯಾನಶ್ಲೋಕದ ಶಬ್ದಾನುವಾದವಾಗಿದೆ. (ಅವಳ ಐದು ಮುಖಗಳು: ಮುತ್ತಿನ ಬಣ್ಣ, ನೀಲಿ, ಹಳದಿ, ಹಸಿರು ಮತ್ತು ಬಿಳಿ) ಐದು ಬಣ್ಣಗಳಿಂದ ಕೂಡಿದೆ.

**ಮುತ್ತು ಹವಳ ಬಂಗಾರ ನೀಲಮಣಿ ಸ್ಫಟಿಕ ಛಾಯೆಯಾಕೆ**

**ಕಣ್ಣ ನಡುವೆ ಒಳಗಣ್ಣ ತೆರೆಯುವಾ ದಿವ್ಯ ಮಾಯೆಯಾಕೆ**

**ಬೆಳವ ಚಂದ್ರಕಳೆ ಮಕುಟದವಳೆ ತಂತನದ ಬಣ್ಣದಾಕೆ**

ಮುಕ್ತಾವಿದ್ರುಮ ಹೇಮನೀಲ ಧವಲಚ್ಛಾಯೈರ್ಮುಖೈಸ್ತ್ರೀಕ್ಷಣೈಃ

ಯುಕ್ತಾಮಿಂದು ನಿಬದ್ಧರತ್ನಮಕುಟಾಂ ತತ್ವಾರ್ಥವರ್ಣಾತ್ಮಿಕಾಮ್

ಗಾಯತ್ರೀಂ ವರದಾಭಯಾಂಕುಶಕಶೈಃ ಶುಭ್ರೈರ್ಕಪಾಲಂ ಗುಣಮ್

ಶಂಖಂ ಚಕ್ರಮಥಾರವಿಂದಯುಗಲಾಂ ಹಸ್ತೈರ್ವಹಂತೀಂ ಭಜೇ

ಇನ್ನು ಕೊನೆಯ ಸಾಲು: **ವರದ ಅಭಯಕರವಿರುವ ತಾಯಿ ಬಾ ಬೇರೆ ಕರೆಯಬೇಕೇ** ? ಎಂಬ ಪ್ರಶ್ನೆಯೊಂದಿಗೆ 'ಗಾಯತ್ರಿಸೂಕ್ತ'ವೂ ಮುಕ್ತಾಯವಾಗುತ್ತದೆ. ಶಬ್ದದ ಅನುಸಂಧಾನದಿಂದಲ್ಲ ಮೌನದ ಅನುಸಂಧಾನದಿಂದ ನಿನ್ನನ್ನು ಸಮೀಪಿಸಬಹುದೇ ? ಎಂಬ ಇಂಗಿತದ ಪ್ರಶ್ನೆ ಕವಿಗೆ ಸ್ಪಷ್ಟವಾಗಿ ಇದ್ದಂತಿದೆ. ಉಳಿದದ್ದು ಸಹೃದಯರ ಪಾಲಿಗೆ ಸೇರುತ್ತದೆ.

---

## ೮. ಗಂಗಾವತರಣ (೧೯೫೧)

## ಗಂಗಾವತರಣ

### ಇಳಿದು ಬಾ

**ಇಳಿದು ಬಾ ತಾಯಿ ಇಳಿದು ಬಾ (ಸಾಲು: 1, 2)**

: ಅವತರಿಸು.

* * * * * *

### ಹರಿಯ ಅಡಿಯಿಂದ, ಋಷಿಯ ತೊಡೆಯಿಂದ

**ಹರಿಯ ಅಡಿಯಿಂದ/ ಋಷಿಯ ತೊಡೆಯಿಂದ/ ನುಸುಳಿ ಬಾ(ಸಾಲು: 4,5,6)**

*ವಾಮನ: ವಿಷ್ಣುವಿನ ದಶಾವತಾರಗಳಲ್ಲಿ ಐದನೆಯದು. ದೇವತೆಗಳಿಗೆ ಭಯವನ್ನುಂಟು ಮಾಡಿದ ಬಲಿಯ ಯಜ್ಞ ಮಂಟಪಕ್ಕೆ ಈತ ಬಂದನು. ಆತನಿಂದ ಮೂರು ಹೆಜ್ಜೆ ಸ್ಥಳವನ್ನು ದಾನವಾಗಿ ಪಡೆದು ಬಲಿಯನ್ನು ತ್ರಿವಿಕ್ರಮನಾಗಿ ರಸಾತಲಕ್ಕಟ್ಟಿದನು... ತ್ರಿವಿಕ್ರಮನು ಮೂರು ಅಡಿ ಹೆಜ್ಜೆಗೆ ಭೂಮಿಯನ್ನು ಅಳೆಯುವಾಗ ಅವನ ಎಡಗಾಲಿನ ಎಬ್ಬೆರಳಿನ ಉಗುರಿನ ತುದಿ ತಾಗಿ ಬ್ರಹ್ಮಾಂಡ ಕಟಾಹದ ತುದಿ ತೂತಾಗಿ ನೀರು ಸೋರಹತ್ತಿತು. ಈ ವಿಷ್ಣುನ ಪಾದೋದಕವೇ ಗಂಗೆ.(ಪುರಾಣ ಭಾರತ ಕೋಶ ಪು:553)

ಜಹ್ನು: ಭಗೀರಥನು ಪಿತೃಗಳಾದ ಸಾಗರರ ಉದ್ಧಾರಕ್ಕಾಗಿ ಸ್ವರ್ಗದಿಂದ ಇಳಿಸಿದ ಗಂಗೆಯು ಆತನನ್ನು ಹಿಂಬಾಲಿಸುತ್ತಾ ಬರುವ ದಾರಿಯಲ್ಲಿ ಸಿಕ್ಕಿದ ಜಹ್ನು ಮುನಿಯ ಆಶ್ರಮವನ್ನು ತೇಲಿಸಿಕೊಂಡು ಹೋಗಲು ಮುನಿಯು ಕೋಪದಿಂದ ಗಂಗೆಯನ್ನೇ ಕುಡಿದುಬಿಟ್ಟನು. ಆಗ ಭಗೀರಥನು ಗಂಗೆಯನ್ನು ದಯಪಾಲಿಸಬೇಕೆಂದು ಮುನಿಯನ್ನು ಪುನಃ ಪುನಃ ಪ್ರಾರ್ಥಿಸಲು ಆತನು ಗಂಗೆಯನ್ನು ತನ್ನ ಕಿವಿಯಿಂದ ಹೊರಬಿಟ್ಟನು. ಅಂದಿನಿಂದ ಗಂಗೆಯು ಜಾಹ್ನವಿಯಾದಳು.(ಪುರಾಣ ಭಾರತ ಕೋಶ: ಪುಟ–230)

ಬೇಂದ್ರೆಯವರು ಗಂಗೆಯು ಜಹ್ನು ಋಷಿಯ ತೊಡೆಯಿಂದ ನುಸುಳಿ ಬಂದಳು ಎಂದು ತಿಳಿಸಿದ್ದಾರೆ.

* * * * * *

### ದಿಗ್ದಿಗಂತ

**ದಿಗ್‌ದಿಗಂತದಲಿ ಹಣಿಸಿ ಬಾ (ಸಾಲು: 8)**

: ದಿಕ್ಕು ಮತ್ತು ದಿಗಂತವು ದಿಗ್ದಿಗಂತ. ಭೂಮಿಯೂ ಆಕಾಶವೂ ಸೇರಿರುವ ಹಾಗೆ ಕಾಣುವ ದಿಕ್ಕಿನ ಕೊನೆಯ ಭಾಗ–ತುದಿಯೇ ದಿಗಂತ. ಅದನ್ನು ಕ್ಷಿತಿಜ; ದಿಶಂತ ಎಂದು ಕರೆಯುವರು.

* * * * * *

**ಎಡೆತಡೆ**

**ಏಕೆ ಎಡೆತಡೆವೆ/ ಸುರಿದು ಬಾ (ಸಾಲು: 14, 15)**

: ಮಧ್ಯದಲ್ಲಿರುವ ಅಡ್ಡಿ, ಆತಂಕ; ಅಡೆತಡೆ.

* * * * * *

**ಬೆಂಬಳಿ**

**ನನ್ನ ತಲೆಯೊಳಗೆ/ ನನ್ನ ಬೆಂಬಳಿಗೆ/ ನನ್ನ ಒಳಕೆಳಗೆ/ ನುಗ್ಗಿ ಬಾ. (ಸಾಲು: 22 ರಿಂದ 25)**

: ಬೆನ್ನಿನ ಭಾಗ; ಹಿಂಬದಿ; ಹಿಂದು.

* * * * * *

**ಹೊಡೆಮರಳಿ**

**ಮತ್ತೆ ಹೊಡೆಮರಳಿ ಹೊರಳಿ ಬಾ (ಸಾಲು: 37)**

: (ಸಸ್ಯಗಳಲ್ಲಿ) ಸುಳಿಯು ಹೊರಡು,– ಹೊರಬರು.

* * * * * *

**ಉದ್ದಂಡ, ಅರುಳೆ**

**ಉದ್ದಂಡ ಅರುಳೆ/ ಸುಳಿಸುಳಿದು ಬಾ (ಸಾಲು: 46, 47)**

: ಪ್ರಬಲವಾದ; ಪ್ರಚಂಡವಾದ; ಶ್ರೇಷ್ಠವಾದ.

: ಕರುಣೆ; ದಯೆ.

***ಮಾತಾಯ ಕೃಪೆಯು ಸಿರಿಗುರುವಿನರುಳು ಕರುಳಾಗಿ ಪೊರೆಗೆ। ದಯೆಯಿಂದಾ। ಆನಂದಾ।(ಹಾಡು ಪಾಡು: ಹಾ! ಆನಂದಾ!)**

* * * * * *

### ಉದ್ಬುದ್ಧ

**ಸುರಸ್ವಪ್ನವಿದ್ದ ಪ್ರತಿಬಿಂಬ ಬಿದ್ದ/ ಉದ್ಬುದ್ಧ ಶುದ್ಧ ನೀರೇ (ಸಾಲು: 60, 61)**

: ಎಚ್ಚರಗೊಂಡ; ಚೇತರಿಸಿದ.

* * * * * *

### ಅಧಃಪಾತ

**ಅವತಾರವೆಂದೆ ಎಂದಾರೆ ತಾಯಿ, ಈ ಅಧಃಪಾತವನ್ನೇ (ಸಾಲು: 72)**

: ಅಧಃಪತನ; ಕೆಳಕ್ಕೆ ಬೀಳುವುದು.

* * * * * *

### ಅತ್ತೆ

**ಅಂಬಿಕಾತನಯನತ್ತೆ ಬಾ (ಸಾಲು: 90)**

: ಆ ಕಡೆಗೆ

---

## ಬಾರೋ ಸಾಧನಕೇರಿಗೆ

### ಒಡಮುರಿ

**ಭೂಮಿತಾಯ್ ಒಡಮುರಿದು ಎದ್ದಳೊ/ ಶ್ರಾವಣದ ಸಿರಿ ಬರಲಿದೆ. (2–5, 6)**

: 1. ಕೂಡಲೇ ತಿರುಗು.

2. ಭೇದಿಸಿಕೊಂಡು ಹೊರಬರು; ಮೊಳಕೆಯೊಡೆ.

***

**ಹರದಾರಿ ಹಬ್ಬಿದೆರಿಹೊಲದ ಎದಿಯಮ್ಯಾಲ ಕಟ್ಟಿತೇನೊ ಕವನ ಒಡಮುರಿದು ಎದ್ದ ದವನ.(ಹಾಡುಪಾಡು: ದವನದ ಹುಣ್ಣಿವೆಯ ಜಾತ್ರೆಯ ರಾತ್ರಿ)**

* * * * * *

**ಹೊದರು**

**ಗಿಡದ ಹೊದರೊಳು ಹಾಡಿದೆ(4–2)**

: ದಟ್ಟವಾಗಿರುವ ಗಿಡಮರಗಳ ಸಮೂಹ; ಪೊದೆ; ಹಿಂಡಿಲು.

---

## ನಾನು

**ಒಳನುಡಿ**

**ವಿಶ್ವದೊಳನುಡಿಯಾಗಿ ಕನ್ನಡಿಸುತಿಹನಿಲ್ಲಿ/ ಅಂಬಿಕಾತನಯನಿವನು (ಸಾಲು: 15, 16)**

: ಅಂತರಂಗದ ವಾಣಿ.

---

## ಅಂಬಿಕಾತನಯದತ್ತ

**ನೀರಜಾತ**

**ನೀರಿನೊಂದು ನೀರಜಾತ ಬೆಳಕಿಗಾಗಿ ಕೆರಳಿತು। ಈ ಕಿರಣಕರಳಿತು (ಸಾಲು: 13, 14)**

: ನೀರಿನಲ್ಲಿ ಹುಟ್ಟಿದುದು; ಕಮಲ. ಈ 'ಕಿರಣಕೆ ಅರಳಿತು' ಎಂಬ ಮುಖ್ಯ ವಿವಕ್ಷೆ ಇಲ್ಲಿದೆ.

* * * * * *

**ಹೂ ನೀರು**

**ಹೂವ ಹೊಕ್ಕ ಕಿರಣವಾಗ ಹೂ ನೀರ ನೆಕ್ಕಿತು।/ ರುಚಿಗೆ ಮೆಚ್ಚಿ ಸಿಕ್ಕಿತು. (ಸಾಲು: 15, 16)**

: ಹೂವಿನರಸ; ಮಕರಂದ; ಪುಷ್ಪರಸ.

* * * * * *

**ಮೂಸೆ**

**ನಿನ್ನ ಮನದ ಮೂಸೆಯಲ್ಲಿ ಭಾವವಾಗಿ ಕರಗಿತು / ಜೀವವಾಗಿ ಮಿರುಗಿತು॥ (ಸಾಲು: 19, 20)**

: ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕರಗಿಸಲು ಬಳಸುವ ಸಾಧನ; ಕೋವೆ.

* * * * * *

**ಉದರ**

**ನಿನ್ನ ಉದರದೊಂದ ಹೂವ ಸರಸ್ವತಿಗೆ ಸಲಿಸಿದೆ/ ಚುಕ್ಕೆಯಾಗಿ ನೆಲೆಸಿದೆ॥ (ಸಾಲು: 43, 44)**

: ಹೊಟ್ಟೆ.

*ತಾಯಿ ಅಂಬಿಕೆಯು ತನ್ನ ಉದರದ ಹೂವು–ಹೊಕ್ಕುಳಬಳ್ಳಿ ಮಗ ಅಂಬಿಕಾತನಯದತ್ತನನ್ನು ಸರಸ್ವತಿಗೆ ಸಲ್ಲಿಸಿದ್ದಾಳೆ. ಕಾವ್ಯಲೋಕಕ್ಕೆ ಸಮರ್ಪಿಸಿದ್ದಾಳೆ. ಅಲ್ಲಿ ಶಾಶ್ವತವಾಗಿ ನಕ್ಷತ್ರ ರೂಪದಲ್ಲಿ ಉಳಿದುಕೊಂಡಿದ್ದಾಳೆ ಎಂದು ಕವಿ ಭಾವಪರವಶರಾಗಿ ನುಡಿದಿದ್ದಾರೆ.

---

## ತೇಲಾಡುವಾಗ

**ಏರಾಡು**

**ಏರಾಡೆ ಗಾಳಿ ಉಕ್ಕಿ/ ಹಾರಾಡತಾವ ಹಕ್ಕಿ (ಸಾಲು: 3–1, 2)**

: ಮೇಲೆಬರು,–ಬೀಸು.

* * * * * *

**ಉಚ್ಚಳಿಸು**

**ಏನೇನೊ ಛಂದದಲ್ಲಿ/ ತಾನಾಗಿ ಮಿಂಚುಬಳ್ಳಿ/ ಉಚ್ಚಳಿಸುತಿರಲು ಚೆಂದ/ ಎಚ್ಚೆತ್ತೆ ನಿದ್ದೆಯಿಂದ (15–1 ರಿಂದ 4)**

: ಹೊರಹೊಮ್ಮು; ಹೊರಬೀಳು.

* * * * * *

**ಹಾಸಾದ**

**ಹಾಸಾದ ಮಿಂಚಿನಂದ/ ಬೀಸಿದ್ದ ಸೆರಗಿನಿಂದ/ ಸೆಳೆದಂತೆ ಎರಡು ನೂಲು/ ಉಳಿದಾವ ನಾಕುಸಾಲು (16–1 ರಿಂದ 4)**

: ಅನುಗ್ರಹ; ದಯೆ.

*ಮಿಂಚಿನಂತಹದು ತಾಯಿಯ ಅನುಗ್ರಹ. ತಾಯಿಯ ಹೊಟ್ಟೆಯಲ್ಲಿ ಬೆಚ್ಚಗೆ ಮಲಗಿ ಸುಂದರ ಕನಸು ಕಾಣುತ್ತ ಎಚ್ಚೆತ್ತಾಗ ಅವ್ವನನ್ನು ಬಿಗಿಹಿಡಿದ ಸೀರೆಯ ಸೆರಗಿನ ಎರಡು ನೂಲು ತನ್ನ ಕೈ ಹಿಡಿತದಲ್ಲಿ ಸಿಕ್ಕಿದ ಮಗುವಿನಂತೆ– 'ಹಾಸಾದ ಮಿಂಚಿನಂದ/ ಬೀಸಿದ್ದ ಸೆರಗಿನಿಂದ/ ಸೆಳದಂತೆ ಎರಡು ನೂಲು/ ಉಳಿದಾವ ನಾಕುಸಾಲು'. ಈ ನುಡಿಯಲ್ಲಿ ಕಲ್ಪನಾಲೋಕದ ಸ್ಫೂರ್ತಿಶಕ್ತಿ ತಾಯಿಯು ಕವಿಯ ಹಿಡಿತಕ್ಕೆ ಸಿಗುವಷ್ಟನ್ನೇ ನೀಡಿ ಅದರ ಬೆಳಕಲ್ಲಿ ತನ್ನನ್ನು ಅರ್ಥೈಸಿಕೊಳ್ಳಲು ಬಿಟ್ಟಿದ್ದಾಳೆ ಎಂಬ ಭಾವವಿದೆ. ಈ ರೀತಿಯಲ್ಲಿ ತನ್ನ ತಾಯಿಯನ್ನು ಪ್ರತಿಭಾ ಚೇತನೆಯಂತೆ ಕನಸು ಕಣಸುಗಳಲ್ಲಿ ಬೇಂದ್ರೆ ಕಂಡಿದ್ದಾರೆ.

---

# ಫಜಾರಗಟ್ಟೀ ಮುಟ್ಟೋಣು ಬಾ

**ಫಜಾರಗಟ್ಟೀ**

**ಫಜಾರಗಟ್ಟೀ ಮುಟ್ಟೋಣು ಬಾ/ ಹಿಂದಿನ ಆಟಾ ಮುಗಿಸೋಣು ಬಾ/ ಮುಂದಿನ ಆಟಾ ನಡೆಸೋಣು ಬಾ (ಪಲ್ಲವಿ)**

*ಬೇಂದ್ರೆ ಅವರಿಗೆ ದಾಂಪತ್ಯವೇ ಒಂದು ಸಾಧನೆಯಾಗಿತ್ತು. ಅವರು ದಂಪತಿಗಳನ್ನು 'ನಿಜದನೆಲಿ' ಅರ್ಥಾತ್ ಶಾಶ್ವತವಾದ ಒಲವಿನ ಶೋಧಕ್ಕೆ ಹೊರಟವರು ಎಂದು ತಿಳಿದಿದ್ದರು. ಅದನ್ನು ಅವರು 'ಫಜಾರ ಗಟ್ಟೀ ಮುಟ್ಟೋಣು ಬಾ' ಎಂಬ ರೂಪಕದಲ್ಲಿ ಕಾವ್ಯವಾಗಿಸಿದ್ದಾರೆ.

ಮೈಸೂರಿನ ಕಡೆಯ ಮಕ್ಕಳ ಕಣ್ಣು ಮುಚ್ಚಾಲೆಯ ಆಟವನ್ನು ಧಾರವಾಡದಲ್ಲಿ 'ಫಜಾರಗಟ್ಟೀ ಮುಟ್ಟೋಣು ಬಾ' ಎಂದು ಆಡುತ್ತಾರೆ ಎಂಬುದು ಒಂದು ಅಭಿಪ್ರಾಯವಾಗಿದೆ. ಒಂದು ಕಡೆ ಕುಳಿತು ಕಣ್ಣು ಮುಚ್ಚುವ ವ್ಯಕ್ತಿಯ ನಿರ್ದಿಷ್ಟ ಸ್ಥಳವನ್ನು 'ಫಾಜಾಗಟ್ಟಿ' ಎಂದು ಕರೆಯುವರು. ಕಣ್ಣು ಮುಚ್ಚಿಬಿಟ್ಟ ಆಟಗಾರ ಇತರರನ್ನು ಹುಡುಕಲು ಹೋಗುವನು. ಅವಿತುಕೊಂಡಿದ್ದವರು ಬಂದು 'ಪಾಜಾಗಟ್ಟಿ' ಮುಟ್ಟಿದಾಗ ಅವರು ಪಾರಾದಂತೆ.

ದೇವಸ್ಥಾನದಿಂದ ರಥೋತ್ಸವ ಹೊರಟು ಒಂದು ನಿರ್ದಿಷ್ಟ ಸ್ಥಳವನ್ನು ತಲುಪಬೇಕು ಎನ್ನುವುದು ಪದ್ಧತಿಯಾಗಿದೆ. ಆ ನಿರ್ದಿಷ್ಟ ಸ್ಥಳವೇ 'ಫಜಾರಗಟ್ಟಿ'. ಈ ವಿವರವನ್ನು ಬೇಂದ್ರೆಯವರ ಶಿಷ್ಯರಾದ ಎಸ್.ಜಿ ನಾಡಿಗೇರ ಮಾಸ್ತರರು ತಿಳಿಸಿದರು. ಅವರು ತಮ್ಮ ಹೊಸಪೇಟೆಯ ವಡಕರಾಯ(ಹನುಮಂತರಾಯ)ನ ರಥೋತ್ಸವ ಹೊರಟು 'ಫಜಾರಗಟ್ಟಿ' ಮುಟ್ಟಿ ಹೊರಳಿ ಬರುತ್ತಿತ್ತು. ರಥ ತಲುಪಬೇಕಾದ ಘಟ್ಟ 'ಫಜಾರಗಟ್ಟಿ' ಎಂದು ಹೇಳಿದರು.

ದಾಂಪತ್ಯದ ರಥ ಗುರಿ ಮುಟ್ಟಬೇಕು ಎಂಬುದರ ಸಂಕೇತವಾಗಿ ಬೇಂದ್ರೆ ಅವರು 'ಘಜಾರಗಟ್ಟೀ ಮುಟ್ಟೋಣು ಬಾ' ಎಂದು ಸಖಿಯನ್ನು ಕರೆದಿದ್ದಾರೆ. ಬೇಂದ್ರೆಯವರ ಬಾಲ್ಯದ ಆಟ ಅವರು ಸಂಸಾರಿಯಾದಂತೆ, ಆಟದ ಮಾಟ, ಕೌಟುಂಬಿಕ ಸತ್ಯದ ನೆಲೆಯ ಶೋಧವಾಗಿ, ದಾಂಪತ್ಯದ ಲೀಲೆಯಲ್ಲಿ ಒಲವಿನ ನೆಲೆಯ ಗುರಿಯನ್ನು ಮುಟ್ಟುವ ಸಾಧನೆಯಾಗಿದೆ.

---

## ಬರುವುದೇನೆ ನೆಪ್ಪಿಗೆ

### ಆಸರಾಗಿ ಆತೆವು

**ಇಬ್ಬಗೆಗೂ ಸೋತೆವು/ ಆಸರಾಗಿ ಆತೆವು (6–1, 2)**

: ಆಸರು=ಅವಲಂಬನ; ಆಶ್ರಯ; ಆಧಾರ; ಊರೆ.

*ದಾಂಪತ್ಯದಲ್ಲಿ ಶ್ರೇಷ್ಠ ಕನಿಷ್ಠ, ನನ್ನದೊಂದು ಬಗೆ ನಿನ್ನದೊಂದು ಬಗೆ ಎಂಬುದು ಒಣ ಪ್ರತಿಷ್ಠೆಯೇ ಸರಿ. ಇದು ಅಹಂನ ಪ್ರತೀಕ. ಅದರಿಂದ ದಾಂಪತ್ಯ ಸೋಲುತ್ತದೆ. ಆ ಇಬ್ಬಗೆಗೆ ಸೋತೆವು ಎಂಬ ಅರಿವೆ ಪ್ರೀತಿಯ ಬೆಳುದಿಂಗಳು. ಆಗ ಅವರು ತಮ್ಮಲ್ಲಿಯ ಅಮೂಲ್ಯ ನಿಧಿ ಪರಸ್ಪರರ ಅವಲಂಬನದ ಆಸರು ಹೊಂದುತ್ತಾರೆ. ಮತ್ತು ಅವರು ಆತೆವು–ಕೈಯೊಡ್ಡಿ ಹಿಡಿದುಕೊಂಡು ಒಂದಾದ ಭಾವದಲ್ಲಿ ಮೀಯುತ್ತಾರೆ.

---

## ಕನಸಿನ ಕಥೆ

### ಮಟಮಾಯ

**ನನ್ನ ಕೈ ಹಕ್ಕಿ ಮಟಮಾಯವಾಗಿ (ಸಾಲು: 63)**

: ಇದ್ದಕ್ಕಿದ್ದಂತೆ ಅದೃಶ್ಯವಾಗು, ಕಾಣೆಯಾಗು.

---

## ಸಂಜೀಯ ಜಾವಿಗೆ

### ಕಿರಗಿ

**ಸಂಜೀಯ ಜಾವಿಗೆ। ಹೊರಟೇದಿ ಬಾವಿಗೆ॥/ ಕಿರಿಗೀಯ ನೀರಿಗೆ। ಒದೆಯೂತ ದಾರಿಗೆ॥ (ಸಾಲು: 6, 7)**

*ನೀರಿಗೆ ಎಂಬುದು ನಿರಿಗೆ. ಸೀರೆ ಉಡುವಾಗ ಪಾದಗಳ ಬಳಿಗೆ ಇಳಿಯುವಂತೆ ಸೀರೆಯನ್ನು ಓರಣವಾಗಿ ಜೋಡಿಸಿದ ಮಡಿಕೆ.

ನನ್ನ ಮಗಳು ಚಿಕ್ಕವಳಿದ್ದಾಗ ಸೀರೆ ಉಡುತ್ತ ಆಟವಾಡುತ್ತಿದ್ದಳು. ಅದನ್ನು ನೋಡಿದ ನನ್ನ ತಾಯಿಯು– ತಾನು ಚಿಕ್ಕವಳಿದ್ದಾಗ ತನ್ನ ತಂದೆ ತಂದುಕೊಟ್ಟಿದ್ದ 'ಕಿರಗಿ'ಯ ಬಗ್ಗೆ ಹೇಳಿ ಸಂತಸ ಪಟ್ಟಿದ್ದಳು. ನಾನು 'ಕಿರಗಿ ಅಂದರೆ ಏನು?' ಎಂದು ಕುತೂಹಲದಿಂದ ಕೇಳಿದೆ. 'ಅದು ಚಿಕ್ಕ ಹೆಣ್ಣು ಮಕ್ಕಳು ಉಡುವ ಸೀರೆ' ಎಂದು ಹೇಳಿ 'ಆಗ ಮಕ್ಕಳಿಗೆಂದೇ ಅಗಲ ಕಡಿಮೆ ಇರುವ ಸಣ್ಣ ಸಣ್ಣ ಸೀರೆಗಳನ್ನು ನೇಯುತ್ತಿದ್ದರು' ಎಂದು ತಿಳಿಸಿದಳು.

ಬೇಂದ್ರೆ ಅವರ ಈ ಕವನದಲ್ಲಿ 'ಕಿರಗಿ' ಕಂಡಾಗ ಒಂದು ಸುಂದರ ಸಂಸ್ಕೃತಿ, ಸಾಮಾಜಿಕ ಲಾವಣ್ಯ ಕಣ್ಮುಂದೆ ಸುಳಿಯಿತು. ತಮ್ಮ ಮಗಳು ಮಂಗಲೆಯು ಸಂಜೆಯ ಹೊತ್ತು ನೀರಿಗೆ ಹೋಗಲಿರುವುದನ್ನು 'ಕಿರಗೀಯ ನೀರಿಗೆ। ಒದೆಯೂತ ದಾರಿಗೆ'ಎಂದು ಮಗಳ ನಯವಾದ ಮುದ್ದು ನಡಿಗೆಯ ಸಂಭ್ರಮವನ್ನು  ನೀಡಿದ್ದಾರೆ.

ಬಿಜಾಪುರದ ಕಡೆ 'ಕಿರಗಿ'ಯನ್ನು 'ಕಿರಣಿ' ಎಂದು ಕರೆಯುತ್ತಾರೆ. ಪರಿಕಾರ(ಸಾಮಾನ್ಯವಾಗಿ ಚಿಕ್ಕ ಹುಡುಗಿಯರು ಧರಿಸುವ ಒಂದು ಬಗೆಯ ಉಡುಪು) ಲಂಗ ಬಿಟ್ಟು ಸೀರೆ ಉಡುವ ವಯಸ್ಸಿನ ಹೆಣ್ಣು ಮಗುವಿಗೆ 'ಹುಟ್ಟು ಗಿರಣಿ' ಉಡುಗೊರೆ ಕೊಡುತ್ತಾರೆ.

ಬೀದರ ಪ್ರದೇಶದಲ್ಲಿ ಇದನ್ನು 'ಕಿರ್ಗುಣಿ' ಎಂದೂ ಕರೆಯುತ್ತಾರೆ.

---

## ತಂಗಿ ಜಾನಕಮ್ಮ

### ನಿರ್ನೆರ

**ನೂರು ತಂಗಿಯರ ನಿ/ ರ್ನೆರದ ನೇಹದಿ ಮಿಂದು/ ಮಿಂಚಿನಾಚೆಯ ಬೆಳಕ ಬಯಸಿ ಬಳೆದು (3–1, 2, 3)**

: ಕಾರಣವಿಲ್ಲದೆ; ನಿಷ್ಕಾರಣವಾಗಿ; ನಿರ್ನಿಮಿತ್ತವಾಗಿ.

*ಬೇಂದ್ರೆ ಅವರು ಸಾಹಿತ್ಯ ಸಹೋದರಿಯರಾದ ಬೆಳೆಗೆರೆ ಜಾನಕಮ್ಮ, ಕೊಡಗಿನ ಗೌರಮ್ಮ, ತಿರುಮಲೆ ರಾಜಮ್ಮ ಮುಂತಾದವರ ಬಗ್ಗೆ ರಚಿಸಿರುವ ಕವನಗಳು ಸಾಹಿತ್ಯ ಸಂಬಂಧದ ಶ್ರೇಷ್ಠ ಭಾವಲಹರಿಗಳು.

'ಅಂಬಿಕಾತನಯದತ್ತ'ರು ಮಾತೃ ಹೃದಯದವರು. 'ಬಾಯೆನ್ನ ತಂಗಿ ಬಾ ಮುದ್ದು ಬಂಗಾರವೇ' ಎಂದು ಮುದ್ದು ಮಾಡಿ ನಲಿದವರು. ಅವರಿಗೆ ಸಾಹಿತ್ಯ ಸಹೋದರಿಯರ ನೇಹವೆಂಬುದು ನಿರ್ನಿಮಿತ್ತವಾದ ನಿರ್ನೆರ. ಅವರು ಆ ಸಹೋದರಿಯರ ಪ್ರೀತಿಯ

ಸ್ನೇಹದಲ್ಲಿ ಮಿಂದು ಮಿಂಚಿನಾಚೆಯ ಬೆಳಕನ್ನು ಬಯಸಿ ಬೆಳೆದ ಕನ್ನಡ ಕಾವ್ಯಲೋಕದ ಅಣ್ಣ.

---

## ಪಂಪನಿಗೆ

**ಕನ್ನಡಿಸು**

**ಕನ್ನಡವು ಕನ್ನಡವ ಕನ್ನಡಿಸುತಿರಬೇಕು (2–6)**

: ಕನ್ನಡಿಯಂತೆ ವರ್ತಿಸು,–ಪ್ರತಿಬಿಂಬಿಸು,–ಪ್ರಕಟಿಸು,–ತೋರು.

*ನೀರ್ಮ್ಮಂಚದ ಮೇಲೆ/ ಬಯಲಗಲದ ಬಾನ್ಗನ್ನಡಿ ಕನ್ನಡಿಸಿದ ಹಾಗೆ.( ಹೃದಯಸಮುದ್ರ: ನೆಲವೆಲ್ಲಾ ನೀರಾಗಿರೆ)

---

## ಸಿದ್ಧರಾಮರ ವಚನವನ್ನು ನೆನೆದು

**ಧೂಮಧೂಸರಿತ**

**ಗಿರಣಿಗಳ ಧೂಮ–ಧೂಸರಿತ ಬಾಂದಳದಲ್ಲಿ/ ಎಂದು ಮೆರೆವುದೋ ನಿಮ್ಮ ತ್ಯಾಗಧ್ವಜವು! (15–1, 2)**

: ಹೊಗೆಯಿಂದ ಆವೃತವಾಗಿ ಮಲಿನವಾದ.

---

## ಪಡುವಲ ಕಡಲ ಅಂಬಿಗರ ಹಾಡು

**ಅಬರಂಗ**

**ಮುತ್ತೇನು ಮೆಣಸೇನು ಲಾವಂಗವೋ/ ಕುದುರೇನು ಹವಳೇನು ಅಬರಂಗವೋ॥ (4–1, 2)**

: ತುಂಗೆ(ಭದ್ರಮುಸ್ತೆ) ಗೆಡ್ಡೆಯಿಂದ ಮಾಡಿದ ಒಂದು ಬಗೆಯ ಸುವಾಸನೆಯುಳ್ಳ ಪುಡಿ.

---

## ಬಂದಿಕಾರಾ ಶ್ರಾವಣಾ

### ಬಂದಿಕಾರ

**ಬಂದಿಯೊಳಗಿದ್ದವರ ಬಂಧನವ ಬಿಡಿಸುವಾ/ ಬಂದಿಕಾರಾ ಶ್ರಾವಣಾ. (1–1, 2)**

: ಜೈಲಿನ ಮೇಲಧಿಕಾರಿ.

* * * * * *

### ಮಂದೇಹ

**ಅಂಧಕಾರವಿದಲ್ಲ ಮಂದೇಹ ಸಂಘವಿದೆ/ ಸಂದೇಹವೇ ಶ್ರಾವಣಾ (1–5, 6)**

*ಸೂರ್ಯೋದಯಕಾಲದಲ್ಲಿ ಸೂರ್ಯನಿಗೆ ಮುತ್ತಿಗೆ ಹಾಕುವರೆಂದು ನಂಬಲಾದ ಒಂದು ರಾಕ್ಷಸವರ್ಗ ಮತ್ತು ಆ ವರ್ಗಕ್ಕೆ ಸೇರಿದವನು.

* * * * * *

### ವಂದಿ ಮಾಗಧ, ಬಂಧುರಾಂಗ

**ಮುಂದೆ ಬರುವ ಸ್ವತಂತ್ರ ವಂದಿಮಾಗಧ ನೀನು/ ಬಂಧುರಾಂಗಾ ಶ್ರಾವಣಾ (5–7, 8)**

: ಹೊಗಳುಭಟ್ಟ; ಸ್ತುತಿಪಾಠಕ.

: ಚೆಲುವ; ಸುಂದರ.

*ಬೇಂದ್ರೆ ಅವರು 1944ರಲ್ಲಿ ಶ್ರಾವಣಮಾಸವನ್ನು ಕುರಿತು ಕವನ ರಚಿಸುತ್ತ ಭಾರತ ದೇಶಕ್ಕೆ ಮುಂದೆ ಬರುವ ಸ್ವಾತಂತ್ರ್ಯವನ್ನು ಸಾರುತ್ತಿರುವ ವಂದಿಮಾಗಧ ಶ್ರಾವಣ ಎಂದು ದೂರದೃಷ್ಟಿಯ ಭಾವಕಲ್ಪದಲ್ಲಿ ಮಿಂದರು. ಅವರ ಆ ಶುಭ ಭಾವವೇ ನಿಜವಾಗಿ ಶ್ರಾವಣ ಮಾಸದ 15 ಆಗಸ್ಟ್ 1947ರಲ್ಲಿ ದೇಶ ಸ್ವಾತಂತ್ರ್ಯ ಪಡೆಯಿತು. ಅವರಿಗೆ ಶ್ರಾವಣ–ಚೆಲುವೇ ಮೈವೆತ್ತ ಬಂಧುರಾಂಗ; ಸುಂದರ.

---

## ನರ್ಸ

### ದರವೇಶಿ

**ಇವನಾರೊ ಸಂನ್ಯಾಸಿ, ಅತ್ತೊಬ್ಬ ಬಿಕನಾಸಿ/ ಇಲ್ಲೊಬ್ಬ ದರವೇಶಿ ನರಳುತಿಹನು. (1–1, 2)**

: ದರವೇಶಿ ಎಂದರೆ ತಕ್ಷಣ ಮನಸ್ಸಿನ ಮುಂದೆ ಬರುವುದು ಮುಸಲ್ಮಾನ ಸಾಧು; ಫಕೀರ. ಆದರೆ ಇಲ್ಲಿ ಅದರ ಅರ್ಥ ದರಿದ್ರ, ಬಡವ ಎಂದಿದೆ.

* * * * * *

**ಎಕ್ಕೆಕ್ಕು**

**ಹೇಗೊ ಹಾಕಿದ ಹೆರಳು ಕೆದರಿಕೊಂಡಾ ಕುರುಳು/ ಎಕ್ಕೆಕ್ಕಿ ಯಾರನೋ ಒದರುತಿಹವು (7–3, 4)**

: (ದ್ವಿರುಕ್ತಿ)ಮೇಲಕ್ಕೆ ಏರು.

---

## ಒಂದು ಹಾಡು

**ಅಚ್ಚಿರಿ**

**ವಾಣಿಗೆ ವೀಣೆಯು ಅಚ್ಚಿರಿದಂತೆ/ ಇರದಿರೆ ಏನದು ಆ ಹಾಡು. (2–1, 2)**

: ಒಂದುಗೂಡು; ಬಿಗಿಯಾಗಿ ಹೊಂದಿಕೊ.

* ನುಡಿಗೆ ನಾದವು ಒಂದುಗೂಡಿದ್ದೇ ಹಾಡು.

---

## ಶಿವ–ದೃಷ್ಟಿ

**ಮೆಲುಪು**

**ಕೈ ಕೈಯನು ಹಿಸುಕುವಂತೆ ಬೆರಳಿನೊಡನೆ ಆಡಿತು। ತಂಪು ಮೆಲುಪು ನೋಡಿತು॥ (ಸಾಲು: 13, 14)**

: ಕೋಮಲತೆ; ಮೃದುತ್ವ

* 'ಶಿವದೃಷ್ಟಿ'ಯು ಹರಿಹರನ ಗಿರಿಜಾಕಲ್ಯಾಣದಲ್ಲಿ ಗಿರಿಜಾ ದೃಷ್ಟಿಯನ್ನು ಕುರಿತು ಬರೆದ ಶ್ಲೋಕದಿಂದ ಪ್ರೇರಿತವಾಗಿದೆ.

ಶಿವ–ಗಿರಿಜೆಯರು ಕೈಗಳನ್ನು ಹಿಡಿದ ಸುಖಭಾವ–ಬೆರಳಿನೊಡನೆ ಆಡುವಾಗ ತಂಪು ಕೋಮಲತೆ ಸವಿದಿದೆ.

---

# ಬದುಕು ಮಾಯೆಯ ಮಾಟ

## ಗುಂಭ

**ಬದುಕು ಮಾಯೆಯ ಮಾಟ/ ಮಾತು ನೊರೆ-ತೆರೆಯಾಟ/ ಜೀವಮಾನದ ತುಂಬ ಗುಂಭ ಮುನ್ನೀರು(1-1,2,3)**

* ಬೆಂಗಳೂರಿನವರಾದ ನಮಗೆ 'ಗುಂಭ' ಎಂದರೆ ತಕ್ಷಣ ನೆನಪಾಗುವುದು ಎತ್ತಿನಗಾಡಿಯ ಚಕ್ರದ ಗುಂಭ. ಬೀದರದ ಹೆಡಗಾಪುರ ಎಂಬ ಗ್ರಾಮದ ಸರಕಾರಿ ಪ್ರೌಢಶಾಲೆಯಲ್ಲಿ ದ.ರಾ ಬೇಂದ್ರೆ ಕವನ ಗಾಯನ ಸ್ಪರ್ಧೆಯನ್ನು ಮುಗಿಸಿಕೊಂಡು ಹಿಂದಿರುಗುತ್ತಿದ್ದೆವು. ನಾನು ಆ ಊರಿನ ತಿಪ್ಪೆಗುಂಡಿ ಪಕ್ಕಕ್ಕೆ ಹಾದು ಹೋಗುವುದನ್ನು ಕಂಡ ಸ್ನೇಹಿತ ಮಾಸಿಮಡೆ ಅವರು, 'ಅದು ಘುಮ್ಮ ಅದ, ಈ ಕಡೆ ಬನ್ನಿ' ಎಂದು ಹೇಳಿದರು. ನನಗೆ ಮಕ್ಕಳನ್ನು ಬೆದರಿಸುವ 'ಗುಮ್ಮ' ನೆನಪಾಗಿ 'ಏನು ಘುಮ್ಮ?' ಎಂದೆ. ಅವರು ಪ್ರತ್ಯುತ್ತರವಾಗಿ 'ಆ ಗುಂಡಿ ಗುಂಭ ಅದ' ಎಂದು ಕೈ ಹಿಡಿದು ತಮ್ಮ ಕಡೆಗೆ ನನ್ನನ್ನು ಎಳೆದುಕೊಂಡರು. ನನಗೆ ಕುತೂಹಲ. ಬೇಂದ್ರೆ ಅವರ 'ಬದುಕು ಮಾಯೆಯ ಮಾಟ' ಭಾವ ಗೀತೆಯ 'ಜೀವ ಮಾನದ ತುಂಬ ಗುಂಭ ಮುನ್ನೀರು' ಸಾಲಿನ 'ಗುಂಭ' ಅರ್ಥವಾಗದ ಪದವಾಗಿ ಕಾಡುತ್ತಿತ್ತು. ಇಲ್ಲಿ ಅರ್ಥ ಸಿಗಬಹುದು ಎಂದು 'ಗುಂಭ ಎಂದರೆ ಏನು?' ಎಂದು ಮತ್ತೆ ಪ್ರಶ್ನೆ ಎಸೆದೆ. ಅವರು 'ಆ ಆಳಕ್ಕೆ ನಮ್ಮಲ್ಲಿ ಗುಂಭ ಪದ ಬಳಸುತ್ತೇವೆ' ಎಂದು ಹೇಳಿದರು. ಹೀಗೆ ಗ್ರಾಮೀಣ ಜನರ ದಿನಬಳಕೆಯಲ್ಲಿರುವ 'ಗುಂಭ' ಪದವನ್ನು ಬೇಂದ್ರೆ ಅವರು ತಮ್ಮ ಕಾವ್ಯದಲ್ಲಿ ಗಾಢ ಮೌನಕ್ಕೆ ಪ್ರತಿಮೆಯಾಗಿ ಬಳಸಿದ್ದಾರೆ. ಅದು ಆಳವಾದ ಕಡಲಿನ ಮೌನ.

ಮಾಯೆಯ ಮಾಟದ ಈ ಬದುಕಿನಲ್ಲಿ ಎಲ್ಲರೂ ಹೊರಗೆಡಹುವ ಮಾತು-ಸಮುದ್ರದ ಮೇಲಿನ ಅಲೆಗಳ 'ನೊರೆ-ತೆರೆಯಾಟ' ಅಷ್ಟೆ. ಆದರೆ, ಪ್ರತಿವ್ಯಕ್ತಿಯ ಜೀವನದಲ್ಲಿ ಅವನ ಅನುಭವವು ಸಮುದ್ರದ ಆಳದಂತೆ, ಗಂಭೀರವಾಗಿ ತುಂಬಾ ಮೌನವಾಗಿರುತ್ತದೆ. ಕಡಲಿನ ಆಳ ಲೆಕ್ಕಕ್ಕೆ ಸಿಗದು. ಅದೇ ರೀತಿ, ಮನುಷ್ಯನ ಮನಸ್ಸಿನ ಸ್ವರೂಪವು ಎಂಬುದು ಕವಿಯ ಭಾವ.

***

ಆದರೇನೆಲ್ಲೆಲ್ಲು ಗುಂಭ ಮೌನವೆ ತುಂಬಿ/ ಮೂಢನ ಸಮಾಧಿಯೊಲು ಕತ್ತಲಿಸಿದೆ/ ವೈಭವಕೆ ಕಳೆಯಿಲ್ಲ, ಜ್ಞಾನಕ್ಕೆ ಬೆಳೆಯಿಲ್ಲ/ ಅಜ್ಞಾನವೇ ಸುತ್ತ ಬತ್ತಲಿಸಿದೆ!( ಗಂಗಾವತರಣ: ಸಿದ್ಧರಾಮರ ವಚನವನ್ನು ನೆನೆದು)

## ಜೋಗಿ

**ತಾರ**

**ತಾರ ಪಂಚಮದಾಗ ಕೋಗಿಲಾ ಕೂಗತ್ಯದೊ ಜೋಗಿ(8-1)**

: ದೊಡ್ಡ ಧ್ವನಿಯುಳ್ಳ; ಎತ್ತರದ ಸ್ವರ ಉಳ್ಳ.

* * * * * *

**ಪಾಡು**

**ತೋಟವೆಲ್ಲ ಹೂವಾಗಿ ನಿಂತು ತೊಂಗೆಲ್ಲ ಗೊಂಚಲಾಗಿ/ ಪಾಡು ಆಗತಾವ, ಹಣ್ಣು ಆಗತಾವ ಅದರ ಲಯಕೆ ತೂಗಿ (8-3, 4)**

* ಕವಿಯ ದೇಹವನ್ನು ಬಿಟ್ಟು ಆತ್ಮ ಪರಮಾತ್ಮನೊಡನೆ ತೂಗುವ ತೂಗುಯ್ಯಾಲೆಯ ಸಮರ್ಥ ಅಭಿವ್ಯಕ್ತಿ 'ತೊಂಗೆಲ್ಲ ಗೊಂಚಲಾಗಿ ಪಾಡು ಆಗತಾವ' ಎಂಬ ನುಡಿಯಲ್ಲಿದೆ. ಈ ಪಾಡು ಎಂಬ ಪದ ಆತ್ಮದ ಪರಿಪಕ್ವತೆಯ ಸ್ಥಿತಿಯನ್ನು ಧ್ವನಿಸುತ್ತದೆ. ಕಾಯಿಯಿದ್ದದ್ದು ಪಾಡಾಗಿ ಬಂದ ಪರಿಯನ್ನು ಅಭಿವ್ಯಕ್ತಿಸುತ್ತದೆ. ಮಾವಿನ ಮರದ ಸಂಕೇತ, ಅಲ್ಲಿನ ಕೋಗಿಲೆಯ ಕರೆ, ಏಳು ಎಡೆ ಸರ್ಪದ ಹುತ್ತ ಏರಿಹೋದ ಧೈರ್ಯ–ಆತ್ಮನನ್ನು ಮಾವಿನ ಹಣ್ಣಿನ ಪಕ್ವತೆಯ ಸ್ಥಿತಿಗೆ ತಂದಿದೆ. ಉತ್ತರ ಕರ್ನಾಟಕದಲ್ಲಿ ಮಾವು ದೋರಗಣ್ಣಿನ ಹಂತ ದಾಟಿ ಪಕ್ವತೆಯ ಹಂತ ತಲುಪಿದ ಸ್ಥಿತಿಯನ್ನು 'ಪಾಡು' ಎನ್ನುವರು. ಆಗ ಅದನ್ನು ಕಿತ್ತು ಹಣ್ಣಾಗಲು ಅಡೆ ಹಾಕಬೇಕಾಗುತ್ತದೆ. ಅಂತಹ 'Ripeness and readiness to be gathered'ನ ಸ್ಥಿತಿಗೆ ತಲುಪಿದ್ದ ಆತ್ಮದ ಏರುಸ್ಥಿತಿ ಬಂದಿದೆ. ಅದೇ ಸಂದರ್ಭದಲ್ಲಿ ಆತ್ಮ ಪರಮಾತ್ಮನನ್ನು ತಲುಪಲು ನಡೆಸಿದ ಹೋರಾಟ ಅದರ ಪಾಡನ್ನು ಅಂದರೆ suffering trouble ಅನ್ನು proper state, Fitnessಗೆ ತಲುಪಿದ ಹಂತವನ್ನೂ ಸೂಚಿಸುತ್ತದೆ. ಅದು 'ಪಟ್ಟ ಪಾಡೆಲ್ಲವೂ ಹುಟ್ಟು ಹಾಡಾಗುತ। ಹೊಸದಾಗಿ ರಸವಾಗಿ ಹರಿಯುತಿವೆ' ಎಂಬ ಸ್ಥಿತಿಯೂ ಆಗುತ್ತದೆ. ಅಂತಹ ಪಾಡು ಆತ್ಮ ಪರಮಾತ್ಮನನ್ನು ಸೇರುವ, ತೂಗಿ ತೊನೆವ ಸಮರ್ಥ ಚಿತ್ರಣ ಇಲ್ಲಿ ರೂಪಕವಾಗಿ ತೊನೆದಿದೆ.

* * * * * *

**ನೂಗು**

**ತಲಿ ಕಾವಿನೊಳಗ ಇಮ್ಮಾವಿನೊಳಗ ಬಿಸಿಗಾಲ ನೂಗತ್ಯದೊ (9-2)**

: (ಸಮಯವನ್ನು) ಕಳೆ; ವ್ಯಯಿಸು.

* * * * * *

**ಅಸರಂತ**

**ಯಾಕ ಹೀಂಗ ಅಸರಂತ ಕೂಗತದ ಏನು ಇದಕೆ ಬ್ಯಾನ್ಯೊ (12–2)**

: (ಉ.ಕ) ಅವಿಶ್ರಾಂತವಾದ; ನಿರಂತರವಾದ.

---

## ಮಲ್ಲಿಗೆ

**ಆವಾಹನೆ**

**ಏ ಮಂದಪವನ ವಾಹನೇ/ ಹಾ ತಲುಪಿದೆ ಆವಾಹನೇ (1–6,7)**

: ವಿಗ್ರಹದಲ್ಲಿ ಅಥವಾ ಬೇರೆಯ ಪ್ರತೀಕದಲ್ಲಿ ಬಂದು ನೆಲೆಗೊಳ್ಳುವಂತೆ ಇಷ್ಟವಾದ ದೇವತೆಯನ್ನು ಮಂತ್ರಪೂರ್ವಕವಾಗಿ ಪ್ರಾರ್ಥಿಸುವುದು, ಆಹ್ವಾನ.

* * * * * *

**ಸುಸಿಲ, ಸೌಸವ**

**ನಸುಕು ಸುಸಿಲ ಸಮಯವಾಗೆ/ ಸೌಸವವದು ಸೂಸಿ ತಾಗೆ (2–1,2)**

: ಬೆಳಗಿನ ಸಮಯ; ಉಷಃಕಾಲ.

: ಕಂಪು; ವಾಸನೆ; ಸುಗಂಧ.

* * * * * *

**ತಾಮರೆ**

**ಏ ನಿನ್ನಿದಿರೇ ತಾಮರೇ (2–6)**

: ತಾವರೆ; ಕಮಲ.

* * * * * *

**ಮೂಗಾಳಿ**

**ಮೂಗಾಳಿಯ ಮೂಗುದಾರ (4–1)**

: ಮೂಗಿನಿಂದ ವಾಸನೆಯನ್ನು ತಿಳಿ; ಅರಿ.

---

## ನಸುಕು ಬಂತು ನಸುಕು

**ಚಳಿತು**

**ಬೆಳಗು ಗಾಳಿ ತಾಕಿ ಚಳಿತು(1–1)**

: ಪ್ರಭಾವ ಕಡಮೆಯಾಗು; ಸೆಡೆ; ಹಿಂದೆಗೆ; ಕುಗ್ಗು.

---

## ಗಾಳಿಗಡಲಿನಲ್ಲಿ

**ತೇಲಿಬರು**

**ಗಾಳಿಗಡಲಿನಲ್ಲಿ ತೇಲಿಬರುತಲಿಹವು ನಾದಾ (1–1)**

: ನಿಧಾನವಾಗಿ ಬರು.

---

## ಕಣ್ಣ ಕಾಣಿಕೆ

**ಕಲಕುಮಲಕು**

**ಕರುಳ ಕಲಕುಮಲಕಿನಲ್ಲಿ ಕುದಿದು ಕುದಿದ ಹಾಲೆ (5–1)**

: ಕದಡಿದ ಸ್ಥಿತಿ; ಕ್ಷೋಭೆ.

***

ಈ ಕಲಕುಮಲಕು ಆದಾಗ ನಿನಗೆ ನಡದ್ವದ ಮ್ಯಾಲ ಕೆಳಗ(ಹೃದಯಸಮುದ್ರ; ಓ ತಾಯಿ ಮಾಯಿ)

---

## ಏಲಾಗೀತೆ

**ಏಲಾವನ**

**ಏಲಾವನ ಲವಲೀಬನ ಲವಂಗ ಬನಗಳಲ್ಲಿ/ ನಾಗಲತಾ ಸಂಕುಲ ಬನವಾಸಿಯ ಜನಗಳಲಿ$_{sss}$/ ಲೀಲಾಂದೋಲಿತ ದೋಲಾ ಲಲನಾ ಮಣಿಗಳಲಿ$_{ss}$ (1–1, 2, 3)**

* 'ಏಲಾಗೀತ'ವು ಏಳಾ ಜಾತಿಯನ್ನು ಕುರಿತು ಮಾಡಿದ ಧ್ಯಾನದಿಂದ ಉತ್ಪನ್ನವಾದುದು ಎಂದು ಭಾವ ಸಂದರ್ಭ ಹೊಂದಿದೆ.

ಈ ಕವನದಲ್ಲಿ ಕಂಪು ಸೂಸುವ ಶಬ್ದದಲ್ಲಿ ಲಯ ಲಾಲಿತ್ಯವು ನಾದದ ನದಿಯಲ್ಲಿ ನಲಿದಾಡಿದೆ. ಏಲಕ್ಕಿಯನ್ನು ಸಂಸ್ಕೃತದಲ್ಲಿ ಏಲಾ, ಏಲೀಕಾ ಎಂದು ಕರೆಯುವರು. ಬೇಂದ್ರೆಯವರು ಏಲಕ್ಕಿ ವನವನ್ನು 'ಏಲಾವನ' ಎಂದು ಹೇಳಿರುವರು. 'ಅರೆನಲ್ಲಿ'– ಲವಲಿ. ಅದು ನಾಲಗೆಯಲ್ಲಿ ರಸ ಒಸರುವಂತೆ ಮಾಡುವ ಸವಿ. ಮತ್ತೆ ಕಂಪು ಸೂಸುವ ಲವಂಗ ಬನದಲ್ಲಿ ವಿಹಾರ.

ಅಲ್ಲಿ ವೀಳೆಯದೆಲೆಯ ಬಳ್ಳಿ 'ನಾಗಲತಾ' ಸಂಕುಲವಿದೆ. ಅದು ಕಂಪು, ಸೊಂಪು ತರುವ ಎಲೆ ಅಡಕೆ ಸವಿ. ಆ ನಾಗಲತೆಯು ನಾಗ ನಾಗಿಣಿಯರ ನಾಗಬಂಧದ ಶೃಂಗಾರ ರೂಪಕವೂ ಆಗಿ ಬನವಾಸಿಯ ಜನರ ರಸಿಕ ಭಾವ ಪ್ರಕಟಗೊಂಡಿದೆ. ಆ ಸುಖದಲ್ಲಿ ಅಲ್ಲಿಯ ಲಲನಾ ಮಣಿಗಳು ವಿನೋದ ವಿಹಾರದಲ್ಲಿ ಬಳಸುವ ಉಯ್ಯಾಲೆ– 'ಲೀಲಾಂದೋಲಿತ'ದಲ್ಲಿ ಹೊಳಪುಗೊಂಡು ಉತ್ಸಾಹದಲ್ಲಿ ಮೈಮರೆತು ತೂಗಾಡುತ್ತಿದ್ದಾರೆ. ಆ ತೂಗಾಟ, ಓಲಾಟದ ಸವಿ, 'ದೋಲಾ' ಪದ ಹೊಮ್ಮಿಸಿ ಹೊಯ್ದಾಡುತ್ತಿದೆ.

ಇದೊಂದು ಕಂಪು, ಇಂಪು, ಸವಿ ಉಲ್ಲಾಸದ ಏಲಾಗೀತೆ–ಯಾಲಾ ಪದ. ಈ ದೇಶೀಯ ಗೀತೆ ಉತ್ಸಾಹ ಲಯದಲ್ಲಿ ಅಂಶಗಣಗಳ ಛಂದಸ್ಸಿನಲ್ಲಿ ತೂಗಾಡುತ್ತಿದೆ.

* * * * * *

## ಮೇಲಾಪ

**ಸಖಸಖಿಯರ ಮೇಳಾಪದೆ ತೆರೆದಿದೆ ಎದೆ ಭರಣಿ** $_s$ **(2–2)**

: ಜೊತೆಯಾಗಿ ಹೊಂದಿಕೊಂಡಿರುವುದು; ಜೋಡಣೆ; ಹೊಂದಾಣಿಕೆ.

* * * * * *

## ಮಾಲಿಸು

**ಆಲಿಸುತಿವೆ ಮಾಲಿಸುತಿವೆ ಹರಿಣದ ಜತೆ ಹರಿಣಿ** $_s$ **(2–3)**

: ನೆಟ್ಟ ದೃಷ್ಟಿಯಿಂದ ನೋಡು; ಒಂದೇ ಸಮನೆ ನೋಡು.

* * * * * *

## ಯಾಳ

**ಯಾಳದ ಜತಿ, ಏಳೆಯಗತಿ ಏಳೇಳೇಳೆಂದು ಎಬ್ಬಿಸಿ (9–1, 2)**

: ಒಂದು ಬಗೆಯ ತಂತೀವಾದ್ಯ.

---

## ತುಂಬಿ

**ದನಿಮೀಟು**

**ಕ್ರಿಮಿಕೀಟ ತುಂಬಿ ಈಟೀಟು ತುಂಬಿ ದನಿಮೀಟು ತುಂಬಿ ತುಂಬಿ (4–1)**

: ದನಿಯ ಮಿಡಿತ; ಧ್ವನಿ.

* * * * * *

**ಕಣ್ತುಂಬು**

**ಜಗವರಳಿ ಕಂಡು ಕಣ್ತುಂಬಿ ಮರಳಿ ಮರುಳಾಗಿ ತುಂಬಿ ತುಂಬಿ (5–2)**

: ಕಣ್ಣಿಗೆ ತೃಪ್ತಿಯಾಗು.

* * * * * *

**ದಿಡ**

**ತಂಬೂರಿ ಶ್ರುತಿಗೆ ಸೀತಾರ ಜತಿಗೆ ದಿಡದಾದಿ ಮೀಟ ದಾಟಿ/ ಕುಂಭಿನಿಯ ತುಂಬಿ ಅಂಬರವ ತುಂಬಿ ತುಂಬಿಸಿದಳೆಂಥ ಲಹರಿ. (9–3, 4)**

: ಶಾಶ್ವತವಾದುದು.

---

## ೯. ಮುಕ್ತಕಂಠ (೧೯೫೭)

## ರಮಣಹೃದಯ

### ಘಟಮಟ ನ್ಯಾಯ

**ಹಿಗ್ಗಿದೆ ಕುಗ್ಗಿದೆ ಜೀವ ಜಡ ದಿಟ ಸಟಿ।/ ಘಟಮಟ ನ್ಯಾಯವು ಅಟಮಟವು॥(5–1,2)**

: ಘಟಾಕಾಶ, ಮಠಾಕಾಶ ಮೊದಲಾದ ದೃಷ್ಟಾಂತವನ್ನು ಒಳಗೊಂಡಿರುವ ನ್ಯಾಯ; ದೊಡ್ಡದರಲ್ಲಿ ಇದ್ದ ಬಯಲು ಚಿಕ್ಕದಾದ ಘಟದಲ್ಲಿಯೂ ಇರುವುದೆಂಬ ನ್ಯಾಯ.

* ಆತ್ಮನಲ್ಲಿ ನಾಲ್ಕು ಬಗೆಗಳಿವೆ: ಜೀವಾತ್ಮ, ಶಿವಾತ್ಮ, ಪರಮಾತ್ಮ ಮತ್ತು ನಿರ್ಮಲಾತ್ಮ ಈ ನಾಲ್ಕು ಆತ್ಮಗಳು ಘಟಾಕಾಶ, ಮಠಾಕಾಶ, ಮಹಾಕಾಶ, ಮತ್ತು ಚಿದಾಕಾಶ ಎಂಬ ನಾಲ್ಕು ಆಕಾಶಗಳಲ್ಲಿ ನೆಲೆಸಿರುತ್ತವೆ ಎಂದು ಶಾಸ್ತ್ರಗಳು ಹೇಳುತ್ತವೆ. ಒಮ್ಮೆ ಜ್ಞಾನೋದಯವಾದಾಗ ವಿಂಗಡಣೆಗಳೆಲ್ಲಾ ಅಪ್ರಸ್ತುತವಾಗಿಬಿಡುವುದು, ಜ್ಞಾನಿಯಾದವನು ಸರ್ವವ್ಯಾಪಿಯಾಗಿ ನೆಲೆಸುವನು ಎಂದು ಇಲ್ಲಿ ರಮಣರು ನುಡಿಯುತ್ತಿರುವರು. ಘಟಮಟ ನ್ಯಾಯವು ಅಟಮಟವಾಗುತ್ತದೆ, ಅಂದರೆ ಈ ವಿಂಗಡಣೆಗಳೆಲ್ಲಾ ಅಸ್ತವ್ಯಸ್ತವಾಗುತ್ತದೆ.

* * * * * *

### ನುಡಿಕಂಪು, ಮುಟ್ಟು ಚಟ್ಟು

**ಒಡವೆಯ ಒಡಲೆಲ್ಲ ಸವಿರೂಪು ನುಡಿಕಂಪು। ಮುಟ್ಟುತಟ್ಟಿನೊಳಿದೆ ಭೂಭುವನ॥/ ಇದಕೆಲ್ಲ ಮನ ಮೂಲ ಮನದಲ್ಲೆ ಜಗವೆಲ್ಲ।/ ಭುವನದಿ ಮೂಡಿದೆ ಮನದತನ.(8–1,2,3,4)**

: ಮಾತಿನಮಾಧುರ್ಯ; ನುಡಿಯಸವಿ.

: ಮುಟ್ಟು, ಸೂತಕ ಮುಂತಾದುವುಗಳ ಸಂಸರ್ಗದಿಂದ ಉಂಟಾಗುವ ಮೈಲಿಗೆ,–ಹೊಲೆ.

*ಭಗವಂತ ಸೃಷ್ಟಿಸಿರುವ ಈ ಶರೀರವು ಸುಂದರ ರೂಪವನ್ನು ಹೊಂದಿದೆ. ಅದರಿಂದ ಹೊಮ್ಮುವ ನುಡಿಕಂಪು–ಮಧುರವಾಗಿದೆ. ಆದರೆ, ಈ ಭೂಲೋಕದ ಜನರ ಮನಸ್ಸು, ಮೈಲಿಗೆಯನ್ನು ನೆಪವಾಗಿಸಿಕೊಂಡು ಉಚ್ಚ ನೀಚ, ಮೇಲುಕೀಳು ಭಾವದಲ್ಲಿದೆ.

* * * * * *

### ಬಗೆಗೊಳು

**ಇದ್ದೊಂದು ಒಡವೆಯೆ ಇಬ್ಬಗೆ ಮೂವಗೆ।/ ಬಗೆಬಗೆ ಒಡಮೂಡಿ ಬಗೆಗೊಳಲು॥(11–1,2)**

: ಮನಸ್ಸನ್ನು ಸೆಳೆ; –ಆಕರ್ಷಿಸು.

*ಒಂದೇ ತತ್ತ್ವವು ಹಲವು ಆಕಾರಗಳನ್ನು ಪಡೆದುಕೊಂಡು ಆಕರ್ಷಿಸಿ ಲೋಕದಲ್ಲಿ ವೈವಿಧ್ಯ ಉಂಟುಮಾಡುತ್ತದೆ. ಈ ಸಮಸ್ತ ವೈವಿಧ್ಯದ ಹಿಂದೆ ಹಲವಲ್ಲದ ಒಂದೇ ತತ್ತ್ವ ನೆಲೆಸಿದೆ ಎಂದು ಇಲ್ಲಿ ರಮಣರು ನುಡಿಯುತ್ತಿರುವರು.

* * * * * *

**ಒಳಹುರುಳು**

**ತನ್ನ ತಾ ತಿಳಿಯದ ಆ ಜ್ಞಾನ ಅಜ್ಞಾನ/ ಒಳಹುರುಳ ತಿಳುವಳಿಕೆ ಎಂತಾದೀತು? (13-1, 2)**

: ಒಳಗಿನ ತಿರುಳು,-ಮರ್ಮ.

* ರಮಣರು ಸಾಧಕನು ತನ್ನನ್ನು ತಾನು ತಿಳಿದಾಗ ಮಾತ್ರ ಒಳಹುರುಳ/ ಒಳಗಿನ ತಿರುಳು ಅರ್ಥಾತ್ ಅಧ್ಯಾತ್ಮದ ಮರ್ಮ ತಿಳಿಯಲು ಸಾಧ್ಯ ಎಂದು ಸ್ಪಷ್ಟ ಪಡಿಸಿದ್ದಾರೆ.

* * * * * *

**ಒಳಬಟ್ಟೆ**

**ಅರಿವಿಗು ಮರೆವಿಗು ಇರವೆ ಆಧಾರವು। ಆಧಾರ ಒಳಬಟ್ಟೆ ಮುಟ್ಟುವದು (13-3, 4)**

: 1. ಒಳಗಿನ ದಾರಿ.

2. (ಆಲಂ)ಆತ್ಮಜ್ಞಾನದ ಮಾರ್ಗವನ್ನು ಆಲಂಕಾರಿಕವಾಗಿ ಒಳಬಟ್ಟೆ ಎಂದು ಕರೆದಿದ್ದಾರೆ. ಈ ಜಗತ್ತಿನಲ್ಲಿ ಉಸಿರಾಡುತ್ತ ಬದುಕುತ್ತಲೇ ಈ ಒಡಲ ಆಧಾರದಿಂದ ತನ್ನ ಗುರಿಯಾದ ಅನಂತ ಶಕ್ತನ ಅರಿವಿನತ್ತ ಸಾಗುವುದನ್ನು ಸಾಧಿಸಬೇಕು.

* * * * * *

**ಹೊತ್ತು, ಗೊತ್ತು**

**ನಾವಿರಲು ಹೊಳೆವುದು ಹೊತ್ತು ಗೊತ್ತಿನಗತ್ತು(18-1)**

: ವೇಳೆ ಮತ್ತು ಸ್ಥಳ.

: ಅನುಸರಣೆ; ಹೊಂದಿಕೆ.

*ಕಾಲ-ದೇಶಗಳನ್ನು ಇಲ್ಲಿ ಹೊತ್ತು-ಗೊತ್ತು ಎನ್ನಲಾಗಿದೆ. ಕಾಲ-ದೇಶವೆಂಬುದು ಕೇವಲ ಭ್ರಮೆಯಾಗಿದೆ, ಅದೊಂದು ಮನೋಸೃಷ್ಟಿಯಾಗಿದೆ. ಜ್ಞಾನಿಯಾದವನು ಕಾಲ-ದೇಶಗಳಲ್ಲಿ ಜೀವಿಸುವುದಿಲ್ಲ ಎಂಬುದು ಅದ್ವೈತಸಿದ್ಧಾಂತದ ನಿಲುವಾಗಿದೆ. ನಾನೆಂಬ

ಭಾವವಿರುವಷ್ಟೂ ಕಾಲ, ಕಾಲ-ದೇಶದ ಉಪಾಧಿ ಇರುತ್ತದೆ ಎಂಬುದು ಅದ್ವೈತದ ಉಪದೇಶ.

* * * * * *

## ಬಗೆ, ಒಳಮೊಗ

**ಬಗೆಯೊಳಗೆ ಬೆಳಕಿತ್ತು ನಿಜವಲ್ಲಿ ಬೆಳಗುವದು/ ನಿಜವರಿತು ಬಗೆಯಲ್ಲಿ ಮೂಡುತಿದೆ॥/ ಬಗೆಯೆ ಒಳಮೊಗವಾಗಿ ನಿಜ ಬೆರೆಯಲೆಂಬಾಗ/ ಬೇರೆ ಇಲ್ಲವು ತಾನೆ ನಿಜವಲ್ಲದೆ.(24-1, 2, 3, 4)**

:ಮನಸ್ಸು; ಚಿತ್ತ.

:ತನ್ನ ಒಳಗೆ ನೋಡಿಕೊಳ್ಳುವ ಸ್ಥಿತಿ; ಅಂತರ್ಮುಖ.

*ರಮಣರ ನೋಟದಲ್ಲಿಯೆ ಬೆಳಕಿತ್ತು. ಅದು ಬೆಳಕಿನಲ್ಲಿ ಬೆಳಗುವ ಚಿತ್ತ. ಸತ್ಯದ ಪ್ರಕಾಶ. ಅಧ್ಯಾತ್ಮದ ತೇಜ.

ನಿಜದಲ್ಲಿ ಒಂದಾಗುವುದೇ ಭಗವಂತನನ್ನು ಕಾಣುವುದು. ಆ ನಡೆಯಲ್ಲಿ ಒಳಮೊಗ-ಅಂತರ್ಮುಖಿಯಾಗಿದ್ದರೆ-ನಿಜದ ಉಸಿರಾಟದಲ್ಲಿ ತಾನಿರುವಾಗ ಭಗವಂತ ಬೇರೆಯಾಗಿ ಉಳಿಯುವುದಿಲ್ಲ, ನಮ್ಮಲ್ಲಿ ಒಂದಾಗಿರುತ್ತಾನೆ.

***

"ಮೈಯ ಉರಿಗೆ ಬಗೆ ಉಗಿಯು ಹೊತ್ತಿ ನಿಟ್ಟುಸಿರಿನೊಡನೆ ಏರಿ" (ಕನ್ನಡ ಮೇಘಧೂತ) ಎಂದು ಬೇಂದ್ರೆ ಅವರು ವಿರಹ ತಾಪವನ್ನು ಬಣ್ಣಿಸುವಾಗ 'ಬಗೆ' ಪದವನ್ನು ಮನಸ್ಸು, ಚಿತ್ತ ಎಂಬ ಅರ್ಥದಲ್ಲಿ ಬಳಸಿದ್ದಾರೆ.

"ಬಗೆ-ಪರಿಭಾವೇ, ಚಿತ್ತೇ ಚ"(ಶಬ್ದಮಣಿ ದರ್ಪಣದ ಧಾತು ಪಾಠ)

**ಅರಿವಿನಾಳದೊಳಿರುವ ಅಣಿಮುತ್ತುಗಳನೆತ್ತಿ/ ಪವಣಿಸುವ ಜಾಣು ಬಗೆಗೆಂದು ಬಹದೊ? (ಉಯ್ಯಾಲೆ:ರಸಿಕ)**

* * * * * *

## ಬಗೆಗೇಡು, ಹತಮತಿ

**'ನಾ ಬಲ್ಲೆ' 'ಗೊತ್ತಿಲ್ಲ' ಎಂಬ ವಾದದ ಹಾದಿ/ ಬಗೆಗೇಡು ನಗೆಗೇಡು ಹತಮತಿಯು. (35-1, 2)**

: ದಾರಿತಪ್ಪಿಸುವಂತಹದು; ಮಾರ್ಗಕೆಡಿಸುವಂತಹದು.

: ಬುದ್ಧಿಯನ್ನು ಕಳೆದುಕೊಂಡವನು; ಬುದ್ಧಿಗೇಡಿ.

*ಜೀವನದಲ್ಲಿ ವಾದ ವ್ಯರ್ಥ. ಅದು ಬಗೆಗೇಡು/ ದಾರಿತಪ್ಪಿಸುವಂತಹದು, ನಗೆಗೇಡು, ಮತ್ತು ಹತಮತಿ/ ಬುದ್ಧಿಗೇಡಿತನದು ಎಂಬುದು ರಮಣರ ಮೌನಸಂದೇಶ.

* * * * * *

**ಕಟ್ಟುಪಡೆ**

**ಕಟ್ಟುಪಡೆದವಗುಂಟು ಬಿಚ್ಚಿಕೊಳ್ಳುವ ಚಿಂತೆ. (41–1)**

: ಬಂಧನಕ್ಕೆ ಒಳಗಾಗು; ಹಿಡಿಯಲ್ಪಡು; ಸೆರೆಸಿಗು.

*ಕಟ್ಟುಪಡೆದವ/ ಬಂಧನಕ್ಕೆ ಒಳಗಾದವನಿಗೆ ಅದರಿಂದ ಬಿಚ್ಚಿಕೊಳ್ಳುವ ಚಿಂತೆ ಇರುತ್ತದೆ. ಆಸೆ ಆಮಿಷಗಳಿಂದ ಮುಕ್ತನಾಗಿ ಸೆರೆಸಿಕ್ಕದವನಿಗೆ 'ಕಟ್ಟಿದ್ದು ಬಿಚ್ಚಿದ್ದು ಬರಿ ಭ್ರಮೆ'.

* * * * * *

**ಮುಂಬೆಳಗು, ಏಕಸರ**

**ಮುಂಬೆಳಗ ಕಿರಣವೆ ಅರುಣಾಚಲದಿಂದಿಳಿದು। ರಮಣವಾಣಿಯಲೇಕಸರವಾಗಿದೆ॥ (43–1, 2)**

: ಮುಂಜಾನೆಯ ಮೊದಲ ಬೆಳಕು, ಉಷಃಕಾಲದ ಬೆಳಕು.

: ಒಂದೇ ಧ್ವನಿ; ಹೊಂದಿಕೊಂಡ ಧ್ವನಿ.

*ಉಷಃಕಾಲದ ಬೆಳಕಿನ ಕಿರಣವೆ ಅರುಣಾಚಲದಿಂದಿಳಿದು ರಮಣವಾಣಿಯಲ್ಲಿ ಏಕಸರ/ ಹೊಂದಿಕೊಂಡ ಧ್ವನಿಯಾಗಿದೆ. ಆ ವಾಣಿಯೆ ಬೆಳಕು, ಪ್ರೀತಿ, ಸತ್ಯ.

* * * * * *

**ಹಳವಾತು**

**ಹಳವಾತೆ ಹುಸಿತೊಳೆದು ಹೊಳೆಹೊಳೆದು ಹುತ್ತಿನ/ ಹೊಳೆ ಹರಿದು ಬಂದಂತೆ ಹೊಸದಾಗಿದೆ. (43–3, 4)**

: ಪ್ರಾಚೀನವಾದ ನುಡಿ; ವೇದ.

* * * * * *

**ಅರವು**

**ಅರವು ಮಾತಿನ ಅರಿವು ದೇವವಾಣಿಯ ಸ್ವರವು/ಕನ್ನಡದಲಿ ತಾನೆ ಕನ್ನಡಿಸಿದೆ (48–3, 4)**

*ರಮಣ ಮಹರ್ಷಿಗಳ ಚಿಂತನೆಯು ಅರವು ಮಾತಿನಲ್ಲಿರುವುದನ್ನು ಬೇಂದ್ರೆ ತಿಳಿಸಿ, ಆ ಅರಿವು ದೇವವಾಣಿಯ ಸ್ವರ ಎಂದು ಸ್ವೀಕರಿಸಿದ್ದಾರೆ. ಅರವು–ತಮಿಳು ಭಾಷೆ, ಅದು ಬೇಂದ್ರೆ ಅವರಿಂದ "ಕನ್ನಡದಲ್ಲಿ ತಾನೆ ಕನ್ನಡಿಸಿದೆ"–ಪ್ರತಿಫಲನಗೊಂಡಿದೆ.

---

# ಅಮೃತಾನುಭವ

**ಅಬುದ, ಬುದ್ಬುದ**

**ಅದೊ ಅಬುದ ಶಬುದ ಬುದ್ಬುದವು ಒಡೆದು ಹುಸಿಸದ್ದು ಹೊರಡಬಹುದು (6–2)**

: ಮೋಡ.

: ನೀರಿನ ಮೇಲಿನ ಗುಳ್ಳೆ; ಬೊಬ್ಬುಳಿ.

*ಮಾತೆಂಬ ಅಬುದ/ ಮೋಡವು ಶಬ್ದ ಮಾಡುತ್ತ ಬುದ್ಬುದ/ ನೀರಿನ ಮೇಲಿನ ಗುಳ್ಳೆಯಂತೆ ಒಡೆದು ಹುಸಿಸದ್ದು ಹೊರಡಬಹುದು. ಅದಕ್ಕಿಂತ ಮೌನ ಹೆಚ್ಚು ಮೌಲಿಕ.

* * * * * *

**ತೊಳಲು**

**ತಲೆಯಲ್ಲೆ ಹೂವು ಅರಳಿರಲು ಮುಡಿಸಿಕೊಳಲೇಕೆ ತಳಿರ ತೊಳಲು? (9–3)**

: ಚಿಗುರು; ತಳಿರು.(ತೊವಲ್=ಎಳೆದಳಿರು)

*ತೊಳಲು(ಅಮೃತಾನುಭವ): ತಲೆಯ ಹೂವು ಎಂಬುದು ಅರಿವಿಗೆ ಒಂದು ರೂಪಕವಾಗಿ ಬಳಸಲಾದ ಪದವಾಗಿದೆ. ಅರಿವನ್ನು ಹೊಂದಿದವನ ತಲೆಯಲ್ಲಿ ಹೂವು ಅರಳುತ್ತದೆ, ಅವನ ಸಹಸ್ರಾರ ಕಮಲ ಜಾಗೃತವಾಗುತ್ತದೆ ಎಂದು ಯೋಗಶಾಸ್ತ್ರಗಳು ಹೇಳುತ್ತವೆ. ಅರಿವು ನಮ್ಮ ಅಂತರಂಗದಲ್ಲೇ ನೆಲೆಸಿರುವಾಗ ಬಹಿರಂಗದ ತಳಿರ ತೊಳಲನ್ನು–ವ್ಯರ್ಥಜ್ಞಾನವನ್ನು ಮುಡಿಸಿಕೊಳ್ಳುವುದು ಏಕೆ ಎಂದು ಇಲ್ಲಿ ಕೇಳುತ್ತಿರುವರು.

* * * * * *

**ತಿರುಮುರುವು**

**ಕಣ್ಣು ಕಣ್ಣು ತಿರುಮುರುವು ನೋಟ ನೋಡುವನ ಗೊಂಬೆಯಹುದು. (11–1)**

: ಹಿಂದಿರುಗಿಸುವಿಕೆ

* 'ಕಣ್ಣು ಕಣ್ಣು ತಿರುಮುರುವು ನೋಟ ನೋಡುವನ ಗೊಂಬೆಯಹುದು'. ಜ್ಞಾನಿಯಾದವನ ಪಾಲಿಗೆ ನಾನು–ನೀನು ಎಂಬ ಭೇದ ದೃಷ್ಟಿ ಇರುವುದಿಲ್ಲ, ಅವನು ಎಲ್ಲವನ್ನೂ ತನ್ನಲ್ಲೇ ಮತ್ತು ಎಲ್ಲದರಲ್ಲೂ ತನ್ನನ್ನೇ ಕಾಣುವನು ಎಂಬ ನಂಬಿಕೆ ಇದೆ. ಹೀಗೆ, ಎದುರಿಗಿರುವವನು ನಿಜಕ್ಕೂ ಅನ್ಯನೋ ಅಥವಾ ನಾನೋ ಎಂಬ ಅದ್ವಯಸ್ಥಿತಿ ಜ್ಞಾನಿಯ ಸಾನ್ನಿಧ್ಯದಲ್ಲಿ ನಿರ್ಮಾಣವಾಗುತ್ತದೆ. ಒಬ್ಬ ಯಜಮಾನ ತನ್ನ ಗುಲಾಮನನ್ನು ಹೊಡೆಯುತ್ತಿದ್ದ ದೃಶ್ಯವನ್ನು ಕಂಡ ಶ್ರೀರಾಮಕೃಷ್ಣರು ಆ ದೃಶ್ಯದೊಂದಿಗೆ ಅದೆಷ್ಟು ತಾದಾತ್ಮ್ಯ ಭಾವ ಹೊಂದಿದ್ದರೆಂದರೆ ಅವನ ಬೆನ್ನ ಬಾಸುಂಡೆಗಳು ಶ್ರೀರಾಮಕೃಷ್ಣರ ಬೆನ್ನ ಮೇಲೂ ಮೂಡಿದ್ದವಂತೆ. ಇದೇ ತಾದಾತ್ಮ್ಯಭಾವವನ್ನು ಇಲ್ಲಿ ಬೇಂದ್ರೆ ತಿರುವುಮುರುವು ಎಂಬ ಮಾತಿನಿಂದ ವಿವರಿಸುತ್ತಿರುವರು.

* * * * * *

**ಓಜ**

**ರವಿಯ ಬತ್ತಿಯನು ಹೊತ್ತಿಸಿಹುದು ಬಾನಲ್ಲಿ ಈಶನೋಜ. (13–3)**

: ಕಾಂತಿ.

*ಈಶನೋಜ–ಈಶ್ವರನ ಕಾಂತಿಯು ಬಾನಿನಲ್ಲಿ ಸೂರ್ಯನೆಂಬ ಬತ್ತಿಯನ್ನು ಹೊತ್ತಿಸಿದೆ.

* * * * * *

**ನಿಟ್ಟು**

**ತಮ್ಮರಿವೆ ಗುರುವು ತಂತಮಗೆ ಎಂಬೆ, ಪರಮಾತ್ಮ ಎಲ್ಲ ನಿಟ್ಟು. (20–2)**

*ಪರಮಾತ್ಮನು ಎಲ್ಲರಿಗೂ ದಿಕ್ಕು, ದೆಸೆಯಾಗಿದ್ದಾನೆ; ಅವನೆ ಎಲ್ಲ ಕಡೆ ಇದ್ದಾನೆ ಎಂಬ ಅರ್ಥ 'ನಿಟ್ಟು'ವಿನದಾಗಿದೆ.

* * * * * *

**ಮುಚ್ಚು**

**ಮುಚ್ಚೇನು ಮತ್ತೆ ಬಿಚ್ಚೇನು ಇಲ್ಲಿ (21–1)**

: ಗುಟ್ಟು; ರಹಸ್ಯ.

*ಇಲ್ಲಿ ಮುಚ್ಚು-ಗುಟ್ಟು ಎಂಬುದು ಏನೂ ಇಲ್ಲ.

* * * * * *

**ಅಮೃತಾನುಭವ**

**ಅಮೃತಾನುಭವದಿ ಶ್ರೀಮಂತರಾಗಿ ಶ್ರೀಜ್ಞಾನದೇವನೆನುವ (22-3)**

: ಬ್ರಹ್ಮಾನಂದದ ಅನುಭವ

*ಶ್ರೀ ಜ್ಞಾನದೇವನು ಅಮೃತಾನುಭವ/ ಬ್ರಹ್ಮಾನಂದದ ಅನುಭವದಲ್ಲಿ ಶ್ರೀಮಂತರಾಗಿ ಎಂದು ಹೇಳುವನು.

* * * * * *

**ಗೊನೆಫಲ**

**ಬೇರಿಗಿವನು, ಗೊನೆಫಲದಲಿವನು, ನಡುಮೈಯೊಳಿವನೆ ಇವನು/ ಮೂಲ ಮಧ್ಯ ಮತ್ತಗ್ರದಲಿ ಒಂದಾದ ಮೂರ್ತಶಿವನು (2-1, 2)**

: ಕೊನೆಯಲ್ಲಿರುವ ಫಲ; ತುದಿಯಲ್ಲಿರುವ ಹಣ್ಣು.

*ಭಗವಂತನೇ ಸರ್ವವ್ಯಾಪಿಯಾಗಿರುವನು. ಏಕಮೇವಾದ್ವಯಂ ಸರ್ವಂ ನೇಹ ನಾನಾಸ್ತಿ ಕಿಂಚನ(ಈ ಎಲ್ಲವೂ ಒಂದೇ ಆಗಿದೆ, ಅದ್ವಯವಾಗಿದೆ, ಇಲ್ಲಿ ಹಲವಿಲ್ಲ) ಎಂಬ ಸಾಲನ್ನೇ ಇಲ್ಲಿ ಬೇಂದ್ರೆ ಬೇರು, ಗೊನೆಫಲ, ನಡುಮೈ ಎಲ್ಲವೂ ಇವನೇ ಆಗಿರುವನು ಎಂದು ಕಾವ್ಯ ರೂಪದಲ್ಲಿ ಸೂಚಿಸಿದ್ದಾರೆ.

---

## ಆನಂದಲಹರಿ

**ಮುಮ್ಮುರಿ**

**ತ್ರಿಪುರ ಮುರಿದವನಪ್ಪಿಗೆಗೆ ಮುಳ್ಳಿಡುವ ಮುಮ್ಮುರಿ ಕೊರಳಿದೆ (2-1)**

: ಮೂರುಗೆರೆ,-ರೇಖೆ.

*ಮುಪ್ಪಟ್ಟು ಎಂಬರ್ಥವಿದೆ, ಶಿವನ ತ್ರಿಪುರದಹನ ಪ್ರಸಂಗಕ್ಕೆ ಸಂಬಂಧಿಸಿದ ಸಾಲುಗಳಿವು.

* * * * * *

**ಬಸಿಗಲ್ಲು, ತಣಿಸು**

**ಬೆಳುದಿಂಗಳಲ್ಲಿ ಬಸಿಗಲ್ಲ ನೀಡಿ ತಿಂಗಳನು ತಣಿಸಬಹುದೇ? (4–2)**

: ಚಂದ್ರನ ಪ್ರಕಾಶದಿಂದ ಕರಗಿ ನೀರು ಬಿಡುವುದೆಂದು ನಂಬಲಾದ ಕಲ್ಲು; ಚಂದ್ರಕಾಂತ ಶಿಲೆ.

: ತಣ್ಣಗೆಮಾಡು; ತಂಪುಗೊಳಿಸು; ಆರಿಸು.

*ಬೆಳುದಿಂಗಳಿನಲ್ಲಿ ಬಸಿಗಲ್ಲು/ ಚಂದ್ರಕಾಂತ ಶಿಲೆಯನ್ನು ಕೊಟ್ಟು ಚಂದ್ರನನ್ನು ತಂಪುಗೊಳಿಸಲು ಸಾಧ್ಯವೇ?

* * * * * *

**ಹಳಕು, ಹವಳ**

**ನಾಲಗೆಯ ತುದಿಯೆ ನೆಲೆಯಾದ ಅಚ್ಚ ಬಿಳಿ ಹಳಕಿನಂಗದವಳ/ ಸರಸ್ವತಿಯ ಮೈ ಮೂರ್ತಮಾಣಿಕವು ಅಹುದು ಕೆಂಡ ಹವಳ! (25–3, 4)**

: ಸ್ವಚ್ಛ ಹಾಗೂ ಪಾರದರ್ಶಕವಾದ ನೀರ್ಗಲ್ಲಿನಂತಹ ಒಂದು ಬಗೆಯ ಖನಿಜಶಿಲೆ; ಸ್ಫಟಿಕ.

: ಒಡವೆಗಳಿಗೂ ಅಲಂಕಾರ ವಸ್ತುಗಳಿಗೂ ಉಪಯೋಗಿಸುವ ಒಂದು ಬಗೆಯ ಕೆಂಪುಬಣ್ಣದ ಮಣಿ; ನವರತ್ನಗಳಲ್ಲಿ ಒಂದು; ವಿದ್ರುಮ ಎಂದು ಇದನ್ನು ಕರೆಯುತ್ತಾರೆ.

* * * * * *

**ಕವಚಿ**

**ರಣದಲ್ಲಿ ಜಯಿಸಿ ದೈತ್ಯರನು ಕವಚಿಗಳು ಶಿರಸ್ತ್ರಾಣ ತೆಗೆದು (26–1)**

: ಕವಚವನ್ನು ತೊಟ್ಟುಕೊಂಡುವನು; ಕವಚಧಾರಿ.

*ಕವಚಧಾರಿಗಳನ್ನು ಕವಿ 'ಕವಚಿಗಳು'ಎಂದು ಕರೆದಿದ್ದಾರೆ. ಆ ಕವಚಿಗಳು ಯುದ್ಧದಲ್ಲಿ ರಾಕ್ಷಸರನ್ನು ಗೆದ್ದು ಶಿರಸ್ತ್ರಾಣ ತೆಗೆದಿಟ್ಟರು.

---

## ಓಮರ

**ಬೇರಾಗ, ಮರೆಸಿ, ಮರೆವೆ**

**ನಿನ್ನ ದನಿಯ ಸವಿರಾಗದಲ್ಲಿ ಬೇರಾಗ ಮರೆಸಿ ಮರೆವೆ (2–4)**

: ಸರಿಯಾದ ರಾಗವಲ್ಲದುದು; ಅಪಸ್ವರದಿಂದ ಕೂಡಿದುದು.

: ನೆನಪಿನಿಂದ ಹೋಗಲಾಡಿಸು, ವಿಸ್ಮೃತಿಯುಂಟಾಗುವಂತೆ ಮಾಡು, ಮರೆಯುವಂತೆ ಮಾಡು, ಮೈಮರೆಯುವಂತೆ ಮಾಡು, ಪರವಶಗೊಳಿಸು, ಎಚ್ಚರ ತಪ್ಪಿಸು.

*ಉಮರ್‌ಖಯ್ಯಾಮನು ಹಾಡುವಾಗ ಅವನ ದನಿಯ ಸವಿರಾಗದಲ್ಲಿ ಬೇರಾಗ ಅಪಸ್ವರದಿಂದ ಕೂಡಿದುದು ಇದ್ದರೂ ಮರೆಯುವಂತೆ ಮಾಡಿ ಮೈ ಮರೆಸುವನು.

* * * * * *

**ಬದನೆ**

**ತೀಡಿದರು ಅದನೆ ಅದನೆ/ ಯಾರಾರೊ ಎಂದು ರಸವಾರಿಹೋಗಿ ಪುಸ್ತಕವೆ ಆಯ್ತು ಬದನೆ (3–3, 4)**

: (ಆಲಂ)ಹುರುಳಿಲ್ಲದುದು; ಪ್ರಯೋಜನಕ್ಕೆ ಬಾರದುದು.

* ಪಂಪನು ರಚಿಸಿದ ಭಾರತದ ಕಥೆಯನ್ನೇ ಹಲವಾರು ಕವಿಗಳು ಹಲವು ರೀತಿಗಳಲ್ಲಿ ಮಾರ್ಪಡಿಸಿ ಬರೆದಾಗ ಅದು ರಸಹೋಗಿ ಹುರುಳಿಲ್ಲದಂತಾಗಿದೆ. ಎಂದು ಹೇಳಲು 'ಆಯ್ತು ಬದನೆ' ಎಂದು ಆಲಂಕಾರಿಕವಾಗಿ ಬೇಂದ್ರೆ ಹೇಳಿದ್ದಾರೆ.

* * * * * *

**ಚಷಕ**

**ಸಖಿ ಬಾರೆ, ತಾರೆ ರಸ ಚಷಕ (14–1)**

: ಮದ್ಯವನ್ನು ಕುಡಿಯುವ ಬಟ್ಟಲು; ಪಾನಪಾತ್ರೆ.

---

## ಬೆಳಗು ಜಾವ

**ನಿಶೆ, ಎಳನಗೆ**

**ನಿಶೆಯಿಳಿದ ಉಷೆಯ ಎಳನಗೆಯ ಬಗೆಗೆ ಸೋತಿರಲು ಜಗವು ಸವಿಗೆ (2–1)**

: (ಮಾದಕ ದ್ರವ್ಯಗಳ ಸೇವನೆಯಿಂದಾಗುವ) ಸೊಕ್ಕು; ಮತ್ತು ಅಮಲು.

: ಮೃದುವಾದ ನಗೆ; ಕಿರುನಗೆ.

* 'ಬೆಳಗುಜಾವ' ಕವನ ಉಮರ್ ಖಯ್ಯಾಮನ ಉಕ್ತಿಗಳ ಪ್ರೇರಣೆಯಿಂದ ರಚಿತವಾಗಿದೆ. ಅವನು ಸದಾ ಮದಿರೆಯ ನಿಶೆಯಲ್ಲಿರುತ್ತಿದ್ದ. ಹಾಗಾಗಿ ರಾತ್ರಿಯ ನಿಶೆಯಲ್ಲಿದ್ದ

ಉಷೆಯು ಅದನ್ನು ಇಲ್ಲವಾಗಿಸಿಕೊಂಡು ಎಳನಗೆ/ ಮೃದುವಾದ ನಗೆಬೀರಿ ಬೆಳಕು ಸೂಸುತ್ತಿದ್ದಾಳೆ. ಆ ಸವಿಗೆ ಜಗವು ಸೋತಿದೆ ಎಂಬ ಭಾವ ಲಹರಿ ಇಲ್ಲುಂಟು.

* * * * * *

### ತುಂಬಿಬಾಳು

**ಈ ತುಂಬಿಬಾಳು ತುಂಬಿರುವ ತನಕ ತುಂತುಂಬಿ ಕುಡಿಯಬೇಕು. (2–4)**

: ತುಂಬಿಯಂತಿರುವ ಜೀವನ; ದುಂಬಿಯಂತೆ ಅನೇಕ ಕಡೆಗಳಿಂದ ರಸವನ್ನು ಸಂಗ್ರಹಿಸುವುದು.

*ದುಂಬಿಯಂತೆ ಅನೇಕ ಕಡೆಗಳಿಂದ ರಸವನ್ನು ಸಂಗ್ರಹಿಸುವುದು ತುಂಬಿಬಾಳು. ನಮ್ಮದು ತುಂಬಿಯಂತಿರುವ ಜೀವನ. ಇದು ತುಂಬಿ ಉಸಿರಿನಿಂದ ಭರ್ತಿಯಾಗಿ ಜೀವಂತ ಇರುವ ತನಕ ಈ ನೆಲದ ಸವಿಯನ್ನು ಹರ್ಷದಿಂದ ತುಂತುಂಬಿ ಪೂರ್ಣವಾಗಿ ಸವಿಯಬೇಕು. ತುಂಬಿ ಎಂಬ ಪದವು ಕ್ರಿಯಾಪದವಾಗಿಯೂ ನಾಮಪದವಾಗಿಯೂ ಇಲ್ಲಿ ಬಳಕೆಗೊಂಡಿದೆ.

* * * * * *

### ಹೊಗರು

**ಬಾನ್ ಹೊಗರಲುಂಟು ಮರ ಚಿಗುರಲುಂಟು, ಬರಲುಂಟೆ ಸುಗ್ಗಿ ಮತ್ತೆ? (4–1)**

: ಪ್ರಕಾಶಿಸು; ಕಾಂತಿಯನ್ನು ಬೀರು; ಹೊಳೆ.

* ಪ್ರಕೃತಿ ಸದಾ ಬದಲಾವಣೆಗೆ ಒಳಗಾಗುತ್ತ ಹೊಸತನದಲ್ಲಿ ಮರುಹುಟ್ಟು ಪಡೆಯುತ್ತದೆ. ಆದರೆ, ಮನುಷ್ಯನಿಗೆ ಒಂದೆ ಬಾಲ್ಯ, ಒಂದೆ ಹರೆಯ. ಆ ಹರೆತನವೇ ಅವನ ಸುಗ್ಗಿ, ವಸಂತ ಕಾಲ. ಅದು ಅವನಿಗೆ ಮತ್ತೆ ಬರದು ಎಂಬುದನ್ನು ಈ ಮೇಲಿನ ನುಡಿ ವ್ಯಂಗ್ಯಾತ್ಮಕವಾಗಿ ತಿಳಿಸಿದೆ.

ಆಕಾಶ ಮತ್ತೆ ಮತ್ತೆ ಪ್ರಕಾಶಿಸುತ್ತದೆ. ಮರ ಮತ್ತೆ ಮತ್ತೆ ಚಿಗುರುತ್ತದೆ. ಆದರೆ ಮನುಷ್ಯನಿಗೆ ಯೌವನ ಮರಳಿ ಬರಲುಂಟೆ?

---

## ಏಳಣ್ಣ

### ಹಾರ

**ಹಾರದಲ್ಲಿ ವ್ಯಾಪಾರವಿಲ್ಲ, ಅರಿ ಜೀವ ಜೀವಬಂಧು (4–3)**

*ಬೇಂದ್ರೆ ಅವರ ಚಿಂತನಶೀಲ ನುಡಿಯಿದು. ಜನ ಬಳಕೆಯಲ್ಲಿರುವ 'ಹಾರ'–ಬಲಿ; ಆಹಾರ; ಮುತ್ತು ರತ್ನಗಳ ಮಾಲೆ; ಹಾನಿ ಮುಂತಾದ ಅರ್ಥಗಳು ಇಲ್ಲಿ ಅವರು ಹೇಳುವ ಭಾವದಿಂದ ಬಹುದೂರ. ಹಾಗಾಗಿ, ಈ ಮಾತಿನ ಸಂದರ್ಭವನ್ನು ತಿಳಿದು 'ಹಾರ' ಪದಕ್ಕೆ ಸಮರ್ಪಣೆ, ನಿವೇದನೆ ಎಂಬ ಅರ್ಥವಿರಬಹುದೆಂಬುದು ನನ್ನ ಅಭಿಪ್ರಾಯ.

---

## ಈಶ

### ಕುರುಡುಗತ್ತಲು, ಕಪ್ಪುಗಾಡು.

**ಕುರುಡುಗತ್ತಲುಳ್ಳ ನಾಡು/ ಸೂರ್ಯನಿರದ ಕಪ್ಪು ಗಾಡು (3–1, 2)**

: ಕುರುಡುಗೊಳಿಸುವ ಕತ್ತಲೆ; ಕಗ್ಗತ್ತಲೆ; ಗಾಢಾಂಧಕಾರ.

: ಕಪ್ಪು ಮುಸುಕಿದ ಕಾಡು; ಕತ್ತಲೆ ತುಂಬಿದ ಅಡವಿ.

*ಸತ್ಯ ಧರ್ಮ, ನ್ಯಾಯ ನೀತಿ ಇರದ ಹಿಂಸೆ ಕ್ರೌರ್ಯದ ನಾಡನ್ನು ಪ್ರತಿಮಾತ್ಮಕವಾಗಿ ಕುರುಡುಗತ್ತಲು ಗಾಢಾಂಧಕಾರದ ನಾಡು ಎಂದು ಕವಿ ಕರೆದಿದ್ದಾರೆ. ಅಂತಹ ನಾಡು ಸೂರ್ಯನಿರದ ಕಪ್ಪುಗಾಡು/ಕತ್ತಲೆ ತುಂಬಿದ ಅಡವಿ.

---

## ಕಾಳಿದಾಸ

### ಚಳಮಿಳನೆ

**ಬಾನ್‌ಮೀನಂಗಳಲ್ಲು ಚಳಮಿಳನಾಗಿ (1–7)**

: ಚಕಚಕನೆ; ಮಿರಮಿರನೆ.

*ಆಕಾಶ ಮತ್ತು ಮೀನುಗಳಲ್ಲಿ ಚಕಚಕನೆ ಹೊಳೆಯುವ ಈ ಜಗದ ಚೈತನ್ಯವು ಒಂದೇ ಆಗಿದೆ.

---

## ಸಾಕ್ಷಿ

### ಪರಿವೆ

ಅರಿವೆನು ಎನ್ನುವ ಮನದ ಪರಿವೆಯೇ/ ಅಹುದೊ ಅಲ್ಲವೋ ಎನಿಸುತಿದೆ. (1–3, 4)

: ಎಚ್ಚರ; ಗಮನ; ಲಕ್ಷ್ಯ, ನಿಗಾ.

*ಮನದಿಂದ ಸತ್ಯವನ್ನು ಅರಿಯಲಾಗದು ಅದು ಸದಾ ತಲ್ಲಣಿಸುತ್ತಿರುತ್ತದೆ. ಯಾವ ತಲ್ಲಣವನ್ನೂ ಅರಿಯದ ಸಾಕ್ಷಿಪ್ರಜ್ಞೆ ಮಾತ್ರ ಅರಿವನ್ನು ಯಥಾರ್ಥವಾಗಿ ಅರಿಯಬಲ್ಲದು ಎಂಬ ಇಂಗಿತ ಈ ಸಾಲುಗಳಲ್ಲಿದೆ.

* * *

**ಪಾದಪ**

**ಹೊಮ್ಮರ, ಹೆಮ್ಮರ ಹಬ್ಬಿದೆ ಬಯಲಲಿ/ ಪಾದಪ ಅಡಿಯಲಿ ಬಾಗುತಿದೆ(3–3,4)**

: ಬೇರಿನಿಂದ ನೀರು ಕುಡಿಯುವುದು; ಮರ, ಗಿಡ ಮುಂತಾದವು.

---

## ವಿಶ್ವ ಒಂದು ಅಶ್ವ

**ಕುರಿ**

**ಕುರಿಯಬೇಡ ಎಡೆತಡೇ–ನಡೇ ನಡೇ ನಡೇ. (1–7)**

*ಮೇಲಿನ ನುಡಿಯಲ್ಲಿ ಎಡೆತಡೆಯನ್ನು ಗಮನಿಸಬೇಡ, ಲಕ್ಷ್ಯಕೊಡಬೇಡ ಎಂಬ ಅರ್ಥವನ್ನು 'ಕುರಿ'ಧ್ವನಿಸುತ್ತದೆ.

***

ಬೇಂದ್ರೆ ಅವರು ಶ್ರವಣ ಪ್ರತಿಭೆಯ ಕವಿ. ಅವರು ಶ್ರಾವಣ ಮಾಸವನ್ನು ಮೆಚ್ಚಿದ ಶ್ರಾವಣ ಕವಿಯೇ ಹೌದು! ಅವರಿಗೆ 'ಕಿವಿಯೇ ಕವಿ'. ಕವಿ ಎಲ್ಲವನ್ನೂ ಮುಕ್ತವಾಗಿ ಕೇಳಿಸಿಕೊಳ್ಳಬೇಕು; ಅನಂತರ, ಆಲೋಚನಾಪರನಾಗಿ ತನ್ನ ಕಾವ್ಯದ ಉದ್ದೇಶವನ್ನು ಸ್ಪಷ್ಟಪಡಿಸಿಕೊಂಡು ಅದನ್ನು ಸಹೃದಯರಿಗೆ ತಲುಪಿಸುವ ಗುರಿ ಹೊಂದಿರಬೇಕು ಎಂಬುದು ಅವರ ಚಿಂತನೆ. ಆಲೋಚನೆ, ಉದ್ದೇಶ, ಗುರಿಯನ್ನು 'ಕುರಿ' ಎಂಬ ಪದದಲ್ಲಿ ಹೀಗೆ ಹಿಡಿದಿಟ್ಟಿದ್ದಾರೆ. ಇದು ಕ್ರಿಯಾಪದ.

***

**ಕಿವಿ ಬೇಕು ಕುರಿ ಬೇಕು ಎಂದ ಕವಿಯು. (ತಾ ಲೆಕ್ಕಣಿಕೆ ತಾ ದೌತಿ–ಸತ್ತ ಸವಿಯು)**

**ಅರಿಯ ದೀವಿಗೆಯ ಕುರಿ, ಅತ್ತ ಕಡೆ ನೀನು ಹರಿ/ ಅವನಂತರಂಗ ತೆರೆಯೈ(ಸಂಚಯ: ಗೆಳೆಯನಿಗೆ ಹರಕೆ)**

ಬೇಂದ್ರೆ ಅವರಿಗೆ ಅರಿವು ಎಂಬುದು ದೈವ. ಅರಿವು ದೀವಿಗೆಯ ಕಡೆ ಲಕ್ಷಕೊಡು, ಗಮನಿಸು ಎಂಬ ಅರ್ಥದಲ್ಲಿ 'ಕುರಿ' ಪದ ಬಳಕೆಯಾಗಿದೆ.

***

**ಗುರಿಯ ತುಂಬಿ/ ಕುರಿಯ ಕಣ್ಣು/ ಧಾತು ಮಾತು ಕೂಡಿ (ನಾಕುತಂತಿ)**

*ಲಕ್ಷ್ಯ ಕೊಟ್ಟು ಕುರಿತಾದುದರ– ಕುರಿತ ಕಣ್ಣಿಗೆ ಗುರಿ ಇಟ್ಟಾಗ 'ಧಾತು'ವಾದ ಮೂಲವಸ್ತು ಪರಮಾತ್ಮ ಮತ್ತು 'ಮಾತು' ಆದ ಜೀವಾತ್ಮ ಎರಡೂ ಕೂಡಿ ಒಂದಾದವು ಎಂಬ ಭಾವವೂ ಇಲ್ಲುಂಟು.

---

## ಕನ್ನಡದ ಕಮಳ

### ನಿಮಿರು

**ಬಾನ್ಮೈಯೆ ಕದಿರ ಗರಿಗರಿ ಬಿಚ್ಚಿ ನಿಮಿರಿರಲು/ ಚೈತ್ಯದಾಕಾಶದಲಿ ಏರುತಿಹುದು. (4–1, 2)**

: ಹರಡು; ವ್ಯಾಪಿಸು; ಪಸರಿಸು; ವಿಸ್ತಾರವಾಗು.

*ಬೇಂದ್ರೆಯವರು ಬಾನಿನ ಮೈಯಕಿರಣವು ತನ್ನ ಕಾಂತಿಯ ಗರಿಗರಿ ಬಿಚ್ಚಿ ಹರಡಿಕೊಳ್ಳುತ್ತ, ವಿಸ್ತಾರವಾಗುವುದನ್ನು 'ನಿಮಿರು' ಪದದಲ್ಲಿ ಹಿಡಿದಿಟ್ಟಿದ್ದಾರೆ.

---

## ಬೆಳ್ಳಿ ಮೂಡಲಗಾಲ

### ಹಿಂಚೆಮುಂಚೆ

**ಇರುಳಿನಂಚಿಗೆ ಹಿಂಚೆಮುಂಚೆಗೆ/ ನಲಿವ ಬೆಳ್ಳಿಯ ಬೆಳ್ಳಿಯೇ (1–1, 2)**

: ಅನಂತರ ಮತ್ತು ಮೊದಲು.

*ಮೂಡಲಗಾಲದಲ್ಲಿ ಕಾಣುವ ಶುಕ್ರ ನಕ್ಷತ್ರ ಬೆಳ್ಳಿ. ಅದನ್ನು ಕವಿ ಇರುಳಿನಂಚಿಗೆ ಹಿಂಚೆಮುಂಚೆಗೆ/ ಅನಂತರ ಮತ್ತು ಮೊದಲು ನಲಿವ ಬೆಳ್ಳಿಯ ಬೆಳ್ಳಿ ಎಂದು ಚಿತ್ರಿಸಿದ್ದಾರೆ.

---

## ಈ ಸಲದ ಸುಗ್ಗಿ

### ಹುಲಗಿಲು

**ಹುಲಗಿಲು ಗಾನನಿಮಗ್ನಧ್ಯಾನದ ಹೊಸದಾಸಿ (5–2)**

*ಸುಗ್ಗಿಯ ಕಾಲದಲ್ಲಿ ಹುಲಗಿಲು/ ಹೊಂಗೆಮರ ಹೂಗಳನ್ನು ಬಿಟ್ಟು ತನ್ನ ಕಂಪಿಂದ ದುಂಬಿಗಳನ್ನು ಕರೆಯುತ್ತದೆ. ಅದನ್ನು ಬೇಂದ್ರೆಯವರು 'ಹೊಂಗೆ ಹೂವ ತೊಂಗಲಲ್ಲಿ। ಭೃಂಗದ ಸಂಗೀತ ಕೇಲಿ। ಮತ್ತೆ ಕೇಳಿ ಬರುತಿದೆ' ಎಂದು 'ಯುಗಾದಿ' ಕವನದಲ್ಲಿ ಚಿತ್ರಿಸಿದ್ದಾರೆ. ಆ ಮರವು ಹೊಂಗೆ ಮೊಗ್ಗುಗಳನ್ನು ಉದುರಿಸಿ ಹೂ ಹಾಸಿರುತ್ತದೆ. ಆ ಹೊಂಗೆಯನ್ನು ಕವಿ 'ಗಾನನಿಮಗ್ನ ಧ್ಯಾನದ ಹೊಸದಾಸಿ' ಎಂದು ಕರೆದಿದ್ದಾರೆ.

* * * * * *

### ಮುಂಗುಡಿ ಬಿಡು

**ಮುಂಗಾರಿಯ ಗುಡುಗಿಗೆ ಸಂಪಿಗೆ ಮುಂಗುಡಿ ಬಿಟ್ಟು (6–1)**

: ಮುಂದಕ್ಕೆ ಕುಡಿಬಿಡು; ಚಿಗುರು; ಕೊನರು.

*ವಸಂತಋತುವಿನ ಕಾಲದಲ್ಲಿ ಬೀಳುವ ವರ್ಷದ ಮೊದಲ ಮಳೆ ಮುಂಗಾರು. ಅದರ ಗುಡುಗಿಗೆ ಸಂಪಿಗೆ ಮುಂಗುಡಿ ಬಿಟ್ಟಿದೆ. ಮುಂದಕ್ಕೆ ಕುಡಿ ಬಿಟ್ಟಿದೆ. ಪಾರಿಜಾತವು ಹಸುರಂಗಿಯ ತೊಟ್ಟು ಸಂತೋಷದಿಂದ ಕಂಗೊಳಿಸುತ್ತಿದೆ.

---

## ಹರಗೋಣ ಬಾ ಹೊಲ

### ಕಸುವು

**ನಂಬಿಗೀಲೇ ದುಡಿತಾನ ಬಸವಣ್ಣಾ/ ನಂಬಿಗ್ಯಾಗೈತಿ ಅವನ ಕಸುವಣ್ಣಾ/ ಕಸುವೀಲೆ ಬೆಳೆಸೋಣ ಎತ್ತಗೋಳು/ ಎತ್ತಲ್ಲ ಅವು ನಮ್ಮ ಮುತ್ತುಗೋಳು! (2–1, 2, 3, 4)**

: ಬಲ; ಕೆಚ್ಚು; ಸತ್ತ್ವ

*ರೈತರ ಜೊತೆಗಾರ ಬಸವಣ್ಣ ದುಡಿಯುವುದರಿಂದ ರೈತರಿಗೆ ಸಮೃದ್ಧ ಬೆಳೆ. ರೈತನು ಎತ್ತುಗಳನ್ನು ಸತ್ವವುಳ್ಳ ಆಹಾರ ಕೊಟ್ಟು ಬೆಳೆಸುತ್ತಾನೆ. ಅವುಗಳು ತಮ್ಮ ಕಸುವಿಗೆ ತಕ್ಕಂತೆ ದುಡಿಯುತ್ತವೆ. ನಂಬಿಕೆ, ಕಸುವು, ದುಡಿಮೆ ಒಂದಾದ ಜೀವಿಗಳು ಬಸವಣ್ಣಗಳು. ಅವು ಅವನಿಗೆ ಬರೀ ಎತ್ತುಗಳಲ್ಲ ಮುತ್ತುಗಳು.

---

## ಟೊಂಕದ ಮೇಲೆ ಕೈ ಇಟ್ಟುಗೊಂಡು

**ಒಂಕಿ**

**ಒಂಕೀತೋಳ ತೋರಸತಾಳ/ ಸುಂಕದ ಕಟ್ಟ್ಯವಗ (1–3, 4)**

: ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ; ತೋಳುಬಂದಿ; ಕೇಯೂರ.

*ತೋಳಿನಲ್ಲಿ ಧರಿಸುವ ತೋಳುಬಂದಿಯನ್ನು ಸುಂಕದಕಟ್ಟೆಯವನಿಗೆ ತೋರಿಸುವ ಚಾಲಕಿತನದಲ್ಲಿ ಆ 'ವಂಕಿ'ಯ ಇನ್ನೊಂದು ಅರ್ಥ 'ಮೀನು ಹಿಡಿಯುವ ಗಾಳ'ದ ಅರ್ಥವೂ ಇದೆ. ಅದು ರಸಿಕಭಾವಾಭಿವ್ಯಕ್ತಿಯಲ್ಲಿ ಅವನನ್ನು ತನ್ನತ್ತ ಸೆಳೆದು, ಸುಂಕ ತಪ್ಪಿಸಿಕೊಳ್ಳುವ ಚಾಕಚಕ್ಯತೆ.

---

## ಬಿಡಿಮುತ್ತು

**ಕಾಂಬೊಲ**

**ಒಳಹೊರಗು ಕಾಂಬೊಲದಿ, ಮುತ್ತ ಬಿತ್ತು. (3–6, 7)**

: ಕಾಣುವಷ್ಟು ಪ್ರದೇಶ.

*ವ್ಯಕ್ತಿಯು ತನ್ನ ಆಂತರ್ಯ ಮತ್ತು ಬಾಹ್ಯದ ನಡೆನುಡಿಯಲ್ಲಿ ತನಗೆ ಕಾಣುವಷ್ಟು ಪ್ರದೇಶದಲ್ಲಿ 'ಎದೆಯ ಹದ, ಹೃದಯ ಮುದ'ದ ಮುತ್ತು ಬಿತ್ತಬೇಕು.

---

## ಮೋಡದ ಮಳಿಗೆಗೆ ರವಿ ಕಾದಿದ್ದ

**ಹಿಂಜು**

**ಮೋಡವ ಹಿಂಜಿ ಜನರಿಗೆ ಅಂಜಿ/ ರವಿ ಅಡಗಿದನಂದು. (4–3, 4)**

: ಬೇರೆ ಬೇರೆ ಮಾಡು; ವಿಭಾಗಿಸು.

*ಕವಿ ಮತ್ತು ರವಿಯ ನಡುವಿನ ಒಂದು ವಿನೋದ ಲಹರಿ ಈ ಕವನ. ಜನರಿಗೆ ಅಂಜಿದ ರವಿ ಮೋಡವನ್ನು ಹಿಂಜಿ ಅಡಗಿಕೊಂಡ.

*　　*　　*

**ಒತ್ತಕರಡು**

**ಒತ್ತಕರಡಿನೊಲು ಬಾನದ್ದಿತ್ತು/ ಮಶಿಗೊಣ್ಣೆಯವೊಲು ವನವೆದ್ದಿತ್ತು (5–1, 2)**

: ಹಸಿಮಸಿಯನ್ನು ಹೀರುವ ಕಾಗದ, ಒತ್ತು ಕಾಗದ.

*ಮಳೆಬಿದ್ದಾಗಿನ ಬಾನು ಮತ್ತು ವನದ ಚಿತ್ರಣವನ್ನು ಹಸಿಮಸಿಯನ್ನು ಹೀರುವ ಒತ್ತುಕಾಗದ ಮತ್ತು ಮಶಿಗೊಣ್ಣೆ ಪ್ರತಿಮೆಗಳಲ್ಲಿ ನೀಡಿದ್ದಾರೆ.

---

## ಇದು ವಾರಪತ್ರಿಕೆ

**ಉಲಕೋಚಿ**

**ಹೊರಟತ್ತ ಉಲಕೋಚಿ/ ಆಯುಷ್ಯ ಯಂತ್ರ ತಿರುತಿರುಗಿ ಹಾಗೇ ತಿರುಗಿ/ ನೀರಸವು (8, 9, 10)**

* 'ಇದು ವಾರಪತ್ರಿಕೆ' ಕವನದಲ್ಲಿ ಅದರ ಸಂಪಾದಕನನ್ನು ಬೇಂದ್ರೆ ಅವರು 'ಉಲಕೋಚಿ' ಎಂದು ವಿಡಂಬಿಸಿದ್ದಾರೆ.

ಉಲಕೋಚಿ/ಉಡಾಳ; ಕಿಡಿಗೇಡಿ; ತುಂಟ.

---

## ಈಚಲ ಮರದಮ್ಮ

**ದನ ಬದುಕು**

**ಹೆಣವಾದೆವು ಹೆಂಡದಲ್ಲಿ/ ಉರುವಲು ಬಾಳ್ಕೊಂಡದಲ್ಲಿ/ ದನ ಬದುಕಿದು ತಂಡದಲ್ಲಿ (2–1, 2, 3)**

: ಪಶುವಿನಂತಹ ಜೀವನ; ಕೀಳುಮಟ್ಟದ ಜೀವನ.

*   *   *

**ಮಲಕು**

ಭ

: ಗಂಟು; ಕುಣಿಕೆ.

*ಕುಡಿತದಿಂದಾಗುವ ಘೋರ ಪರಿಣಾಮವನ್ನು ಈ ಕವನದಲ್ಲಿ ನೀಡುತ್ತ ಬೇಂದ್ರೆಯವರು ಈ ಚಿತ್ರ ನೋಡಲಾರೆವು ಎಂದು ನೊಂದು ನುಡಿದಿದ್ದಾರೆ. ಈಚಲ ಮರದಮ್ಮ ನಿನ್ನ ಸೂತ್ರ ಈ ಹೆಂಡದ ಕುಣಿಕೆ ಬಿಚ್ಚಲಿ. ನೀನು ನೀಡುವ ಬೆಲ್ಲ ಸವಿಯುವಂತಾಗಲಿ ಎಂದು ಪ್ರಾರ್ಥಿಸಿದ್ದಾರೆ.

---

## ಜೀವಾಳದ ಆಸೆ

**ಯಾ**

**ಯಾ ಆಸೆ ಜೀವಾಳದಿ ಉಳಿದು (1–1)**

: ಎಂತಹುದು, ಎಲ್ಲಿಯದು, ಏನು ಎಂಬರ್ಥದಲ್ಲಿ ಬಳಕೆಯಾಗುವ ಪ್ರಶ್ನಾರ್ಥಕ ಸರ್ವನಾಮ.

---

## ಮೂಷಿಕಾ ಸ್ವಯಂವರ

**ಗುದುಮುರಿಗೆ**

**ಧೂಳಿ ಎಬ್ಬಿಸಿದರಾಯಿತು ಏನು?/ ಒಪ್ಪಿದೆ, ಗುದುಮುರಿಗೆಗೆ ಮುದಿಮರ ಬಿದ್ದಾವು/ ಗುಡ್ಡ ಇರಲಿ, ಮೊರಡಿ ಕೂಡ ಅಲುಗದೆ ಇದ್ದಾವು (19, 20, 21)**

*ಮೂಷಿಕಾ ಸ್ವಯಂವರ ರೂಪಕ ಕಥೆ. ಮೂಷಿಕೆಯು ಗುಡ್ಡ, ಗಾಳಿ, ರವಿ, ಮೋಡವನ್ನು ಇಷ್ಟ ಪಡದೆ ಹೆಗ್ಗಣ ಪತಿಗೆ ಮಾರುಹೋಗುವಳು. ಗಾಳಿ ತಾನು ಎಷ್ಟು ಬಲಿಷ್ಠ ತನ್ನಿಂದಲೇ ಈ ಜಗದ ಉಸಿರಾಟ ಎಂದು ಹೇಳುವನು. ಅವನು ತಾನು ತಿಳಿದಷ್ಟು ಬಲಶಾಲಿ ಅಲ್ಲ ಎಂದು ಮೂಷಿಕೆ ಕೊಡುವ ಕಾರಣ ಮೇಲಿನ ನುಡಿ.

ಗುದುಮುರಿಗೆ, ಗುದ್ದು ಮುರಿಗೆಯು ಗುದ್ದಾಟ; ಹೊಡೆದಾಟಕ್ಕೆ ಜನಪದರು ಬಳಸುವ ಪದ. ಮೊರಡಿಯಂತೆ ಮಡ್ಡಿ ಪದವನ್ನು ಜನಸಾಮಾನ್ಯರು ದಿನ್ನೆ, ತೆವರುಗಳಿಗೆ ಬಳಸುತ್ತಾರೆ. ಧಾರವಾಡದ ಮಾಳಮಡ್ಡಿ ಪ್ರದೇಶ ಒಂದು ದಿನ್ನೆಯ ಮೇಲಿದೆ.

*   *   *   *   *   *

**ಮಟಮಾಯ**

**ಮಳೆಯಿರದಿರೆ ಎಲ್ಲವು ಮಟಮಾಯ (35)**

: ಇದ್ದಕ್ಕಿದ್ದಂತೆ ಪೂರ್ತಿಯಾಗಿ ಅದೃಶ್ಯವಾಗುವಿಕೆ, ಕಾಣದಂತಾಗುವುದು.

---

## ಮುಕ್ತಕಂಠ

**ಮುಕ್ತಕಂಠ, ಹೊಂದು, ಬಂಧ**

**ಗತಿಯು ತನ್ನ ಛಂದದಲ್ಲಿ/ ಭಾವ ತನ್ನ ಬಂಧದಲ್ಲಿ/ ಹರಿವೆನಿಲ್ಲೆ ಹೊಂದದಲ್ಲಿ/ ಬಲ್ಲೆ ಎಲ್ಲು ಒಂದರಲ್ಲಿ (3–1, 2, 3, 4)**

: ಸಂಕೋಚವಿಲ್ಲದೆ ನೇರವಾಗಿ ಹೇಳುವಮಾತು; ಬಿಚ್ಚುಮಾತು.

: ಹೊಂದಿಕೊಳ್ಳು; ಸರಿಯಾಗು; ಜೋಡಿಯಾಗು.

: (ಕಾವ್ಯ ಮೊದಲಾದುವುಗಳ) ರಚನೆ.

*ಮುಕ್ತಕಂಠವು ಬೇಂದ್ರೆಯವರ ಆತ್ಮನಿರ್ವಚನವಾಗಿದೆ. ಇಲ್ಲಿ ಕವಿಯು ತನ್ನನ್ನು ಕುರಿತು ತಾನೇ ನಿರ್ವಚಿಸಿಕೊಳ್ಳುತ್ತಿದ್ದಾನೆ.

---

# ೧೦. ಸೂರ್ಯಪಾನ (೧೯೫೬)

## ಸೂರ್ಯಪಾನ

### ಬಾನಗಣ್ಣು

**ಬಾನಗಣ್ಣಿನ ಬಿಸಿಯ ಹಸಿಯಾರದಲೆ ಕುಡಿದು (1–3)**

: ಸೂರ್ಯ

*ಸೂರ್ಯಕಾಂತಿಯ ಹೂವನ್ನು 'ಸೂರ್ಯಪಾನ'ವೆಂದು ಕರೆಯುವುದು ಉಂಟಷ್ಟೆ. ಅದು ಸೂರ್ಯೋದಯವಾದಾಗ ಸೂರ್ಯನ ಕಡೆ ತಿರುಗಿ, ಸೂರ್ಯ ತಿರುಗಿದತ್ತ ತಾನೂ ತಿರುಗುತ್ತದೆ. ಸೂರ್ಯನು ಜ್ಞಾನಕ್ಕೆ ಪ್ರತೀಕ. 'ಸೂರ್ಯಪಾನ'ಕವನಕ್ಕೆ 'ಸೂರ್ಯಪಾನ ವಿಜ್ಞಾನದ ಜ್ಯೋತಿಗಾಗಿ ತಪಿಸುವ ಹೃದಯ ಕಮಲವನ್ನು ಪ್ರತಿಮಿಸುವುದು' ಎಂಬ ಭಾವ ಸಂದರ್ಭ ಹೊಂದಿದೆ.

ಅದು ಬಾನಗಣ್ಣಿನ/ ಸೂರ್ಯನ ಬಿಸಿಯನ್ನು ಹಸಿಯಾರದೆ ಕುಡಿಯುತ್ತದೆ ಎಂದು ಜ್ಞಾನದ ದಾಹವನ್ನು ರೂಪಕಾತ್ಮಕವಾಗಿ ತಿಳಿಸಿದ್ದಾರೆ.

---

## ಸಪ್ತಕಲಾ

### ಟಂಕಾ

**ಟಂಕಾ$_s$ ಆತಂಕಾ ಸರಿಸಿ$_s$(2–10)**

: ಕಲ್ಲು ಕುಟಿಗನ ಒಂದು ಉಪಕರಣ: ಕಲ್ಲುಳಿ; ಚಾಣ.

*ಶಿಲ್ಪಿಯು ತನ್ನ ಹೃದಯಾಂತರ್ಯದ ಉತ್ಸಾಹದಲ್ಲಿ ಉಲಿತಕ್ಕೆ ಒಳಗಾದುದು "ಹೃದಯಾಂತಃರ್ಕೇಕಾ". ಆಗ ಅವನೊಳಗಿನ "ಭಾವ$_s$ ನೋವ$_s$ ತಾಳದೇ। /ಅದೃಶ್ಯ ಹೊಳೆದೂ। ಕಾಣ್ಕೆ$_s$ ರೂಪ$_s$ ತಳೆದು। /ಸ್ವಾತಂತ್ರ್ಯ ಪಡೆಯುವದಣ್ಣೆ" ಎಂಬ ಶಿಲ್ಪ ಅವನ ಕಾಣ್ಕೆಯಾದ ಬಗೆಯನ್ನು ಬೇಂದ್ರೆ ಇಲ್ಲಿ ಕಂಡರಿಸಿದ್ದಾರೆ. ಶಿಲ್ಪಿಯು ತನ್ನ ಒಳಗಿನ ಭಾವದಲ್ಲಿರುವ ಮೂರ್ತಿಯನ್ನು ರೂಪಿಸಲು ಕಲ್ಲಿನಲ್ಲಿರುವ ಅನಾವಶ್ಯಕ ಆತಂಕವನ್ನು ಸರಿಸುವುದು ಟಂಕದಿಂದ ಮಾತ್ರ.

* * * * * *

## ಒಳತಂತ್ರ

**ಕರ್ಮಾ$_s$ ಅಕರ್ಮದ ತಂತ್ರ$_s$ /ಫಲವಿಫಲತೆಯೊಳತಂತ್ರ$_s$ /ಈಶ್ವರೀ ಯಂತ್ರ$_s$ (4–1, 2, 3, 4)**

: ಒಳಗಿನ ಗುಟ್ಟು, –ರಹಸ್ಯ.

*ಸಂಗೀತ, ಚಿತ್ರ, ನೃತ್ಯ, ನಾಟಕ, ಜೀವನ, ವಾಸ್ತು ಮತ್ತು ಸಾಹಿತ್ಯ ಇವು ಸಪ್ತ ಕಲೆಗಳಾಗಿವೆ. ತತ್ವಶಾಸ್ತ್ರದಲ್ಲಿ ಕಲೆ ಎಂಬ ಪದಕ್ಕೆ 'ಶರೀರಧಾರಣೆಗೆ ಅಗತ್ಯವಾದ ಅಂಶ (ಬಂಧನ)' ಎಂಬ ಅರ್ಥವೂ ಇದೆ. ಕರ್ಮ ಕ್ಷಯವಾದ ಮೇಲೆ ಕಲೆ (ಬಂಧನ) ಇಲ್ಲವಾಗುವ ಕಾರಣ ಮುಕ್ತಾತ್ಮನನ್ನು ಶೈವದರ್ಶನಗಳು 'ಅಕಲ' ಎಂದೂ ಕರೆಯುವುದುಂಟು.

ಬೇಂದ್ರೆಯವರ 'ಸಪ್ತಕಲಾ' ಪದ್ಯದಲ್ಲಿ ಏಳು ಪದ್ಯಗಳಿವೆ. ಮೇಲೆ ಹೇಳಿದ ಸಂಗೀತ, ಚಿತ್ರ ಮುಂತಾದ ಒಂದೊಂದು ಕಲಾ ಭೇದಕ್ಕೆ ಒಂದೊಂದು ಪದ್ಯ ಮೀಸಲಿದೆ. ಪ್ರತಿ ಪದ್ಯದಲ್ಲೂ 'ಸ್ವಾತಂತ್ರ್ಯ ಪಡೆಯುವುದಣ್ಣಾ' ಎಂಬ ಸಾಲು ಪುನರಾವರ್ತನೆಯಾಗಿರುವುದು ಗಮನಿಸತಕ್ಕದ್ದು. ಅಂದರೆ, ಕಲೆಯಿಂದ ಬಿಡುಗಡೆ ಪಡೆಯುವುದು ಇಲ್ಲಿ ಕವಿಯ ಆಶಯವಾಗಿದೆ.

ಒಳತಂತ್ರ: ಸದರಿ ಸಾಲನ್ನು 'ಫಲ–ವಿಫಲತೆಯ ಒಳತಂತ್ರ' ಎಂದೂ ಹಾಗೆಯೇ 'ಫಲ–ವಿಫಲತೆಯೊಳ್+ಅತಂತ್ರ' ಎಂದೂ ಅನ್ವಯಿಸಬಹುದು. ತಂತ್ರವೆಂದರೆ ನೂಲು, ಸೂತ್ರ ಎಂಬ ಅರ್ಥವಿದೆ. ಕರ್ಮಕ್ಕೆ ಫಲವುಂಟು. ಹಾಗೆಯೇ ಅಕರ್ಮಕ್ಕೂ ಫಲವುಂಟು. ಆದರೆ ವ್ಯಕ್ತಿ ಫಲದ ಬೆನ್ನೇರಿದಾಗ ಕರ್ಮದ ಫಲ/ವಿಫಲ ಇತ್ಯಾದಿಗಳ ಕುರಿತು ಯೋಚಿಸಿದಾಗ ಸೂತ್ರ ಛಿದ್ರವಾಗುತ್ತದೆ, ತಂತ್ರ ಅತಂತ್ರವಾಗುತ್ತದೆ. ಕರ್ಮ ವಿಪಾಕವೆಂಬುದು ಸ್ವಇಚ್ಛೆಯಿಂದ ಮಾಡುವ ಯಾದೃಚ್ಛಿಕ ಕೆಲಸವಲ್ಲ, ಅದು 'ಈಶ್ವರೀಯಂತ್ರ'ವಾಗಿದೆ ಎಂದು ಇಲ್ಲಿ ಕವಿ ಹೇಳುತ್ತಿರುವರು. ಇದು ನಾಟಕ ಕಲೆಗೆ ಮೀಸಲಾದ ಸಾಲುಗಳಾಗಿವೆ: ಈ ಮೂರು ಸಾಲುಗಳನ್ನು ಜಗತ್ತಿನ ಯಾವುದೇ ಶ್ರೇಷ್ಠ ನಾಟಕಕ್ಕೆ ಅನ್ವಯಿಸಿದರೂ ಇದರ ಅರ್ಥ ಸ್ಫುಟವಾಗುತ್ತದೆ.

* * *

## ಕಲಲ

**ಬೀಜ$_s$ ಬಿಂದೂದ್ಭೂತ/ ಕಲಲಾ ಜಾತಾ (5–10, 11)**

: ರೇತಸ್ಸು ಸ್ತ್ರೀಯರ ಗರ್ಭಕೋಶವನ್ನು ಪ್ರವೇಶಿಸಿದ ಮೊದಲನೆಯ ರಾತ್ರಿಯಲ್ಲಿ ಉಂಟಾಗುವ ವಿಕಾರ; ಗರ್ಭಾಣು.

*ಬೇಂದ್ರೆ ಅವರು ಮಾತಾಪಿತೃಗಳಿಂದ ಉಂಟಾದ ದೇಹಸೃಷ್ಟಿಯನ್ನು 'ಕಲಲಾ ಜಾತ' ಎಂದು ಕರೆದಿದ್ದಾರೆ.

***

ಮಾತೆಯ ರಜಸ್ಸು ಪಿತೃವೀರ್ಯಗಳೊಂದಾಗಿ ಸಾತಿಶಯದಿಂ ಪ್ರಥಮ ದಿನದಲ್ಲಿ ಕಲಲಮಹುದು (ಚೆನ್ನಬಸವ ಪುರಾಣ: 58–5)

* * * * * *

**ನವೋಢಾ**

**ಸಕಲ್ಾ s ಸಿದ್ಧಾ s ಸರಸ್ವತಿ ವೀಣಾಪಾಣಿ /ಪಶ್ಯಂತಿಯ ವಾಣಿ /ಛಂದಾರೂಢಾ ನವೋಢಾ (7–1, 2, 3)**

: ನವವಧು

*ಸಪ್ತಕಲೆಗಳಲ್ಲಿ ಒಂದಾದ ಸಾಹಿತ್ಯಕ್ಕೆ ಮೀಸಲಾದ ಪದ್ಯವಿದು. ತತ್ತ್ವಶಾಸ್ತ್ರದಲ್ಲಿ ಜ್ಞಾನದ ಅಭಿವ್ಯಕ್ತಿಯನ್ನು ಪರಾ, ಪಶ್ಯಂತಿ, ಮಧ್ಯಮ, ವೈಖರಿ ಎಂದು ನಾಲ್ಕು ಹಂತಗಳಲ್ಲಿ ವಿಂಗಡಿಸಲಾಗಿದೆ. ಈ ಪದ್ಯದಲ್ಲಿ ಬರುವ ಪಶ್ಯಂತಿ ಎಂಬ ಪದಕ್ಕೆ 'ಕಾಣ್ಕೆ' ಎಂಬ ಅರ್ಥವಿದೆ. ಕಾಣ್ಕೆಯ ನುಡಿಯೇ ಸಾಹಿತ್ಯ. ಆ ನುಡಿಗಳು ಒಬ್ಬ ಶ್ರೇಷ್ಠಕವಿಯಲ್ಲಿ ಅತ್ಯಂತ ಹದುಳವಾಗಿ, ಹೊಸದಾಗಿ ಛಂದಾರೂಢವಾಗಿ ಮೂಡುತ್ತದೆ. ಕಾವ್ಯಾನುಭವದ ಸೊಬಗನ್ನು ಬಸವಣ್ಣ ತನ್ನ ಒಂದು ವಚನದಲ್ಲಿ 'ಕನ್ನೆಯ ಸ್ನೇಹದಂತೆ' ಎಂದು ವರ್ಣಿಸಿರುವನು. ಇಲ್ಲಿ ಬೇಂದ್ರೆ ಸಹ ಬಸವಣ್ಣನ ಮಾತುಗಳನ್ನೇ ಅನುರಣಿಸುತ್ತಿರುವರು. ರಸಿಕನಾದವನು ಪ್ರೌಢೆಯೂ, ಕಾಮಕಲಾ ಪ್ರವೀಣೆಯೂ ಆದ ಹೆಣ್ಣಿಗಿಂತ ಮುಗ್ಧೆಯಾದ ಕನ್ನೆಯ ಅಥವಾ ನವೋಢೆಯ ಸ್ನೇಹವನ್ನು ಬಯಸುವನು.

---

# ವಿಶ್ವರೂಪ ದರ್ಶನ

**ಕಣಸು**

**ಕನಸೋ ಕಣಸೋ ನನಸೋ ಹರಿ ಹರಿ ಹರಿ ಕೃಷ್ಣಾ–/ ಸತ್ತಿಲ್ಲವು ಇನ್ನೂ ಈ ನರನಾ ನರಮನಸು (3–3, 4)**

: 1. ನೋಟ; ಕಾಣ್ಕೆ

2. ಅತಿ ಮಾನುಷ ದರ್ಶನ

ವಿಶ್ವರೂಪವನ್ನು ಕಂಡು ವಿಹ್ವಲಗೊಳ್ಳುವ ಅರ್ಜುನನ ನುಡಿಗಳನ್ನು ಈ ಪದ್ಯದಲ್ಲಿ ವಿವರಿಸಲಾಗಿದೆ. "ಕನಸೋ ಕಣಸೋ ನನಸೋ ಹರಿ ಹರಿ ಹರಿ ಕೃಷ್ಣಾ.." ಕಣಸು ಎಂಬ ಪದಕ್ಕೆ ಕಾಣ್ಕೆ, ಅರಿವು ಮುಂತಾದ ಅರ್ಥಗಳಿವೆ. ಕಾಣ್ಕೆಯೆಂಬುದು ವಾಸ್ತವದಿಂದ ಲಭಿಸುತ್ತದೆ ಹಾಗೆಯೇ ಕೆಲವು ಕಾಣ್ಕೆಗಳು ಕನಸಿನಿಂದಲೂ ಸಿದ್ಧಿಸಬಹುದು. ಇಲ್ಲಿ ಅರ್ಜುನನಂತಹ ಒಂದು ಪಾತ್ರ "ವಿಶ್ವರೂಪ ಎಂಬುದು ಕನಸೇ ಇರಲಿ, ನನಸೇ

ಇರಲಿ ಅಥವಾ ಕಣಸೇ ಇರಲಿ, ಅದು ನನಗೆ ಬೇಡ ಅದನ್ನು ನಾಶ ಮಾಡು" ಎಂದು ಪ್ರಾರ್ಥಿಸುತ್ತಿರುವನು. 'ಹರಿ' ಎಂಬ ಪದಕ್ಕೆ 'ನಾಶ ಮಾಡು' ಎಂಬರ್ಥವೂ ಉಂಟು. ಕೋಶಗಳು 'ಹರಿ' ಎಂಬುದಕ್ಕೆ ಇಪ್ಪತ್ತಕ್ಕೂ ಹೆಚ್ಚು ಅರ್ಥಗಳನ್ನು ಹೇಳುತ್ತವೆ.

* * * * * *

**ಕಾಳ**

**ಖೂಳರು, ಮೂಳರು, ಕಾಳರು, ಇದು ನಾಚಿಕೆಗೇಡು (5–3)**

*ಖೂಳರು=ದುಷ್ಟ, ಕ್ರೂರಿ(ಕೌರವರು?), ಮೂಳರು=ಮೂರ್ಖರು, ದಡ್ಡರು(ಪಾಂಡವರು?), ಕಾಳರು=ಕಾಲವಶರಾದವರು, ಸತ್ಯವರು(ಅಭಿಮನ್ಯು, ಘಟೋತ್ಕಚ ಮುಂತಾದ ಅಮಾಯಕರು). "ದುಷ್ಟರು, ಶಿಷ್ಟರು ಅಮಾಯಕರು ಎಲ್ಲರೂ ಅನ್ಯಾಯವಾಗಿ ಸಾಯುತ್ತಿರುವರು, ವಿಶ್ವರೂಪದೊಳಗೆ ವಿಲೀನರಾಗುತ್ತಿರುವರು" ಎಂಬ ಇಂಗಿತವಿದೆ.

* * * * * *

**ಮಾಟಕ**

**ನೋಟಕ, ಬೂಟಕ, ಮಾಟಕ ಏನೇನೋ ಮಾಡಿ/ ಸೂತ್ರವ ಹಿಡಿದೂ ರಂಗವ ತುಂಬಿದೆ ಹೇ ಧೀರಾ!(7–3,4)**

*ನೋಟಕ=ನೋಡುವವನು, ಮಾಟಕ=ಮಾಡುವವನು, ಬೂಟಕ=ನೋಡುವಂತೆ/ ಮಾಡುವಂತೆ ನಟಿಸುವವನು.

ಸಾಮಾನ್ಯವಾಗಿ ನಾಟಕದ ಸೂತ್ರಧಾರ ತೆರೆಮರೆಯಲ್ಲಿ ನಿಂತಿರುತ್ತಾನೆ. ಆದರೆ, ಜಗನ್ನಾಟಕದಲ್ಲಿ ಸೂತ್ರಧಾರನಾದವನು ತೆರೆಯ ಮರೆಯಲ್ಲೂ, ಎದುರಲ್ಲೂ, ಅಣುರೇಣು ತೃಣಕಾಷ್ಠದಲ್ಲೂ ಇರುತ್ತಾನೆ. ಉದ್ಯೋಗಪರ್ವದಲ್ಲಿ ಸಂಧಾನಕ್ಕೆಂದು ಶ್ರೀಕೃಷ್ಣನು ಹಸ್ತಿನಾಪುರಕ್ಕೆ ಬಂದಾಗ ದುರ್ಯೋಧನನು ಅವನನ್ನು ಬಂಧಿಸಲು ಆಜ್ಞಾಪಿಸುವನು, ಸೈನಿಕರು ಅವನನ್ನು ಸೆರೆಹಿಡಿಯಲು ಮುಂದಾದಾಗ ಆ ಸೈನಿಕರ ಕಣ್ಣಿಗೆ ಸಭೆಯಲ್ಲಿ ನೆರೆದಿದ್ದ ಎಲ್ಲರೂ ಶ್ರೀಕೃಷ್ಣನ ರೂಪದಲ್ಲೇ ಕಾಣಿಸುವರು. ಯಾರು ಅಸಲಿ, ಯಾರು ಅಲ್ಲ ಎಂಬುದು ತಿಳಿಯದೆ ಸೆರೆ ಹಿಡಿಯಲು ಬಂದಿದ್ದ ಸೈನಿಕರು ದಿಕ್ಕೆಟ್ಟು ನಿಲ್ಲುತ್ತಾರೆ. ಈ ಹಿನ್ನೆಲೆಯಲ್ಲೂ 'ಸೂತ್ರವ ಹಿಡಿದು ರಂಗವ ತುಂಬಿದೆ ಹೇ ಧೀರಾ'ಎಂಬ ಸಾಲನ್ನು ಅರ್ಥಮಾಡಿಕೊಳ್ಳಬಹುದು.

* * * * * *

## ಮೀಸಲು ಮುರಿ, ಒಕ್ಕಲುಗೊಳ್ಳು

**ಹಿಮ ಶಿಶಿರದ ಸ್ಮೃತಿ ಕಳಚಲಿ, ಇದೊ ಇಗೊ ಈ ಠಾವು/ ತುಂಬಲಿ ತುಳುಕದೆ ಸೂಸಲಿ, ಮೀಸಲು ಮುರಿಯದೆಯೆ/ ಮಿಕ್ಕಲಿ, ಒಕ್ಕಲುಗೊಳ್ಳಲಿ ಆ ನಾವೂ ನೀವೂ.(9–2, 3, 4)**

: ಉಪಯೋಗಗೊಳ್ಳು; ಉಪಭೋಗಗೊಳ್ಳು.

: ಒಕ್ಕಲಿರು; ವಾಸಿಸು; ನೆಲೆಸಿರು.

*ಇದು ಕವಿಯ ಹಾರೈಕೆಯ ಸಾಲುಗಳಾಗಿವೆ. ಮೀಸಲು ಎಂಬ ಪದಕ್ಕೆ 'ದೈವೇಚ್ಛೆ', 'ಪಾವಿತ್ರ್ಯ' ಎಂಬ ಅರ್ಥವಿದೆ. ಕೆಲವು ಸಲ ನಮ್ಮ ಹಾರೈಕೆ ಭಗವಂತನ ಇಚ್ಛೆಗೆ ವಿರುದ್ಧವಾಗಬಹುದು, ಅವನ ಪಾವಿತ್ರ್ಯಕ್ಕೆ ಭಂಗವೂ ತರಬಹುದು. ಉದಾಹರಣೆಗೆ, ಹಿಟ್ಲರ್‌ನಂತಹವನ ತಾಯಿ ಅವನಿಗೆ ಶುಭವನ್ನು, ದೀರ್ಘಾಯುಷ್ಯವನ್ನು ಹಾರೈಸಿದರೆ ಆ ಹಾರೈಕೆ ದೈವೇಚ್ಛೆಗೆ ವಿರುದ್ಧವಾಗಬಹುದು. ಆದ್ದರಿಂದ ಇಲ್ಲಿ ಕವಿ ನನ್ನ ಹಾರೈಕೆಯೇನೋ ಇದ್ದೇ ಇದೆ, ಆದರೆ ಆ ಹಾರೈಕೆಯಿಂದ ನಿನ್ನ ಪಾವಿತ್ರ್ಯಕ್ಕೆ ಭಂಗವಾಗಬಾರದು, ಮೀಸಲು ಮುರಿಯಬಾರದು ಎನ್ನುತ್ತಿರಬಹುದು.

---

# ಕೇಳಿರೊಂದು ಸೋಜಿಗ

## ನಾರು

**ದುರ್ವಾಸನೆ ನಾರದಲ್ಲಿ /ಅಹಂಕಾರ ಸೇರದಲ್ಲಿ (53, 54)**

: ದುರ್ವಾಸನೆಯನ್ನು ಬೀರು; ದುರ್ಗಂಧವನ್ನುಂಟು ಮಾಡು.(ನೀರಾದರು ನಾರಬಾರದು: ಗಾದೆ)

*ದುರ್ವಾಸನೆಯನ್ನು ಬೀರದ, ಅಹಂಕಾರ ಸೇರದ ಎಡೆಯಲ್ಲಿ ದೇವನುಂಟು.

* * * * * *

## ಎತ್ತರ

**ಬೇಕು ಜೀವದುತ್ತರ. /ಜೀವನದೊಳು ಎತ್ತರ. (74, 75)**

: ಉನ್ನತಿ; ಏಳಿಗೆ.

*ಗಾಂಧಿಯಂತೆ ಪ್ರೇಮ ಮಾರ್ಗದಲ್ಲಿ ನಡೆಯುತ್ತೇವೆಂದು ನಮ್ಮ ಜೀವ ಉತ್ತರಿಸುತ್ತ, ಜೀವನದಲ್ಲಿ ಏಳಿಗೆ ಹೊಂದಬೇಕು.

---

# ಅಮರ ಮರಣ

**ಚಾರಿ, ಪದಚಾರಿ**

**ನೆಲವ ಮುದ್ದಿಡುವ ಚಾರಿಯಲ್ಲಿ ಪದಚಾರಿಯಾಗಿ ಹೊರಟ (7–1)**

: ಗತಿ; ಗಮನ; ಚಲನೆ.

: ಹೆಜ್ಜೆಯಗತಿ, ಗಮನ; ನಡೆ.

*ಮಹಾತ್ಮಾಗಾಂಧಿಯವರು ಭಾರತೀಯರಲ್ಲಿ ಶಾಂತಿ, ಪ್ರೀತಿ, ಸತ್ಯ, ಭ್ರಾತೃತ್ವ ಸರ್ವೋದಯ ಸಾರಲು ಸಾವಿರಾರು ಮೈಲಿ ನಡೆದಾಡಿದರು. ಅದು ಅವರಿಗೆ ಈ ನೆಲದ ಜನರನ್ನು ಪ್ರೀತಿಸುವ ನಡೆಯಾಗಿತ್ತು. ಬೇಂದ್ರೆಯವರು ಅದನ್ನು 'ನೆಲಮುದ್ದಿಡುವ ಚಾರಿ' ಎಂದು ರೂಪಕಾತ್ಮಕವಾಗಿ ಬಣ್ಣಿಸಿದ್ದಾರೆ.

* * * * * *

**ರೌದ್ರಿಕ**

**ಮೃತ್ಯುಧ್ಯಾನವನೆ ಮಾಡುತಿರುವ ರೌದ್ರಿಕರ ನಡುವೆ ನಡೆದೆ (10–3)**

: ಭಯವನ್ನುಂಟುಮಾಡುವವನು.

*ಹಿಂದೂ–ಮುಸ್ಲಿಂ ದ್ವೇಷ ದಳ್ಳುರಿಯನ್ನು ಆರಿಸಲು ಪಾದಯಾತ್ರೆ ಕೈಗೊಂಡು ಮೃತ್ಯುಧ್ಯಾನ ಮಾಡುವ ಭಯವನ್ನುಂಟು ಮಾಡುವರ ನಡುವೆಯೆ ಶಾಂತಿ ಪ್ರೀತಿ ಸಾರುತ್ತ ಗಾಂಧಿ ಯಾವತ್ತೂ ನಡೆದರು.

* * * * * *

**ಕಟೆ, ಮೂರ್ತಿಸು.**

**ಸ್ವಾರಾಜ್ಯದೊಂದು ಘನಕನಸು ಕಂಡು ಕಟೆದಿಟ್ಟೆ ಆಗಿ ತ್ಯಾಗಿ/ ಕಾರುಣ್ಯದಲ್ಲಿ ಮಾನವರ ಮರ್ಮ ಮೂರ್ತಿಸುವ ಶಿಲ್ಪಿಯಾಗಿ (12–3, 4)**

: ರೂಪಿಸು; ಕೆತ್ತು; ತಿದ್ದು.

: ಆಕಾರವನ್ನು ಕೊಡು; ಸ್ವರೂಪವನ್ನು ನೀಡು; ರೂಪಿಸು.

*ಮಹಾತ್ಮಾಗಾಂಧಿ ತ್ಯಾಗಿಯಾಗಿ ಸ್ವರಾಜ್ಯದ ಘನ ಕನಸನ್ನು ರೂಪಿಸಿದರು. ಕರುಣೆಯಿಂದ ಮಾನವರ ಮನಸ್ಸಿಗೆ ಉತ್ತಮ ಸ್ವರೂಪ ನೀಡಿದರು.

# ಜಯ ಜಯಾ ಗಾಂಧಿ ಮೋಹನಾ

**ದೋಹನಾ**

**ಜಯ ಜಯಾ ಗಾಂಧಿ ಮೋಹನಾ /ರಾಷ್ಟ್ರ ದೋಹನಾ /ಸತ್ಯ ಶರಣಾ–ಸತ್ಯ ಶರಣಾ (1, 2)**

*ಬೇಂದ್ರೆ ಅವರು ಮಹಾತ್ಮಗಾಂಧಿ ಅವರನ್ನು 'ರಾಷ್ಟ್ರ ದೋಹನಾ'ಎಂದು ಕರೆದಿದ್ದಾರೆ. ಬಯಕೆಗಳನ್ನು ಈಡೇರಿಸುವ, ಹಾಲು ಕರೆಯುವ ಕಾಮಧೇನು–ದೋಹನಾ.

* * * * * *

**ತಣ್ಣೆಸು**

**ಬಯಲಾತು ಮಾತಿನ ಭ್ರಾಂತಿ/ ತಣ್ಣೆಸಿತು ಶಾಂತಿ. (ಒಂದು: 4–2, 3)**

: ಅಡಗು; ಇಲ್ಲದಂತಾಗು.

*ಬೇಂದ್ರೆಯವರು ಗಾಂಧಿಯನ್ನು ಸ್ಮರಿಸುತ್ತ ಅವರ ಕೊಲೆಯಲ್ಲಿ ಶಾಂತಿ ಇಲ್ಲದಂತಾಯಿತು ಎಂದು ದುಃಖಿಸಿದ್ದಾರೆ.

**ಚಢಾಯಿ**

**ನಿಂ ಚಢಾಯಿ ಮಾಡುವ ನೀತಿ/ ಅಸಲ್ ನಿರ್ಭೀತಿ/ ಹೇಳಿ ಕೇಳಿ–ಹೇಳಿ ಕೇಳಿ (ಮೂರು: 2–1, 2, 3)**

: ಮೇಲೇರಿ ಹೋಗುವುದು; ದಾಳಿ (ಹಿಂ. ಮರಾ.–ಚಡಾಈ)

*ಮರಾಠಿಯಲ್ಲಿ ಚಢಾಯಿ ಎಂದರೆ ದಾಳಿ. ಗಾಂಧಿ ಅವರು ಬ್ರೀಟಿಷರ ವಿರುದ್ಧ ನಡೆಸುತ್ತಿದ್ದ ಸತ್ಯಾಗ್ರದ ದಾಳಿಯು ಅಸಲ್ ನಿರ್ಭೀತಿಯಿಂದ ಕೂಡಿತ್ತು. ಅವರ ಅಹಿಂಸಾ ಚಳವಳಿಯನ್ನು ಬೇಂದ್ರೆ ಅವರು 'ಚಢಾಯಿ' ಪದ ಬಳಸಿ ಅದಕ್ಕೆ ಹೋರಾಟದ ವೇಗ, ಚೈತನ್ಯ, ಆಂತರಿಕ ಶಕ್ತಿಯನ್ನು ತುಂಬಿದ್ದಾರೆ. 'ಚಢಾಯಿ' ಪದದಲ್ಲಿ ಮೇಲೇರಿ ಹೋಗುವ, ಕುದುರೆಯನ್ನು ಏರಿ ಅದನ್ನು ಹಿಡಿತಕ್ಕೆ ತಂದುಕೊಳ್ಳುವ ಕಸುವು ಇದೆ. ಅದು ಕುದುರೆಯಂತಹ ಬ್ರಿಟಿಷರನ್ನು ತಹಬದಿಗೆ ತಂದು ಸವಾರಿ ಮಾಡುವ ಗಾಂಧಿ ಅವರ ಶಾಂತಿಯುತ ಸತ್ಯಾಗ್ರಹದ ಹೋರಾಟಕ್ಕೆ ಪ್ರತಿಮೆಯಾಗಿದೆ.

* * * * * *

**ಸಂತರಣ**

**ನಿಂ ಚರಣ ದಾಸ್ಯ ಸಂತರಣಾ–/ ದೃಷ್ಟಿ ವಿಸ್ತರಣಾ (ಮೂರು: 3–3, 4)**

: ಪಾರು ಮಾಡುವುದು.

* ನಿಮ್ಮ ನಡೆಯು ದಾಸ್ಯದಿಂದ ಪಾರು ಮಾಡುವುದು ಮತ್ತು ವಿಶಾಲ ದೃಷ್ಟಿಯಲ್ಲಿ ಬಾಳುವುದು ಆಗಿತ್ತು.

---

## ನವಯುಗಾರಂಭ

### ಕಾಣಿ

**ತಕ್ಕಡಿಗೋ ಬೇಡ ಕಾಣಿ /ತೂಗುತಿರಲಿ ಸತ್ಯವಾಣಿ /ಕಣ್ಮುಚ್ಚಿಯು ನ್ಯಾಯರಾಣಿ /ಭಾಗ್ಯವ ಕೊಡಲಿ (13–1, 2, 3, 4)**

: ತಕ್ಕಡಿಯ ತಟ್ಟೆಗಳನ್ನು ಸಮತೂಕಕ್ಕೆ ತರಲು ಹಾಕುವ ತೂಕ, –ಪೇರು; ಭಾರದಾನಿ.

*ಸತ್ಯವಾಣಿಯನ್ನು ತೂಗುತ್ತಾ ನ್ಯಾಯರಾಣಿಯು ನೀಡುವ ಭಾಗ್ಯ ನಿಷ್ಪಕ್ಷಪಾತವಾದುದು– ಅದು ಸತ್ಯವನ್ನು ಒಳಗಣ್ಣಿನಿಂದ ಅವಲೋಕಿಸುವುದು. ಆ ನ್ಯಾಯದೇವತೆಯ ಕಣ್ಣಿಗೆ ಪಟ್ಟಿ ಕಟ್ಟಿದೆ. ಹಾಗಿರುವಾಗ ಅಲ್ಲಿ, ಸತ್ಯ ಸಮತೂಕದಲ್ಲಿ ತೂಗಬೇಕು, ತೂಗುತಿರಲಿ. ಆ ನ್ಯಾಯದ ತಕ್ಕಡಿಗೆ 'ಬೇಡ ಕಾಣಿ' ಎಂದು ಬೇಂದ್ರೆ ಹೇಳಿದ್ದಾರೆ.

ಏರುಪೇರಾದ ತಕ್ಕಡಿಯನ್ನು ದಾರಿಗೆ ತರಲು 'ಕಾಣಿ' ಬೇಕು. ಆದರೆ, ಸತ್ಯವಾಣಿ ನ್ಯಾಯದ ತಕ್ಕಡಿಗೆ ಅದು ಬೇಡ.

---

## ಸಂಖ್ಯಾಂಕಿತ

### ನೀರ

**ನೀರರು ಪರಸ್ಪರರ ತಿರುಳು ನೆರಳು (1–2)**

*ಸುಂದರನಾದ ಪ್ರಿಯನೇ ನೀರ. ಬೇಂದ್ರೆಯವರು ನೀರರು ಎಂದು ಕರೆದಿರುವಲ್ಲಿ ಆ ನೀರನ ಜೊತೆಗೆ ತಿರುಳು ನೆರಳಾಗಿರುವ ಚೆಲುವೆ ನೀರೆಯು ಇರುವಳು. ಈ ನುಡಿ ದಾಂಪತ್ಯದ ನಿಜಪ್ರಕಾಶ.

* * * * * *

### ಸೊಲ್ಲು

**ಸೊಲ್ಲು ಎಂಬುದು ನಾದ, ಭಾವದಲ್ಲಿದೆ ಸ್ವಾದ. (3–1)**

: ನಾದ; ಧ್ವನಿ.

*ಪ್ರತಿಯೊಂದು ಪ್ರಾಣಿ ಪಕ್ಷಿಯ ಧ್ವನಿಯೇ ನಾದ. ಅದರ ಅಂತರಂಗದ ಭಾವಪ್ರಕಾಶವೇ ಸ್ವಾದ.

* * * * * *

**ಸ್ವಗತ, ಹೊಳಲುಗೊಡು**

**ಸ್ವಗತವಿಲ್ಲದ ಮೋದ ಹೊಳಲುಗೊಡದು (3–2)**

: ಸ್ವಂತವಾದ, ಅಂತರ್ಗತವಾದ, ಒಳಗೊಂಡ.

: ಪ್ರತಿಧ್ವನಿಯನ್ನುಂಟುಮಾಡು; ಮಾರ್ದನಿಗೊಡು.

*ಅಂತರ್ಗತವಾದ, ಆನಂದವಿಲ್ಲದಿದ್ದರೆ ಮಾರ್ದನಿ ಕೊಡಲಾರದು.

* * * * * *

**ಕೋಣ**

**ಘನವೆಷ್ಟೆ ಆದರೂ ಅಷ್ಟೆ ಕೋಣ (4–2)**

: (ರೇಖಾಗ.) ಎರಡು ಸಮರೇಖೆಗಳು ಅಥವಾ ಸಮಕ್ಷೇತ್ರಗಳು ಒಂದನ್ನೊಂದುಸಂಧಿಸುವ ಸ್ಥಾನ; ಕೋನ.

*ಅಷ್ಟಘನಕ್ಕೆ ಅಷ್ಟ ಕೋನಗಳು.

* * * * * *

**ಅಂಟು**

**ಮಲ್ಲಿಗೆಯ ಅಂಟು ಇದ್ದಂತೆ ನೇಹದ ನಂಟು (4–3)**

: ಕಸಿ ಮಾಡುವುದಕ್ಕೂ ಚಿಗುರಿಸುವುದಕ್ಕೂ ಉಪಯೋಗಿಸುವ ಕಡ್ಡಿ,– ಬಳ್ಳಿಯ ಹಂಬು

*ಮಲ್ಲಿಗೆಯ ಅಂಟಿನಂತೆ ಗಂಡು ಹೆಣ್ಣಿನ ಸ್ನೇಹದ ನಂಟು.

**ಅಂಟಿಗಂಟು/ ಚಿಗಿತುನಂಟು/ ಇದುವೆ ನಿತ್ಯ ನೂತನಾ/ ಸಂತತಿಯೆ ಚಿರಂತನಾ (ಸಖೀಗೀತ:ಚಿರಂತನ)**

* * * * * *

**ಬೀಳುಗಳೆ**

**ನಾಡನ್ನು ಕಾಡೆಂದು ಬೀಳುಗಳೆವರೆ ಬೀಡ/ ಕಟ್ಟಿ ಪಟ್ಟಣವನ್ನು ಆಳಬೇಕು (6–3, 4)**

: ಹೀನಾಯ ಮಾಡು; ಹೀಗಳೆ.

* * * * * *

**ಕಲೆಗೂಡು**

**ಮೂರರೊಳಗಿದೆ ಒಂದು, ಕೇಂದ್ರದೊಳು ಬಾ ಹೊಂದು/ ಸಂದು ಬಿಡದಂತೆ ಕಲೆಗೂಡಿಕೊಂಡು. (9–3, 4)**

: ಒಟ್ಟಾಗಿ ಸೇರು, ಕೂಡು. [ಕಲೆ+ಕೂಡು=ಕಲೆಗೂಡು (ದ್ವಿರುಕ್ತಿ)]

* * * * * *

**ಮಾಕಂದ**

**ಕಂದ ಮಾಕಂದಗಳ ತೋಪಿನಲಿ ಮೆರೆಯುವದು/ ಅಂಬೆಯಮ್ಮಾಯೆಂದು ಕರೆವ ಕೂಗು (11–3, 4)**

: 'ಮಾಕಂದಮೆನೆ ರಸಾಲದ್ರುಮಂ' (ಕರ್ನಾಟಕ ಶಬ್ದ ರತ್ನಾಕರ–88)–ಮಾವಿನಮರ.

* 'ಮಾ' ಎಂದರೆ ತಾಯಿ. ಅವಳ ಕಂದ 'ಮಾಕಂದ'. ಇದು ವಾಚ್ಯಾರ್ಥ ವ್ಯಂಗ್ಯಾರ್ಥಗಳನ್ನು ತನ್ನಲ್ಲಿ ಅಡಗಿಸಿಕೊಂಡ ತಾಯಿ ಮತ್ತು ಮಕ್ಕಳ ಪ್ರೀತಿಯ ಬೆಡಗು.

ಬೇಂದ್ರೆ ಅವರು ತಾಯಿ ಹಾಗೂ ಅವಳ ಕಂದನ ಬಾಂಧವ್ಯದ ವಾತ್ಸಲ್ಯ, ಕಂಪು, ಇಂಪು, ಸೊಂಪುಗಳನ್ನು ವರ್ಣಿಸಿರುವ ರೀತಿ ಮಧುರ ಭಾವದ ಜಿನುಗು. ತಾಯಿ ಮತ್ತು ಮಗು 'ಒಂದರಲಿ ಹಲವುಂಟು ಬೀಜಫಲಗಳ ಗಂಟು'. ಅದು ಮಾವಿನ ತೋಪಿನ ತಂಪು, ಕೋಗಿಲದ ಆನಂದಕರೆ, ಮಾವಿನ ಸವಿರುಚಿ.

---

## ಮಾತು ಮೌನ

**ಕಸರು, ಹಿಂಜು**

**ಕಸರು ಕಳೆದು ತಮ ಹಿಂಜಿ ಬಂತು ರವಿಕಿರಣ ನೂಲುವಂತೆ (4–2)**

: ಕಸ; ಕೊಳೆ.

: ತೆಳುವಾಗು; ಚೊಕ್ಕಟವಾಗು; ಶುದ್ಧವಾಗು.

* ರಾತ್ರಿ ಕತ್ತಲೆಯ ಕೊಳೆಯನ್ನು ಕಳೆದು ಶುದ್ಧವಾಗಿಸುತ್ತ ರವಿಕಿರಣ ಹೊರಹೊಮ್ಮಿದೆ.

***

***ಹೊಗೆ ಮೋಡ ಹಿಂಜಿ, ಕಣ್ಮರೆಯಾಗುವಂತೆ, ನೆನೆಸಿದ ರೂಪ ಹುಡಿಯಾಗುತಿದೆ. (ಉಯ್ಯಾಲೆ: ಪ್ರಳಯ ಸೃಷ್ಟಿ)**

---

# ನೃತ್ಯ ಯಜ್ಞ

**ಶಿಖಿ, ಶಿಖೆ, ಕೇಕೆ**

**ಗಿರಿಶಿಖರದಿ ಶಿಖೆಯನೆತ್ತಿ ಶಿಖಿಯ ಕೇಕೆ ಕರೆವುದು. (1)**

: ನವಿಲು; ಮಯೂರ.

: ನವಿಲಿನ ಜುಟ್ಟು; ಕೊಟ್ಟು.

: ನವಿಲಿನ ಕೂಗು; ಕೇಕಾರವ.

* ಬೆಟ್ಟದಲ್ಲಿ ನವಿಲು ತನ್ನ ಜುಟ್ಟು ಎತ್ತರಿಸಿ ಕೇಕಾರವವನ್ನು ಮಾಡುತ್ತಿದೆ.

* * * * * *

**ತಾಂಡವಿಸು**

**ದರ್ಪದಿಂದ ಹೆಡೆ ಸೆಡೆಯುತ ತಾಂಡವಿಸಿತು ಸರ್ಪ (20)**

: ನರ್ತಿಸು; ಕುಣಿ; ತೊನೆ.

*ಸರ್ಪ ದರ್ಪದಿಂದ ಹೆಡೆಬಿಚ್ಚಿ ನರ್ತಿಸಿತು.

* * * * * *

**ಠಾಯಿ**

**ಐಕ್ಯಸಮದ ಠಾಯಿಯಲ್ಲಿ ಬಹುವಧು ಉದ್ದೀಪ್ತ (31)**

: 1. (ಸಂಗೀತ) ರಾಗಾಲಾಪನದಲ್ಲಿ ಒಂದುಲಯ; ಮಧ್ಯಲಯ.

2. ಸ್ಥಾಯಿ.

*ಭಾವದಲ್ಲಿ ಹಾಗೂ ನಾದದಲ್ಲಿ ಸ್ಥಾಯಿ ಮತ್ತು ಸಂಚಾರಿ ಎಂಬ ಎರಡು ಬಗೆಗಳಿವೆ. ಸಂಚಾರಿಯು ಸ್ಥಾಯಿಗೆ ಪೂರಕವಾಗಿ ಮತ್ತು ಸ್ಥಾಯಿಯನ್ನು ಉದ್ದೀಪಿಸಲು ನೆರವಾಗುತ್ತದೆ. ಉದಾಹರಣೆಗೆ, ಅಭಿಜ್ಞಾನ ಶಾಕುಂತಲದಲ್ಲಿ ವಿರಹವು ಸ್ಥಾಯಿ ಭಾವವಾಗಿದೆ. ನಾಟಕದಲ್ಲಿ ಶಾಕುಂತಲೆ ಅನುಭವಿಸುವ ಸಂಚಾರಿ ಭಾವಗಳಾದ ಭಯ, ವಿಹ್ವಲತೆ, ದುಗುಡ, ಅನಿಶ್ಚಿತತೆ, ಅವಮಾನಗಳು ಅವಳ ಸ್ಥಾಯಿಭಾವವನ್ನು ಇನ್ನೂ ಉದ್ದೀಪಿಸುತ್ತವೆ.

---

## ನಾಳೆ ಎಂಬುವದು ಇಂದಿನ ಮನಸು

### ಗೊಳಲೆ

**ಗೊಳಲಿಯ ಒಳಗಿದೆ ಬೆಳೆಯುವ ಬೀಜ (6–1)**

: ಧಾನ್ಯದ ಹೊಟ್ಟು; ಉಮಿ.

*ಬೆಳೆಯುವ ಬೀಜ ಗೊಳಲೆಯಲ್ಲಿ ಸುರಕ್ಷಿತವಾಗಿರುತ್ತದೆ.

* * * * * *

### ಎಳಿ

**ತನ್ನನೆ ತಾನೇ ತಿಳಿಗೊಂಡಂತೆ /ಶಿವನ ಶಕ್ತಿಯೇ ಎಳಿಗೊಂಡಂತೆ /ಭಕ್ತಿಯಲ್ಲಿ ಭಗವಂತನ ಕಂಡಂತೆ (10–1, 2, 3)**

* ಅಧ್ಯಾತ್ಮ ಜೀವಿಗೆ ನಿಜ ತಿಳಿಗೊಳ್ಳಬೇಕು. ಆಗ ಅವನಿಗೆ "ಶಿವನ ಶಕ್ತಿಯೇ ಎಳಿಗೊಂಡಂತೆ" ಆಗುವುದು. ಇಲ್ಲಿ ಎಳೆ–ಸೆಳೆತ ಆಡುನುಡಿಯ 'ಎಳಿ' ಆಗಿದೆ. ಆಗ ಅದು, "ಭಕ್ತಿಯಲ್ಲಿ ಭಗವಂತನ ಕಂಡಂತೆ".

---

## ಅ ಆ

### ಚುಕ್ಕಾಣಿ

**ದಿಕ್ಕಿಲ್ಲದಂತೆ ಹರಿದಾಡುವವಗೆ ಚುಕ್ಕಾಣಿ ಬೇಡ, (1–4)**

: (ಹಡಗು, ವಿಮಾನ ಮುಂತಾದವುಗಳ) ದಿಕ್ಕನ್ನು ಬದಲಿಸಲು ಸಹಾಯ ಮಾಡುವ, ಮರ ಅಥವಾ ಲೋಹದಿಂದ ಮಾಡಿದ ಒಂದು ಬಗೆಯ ಸಾಧನ.

*ಕ್ಷೋಭೆಗೊಂಡು ಹುಚ್ಚೆದ್ದು ಹರಿವ ಹಸಿಯ ಹುಡುಗನನ್ನು ದಿಕ್ಕಿಲ್ಲದಂತೆ ಹರಿದಾಡುವವ ಎಂದು ಕರೆದು, ಅಂಥವನಿಗೆ ಚುಕ್ಕಾಣಿ ಬೇಡ ಎಂದಿದ್ದಾರೆ.

---

## ಅಹನೆ

### ಅಹನೆ, ಕಿಲಿಬಿಲಿ

**ಅಹ, ಅಹಹ ಅಹನೆ! ಗಹಗಹಿಸಿತೆಲ್ಲೊ ದೂರದ ದಿಗಂತದಲ್ಲಿ;/ ಕುಲಕುಲನೆ ನಗುತ ಕಿಲಿಬಿಲಿಸಿ ಉಲಿದು ಕಲರವವು ಮೂಡಿತಿಲ್ಲಿ. (1–1, 2)**

: ಹುಟ್ಟು; ಸಂಭವಿಸು.

: ಚಿಲಿಪಿಲಿ ಸದ್ದು ಮಾಡು; ಚಿಲಿಪಿಲಿಗುಟ್ಟು.

*ಅಹನೆ ಧನಾತ್ಮಕವಾದ ಸೃಷ್ಟಿಯನ್ನು ಸೂಚಿಸುವ ಪದ. ಅದು, 'ಆಗು'ವಿನ ಇನ್ನೊಂದು ರೂಪ. ಅದು ಕ್ರಿಯಾ ಪದವಾಗಿ ಅಕ್ಕು, ಅಹುದು ಎಂಬ ಅರ್ಥವನ್ನು ಹೊಂದಿರುವಂತೆ; ನಾಮಪದವಾಗಿ ಆಗುವಿಕೆ, ನೆರವೇರುವಿಕೆ ಎಂಬ ಅರ್ಥವನ್ನು ಹೊಂದಿದೆ.

ಪ್ರತಿದಿನ ಉಂಟಾಗುವ 'ಬೆಳಗು'ವನ್ನು ಬೇಂದ್ರೆ ಅವರು ಉತ್ಸಾಹದಿಂದ "ಅಹ, ಅಹಹ ಅಹನೆ!" ಎಂದು ಕರೆದಿದ್ದಾರೆ. ಬೆಳಕು ದೂರದಲ್ಲಿ ಗಹಗಹಿಸಿದಾಗ, ನೆಲದಲ್ಲಿ ಜೀವಂತಿಕೆ ಗರಿಗೆದರುತ್ತದೆ ಎಂದು ಸೂರ್ಯನು ಸಂಭವಿಸುವುದನ್ನು ಉಲ್ಲಾಸದಿಂದ 'ಅಹನೆ' ಎಂಬ ವಿಶಿಷ್ಟ ಪದ ಬಳಸಿ ಸೂಚಿಸಿದ್ದಾರೆ.

ಬೇಂದ್ರೆ ಅವರು ಹಕ್ಕಿಗಳ ಚಿಲಿಪಿಲಿಗುಟ್ಟುವಿಕೆಯನ್ನು 'ಕಿಲಿಬಿಲಿ' ಎಂಬ ಆಡುನುಡಿಯಲ್ಲಿ ನೀಡಿದ್ದಾರೆ. 'ಬಿರುಕು ಬಿರುಕಿಗೂ ಗುಬ್ಬಿಯ ಮನಿ ಹಾಳು ಭಾವಿಯೊಳ್ಗ ಕಿಲಿಬಿಲಿ ಧನಿ' (ಜೀವಲಹರಿ–ಕಗ್ಗ)

'ಕಿಲಿಬಿಲಿ' ಪದವನ್ನು ಹಕ್ಕಿಗಳ ಚಿಲಿಪಿಲಿ ಹೇಳಲು ಬಳಸಿದಂತೆ ಜನರ ಗೌಜು, ಗದ್ದಲವನ್ನು ಬಣ್ಣಿಸಲು ಬಳಸುತ್ತಾರೆ.

ಅವುಗಳ ಸಂಸ್ಕಾರ ಸಾಲದ ಮಾತು, ಕಾಡು ಜನರ ಕಿಲಿಬಿಲಿ ಇದ್ದಂತೆ (ವಿಚಾರ ಮಂಜರಿ–1)

* * * * * *

### ಬೆಳ್ಳಿ, ಭಗ

**ಬೆಳ್ಳಿ ಕರಗಿ ಬೆಳಗಾಯ್ತು ಏಳು ಹಗಲಾಗಿ ಭಗನು ಸುಡನೆ? (2–2)**

: ನವಗ್ರಹಗಳಲ್ಲಿ ಒಂದು; ಶುಕ್ರ.

: ಸೂರ್ಯ.

*ಪೂರ್ವ ದಿಕ್ಕಿನಲ್ಲಿ ಸೂರ್ಯೋದಯದ ಮೊದಲು ಶುಕ್ರಗ್ರಹ ಹೊಳಪಿನಿಂದ ಗೋಚರಿಸುತ್ತದೆ. ಅದು ಬೆಳ್ಳಿ.

'ಉಷೆಯ ಹಣೆಗೆ ಬೆಳ್ಳಿ ಶುಕ್ರ ತಿಲಕವನಿಡಲಿ'(ಸೂರ್ಯಪಾನ: ನವಯುಗಾರಂಭ) ಎಂದು ಬೇಂದ್ರೆ ಅದನ್ನು ಬಣ್ಣಿಸಿದ್ದಾರೆ.

ಅದು ಕರಗಿ ಬೆಳಗಾಯ್ತು ಏಳು ಎಂದು ಕಿರಿಯರನ್ನು ಎಬ್ಬಿಸುತ್ತ ಬೇಂದ್ರೆ 'ಹಗಲಾಗಿ ಸೂರ್ಯ ಸುಡನೆ?' ಎಂದು ಪ್ರಶ್ನಿಸಿದ್ದಾರೆ.

* * * * * *

**ಕಣ್ಗೊನೆ**

**ಗಂಗೆ ಯಮುನೆ ಕಣ್ ಗೊನೆಗೆ ಇಳಿದು ಸುಖ ದುಃಖ ಹರಿಯುತಿಹುದು (4–1)**

: ಕಣ್ಣಿನ ಕೊನೆ,–ತುದಿ; ಕಡೆಗಣ್ಣು.

*ಆ ದಿವ್ಯಬೆಳಗು ಕಂಡು ಅವರ ಕಣ್ಣಿನ ಕೊನೆಯಲ್ಲಿ ಆನಂದ ಭಾಷ್ಪ ಗಂಗೆ ಯಮುನೆಯಂತೆ ಹರಿಯುತ್ತಿದೆ.

* * * * * *

**ಮಗ ಮಗಿಸು, ಮುಸುಗುಡು**

**ಮಣ್ಣ ಮೈಯ ಮಗು ಮೂಡಿದಾಗ ಮಗಮಗಿಸಿತಣ್ಣ ಮುಗಿಲು/ ಸೊಕ್ಕು ಜವ್ವನದ ರಾತ್ರಿರಾಣಿ ಮುಸುಗುಡಿಸೆ ಆಯ್ತು ಹಗಲು. (7–1, 2)**

: ಸುವಾಸನೆಯನ್ನು ಬೀರು; ಕಂಪು ಸೂಸು.

: ಆಯಾಸ, ಸಿಟ್ಟು ಮುಂತಾದವುಗಳಿಂದ ಮುಸುಮುಸು ಎಂದು ಶಬ್ದಮಾಡು.

* ಈ ಮೇಲಿನ ಸಾಲುಗಳಲ್ಲಿ ಬೇಂದ್ರೆಯವರ ಕಲ್ಪನಾ ಲಹರಿ ಬೆಳಕಿನಂತೆ ನವನವೀನವಾಗಿ ಪಲ್ಲವಿಸಿದೆ.

ಸೊಕ್ಕು ಯೌವನದ ರಾತ್ರಿ ರಾಣಿಯ ಮುಸುಗರೆಗೆ ಹಗಲು ಆಯ್ತು. ಆ ಹಗಲಿಗೆ ಇಳೆಯ ಮಣ್ಣ ಮೈಯ ಮಗು ಮೂಡಿತು! ಆ ಜೀವಲಹರಿಯ ಕಂಪಿಂದ ಮುಗಿಲು ಗಮಗಮಿಸಿತು!

## ಗೋವತ್ಸಲೀಲೆ

### ಗೋವತ್ಸ, ತೊರೆಕರೆ, ವನವಾಟಿ, ಸೆಜ್ಜೆ

**ಗೋವತ್ಸ ಲೀಲೆ ತೊರೆಕರೆಯ ಮೇಲೆ ವನವಾಟಿ ಸೆಜ್ಜೆಸಾಲೆ./ ಕೊಳಲೆಲ್ಲೊ ಉಲಿಯೆ ಹರಿನೀರು ನಲಿಯೆ ಎಲ್ಲೆಲ್ಲು ಭೃಂಗಮಾಲೆ. (1-1, 2)**

: ಹಸುವಿನ ಕರು.

: ಪ್ರವಾಹದ ದಂಡೆ; ನದಿತೀರ.

: (ಕಾಡಿನಲ್ಲಿರುವ)ಮರಗಳ ಗುಂಪು,-ಶ್ರೇಣಿ,-ತೋಪು.

: ಹಾಸಿಗೆ; ತಲ್ಪ.

*ಶ್ರೀಕೃಷ್ಣನ ಮುರಲಿಯ ನಾದಕ್ಕೆ ಇಡೀ ಪ್ರಕೃತಿ, ಭೃಂಗ, ಗೋವಿನ ಕರುಗಳು ನಲಿದಾಡುವ ಒಂದು ಮಧುರ ಭಾವವು ಪ್ರಾಸ, ಒಳಪ್ರಾಸಗಳ; 'ಲ' ಕಾರ 'ರ' ಕಾರಗಳ ಲಲಿತ ಲಾಲಿತ್ಯದಲ್ಲಿ ಗೋವತ್ಸಲೀಲೆಯನ್ನು ಉಣಬಡಿಸಿದೆ.

ಗೋವಿನ ಕರು ನದಿದಂಡೆಯ ಮರಗಳ ತಂಪಿನಲ್ಲಿ ಹಸಿರು ತಲ್ಪದಲ್ಲಿದೆ. ದೂರದಲ್ಲೆಲ್ಲೊ ಉಲಿವ ಮಾಧವನ ಕೊಳಲನಾದಕ್ಕೆ ಹರಿವ ನೀರು ನಲಿಯುತ್ತಿರಲು ಆ ನಾದಲೋಕದಲ್ಲಿ ಗೋವತ್ಸ ಲೀಲೆಯಿಂದ ನಲಿದಾಡುತ್ತಿದೆ.

ಪಿರಿಯ ಮರಂಗಳೆ ಮಾಡಮಾಗೆ ಪೊಳೆವೆಳದಳಿರ್ಗಳೆ ಸೆಜ್ಜೆಯಾಗೆ(ಪಂಪ ಭಾ 7-28)

---

## ಅಪಾರ್ಥ-ಸಮೀಕ್ಷಕರಿಗೆ

### ಹಿಂದಾಡು

**ನಾಗನ ನಾಲಿಗೆಯಾಡಿಸಿ ಅಣಗಿಸಿ ಹಿಂದಾಡಿ? (8-4)**

: ಪರೋಕ್ಷದಲ್ಲಿ ಆಡಿಕೊಳ್ಳು; ಮರೆಯಲ್ಲಿ ಆಕ್ಷೇಪಿಸು.

* 'ಸಮೀಕ್ಷೆಯ ನೆಪದಲ್ಲಿ ಅಪಾರ್ಥ ಪ್ರಪಂಚ ಬೆಳೆಸಿ, ವಿರಸವನ್ನೇ ಸರಸವೆಂದು ತಿಳಿವಳಿಕೆಗೀಡಾದವರ ವಾಕ್-ದುರ್ವಿಲಾಸವನ್ನು ನೋಡಿ' ಎಂಬ ಭಾವ ಸಂದರ್ಭವನ್ನು ಈ ಕವನ ಹೊಂದಿದೆ.

ಅಪಾರ್ಥ ಸಮೀಕ್ಷಕರು ಮರೆಯಲ್ಲಿ ಆಕ್ಷೇಪಿಸುತ್ತ ಅಣಕವಾಡುವುದು ವಿಷಕಾರಿದಂತೆ. ಅದು ದೆವ್ವವನ್ನು ಮುಂದುಮಾಡಿಕೊಂಡು ಆಡುವ ಕಡಿದಾಟ.

* * * * * *

**ಎಳ್‌ನೆಯ್**

**ಒಣ ಹಿಂಡಿಯ ಕೂಳುಣ್ಣುವೆ/ ಎಳ್‌ನೆಯ್ ರಸಬಿಟ್ಟು (9–4, 5)**

: ಎಳ್ಳಿನಿಂದ ತೆಗೆದ ಎಣ್ಣೆ; ಎಳ್ಳೆಣ್ಣೆ.

*ಅಪಾರ್ಥ ಸಮೀಕ್ಷಕರ ರೀತಿ ಎಳ್ಳೆಣ್ಣೆಯ ಸವಿಬಿಟ್ಟು ಒಣಹಿಂಡಿ ಮೇಯುವ ಪಶುವೃತ್ತಿ.

---

## ಭಕ್ತನಲ್ಲ ರಾಗಿ$_s$ ವಿರಾಗಿ$_s$

**ಹೊರಳಿ**

**ಹೊರಳಿ ನೋಡು ಮರಮರಳಿ ನೋಡು ಒಳಗರಳಿ ನೋಡು ನೋಟ. (1–11)**

: ಬೇರೆ ದಿಕ್ಕಿಗೆ ತಿರುಗು.

*ಭಕ್ತನಾದವನು ವಿಷಯದ ಎಲ್ಲ ಮಗ್ಗಲುಗಳನ್ನು ಹೊರಳಿ ಮರಮರಳಿ ನೋಡಿ ಒಳಗೆ ಅರಳಬೇಕು.

---

## ಸಮೃದ್ಧ

**ಬಾವುಲಿ**

**ತುಂಬಿ ತುಂಬೌ ಗಂಗೆ ಲೋಕಲೋಪವ ತುಂಬು /ಶಿಷ್ಟ ದುಷ್ಟರ ಕೊಡುಗೆಗಿರಲಿ ಬಾವುಲಿ ಕರ್ಣ. (1–1, 2)**

*ಗಂಗಾದೇವಿ ಸಮೃದ್ಧಳು. ಅವಳ ದೃಷ್ಟಿಯಲ್ಲಿ ಶಿಷ್ಟರು, ದುಷ್ಟರು ಎಲ್ಲ ಒಂದೇ ಸಮ. ಅವಳು ನಲಿದು ನೆಲವನ್ನು ಸಮೃದ್ಧಗೊಳಿಸುವಾಗ ಅವಳ ಸೊಬಗು ಪ್ರೀತಿಯಲ್ಲಿ ಪ್ರಕಟಗೊಳ್ಳುತ್ತಿದ್ದುದು ಅವಳ 'ಬಾವುಲಿ ಕರ್ಣ'.

ಕಿವಿಯ ಹಾಲೆಯ ಮೇಲುಭಾಗದಲ್ಲಿ ನೇತಾಡುವಂತೆ ಇಟ್ಟುಕೊಳ್ಳುವ ಮುತ್ತು, ಹರಳುಗಳನ್ನು ಜೋಡಿಸಿದ ಉಂಗುರದಂತಿರುವ ಚಿನ್ನದ ಆಭರಣವೇ–ಬಾವುಲಿ.

*  *  *  *  *  *

**ಕಳಿಯದ ಹಣ್ಣು**

**ನಿನಗುಪಮೆಯೇ ತಾಯಿ ನೀನು ಕಳಿಯದ ಹಣ್ಣು (2-5)**

*ಬೇಂದ್ರೆ ಅವರು ಗಂಗಾದೇವಿಯನ್ನು ಬಣ್ಣಿಸಲು ಒಂದು ವಿಶಿಷ್ಟ ಪದ 'ಕಳಿಯದ ಹಣ್ಣು' ಬಳಸಿದ್ದಾರೆ. ಕಳಿ ಎಂದರೆ ಮಾಗು, ಪಕ್ವವಾಗು ಎಂಬ ಎಲ್ಲರಿಗೂ ಗೊತ್ತಿರುವ ಒಂದು ಅರ್ಥವಿದೆ. ಅದರ ಇನ್ನೊಂದು ಅರ್ಥ ಬಾಡು; ಬತ್ತು; ಕ್ಷೀಣವಾಗು; ಕಳೆಗುಂದು. ಬೇಂದ್ರೆ ಅವರು, ಈ ಕವನದಲ್ಲಿ ಗಂಗಾದೇವಿಯನ್ನು ಚಿತ್ರಿಸುವಾಗ ಬಾಡದ; ಬತ್ತದ; ಕ್ಷೀಣವಾಗದ; ಕಳೆಗುಂದದ ಎಂಬ ಅರ್ಥದಲ್ಲಿ 'ಕಳಿಯದ ಹಣ್ಣು' ಪದವನ್ನು ಬಳಸಿದ್ದಾರೆ.

---

## 'ಸಕಲ'

**ಶಕಲ, ಕಂಸ, ಕೃತ್ಸ್ನ**

**ಎಷ್ಟು ಶಕಲವ ಕೂಡಿಸಿದರೆ ಇಡಿ ಒಂದಾದೀತು? /ಕಂಸಕಂಸಾತ್ಮರಿಗೆ ಕೃತ್ಸ್ನ ನಾಮವಪಥ್ಯ (1-1, 2)**

: ತುಂಡು; ಚೂರು.

: 1. ವರ್ತುಳದ ಪರಿಘದ ಒಂದು ಭಾಗ, ಅಂಶ.

2. ಕೃಷ್ಣನ ಮಾವನಾದ ಮಥುರಾ ದೇಶದ ಅರಸು.

: ಪೂರ್ತಿಯಾಗಿರುವಿಕೆ; ಸಂಪೂರ್ಣ.

*ಬೇಂದ್ರೆ ಅವರು, 'ಸಕಲ' ಕವನದಲ್ಲಿ ಗಂಗೆ ಎಲ್ಲವನ್ನೂ ಒಳಗೊಂಡ ಸಮಗ್ರ ಎಂಬುದನ್ನು ಹಲವು ಪ್ರತಿಮೆಗಳಲ್ಲಿ ಧ್ವನಿಸಿದ್ದಾರೆ. ಈ ಕವನದ ಮೊದಲ ಸಾಲಿನಲ್ಲಿ ಶಕಲ/ ತುಂಡುಗಳನ್ನು ಕೂಡಿಸಿದರೆ ಎಂದಿಗೂ ಕೃತ್ಸ್ನ (ಸಂಪೂರ್ಣ) ಆಗುವುದು ಸಾಧ್ಯವಿಲ್ಲ ಎಂದು ಹೇಳಿದ್ದಾರೆ. ಮಥುರಾ ದೇಶದ ರಾಜ ಕಂಸನು ಕೃಷ್ಣನ ಮಾವ. ಅವನು ಅಪೂರ್ಣ; ಕಂಸಾತ್ಮ. ಅಂತಹವರಿಗೆ ಕೃತ್ಸ್ನ/ಪೂರ್ಣ ವ್ಯಕ್ತಿತ್ವ ವಿಕಸನಗೊಂಡ; ಸಂಪೂರ್ಣದ ಕೃಷ್ಣ ಅಪಥ್ಯ ಎಂಬುದನ್ನು ಕವಿ ತಿಳಿಸಿದ್ದಾರೆ.

ಈ ಎರಡು ಹೋಲಿಕೆಗಳ ಹಿನ್ನೆಲೆಯಲ್ಲಿ ಗಂಗೆಯ 'ಸಕಲ' ಸತ್ವವನ್ನು ತಿಳಿದು, ಅವಳನ್ನು ವಿಶ್ವಂಭರೆ-ಜಗತ್ತನ್ನು ಧರಿಸುವ ದೇವಿ, ಜಗನ್ಮಾತೆ, ಗುರು ಎಂದು ಕವಿ ಪ್ರಾರ್ಥಿಸಿದ್ದಾರೆ.

'ಭೂ ವ್ಯೋಮ ಪಾತಾಳ ಒಂದಾಗಿ ಹೆಣೆದಿರುವೆ/ ಓ ಗಂಗೆ, ರಸ ಲಹರಿ ಸಹಜ ಸಹಜ ಅಭಂಗಿ/ ಈ ವಿಶ್ವಮಾನವರ ದೃಷ್ಟಿಯೇ ಏಕಾಂಗಿ/ ಕಲಿಸು ನಿನ್ನಾ ಕಲೆಯ ವಿಶ್ವಂಭರೇ ಗುರುವೆ!' (3–1, 2, 3, 4)

* * * * * *

### ವಧ್ಯ, ಅಕಲು

**ಕಟುಕ ಬುದ್ಧಿಗೆ ಶರಣು ಮಾಡಿ ಕುಳಿತಿದೆ ಸದ್ಯ/ ವಿಜ್ಞಾನಿಗಳ 'ಅಕಲು' ಹೃದ್ಯವಿದ್ದರೂ ವಧ್ಯ. (2–2, 3)**

: ಅಪ್ರಿಯವಾದುದು.

: ಬುದ್ಧಿ; ವಿವೇಕ.

*ಕಟುಕ ಬುದ್ಧಿಯಿಂದ ಕೂಡಿದ ವಿಜ್ಞಾನಿಗಳ ವಿವೇಕ ಹೃದ್ಯವಿದ್ದರೂ ಅದು ಅಪ್ರಿಯವಾದುದು.

* * * * * *

### ಭಣಿತಿ, ದಿತಿ

**ಭಣಿತಿ ಭಂಗಿಗಳಲ್ಲಿ ಮುಗಿದು ಕುಂಠಿತ ಮತಿಯು/ ಮತ್ತೆ ತಲೆಯತ್ತಿ ನಿಂತಿಹುದು ದಿತಿ ಸಂತತಿಯು. (4–1, 2)**

: ಮಾತು; ವಚನ.

: ದೈತ್ಯರ ತಾಯಿ.

*ಈ ಲೋಕದಲ್ಲಿ ಕುಂಠಿತ ಮತಿಯು ತನ್ನ ಮಾತು ಮತ್ತು ಚರ್ಯೆಯಲ್ಲಿ ಕೈಮುಗಿಯುತ್ತ ರಾಕ್ಷಸರ ಸಂತತಿಯಂತೆ ಮತ್ತೆ ತಲೆಯೆತ್ತಿ ನಿಂತಿದೆ.

---

## ವಸುಧಾ

### ಕರುಳ ಬಳ್ಳಿ

**ನೀರು ನೆಲಗಳ ಕರುಳ ಬಳ್ಳಿ ಹರಿದೀತೆಂದು/ ಈ ಉಸಿರು ಕಂಡೀತು ಒಂದೆ ಬೆಳಕನ್ನಂದು. (4–1, 2)**

: ಆಪ್ತ ಸಂಬಂಧ.

*ಪಂಚಭೂತಗಳ ಸಂಗದಿಂದ ಶರೀರವಾಗುತ್ತದೆ. ಕರುಳಬಳ್ಳಿ ಸಂಬಂಧ ಏರ್ಪಡುತ್ತದೆ. ಇವೇ ಪಂಚಭೂತಗಳ ಅಸಂಗದಿಂದ ಶರೀರ ನಿರಚನೆಯಾಗುತ್ತದೆ, ಮುಕ್ತಿ ಕಾಣಿಸುತ್ತದೆ.

---

## ಮಧುವಾತಾ ಋತಾಯತೇ !

**ಮಧುವಾತಾ ಋತಾಯತೇ,**

**: ಋತು ಋತುಗಳಲ್ಲಿಯೂ ಪರಿಮಳವೇ ಪಸರಿಸಲಿ**

**ದರದಲತ್**

ಭಾವಸೋಪಾನವನ್ನೇರಿ ಬಾ ಪ್ರಾಣ ಸಖಿ,/ ದರದಲತ್ ಅರವಿಂದ– ಸ್ಮೇರಮುಖಿ. (1–13, 14)

*ಬೇಂದ್ರೆ ಅವರಿಗೆ ಕಾವ್ಯಕನ್ನಿಕೆ ಪ್ರಾಣಸಖಿ. ಅವಳನ್ನು "ಭಾವಸೋಪಾನವನ್ನೇರಿ ಬಾ" ಎಂದು ಆಹ್ವಾನಿಸಿದ್ದಾರೆ. ಅವಳು ಅವರಿಗೆ ಕಾಣುವುದು ದರದಲತ್ –ನಸುತೆರೆದ, ಸ್ವಲ್ಪ ಅರಳಿದ ಕಮಲ(ಅರವಿಂದ) ಪುಷ್ಪವಾಗಿ ಅವಳು ಸ್ಮೇರಮುಖಿ–ನಗುಮುಖಿ.

* * * * * *

**ಝುಂಝಾವಾತ, ಸೈಂಧವ, ಮಣ್ಮಣಸು**

**ಏನಲ್ಲಿ ಝುಂಝಾವಾತ, ಓ ಏನೋ–ಅಧಃಪಾತ!/ ಎಂಥದೋ ಉತ್ಪಾತ! ಸೈಂಧವರ ಲಾವಣ್ಯ/ ಮಣ್ಮಣಸು. ಮಣ್ಣುಗೂಡಿತು ಕಣಸು. (2–1, 2, 3)**

: ಮಳೆಯಿಂದ ಕೂಡಿದ ಗಾಳಿ,–ಬಿರುಗಾಳಿ.

: 1. ಸಿಂಧೂ ದೇಶ ಮತ್ತು ಅಲ್ಲಿಯ ಜನ. ಸಿಂಧೂ ದೇಶದವರ ಸೌಂದರ್ಯ.

2. (ಆಲಂ) ದಷ್ಟಪುಷ್ಟವಾಗಿ ಎತ್ತರವಾಗಿರುವವನು. ಆಜಾನುಬಾಹು.

: ಮಂಕು; ನಿಸ್ತೇಜ.

*ಸಮಾಜದಲ್ಲಿರುವ ಮಧುರಭಾವದಂತೆ ಕ್ರೂರ ಕಾಠಿಣ್ಯದ ಬಿರುಬಿರುಸು ಉಂಟು. ಝುಂಝಾವಾತದ (ಮಳೆಯಿಂದ ಕೂಡಿದ ಬಿರುಗಾಳಿ) ಹೊಡೆತಕ್ಕೆ ಸಿಕ್ಕಿ ಮಾನವನ ಎಲ್ಲ ಸ್ಥಾವರ ಕಟ್ಟಡಗಳು, ಅನುಕೂಲ, ವೈಭೋಗಗಳು ನೆಲಕಚ್ಚಿ ಹೋಗುವವು. ಅದು ಅಧಃಪಾತ. ಅಂತಹ ಭೀಕರ ಉತ್ಪಾತ/ಭೂಕಂಪ, ಉಲ್ಕಾಪಾತ ಮುಂತಾದ ಘಟನೆಗಳಿಂದ ಸಾಮಾಜಿಕ ಬದುಕು ಅಸ್ತವ್ಯಸ್ತವಾಗುವುದು. ಆಗ, ಹಲವು ಸಹಸ್ರ ವರ್ಷಗಳಿಂದ ರೂಪುಗೊಂಡಿದ್ದ ಸಿಂಧೂ, ಈಜಿಪ್ಟ್ ಮುಂತಾದ ದೇಶಗಳ ಸಂಸ್ಕೃತಿ, ಅಲ್ಲಿಯ ದಷ್ಟಪುಷ್ಟ, ಎತ್ತರದ, ಅಜಾನುಬಾಹು ವ್ಯಕ್ತಿಗಳ ಜೀವನದ ಲಾವಣ್ಯ, ಚೆಲುವು,

ಸೌಂದರ್ಯ ಮತ್ತು ಮಾನವೀಯ ಸಂಬಂಧಗಳ ಅಮೂಲ್ಯ 'ಹೃದ್ವತ್ವ'ಕ್ಕೆ 'ಮಣ್ಮಣಸು'. ಅದು ಮಂಕು ಬಡಿದು ನಿಸ್ತೇಜವಾಗುವುದು. "ಮಣ್ಣುಗೂಡಿತು ಕನಸು".

ಸಿಂಧೂ ದೇಶದ ರಾಜ ಸೈಂಧವ. ಈತನ ಇನ್ನೊಂದು ಹೆಸರು ಜಯದ್ರಥ. ಈತನ ಪತ್ನಿ ದುರ್ಯೋದನನ ತಂಗಿ ದುಶ್ಯಳೆ. ಈತ ದ್ರೌಪದಿಯನ್ನು ಅಪಹರಿಸಿ ಭೀಮಾರ್ಜುನರಿಂದ ಸೋತು ಅಪಮಾನಿತನಾಗಿದ್ದ. ಕುರುಕ್ಷೇತ್ರ ಯುದ್ಧದಲ್ಲಿ ಅರ್ಜುನ ಈತನನ್ನು ಕೊಂದ.

ಸಿಂಧೂ ದೇಶದವರ ಲಾವಣ್ಯ ದುಷ್ಟ ನಡೆಯಿಂದ ನಿಸ್ತೇಜಗೊಂಡು ಮಣ್ಣುಗೂಡಿತು.

* * * * * *

## ಚಕ್ರಬಂಧ

**ಚಕ್ರ ಬಂಧದ ಒಗಟ(2–13)**

*ಒಂದು ಬಗೆಯ ಸ್ಪರ್ಧೆ; ಅನೇಕ ಮನೆಗಳಿರುವ ಒಂದು ಆಕೃತಿಯ ಒಂದೊಂದು ಖಾನೆಯಲ್ಲಿಯೂ ಒಂದೊಂದು ಅಕ್ಷರವನ್ನು ಸೇರಿಸಿ ನಿರ್ದಿಷ್ಟವಾದ ಅರ್ಥ ಬರುವಂತೆ ಶಬ್ದಗಳನ್ನು ರಚಿಸುವಿಕೆ; ಪದರಂಗ.

* * * * * *

## ಪಂಟು

**ಬಡಿಯಬೇಡಿ ಪಂಟು(2–25)**

: ಜಂಬದ ಮಾತು; ಒಣ ಹೆಮ್ಮೆಯ ಮಾತು.

*ಜಂಬದ ಮಾತು ಬೇಡ.

* * * * * *

## ಬಂಬು

**ಹಿಡಿ ಮತ್ತೆ ಹಿಂದಿನ ಥಾಟಿ, ಗಿರಣಿಯ ಬಂಬು ಕರೆಯುವದು /ಏಳು! ಆಯಿತು ಏಳು(2–37,38)**

: ಗಾಳಿಯ ಒತ್ತಡದಿಂದ ಕೂಗುವ ಸಾಧನ; ಸೈರನ್ನು.

*ಗಿರಣಿಯ ಸೈರನ್ನು ಕೂಗುತ್ತಿದೆ ವೇಳೆ ಆಯಿತು. ಕರ್ತವ್ಯ ಮುಖನಾಗು.

* * * * * *

**ಕೋಡಂಗಿ**

**ಹಳೆಯವನು ಬಿದ್ದ ಹೊಸ ಹೊಸಬ ಗೆದ್ದ, ಕೋಡಂಗಿ ನಡುವೆ ಎದ್ದ. /ನವೋನವದ ಬಯಲಾಟ ಭಾರಿ ತಾಂಡವವೆ ರಾಷ್ಟ್ರದುದ್ಧ. (3–7, 8)**

: ವಿದೂಷಕ;ಹಾಸ್ಯಗಾರ; ನಕಲಿ.

*ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ನವೋನವ ಪಕ್ಷ ವ್ಯಕ್ತಿಗಳ ಬಯಲಾಟದ ವಿಡಂಬನೆ ಇಲ್ಲಿದೆ. ಚುನಾವಣೆಯ ಸ್ಪರ್ಧೆಯಲ್ಲಿ ವಿದೂಷಕರು ಎದ್ದು ಬಯಲಾಟದಲ್ಲಿ ಕುಣಿಯುವರು.

* * * * * *

**ತಾನಮಾನ, ವಿಷಮ**

**ನವಭಾಗವತರೆ ಬಲ್ಲವರು ಅದರ ಆ ವಿಷಮ ತಾನಮಾನ. (3–14)**

: (ಸಂಗೀತ) ಸ್ವರ ವಿಸ್ತಾರ.

: 1. ಕೆಟ್ಟ; ದುಷ್ಟ.

2. ತಿಳಿಯಲು ಅಸಾಧ್ಯವಾದ; ಗೂಢವಾದ.

3. (ಸಂಗೀತ) ನೂರೆಂಟು ತಾಳಗಳಲ್ಲಿ ಒಂದು.

*ಕವಿಯು ಇಂದಿನ ರಾಜಕೀಯ ದುಷ್ಟ, ಅವ್ಯವಸ್ಥೆಯನ್ನು– ಅದನ್ನು ನಡೆಸುವವರೇ ಬಲ್ಲರು ಅದರ ವಿಷಮ ಸ್ವರವಿಸ್ತಾರ ಎಂದು ಸಂಗೀತದ ಪ್ರತಿಮೆಯ ಮೂಲಕ ವಿಡಂಬಿಸಿದ್ದಾರೆ.

---

## ಓ ಚಾರ್ವಾಕು

**ಗೃಹಭೇದಿ**

**ಬ್ರಹ್ಮಾಂಡವಾದಿ ಗೃಹಭೇದಿ ನೀನು ಕಾಂಬುದಕೆ ಅತಿ ಉದಾರ (4–3)**

: ಮನೆಯವರೊಡನೆ ಜಗಳವನ್ನು ಹುಟ್ಟಿಸುವವನು; ಮನೆಮುರುಕ.

* ಬಾಯ್ಬಡಕ ರಾಜಕೀಯ ವೇದಾಂತಿಗಳ ಮನೆ ಮುರುಕತನದ ವಿಡಂಬನೆ.

---

## ಕರಡಿ–ಕುಣಿತ

### ಕುಣಿಕೋಲು

**ಕಬ್ಬಿಣ ಕೈಕಡಗ, ಕುಣಿಕೋಲು, ಕೂದಲು /ಕಂಬಳಿ ಹೊದ್ದಾಂವ ಬಂದಾನ (1–1, 2)**

: ಕುಣಿಸುವ ಕೋಲು; ಕೋತಿ, ಕರಡಿ ಮೊದಲಾದುವುಗಳನ್ನು ಕುಣಿಸುವವನು ಕೈಯಲ್ಲಿ ಹಿಡಿದುಕೊಳ್ಳುವ ಕೋಲು.

*ಹಳ್ಳಿಯಕಡೆ ಕರಡಿ ಕುಣಿಸುವವನ ವೇಷ ಭೂಷಣ.

* * * * * *

### ಭೀಮರಕ್ಷೆ

**ರೋಮ ರೋಮಗಳಲ್ಲಿ ಭೀಮರಕ್ಷಿಯ ಬಲ /ಕೊರಳಾಗ ಕಟ್ಟಿರಿ ಒಂದಾನ. (4–3, 4)**

: ಯಾವ ಭೀತಿಯೂ ತಟ್ಟದಿರಲೆಂದು ದೇಹದಲ್ಲಿ ಲೇಪಿಸುವ ಕಾಡಿಗೆ; ಕಟ್ಟುವ ಯಂತ್ರ ಮೊದಲಾದವು.

*ಹಳ್ಳಿಯ ಕಡೆ ಕರಡಿ ಕುಣಿಸುವವರಿಂದ ಕರಡಿ ಕೂದಲು ಪಡೆದು ಅದನ್ನು ಶ್ರೀರಕ್ಷೆಯೆಂದು ಮಕ್ಕಳಿಗೆ ಕಟ್ಟುತ್ತಿದ್ದರು.

* * * * * *

### ಮುಸುಮುಸು

**ಮುದ್ದು ಕೂಸಿನ ಹಾಗೆ ಮುಸುಮುಸು ಮಾಡುತ್ತ ಕುಣಿದಾನ (5–3, 4)**

: ಒಂದು ಅನುಕರಣ ಶಬ್ದ. ಮುಸುಗುಟ್ಟು.

*ಕರಡಿ ಕುಣಿಯುವಾಗ ಅದರ ಕುಣಿತವನ್ನು ಸೂಕ್ಷ್ಮವಾಗಿ ಗಮನಿಸಿದ ಕವಿ ಅದು ಮುದ್ದುಕೂಸಿನ ಹಾಗೆ ಮುಸು ಮುಸು ಮಾಡುತ್ತಿತ್ತೆಂದು ಮಕ್ಕಳಿಗೆ ಹತ್ತಿರವಾದ ಚರ್ಯೆಯಲ್ಲಿ ಚಿತ್ರಿಸಿದ್ದಾರೆ.

* * * * * *

### ಚರಿತಾರ್ಥ

**ಕರಡಿಯ ಹೆಸರೀಲೆ ಚರಿತಾರ್ಥ ನಡಿಸ್ಯಾನ /ಪರಮಾರ್ಥ ಎಂಬಂತೆ ಬಂದಾನ (7–3, 4)**

: ಬದುಕು; ಹೊಟ್ಟೆಪಾಡು.

ಕವನದ ಭಾವ ಸಂದರ್ಭ: "ದುಷ್ಟ ಜೀವಿಗಳು ಮೂಢ ಮುಗ್ಧಜೀವಗಳನ್ನು ಕುಣಿಸಿ ಉಪಜೀವನ ಮಾಡುತ್ತವೆ. ಸುಳ್ಳು ಸಾತ್ವಿಕತೆಯನ್ನು ಮೆರೆಸುತ್ತವೆ. ಒಂದು ಕಾರುಣ್ಯಗೀತ".

*ಈ ಕವನದಲ್ಲಿ, ಮನುಷ್ಯನೇ ದುಷ್ಟಜೀವಿಯಾಗಿ, ದುಷ್ಟ ಕ್ರೂರಪ್ರಾಣಿ ಕರಡಿಯನ್ನು ಕಟ್ಟಿ ದಂಡಿಸಿ ಅದನ್ನು ಪಳಗಿಸಿ, ಕುಣಿಸಿ, ತನ್ನ ಉಪಜೀವನ ನಡೆಸುತ್ತಿದ್ದಾನೆ. ಅವನಿಗೆ ಬದುಕುವ ದಾರಿ ನೂರಾರು ಇರುವಾಗ ಇದನ್ನು ಆಯ್ದುಕೊಂಡ ರೀತಿ ಕಂಡು ಬೇಂದ್ರೆ ವ್ಯಥೆ ಪಟ್ಟಿದ್ದಾರೆ.

ಕರಡಿಯ ಹೆಸರಿನಲ್ಲಿ ಚರಿತಾರ್ಥ/ಹೊಟ್ಟೆಪಾಡು ನಡೆಸುತ್ತಾ ಇರುವ ಮನುಷ್ಯ ಅದು ಮುಖ್ಯ ಉದ್ದೇಶ ಎಂಬಂತೆ ವ್ಯರ್ಥವಾಗಿ ನಡೆಯುತ್ತಿರುವನಲ್ಲ. ಅದನ್ನು ಮೀರಿದ ಚಿಂತನೆ ಅವನಲ್ಲಿ ಯಾಕಿಲ್ಲ ಎಂಬ ಭಾವವನ್ನು ಕವಿ ಇಲ್ಲಿ ಪ್ರಕಟಪಡಿಸಿದ್ದಾರೆ.

---

## ಚೆನ್ನಕೇಶವನ ಸಾಕ್ಷಿಯಲ್ಲಿ

### ಕರುವಿಡು

**ಸೃಷ್ಟಿಯನ್ನೆ ಕರುವಿಟ್ಟ ಬೆಳಕು ಬೆಡಗಾಗಿ ಬಿಟ್ಟಿತಲ್ಲ (4-4)**

*ಬೇಂದ್ರೆ ಅವರಿಗೆ ಚೆನ್ನಕೇಶವ ದೇವಾಲಯದ ಅದ್ಭುತ ಶಿಲ್ಪ ವೈಭವವು-ಬೆಳಕು ಸೃಷ್ಟಿಯನ್ನೇ ಕರುವಿಟ್ಟಂತೆ/ಎರಕವಿಟ್ಟಂತೆ ಕಂಡಿದೆ. ಅದು ಅವರಿಗೆ ವಿಶಿಷ್ಟ ವಿಲಾಸದ, ಸೊಬಗಿನ ಗಾರುಡಿಯಾಗಿ ಕಂಡಿದೆ- ಬೆಡಗಾಗಿ ಬಿಟ್ಟಿತಲ್ಲ.

***

ಬೇಂದ್ರೆ ಅವರು 'ಕರುವಿಡು' ಪದವನ್ನು ತಮ್ಮ ಕೌಟುಂಬಿಕ ಜೀವನದ ಅತಿ ಕಷ್ಟವನ್ನು ಅಭಿವ್ಯಕ್ತಿಸಲು ಹೀಗೆ ಬಳಸಿದ್ದಾರೆ:

ನಡುಗಿತ್ತು ಧರ್ಮವು ಅಡಗಿತ್ತು ಇಷ್ಟವು /ಕಷ್ಟವೆ ಬಾಳೊಳು ಕರುವಿಟ್ಟಿರೆ (ಸಖೀಗೀತ)

***

ಅವರ ಮಿತ್ರರ ಮಗಳು ತೀರಿ ಹೋದುದನ್ನು ತಡೆಯಲಾಗದೆ ತುಂಬಾ ನೊಂದು ಅವರು "ಹಾ! ಸರು" ಎಂಬಕವನವನ್ನು ರಚಿಸಿದ್ದಾರೆ. ಆ ಮಗುವಿನ ರೂಪು-ಲಾವಣ್ಯ ಗುಣಲಕ್ಷಣಗಳನ್ನು ಅವರಿಗೆ ಮರೆಯಲಾಗುತ್ತಿಲ್ಲ. ಅದರ ನೆನಪನ್ನು ಅವರು "ಇಗೋ ಆಗಿದೆ ನಿನ್ನ ನೆನವೆ ಕರುವಿಟ್ಟಂತೆ" ಎಂದು ದುಃಖಿಸಿ, ತನ್ನಲ್ಲಿ ಅಚ್ಚೊತ್ತಿದ್ದ ಆ ಮುಗ್ಧ ಮುದ್ದುಮಗಳನ್ನು ನೆನೆದಿದ್ದಾರೆ.

* * * * * *

**ಹಣಿಕು, ಸುಗ್ಗಿ**

**ಹಣಿಕುವುದು ಇಲ್ಲಿ ಬಿರುಬಿರುಕಿನಲ್ಲಿ ಕಣ್ಸೆಳೆಯುವಂಥ ಸುಗ್ಗಿ. (5–2)**

: ಇಣುಕಿ ನೋಡು; ಮರೆಯಲ್ಲಿ ನಿಂತು ನೋಡು.

: 1. ವಸಂತಕಾಲ 2.ಹಬ್ಬ

*ಬೇಲೂರು ಚೆನ್ನಕೇಶವ ದೇವಾಲಯದ ಪ್ರತಿಯೊಂದು ಕಲ್ಲು ಸುಂದರ ಕೆತ್ತನೆಯಿಂದ ಇಡುಕಿರಿದಿದೆ. ಅದು ಸಹೃದಯರನ್ನು ಬಿರುಬಿರುಕಿನಲ್ಲಿ ಇಣುಕಿ ನೋಡುತ್ತಿದೆ. ಅದು ಸಹೃದಯರ ಕಣ್ಣಿಗೆ ಶಿಲ್ಪಕಲಾ ವಸಂತ; ಒಂದು ಹಬ್ಬ.

* * * * * *

**ಮೋಹನಾಂಗ**

**ನೀ ತಾಯಿಯೆನಲೊ ನೀ ಮಾಯಿಯೆನಲೊ ಮೋಹಿನಿಯ ಮೋಹನಾಂಗ ? (7–1)**

: ಮರುಳುಗೊಳಿಸುವ ರೂಪ ಉಳ್ಳವನು; ಸುಂದರ; ಚೆಲುವ.

*ಶ್ರೀ ಚೆನ್ನಕೇಶವನನ್ನು ಕವಿಯು ಹಲವು ವಿಧದಲ್ಲಿ ಬಣ್ಣಿಸಿರುವುದು.

* * * * * *

**ಕಾರು**

**ಜೀವಜೀವನದ ಹೊಟ್ಟೆಕಿಚ್ಚು ಕಾರಿತ್ತು ವಿಷ ಪ್ರಸಾದ. (14–4)**

: ಕಕ್ಕು; ವಮನಮಾಡು; ವಾಂತಿಮಾಡು.

*ಈ ಸಾಲು ಎರಡು ಬಗೆಯ ಅರ್ಥಗಳನ್ನು ಪ್ರತೀತಗೊಳಿಸುತ್ತದೆ: 1. ಆ ದೇಗುಲ ಭಗ್ನಗೊಳ್ಳಲು ಕಾರಣವಾದ (ಜೀವ–ಜೀವಗಳಲ್ಲಿ ನೆಲೆಸಿರುವ) ಹೊಟ್ಟೆಕಿಚ್ಚು (ಮೂಲಭೂತವಾದ, ಮತಾಂಧತೆ ಇತ್ಯಾದಿ) ದೇವಸ್ಥಾನದಲ್ಲಿ ಪ್ರಸಾದವನ್ನಲ್ಲ, ವಿಷಪ್ರಸಾದವನ್ನೇ ಕಾರುತ್ತಿವೆ. 2. ವಿಷ ಪ್ರಸಾದ ಹೊರಗೆ ಕಾರಿಕೊಂಡಾಗ ದೇಹವು ಮರಳಿ ಆರೋಗ್ಯ ಸಂಪಾದಿಸಿಕೊಳ್ಳುತ್ತದೆ. ಚೆನ್ನಕೇಶವನ ಸಾಕ್ಷಿಮಾತ್ರದಿಂದಲೇ ಅಂತಹ ಆರೋಗ್ಯ ಕೈಗೂಡುತ್ತದೆ. ಒಳಗಿನ ವಿಷವೆಲ್ಲ ಹೊರಬಂದು ನಮ್ಮನ್ನು ಸ್ವಸ್ಥರನ್ನಾಗಿಸುತ್ತದೆ ಎಂಬರ್ಥವೂ ಕಾಣುತ್ತದೆ.

* * * * * *

**ಕುರುಳು, ಕೈಮೆ**

**ಅಡಿಯಲ್ಲಿ ಬೆರಳು ಮುಡಿಯಲ್ಲಿ ಕುರುಳು ತೀಡಿಹುದು ಒಂದೆ ಕೈಮೆ (16–3)**

: ಕೂದಲು.

: ಕೈ ಚಳಕ; ಹಸ್ತ ಕೌಶಲ; ನೈಪುಣ್ಯ; ಜಾಣ್ಮೆ.

*ಶಿಲ್ಪಿಯ ಕೈಚಳಕವು ಮೂಡಿಸಿರುವ ಶಿಲ್ಪಗಳ ಕಾಲ್ಬೆರಳು ಮತ್ತು ಮುಡಿಯ ಕೂದಲು ಒಂದೇ ಹದದಲ್ಲಿದೆ.

---

## ಯಮದೇವನ ಒಕ್ಕಲು

**ಹಾಯು**

**ಬೇಕು ಬೇಕು ಎನುತಿವೆ /ಸುಟ್ಟರೂನು ಬೇಯವು /ಅಂತೆಯೇನೊ /ಅಂದರೂನೊ /ಸತ್ತರೂನೂ ಸಾಯವು /ಸಾವಿನಾಚೆ ಹಾಯವು. (2–1 ರಿಂದ 6)**

*ಬೇಂದ್ರೆ ಅವರು ಅತಿ ದುರಾಸೆಯ, ಸ್ವಾರ್ಥದ, ನಿತ್ಯಮರಣ ಸಿದ್ಧರಾದ ಜನರನ್ನು ವಿಡಂಬಿಸಿ 'ಯಮದೇವನ ಒಕ್ಕಲು' ಎಂಬ ಕವನವನ್ನು ರಚಿಸಿದ್ದಾರೆ. "ಧರ್ಮ ವಿರುದ್ಧವಾದ ಅರ್ಥ ಕಾಮಗಳಲ್ಲಿ ಆಸಕ್ತರಾದವರು ಯಮದೇವನ ಒಕ್ಕಲು. ಅವರಿಗೆ ಮರಣದಿಂದ ಬಿಡುಗಡೆಯಿಲ್ಲ" ಎಂದು ಸಂದರ್ಭ ಸೂಚಿಯಲ್ಲಿ ತಿಳಿಸಿದ್ದಾರೆ. ಅಂತಹ ಜೀವಿಗಳು "ಸಾವಿನಾಚೆ ಹಾಯವು" ಎಂದು ವ್ಯಂಗ್ಯವಾಗಿ ನುಡಿದಿದ್ದಾರೆ. ಹಾಯು (ಕ್ರಿ)=ದಾಟು, ದಾಟಿಹೋಗು.

ಹಾಯವು ಎಂಬ ಪದವು ದಾಟಿ ಹೋಗುವುದಿಲ್ಲ ಎಂಬ ಅರ್ಥವನ್ನು ಪ್ರಕಟಿಸುತ್ತದೆ. ಅಂತಹವರು ಸಾವಿನಲ್ಲಿಯೇ ಇರುತ್ತಾರೆ!.

---

## ಬೀದಿ ನಾಯಿ ರಾಧೆ

**ಅಸರಂತ**

**ಬೀದಿ ನಾಯಿ ರಾಧಿಗೆ ಅಸರಂತವು ಮರಿಗಳು (3–1,2)**

: ಯಾವಾಗಲೂ; ನಿರಂತರ.

*ಬೀದಿ ನಾಯಿ ಯಾವಾಗಲು ಮರಿ ಹಾಕುವುದನ್ನು ಅಸರಂತ ಎಂಬ ಆಡುನುಡಿ ಬಳಸಿ ಹೇಳಿದ್ದಾರೆ.

***

ಬೇಂದ್ರೆ ಅವರು "ಜೋಗಿ" ಕವನದಲ್ಲಿ ಕೋಗಿಲೆಯ ಪ್ರತಿಮೆಯಲ್ಲಿ -ಓಂಕಾರದ ಕೂಗು ಅಧ್ಯಾತ್ಮ ಪಥಿಕನನ್ನು ಸದಾ ಕೂಗಿ ಕರೆಯುವುದನ್ನು ಹೇಳಲು ಈ ಪದ ಬಳಸಿದ್ದಾರೆ.

**ಯಾಕ ಹೀಂಗ ಅಸರಂತ ಕೂಗತದ ಏನು ಇದಕೆ ಬ್ಯಾನ್ಯೋ? (ಜೋಗಿ)**

***

ದೇವಿ ಪಾರ್ವತಿಯು ಸದಾ ಪತಿ ಶಿವನನ್ನೇ ಜಪಿಸುವಳು ಎಂಬುದನ್ನು "ಅಸರಂತ" ಪದದಲ್ಲಿ ಸೂಚಿಸಿದ್ದಾರೆ.

**ಅಸರಂತ ಪತಿಯ ಗುಣಕಥನ ಜಪವೆ ಐಶ್ವರ್ಯವಾಗೆ ನಿನಗೆ (ಮುಕ್ತಕಂಠ: ಆನಂದ ಲಹರಿ)**

---

## ಅ–ಸ್ಮಿ–ತಾ

**ಪಂಚ ಪಕ್ವಾನ್ನ**

**ಪಂಚ ಪಕ್ವಾನ್ನವನು ಬಿಕ್ಕೆಯಲಿ ಕಂಡಾಗ/ ಅಮೃತಾನ್ನ ಉಂಡಿರುವೆಯಾ? (5, 6)**

: ಐದು ಬಗೆಯ ಪಕ್ವಾನ್ನಗಳು; ಅಮೃತಾನ್ನ, ಭೋಜ್ಯಾನ್ನ, ದೇವಾನ್ನ, ದಿವ್ಯಾನ್ನ ಮತ್ತು ಅಮೃತರಸಾಯನ ಎಂದೂ ಚಿತ್ರಾನ್ನ, ದಧ್ಯನ್ನ, ಶರ್ಕರಾನ್ನ, ಮಾಷೋದನ(ಉದ್ದಿನ ಹುಡಿ ಅನ್ನ), ತಿಲೋದನ (ಎಳ್ಳುಹುಡಿ ಅನ್ನ) ಎಂದು ಎರಡು ವಿಧಗಳಿವೆ.

ಮೃಣ್ಮಯ ಶರೀರಕ್ಕೆ ಪಂಚಪಕ್ವಾನ್ನ ಅತ್ಯಗತ್ಯ. ಆದರೆ ನಮ್ಮೊಳಗೆ ನೆಲೆಸಿರುವ, ಸಾವಿಲ್ಲದ ತತ್ತ್ವಕ್ಕೆ ಅನ್ನ ಯಾವುದು? ಆ ಸಾವಿಲ್ಲದ ಅನ್ನವನ್ನು ಅಮೃತಾನ್ನವನ್ನು ಉಂಡಿರುವೆಯೇ? ಎಂದು ಇಲ್ಲಿ ಬೇಂದ್ರೆ ಕೇಳುತ್ತಿರುವರು. ಆ ಅನ್ನವನ್ನು ಅರಿವು ಎಂದು ಕರೆಯಬಹುದೇನೋ.

---

## ಅಂತೆವೋಲ್

### ದ್ವಂದ್ವ

**ಎರಡರಲ್ಲೆ ಎಲ್ಲವಾಗಿ/ ಎರಡೆಂಬುದೆ ಅಲ್ಲವಾಗಿ/ ದ್ವಂದ್ವದಲ್ಲಿ ದಂಪತಿ/ ವಿಶ್ವವಾದ ಶಿವಸತಿ (16, 17, 18, 19)**

: ಎರಡು; ಜೊತೆ; ಯುಗಳ.

* 'ಸಂತತಿಯೆ ಚಿರಂತನಾ' ಎಂಬುದು ಬೇಂದ್ರೆಯವರ ಚಿಂತನ. ಪ್ರೀತಿಯೆಂಬ ಚುಂಬಕದಿಂದ ಒಂದಾಗುವ ಗಂಡು ಹೆಣ್ಣು ಎರಡು ಜೀವ. 'ಆ ಮುಖಾ–ಈಮುಖಾ/ ಒಂದು ಸತ್ತು/ ಒಂದು ಅತ್ತು/ ಒಂದಕ್ಕೊಂದು ಸಮ್ಮುಖಾ/ ಬೇರೆ ಬತ್ತಿ/ ದೀಪ ಹತ್ತಿ/ ಬೆಳಗುತಿಹುದು ಸ್ನೇಹವಾ/ ತುಂಬಿ ಬೇರೆ ದೇಹವಾ'.(ಸಖೀಗೀತ:ಚಿರಂತನ)

ಅವರಿಬ್ಬರಿಂದ ಒಂದು ಜೀವ ಮೈತಳೆದಾಗ 'ಎರೆಡೆಂಬುದೆ ಅಲ್ಲವಾಗಿ' ಹೋಗಿ ಅವರು 'ವಿಶ್ವವಾದ ಶಿವಸತಿ' ಆಗುತ್ತಾರೆ. ಇದು ಭೇದದಲ್ಲಿ ಅಭೇದವಾಗುವುದು.

* * * * * *

### ಹೊಳೆಸು

**ತಿಳಿದಮಾತೆ ಹೊಳೆಸಿದಂತೆ/ ಎದೆಯ ಬೀಜ ಬೆಳೆಸಿದಂತೆ/ ಭಾವನಾದದಂತೆವೋಲ್ (25, 26, 27)**

:ತೋಚು; ಸ್ಫುರಿಸು.

*ತಿಳಿದ ಮಾತು ಸ್ಫುರಿಸಿ, ಎದೆಯ ಬೀಜ ಬೆಳೆದು, ಭಾವನಾದವಾಗಿ ಕಾವ್ಯ ರೂಪುಗೊಳ್ಳುವುದು ಇಲ್ಲಿದೆ.

---

## ಗಾಳಿಗಳೇ

### ಪೊಗರು

**ಮೂಡಲಿದೆ ಹೊಸ ಚಿಗುರು /ಮೂಡಲಿದೆ ಹೊಸ ಪೊಗರು. (4, 5)**

: ಕಾಂತಿ; ಹೊಳಪು; ಮೆರುಗು; ಪ್ರಕಾಶ.

*ಹೊಸ ಚಿಗುರು ಮೂಡಿದಾಗ ಅದು ಹೊಸ ಕಾಂತಿಯಿಂದಿರುವುದಷ್ಟೆ ಅಲ್ಲ ಇಡೀ ಜೀವ ಜಗತ್ತಿಗೆ ಪೋಷಕವಾಗಿ ಅವುಗಳು ಉಳಿದು ಹೊಳೆಯುವ ಹಾಗೆ ಮಾಡುತ್ತದೆ.

---

## ಜೀವನನಾಟ್ಯ

**ಒಳುಬಾಳು**

**ಮುಟ್ಟಿ ಕಟ್ಟಿ ತನಿ ಮೂರ್ತಿಗೊಳಿಸಿ ಮುತ್ತಿಡಲು ಹೊರಕೆ ತಂದು /ಬಯಲನೊಂದು ಗುಡಿಗೊಳಿಸುತಿಹಳು ಒಳುಬಾಳ ಹರಕೆ ಎಂದು. (2–3, 4)**

: ಒಳ್ಳೆಯ ಜೀವನ; ಉತ್ತಮವಾದ ಬದುಕು.

*ಅಂಬಿಕಾತನಯದತ್ತರಿಗೆ ಜಗದ ತಾಯಿಯರನ್ನು ವರ್ಣಿಸುವುದೆಂದರೆ ಅತ್ಯಾನಂದ. ಸತ್ಯದ ಪ್ರಕಟರೂಪ ತಾಯಿ. ಅವಳು ಒಳುಬಾಳು–ಒಳ್ಳೆಯ ಬಾಳಿನ ಹರಕೆ ಎಂದು ತನ್ನ ಒಡಲಕುಡಿಯನ್ನು ಪೋಷಿಸುವ ರೀತಿಯು ಮಾತಿನ ಬಣ್ಣನೆಗೆ ಸಿಗದ ಮಾತೃವಾತ್ಸಲ್ಯ.

ಅವಳ ಒಡಲಿನ ಒಲ್ಮೆಯಾದ ಕೂಸು ಬಯಲು. ಏನೂ ಅಲ್ಲದಿರುವ ಮಣ್ಣಿನ ಗೊಂಬೆ. ಅದನ್ನು ಗುಡಿಯನ್ನಾಗಿ ಮಾಡಿ ಪವಿತ್ರಾತ್ಮನನ್ನಾಗಿಸುವ ತಾಯಿ 'ಬಯಲನೊಂದು ಗುಡಿಗೊಳಿಸುತಿಹಳು'. ಅವಳು ಮಹಿಮಾವಂತಳು.

---

## ನಲ್ ತಾಯಿ

**ಆಶಿಸ**

**ಮುಂಗೆಟ್ಟ ಖೋಡಿ! ಮರಣವ ನೋಡಲಿಲ್ಲ। /ಕಂಗೆಟ್ಟು ಆಶಿಸವ ಬೇಡಲಿಲ್ಲ॥ (17,18)**

*ತಾಯಿ ಪ್ರಾಣಬಿಡುವ ಹೊತ್ತಿನಲ್ಲಿ ತಾನಿದ್ದು ಆಕೆಯ ಆಶಿಸ–ಆಶೀರ್ವಾದ ಪಡೆಯಲಿಲ್ಲ ಎಂಬ ಅನುತಾಪ ಈ ಸಾಲುಗಳಲ್ಲಿದೆ.

---

## ಕನ್ನಡದಪ್ಪನ ಕೋಲು

**ರಾಸಲೀಲೆ**

**ಕೋಲು ಕೋಲಿನ ಆಟ, ಕೂಡಿ ಕೊಳಲಿನ ಆಟ, ರಾಸಲೀಲೆಯ ಕೋಲ.(1,2)**

: ರಾಸಕೇಳಿ= ಕೃಷ್ಣನು ಗೋಪಿಕಾ ಸ್ತ್ರೀಯರ ಜೊತೆ ಆಡಿದ ಮಂಡಲಾಕಾರದ ನೃತ್ಯ.

*ಈ ಕವನದ ಭಾವ ಸಂದರ್ಭ: ಕನ್ನಡ ರಾಷ್ಟ್ರಗೀತೆ ಜಾನಪದದ ಛಂದದಲ್ಲಿ.

---

## ರಾಮರಾಮಾ!

### ತೊರೆಗರೆ

**ಕರುವಿನ ಕರೆ ಕೇಳಿ ತೊರೆಗರೆಯದ ಹಸು /ಇರಬಹುದೇನೆಲ್ಲಿ ರಾಮರಾಮಾ॥ (1–1, 2)**

: (ಮೊಲೆ ತುಂಬಿ)ಹಾಲನ್ನು ಸುರಿಸು.

* 'ಗೆಳೆಯ ವಿನೀತ ರಾಮಚಂದ್ರ(ಬೆಳಗಾವಿ) ರಾಯರ ಕರೆಗೆ ಓಗೊಟ್ಟು ಅವರ ಎಳೆತನದಲ್ಲಿ ಅವರಿಗಾಗಿ ಪ್ರಾರ್ಥನೆ' ಎಂಬ ಭಾವಸಂದರ್ಭ ಈ ಕವನಕ್ಕಿದೆ.

* * * * * *

### ಎರಕ

**ಮರುಗುವ ಮರಿಗಾಗಿ ಎರಕವನೆರೆಯದ ಮರುಕವು ಮರುಕವೆ ರಾಮರಾಮಾ॥ (1–3, 4)**

: ಪ್ರೀತಿ; ಪ್ರೇಮ; ಅನುರಾಗ.

*ಈ ಸಾಲುಗಳಲ್ಲಿ ಮರುಗು, ಎರಕ, ಮರುಕ 'ರ' ಕಾರದ ಒಳ ಪ್ರಾಸಗಳಿಂದ ವಾತ್ಸಲ್ಯದ ಪ್ರೀತಿಯನ್ನು ಉಣಬಡಿಸಿದೆ.

ದಿನಕರನುಮಿಂದ್ರನುಂ ನಿಜತನಯರ ದೆಸೆಗೆರಗಿದೆರಕದಿಂ ಗೆಲವಿನ ಮಾತನೆ ನುಡಿಯೆ (ಪಂಪ ಭಾ 12–142)

ಪಂಪನ ಹಳಗನ್ನಡ ಎರಕ/ಪ್ರೀತಿ ಮತ್ತೆ ಹೊಸಗನ್ನಡದಲ್ಲಿ ಮೂಡಿ ಅನುರಾಗದ ಆಲಾಪದ ಸವಿ ನೀಡಿದೆ.

* * * * * *

### ಮಡಿಗೊಳಿಸು

**ಮಡುವಾಗು ನಲ್ಲಮ್ಮ ಒಕ್ಕಲಿಹ ಮಡಿವಳಿತಿ /ಮಡಿಗೊಳಿಸೆನ್ನೆಂದೆ ರಾಮರಾಮಾ॥ (6–3, 4)**

: ಶುಭ್ರಮಾಡು; ಸ್ವಚ್ಛಗೊಳಿಸು.

*ನಲ್ಲಮ್ಮದೇವಿ ನಮ್ಮನ್ನೆಲ್ಲ ಶುಭ್ರಮಾಡುವ ಮಡಿವಳಿತಿ. ಅವಳು ಮಡಿಗೊಳಿಸಲಿ ಎಂದು ಪ್ರಾರ್ಥನೆ.

* * * * * *

**ಸೂಸಲ**

**ಮಿಾಸಲ ತೊರೆಯಾಗಿ ಈಸಲ ಬಂದಿದೆ/ ಸೂಸಲ ನೆರೆಯಲ್ಲಿ ರಾಮರಾಮಾ॥ (14–1, 2)**

: ಸಿಂಚನ; ಸೇಚನ.

*ಬಳಸದೆ ಕಾಯ್ದಿರಿಸಿದ ವಸ್ತು ಮಿಾಸಲು. ಅಂತಹ ಪವಿತ್ರ ಹೊಳೆ ಸಿಂಚನಗೈಯುತ್ತ ನಿನಗಾಗಿ ಬಂದಿದೆ ಎಂಬ ಭಾವ.

* * * * * *

**ಬೀಸಲು**

**ಬೀಸಲು ಮನದಲ್ಲಿ ಉತ್ಸಾಹ ಜೀವಾಳ (14–3)**

: ವಿಶಾಲವಾದ ಮನಸ್ಸು.

*ವಿಶಾಲಮನದ ಜೀವಾಳವೆಂದರೆ ಉತ್ಸಾಹ.

* * * * * *

**ಅಣ್ಣಿ**

**ಅಣ್ಣಿಯಗಡಲಿನ ತಣ್ಣನ್ನ ತಿಳಿಯಲ್ಲಿ/ ಬೆಣ್ಣೆಯಾಗುತ ತೇಲು ರಾಮರಾಮಾ॥ (16–1, 2)**

: 'ಅಣ್ಣಿ' ಪದ ಪ್ರೀತಿಯನ್ನು ಪ್ರಕಟಪಡಿಸುತ್ತದೆ.

*ಅಣ್ಣಿಗಡಲು–ಪ್ರೀತಿಯ ಕಡಲು. ಅಲ್ಲಿ, ತಣ್ಣನ್ನ ತಿಳಿಯಲ್ಲಿ ಬೆಣ್ಣೆಯಾಗುತ ತೇಲು ಎಂದು ಬೇಂದ್ರೆ ಅವರು ತನ್ನ ಸ್ನೇಹಿತ ವಿನೀತ ರಾಮಚಂದ್ರರಾಯರಿಗೆ ತಿಳಿಸಿದ್ದಾರೆ.

* * * * * *

**ಒಳವು**

**ಗುಡಿಯೆ ಮಡಿಯ ನಾಡು ಎಂದೆಂಬ ಜಾಣರ/ ನುಡಿಯ ಒಳವೇನಿಹುದು ರಾಮರಾಮಾ॥ (18–3, 4)**

:ಅಂತರಂಗ; ರಹಸ್ಯ.

*ಮಣ್ಣಿನ ಹುಡಿಯಿಂದ ಗುಡಿಯನ್ನು ಕಟ್ಟಿರುವುದು. ಆದರೆ, 'ಗುಡಿಯೆ ಮಡಿಯನಾಡು' ಎಂಬ ಜಾಣರ ನುಡಿಯ ರಹಸ್ಯ ಏನಿರಬಹುದು? ಎಂದು ಪ್ರಶ್ನಿಸಿದ್ದಾರೆ.

ಒಳುವೆಲ್ಲ ನನಗೆ ಒಳಿತಾಗಿ ತೋರಿ ಒಲವತ್ತ ಹರಿಯುತಿರಲಿ. (ಹೃದಯಸಮುದ್ರ :ಮೈಯುನೀನು)

---

## ಹರಕೆ

### ಪಡೆದಪ್ಪ

**ದೇವನಲಿ 'ಪಡೆದಪ್ಪನಾಗು' ಎಂದು. (1–3, 4)**

: (ದೇವರ) ಅನುಗ್ರಹವನ್ನು ಹೊಂದಿದವನು; ಪುಣ್ಯವಂತನಾದವನು; ಭಾಗ್ಯವಂತ.

*ಇದು ಗೆಳೆಯ ಮಧುರಚೆನ್ನರಿಗೆ ಹಾರೈಸುತ್ತ ಬರೆದ ಕವನ. ಇದರಲ್ಲಿ ಅಧ್ಯಾತ್ಮಜೀವಿ ಮಧುರಚೆನ್ನ ದೇವರ ಅನುಗ್ರಹ ಪಡೆಯಲಿ ಎಂದು ಕವಿ ಆಶಿಸಿದ್ದಾರೆ.

* * * * * *

### ಹಂಪುಪಡೆ

**ಹಂಪುಪಡೆಯೆಂದು ನಾ ಎರೆಯುವೆನು ನೀ ಸರ್ವ/ ಸಂನ್ಯಾಸಿಯಾಗು ಎಂದು. (12–3, 4)**

: ಅದ್ದೂರಿಯಾಗು; ವೈಭವವನ್ನು ಹೊಂದು.

*ವಿರಕ್ತ ಭಾವ ವೈಭವದಲ್ಲಿ ಲೀನವಾಗು ಎಂಬ ಹಾರೈಕೆ.

* * * * * *

### ಜಂಜಾಲ

**ಜೀವಬಂಧುವೆ! ಕೇಳು, ಉಳಿದ ಜಂಜಾಲವನು/ ತಾನಾಗಿ ಮರೆಯಬೇಕು (20–3, 4)**

: ತೊಂದರೆ; ಕ್ಲೇಶ; ಕಷ್ಟ.

* * * * * *

### ಅರುಹು

**ಗುರುವಂ ಮರೆಯಬೇಡೈ ಗೆಳೆಯಾ! ಗುರುಬಂಧುವೇ /ಅರುಹಂ ತೊರೆಯಬೇಡೈ ಒಲವೇ! ಸ್ನೇಹಸಿಂಧುವೇ॥ (21–1, 2)**

: ಅರಿವೇ ಅರಹು; ಅರುವು.

*ಬೇಂದ್ರೆಯವರು ಯೋಗಿ ಶ್ರೀ ಅರವಿಂದರನ್ನು 'ಶ್ರೀ ಗುರುವೆ ಅರುವೆ, ಶರಣಾಗಿ ಬರುವೆ' ಎಂದು ಪ್ರಾರ್ಥಿಸಿದ್ದಾರೆ.

ಬೇಂದ್ರೆ, ಮಧುರಚೆನ್ನ, ಸಿಂಪಿ ಲಿಂಗಣ್ಣ, ವಿ.ಕೃ. ಗೋಕಾಕರು ಯೋಗಿ ಶ್ರೀ ಅರವಿಂದರ ಶಿಷ್ಯರು. ಇಂದಿಗೂ ಆ ನಾಲ್ಕು ಜನರ ಮಕ್ಕಳಾದ ವಾಮನಬೇಂದ್ರೆ, ಪುರುಷೋತ್ತಮ ಗಲಗಲಿ, ವೀರೇಂದ್ರ ಸಿಂಪಿ, ಅನಿಲ್ ಗೋಕಾಕ್ ಶ್ರೀ ಅರವಿಂದರ ಅನುಯಾಯಿಗಳಾಗಿದ್ದಾರೆ. ಇಂದಿಗೂ ಗುರುಬಂಧುಗಳ ಸ್ನೇಹಸಿಂಧು ಸತತವಾಗಿ ಅಧ್ಯಾತ್ಮ ಮಾರ್ಗದಲ್ಲಿ ಸಾಗುತ್ತಿದೆ.

---

# ನೃಸಿಂಹ ಸ್ತೋತ್ರ

## ಡಿಂಭ

**ಡಿಂಭದ ಈ ಕಂಭದೊಳಗೆ ತಾವು ಅಡಗಿ ಇರುವಿರಿ (1–1)**

: ಮೈ; ದೇಹ; ಶರೀರ.

* * * * * *

## ಅರವಿಂದ

**ಮರೆವಿನಿಂದ ಇದ್ದೆ ನಾನು ಅರಿವ ಹರಡಿ ಬಂದಿರಿ/ ಅರಿವಿನ ಅರವಿಂದವಾಗ ಹೊರಳಿ ಅರಳಿ ಬಂದಿತು/ ಅಂದಿನ ಮಕರಂದವಿಂದಿಗಾನಂದವ ಕೊಡುತಿದೆ/ ನಾರಾಯಣ ನಾರಾಯಣ ಹೇ ನೃಸಿಂಹ ಪಾಹಿ ಮಾಮ್॥ (3–1 ರಿಂದ 4)**

: ತಾವರೆ; ಕಮಲ; ಸರೋಜ.

*ಕಮಲ ಕೆಸರಿನಲ್ಲಿ ಹುಟ್ಟುತ್ತದೆ. ಆದರೆ ಅದು ಬೆಳಕಿಗಾಗಿ ಹಂಬಲಿಸುತ್ತದೆ. ಸೂರ್ಯನ ಬೆಳಕಿನಲ್ಲಿ ಅರಳುತ್ತದೆ. ಕೆಸರಿನ ಸತ್ವದಲ್ಲಿರುವ ನಿರ್ಮಲತೆಯ ಪ್ರತೀಕ ಕಮಲ. ಅಜ್ಞಾನ, ಮರೆವು, ಜಡತ್ವಗಳ ಕೆಸರಿನಿಂದಲೇ ಜ್ಞಾನ, ಅರಿವು, ಚಲನಶೀಲತೆ ಪ್ರಕಾಶಗೊಳ್ಳುವುದಕ್ಕೆ ಕಮಲ ಸಾಕ್ಷಿಯಾಗಿದೆ. ಅದು ನಿಸರ್ಗ ಸಹಜಕ್ರಿಯೆ. ಅರವಿಂದ ಪುಷ್ಪವನ್ನು ನಮ್ಮ ಭಾರತೀಯರು ವ್ಯಕ್ತಿಯ ವಿಕಸನದ ಪ್ರತೀಕವಾಗಿ ಕಂಡಿದ್ದಾರೆ. ಅದು ಭಕ್ತಿಯ ಏಕಾಗ್ರತೆಯ ಶಾಂತ ಧ್ಯಾನಸ್ಥಿತಿಯಲ್ಲಿ ಆತ್ಮ ವಿಕಸನಗೊಳ್ಳುವ ಬೆರಗು. ಭಕ್ತಿ ಹಾಗೂ ಅಧ್ಯಾತ್ಮ ಏಕತ್ರಗೊಂಡದ್ದು ಅರಳಿದ ಕಮಲದಲ್ಲಿ ಕಂಪಾಗಿ ಹೊರಹೊಮ್ಮುತ್ತದೆ.

ಕಮಲವು ಸೂರ್ಯನ ಬೆಳಕಿಗೆ ಆಶಿಸುತ್ತದೆ. ಬೆಳಕು ಎಂದರೆ ಜ್ಞಾನ, ಅರಿವು. ಅದು ವ್ಯಕ್ತಿಯ ಚೈತನ್ಯದ ವಿಕಾಸದ ಶಕ್ತಿ. ಅರಿವು ಹರಡಿದಾಗ ವ್ಯಕ್ತಿಯ ಅಂತರ್ಯದ ಕಮಲ ಅರಳುತ್ತದೆ. ಈ ತಿಳಿವನ್ನು ಮೇಲಿನ ನುಡಿ ಪ್ರತಿಮಾತ್ಮಕವಾಗಿ ಪ್ರಕಟಪಡಿಸುತ್ತದೆ.

ಅರಿವಿನಲ್ಲಿ ಅರಳಿದಾಗ ಹೊಮ್ಮುವ ಕಂಪು-ವ್ಯಕ್ತಿಯ ಆನಂದ. ಇದು ಒಂದು ನೆಲೆಯಲ್ಲಿ ಲೋಕದ ಅರಿವು, ಮತ್ತೊಂದು ನೆಲೆಯಲ್ಲಿ ಭಕ್ತಿಯ ವಿಕಸನ. ಯೋಗಿ ಅರವಿಂದರು ಬೇಂದ್ರೆಯವರ ಅಧ್ಯಾತ್ಮಿಕ ಗುರು. 'ಅರಿವಿನ ಅರವಿಂದ' ಎಂಬುದು ಅದನ್ನು ಪುಟ್ಟಪೂರ ಧ್ವನಿಸುತ್ತಿದೆ.

* * * * * *

**ಹಸು**

**ತಾವೆ ಕೈಯ ಬಿಟ್ಟ ಮೇಲೆ ದೆಸೆಯಾವುದು ಹಸುವಿಗೆ?**

: ಎಳೆಯದು; ಚಿಕ್ಕವಯಸ್ಸಿನದು.

* 'ಸಂಕಷ್ಟದ ದರ್ಶನದಿಂದ ಅದರ ಪರಿಹಾರಕ್ಕೆ ಮಾಡಿದ ಪ್ರಾರ್ಥನೆ' ಎಂಬ ಭಾವ ಸಂದರ್ಭ ಹೊಂದಿದ 'ನೃಸಿಂಹ ಸ್ತೋತ್ರ'ದಲ್ಲಿ ಬೇಂದ್ರೆ ಅವರು ನಾ ಚಿಕ್ಕವಯಸ್ಸಿನವನು. ತಾವು ಕೈ ಬಿಟ್ಟರೆ ನನಗೆ ಗತಿ ಇಲ್ಲ. ತಾವು ಕಾಪಾಡಿ ಎಂದು ಪ್ರಾರ್ಥಿಸಿದ್ದಾರೆ.

---

## ದರಿದ್ರನಾರಾಯಣ

**ಕಿಳ್ಳಿಕೇತ**

**ಕೆಲಸವಿಲ್ಲದ ಬಡವ ಕೈಗೊಂಬೆಯಾಗುವನು /ಕಿಳ್ಳಿಕೇತನ ಹಿಂದೆ ಸೂತ್ರಧಾರ (3-3, 4)**

: ಒಂದು ಬಗೆಯ ಸೂತ್ರಗೊಂಬೆ.

* ಬಂಡವಾಳಶಾಹಿಗಳ ಕೈಗೊಂಬೆಯಾಗಿರುವ ಕೆಲಸವಿಲ್ಲದ ಬಡವನನ್ನು 'ಕಿಳ್ಳಿಕೇತ' ಎಂಬ ಪ್ರತಿಮೆಯಲ್ಲಿ ಚಿತ್ರಿಸಿ ಅವನ ಅಸಹಾಯಕತೆ, ಜೀವರಹಿತ ಸ್ಥಿತಿಯನ್ನು ಧ್ವನಿಸಿದ್ದಾರೆ.

* * * * * *

**ವಶೀಲೆ**

**ಶೀಲಕೆ ಬೆಲೆಕೊಡು, ವಶೀಲೆ ನಿಲ್ಲಿಸು, ಗುಣಗೌರವ ಮಾಡು (18-1, 2)**

: (ವರ್ಚಸ್ಸುಳ್ಳ ವ್ಯಕ್ತಿಗಳ) ಪ್ರಭಾವ; ಶಿಫಾರಸ್ಸು.

*ದುಡಿವ ವ್ಯಕ್ತಿಯ ವ್ಯಕ್ತಿತ್ವವನ್ನು ಗೌರವಿಸಿ ಎಂಬ ವಿನಮ್ರ ನುಡಿ.

* * * * * *

**ಅಕೊ, ಇಕೊ**

ಇಕೋ ನೆಲ–ಅಕೋ ಜಲ /ಅದರ ಮೇಲೆ ಮರದ ಫಲ (19–1, 2)

* 'ಅಕೊ', 'ಇಕೊ' ಪದವನ್ನು ಬೀದರದ ಜನ ಅತಿ ಸಹಜವಾಗಿ ತಮ್ಮ ಮಾತಿನಲ್ಲಿ ಬಳಸುತ್ತಾರೆ. 'ಅಕೊ' ದೂರದ ವಸ್ತುವಿನ ಅಥವಾ ವಿಷಯದ ಕಡೆಗೆ ಗಮನ ಸೆಳೆಯಲು ಉಪಯೋಗಿಸುವ ಮಾತು. 'ಇಕೊ' ಹತ್ತಿರದ ವಸ್ತು, ವಿಷಯ ಕುರಿತದ್ದು. ಅಲ್ಲಿ, ಇಲ್ಲಿ; ಅದು,ಇದು; ಹಾಗೆ ಹೀಗೆ ಇತ್ಯಾದಿ ಸಾಂದರ್ಭಿಕ ಅರ್ಥಗಳನ್ನು ಅದು ಒಳಗೊಳ್ಳುತ್ತದೆ.

***

**ಉಷೆ ತಂದಾಳಿಕೋ, ರವಿ ಬಂದಾನಿಗೋ (ಮುಕ್ತಕಂಠ: ಉಷೆ ತಂದಾಳಿಕೋ)**

***

'ಇಕೋ'ವನ್ನು ಎಕೋ–ಮಾರ್ದನಿ; ಪ್ರತಿಧ್ವನಿ ಎಂಬರ್ಥದಲ್ಲಿಯೂ ಬೇಂದ್ರೆ ಬಳಸಿದ್ದಾರೆ. 'ಇಕೋ' ಎಂದರೋ 'ಇಕೋ' ಬಂತು, ಸುತ್ತೆಲ್ಲ ಕಲ್ಲು ಗುಡ್ಡ. (ಮುಗಿಲಮಲ್ಲಿಗೆ: ವದತೋವ್ಯಾಘಾತ)

---

## ಪ್ರತಿವರ್ಷದಂತೆ ಬಂತ್ಸು, ಶ್ರಾವಣಾ

**ಕಂತು**

**ಇದು ವಿಶ್ವಜೀವದಾಕರ್ಷ/ ಹೊಮ್ಮಿತೋ ಹರ್ಷ/ ಏನು ಪ್ರತಿ ವರ್ಷ–/ ದಂತೆ ಬಂತು/ ಮೈದಾಳಿದಂತೆ ಕಂತು. (2–1 ರಿಂದ 5)**

*ಬೇಂದ್ರೆ ಅವರು ಶ್ರಾವಣ ಕಾಲ ಬರುವ ರೀತಿಯನ್ನು "ಮೈದಾಳಿದಂತೆ ಕಂತು" ಎಂದು ವರ್ಣಿಸುವಲ್ಲಿ ವಿಶ್ವಜೀವದಾಕರ್ಷಣವಾದ ಮನ್ಮಥನು ಸೃಷ್ಟಿಗೊಂಡಿರುವುದು ಎಂದಿದ್ದಾರೆ.

'ಕಂತು' ಆ ಕಾಲದ ಸರ್ವಲಕ್ಷಣವನ್ನು ಸೂಚಿಸುವ ಮನ್ಮಥನ ಪ್ರತಿಮೆ.

***

**ಬಂತಿದೊ ಶೃಂಗಾರ ಮಾಸ/ ಕಂತು ನಕ್ಕ ಚಂದ್ರಹಾಸ (ನಾದಲೀಲೆ: ದೀಪ)**

ಮನ್ಮಥನು ಆಹ್ಲಾದಗೊಂಡು ನಕ್ಕದ್ದೇ ಚಂದ್ರಹಾಸ–ಬೆಳದಿಂಗಳ ನಗೆ ಎಂದು ಬೇಂದ್ರೆ ಅವರು ರೂಪಕಾತ್ಮವಾಗಿ "ಕಂತು ನಕ್ಕ ಚಂದ್ರಹಾಸ" ಬಣ್ಣಿಸಿದ್ದಾರೆ. ಶೃಂಗಾರ ಮಾಸದ ಆಮೋದ, ಪರಿಮಳ, ಆನಂದ ಈ ನುಡಿಯಲ್ಲಿ ನಲಿದಾಡಿದೆ.

ಶೃಂಗಾರ ಮಾಸದ ಉದ್ದೀಪನಕ್ಕೆ ಒಳಗಾದ ಹೆಣ್ಣು ತನ್ನ ಸಖನಿಗಾಗಿ ಆಶಿಸುವ ರೀತಿ "ಚಿಕ್ಕಿ ತೋರಸ್ತಾವ ಚಾಚಿ ಬೆರಳ/ ಚಂದ್ರಾಮ ಕನ್ನಡಿ ಹರಳ। ಮನಸೋತು ಆಯಿತು ಮರುಳ।".

"ಚಂದ್ರಾಮ ಕನ್ನಡಿ ಹರಳ" ಎಂಬ ಮಾತಿನಲ್ಲಿ ಅವಳ ರೂಪು ಲಾವಣ್ಯ ಪ್ರತಿಬಿಂಬಗೊಂಡ ಧ್ವನಿರಮ್ಯತೆ ಇದೆ.

* * * * * *

## ಖ್ಯಾಲಾ

**ಈ ಮೋಡದೊಡ್ಡಿನ ಮ್ಯಾಲಾ/ ಮಂಜಿನ ಖ್ಯಾಲಾ. (3–1, 2)**

: ಮನಸ್ಸಿನ ಒಲವು; ಇಷ್ಟ; ಮರ್ಜಿ.

*ಮಳೆ, ಮೋಡ, ಮಂಜು ಇವುಗಳು ಒಂದಕ್ಕೊಂದು ಒಂದಾಗಿ ಇರುವ ಪ್ರಕೃತಿಯ ಬೆಸುಗೆಯನ್ನು ಬೇಂದ್ರೆ ಅವರು ಮೇಲಿನ ನುಡಿಯಲ್ಲಿ ಹಿಡಿದಿಟ್ಟಿದ್ದಾರೆ.

***

**ಭಾವಾ ಇದ್ಧಾಂಗ ದೇವ/ ಹೇಳಿದ್ರು ಹಿರಿಯರು/ ಅಲ್ಲೆ! ಸುತ್ತಾಡತಾವ ನಮ್ಮ ಖ್ಯಾಲಾ (ಮುಗಿಲ ಮಲ್ಲಿಗೆ: ಸಣ್ಣ ಸೋಮವಾರ)**

* * * * * *

## ಜಗಜಂಪ

**ಇದು ಎಂಥ ಹಸುರಿನ ಕಂಪ/ ತಿಳಿಯದ ತಂಪ/ ಮೂರ್ತ ಜಗಜಂಪ/ ತೂರ್ತ ಬಂದು/ ಮನಪೂರ್ತವಾಗಿ ಸಂದು (5–1 ರಿಂದ 5)**

*ಬೇಂದ್ರೆ ಅವರು ಶ್ರಾವಣದಲ್ಲಿ ತಲುಪುವ ಸ್ಥಿತಿ "ಶ್ರಾವಣಕ ತಪ್ಪಿತ ಗ್ಯಾನಾ। ಎಲ್ಲಿದೋ ಧ್ಯಾನಾ। ಹುಚ್ಚ ಆಗ್ಯಾನಾ ಮದೋನ್ಮತ್ತಾ। ಅಂಬಿಕಾತನಯದತ್ತಾ".

ಹಾಗೆ, ಧ್ಯಾನದಲ್ಲಿ ಲೀನವಾದ ಅವರಿಗೆ ಶ್ರಾವಣ(ಮಳೆ)ದಲ್ಲಿರುವ ಜೀವ ಸೃಷ್ಟಿಯ ಧೀಃ ಶಕ್ತಿ ಅತಿಶಯ ಆನಂದವನ್ನುಂಟು ಮಾಡುತ್ತದೆ. ಶ್ರಾವಣ ಮಾಸದ ಹಸುರಿನ ಕಂಪು ಹಾಗೂ ಅದರ ತಿಳಿಯದ ತಂಪಿನಲ್ಲಿ ಮುಳುಗಿ ಹೋದ ಕವಿಗೆ ಶ್ರಾವಣ "ಮೂರ್ತ ಜಗಜಂಪ" ಅರ್ಥಾತ್ ಆ ಶುಭ ಮುಹೂರ್ತದಲ್ಲಿ ರೂಪು ತಳೆವ ಅತಿಶಯ ವೈಭವ ಆಗಿದೆ.

"ಮೂರ್ತ ಜಗಜಂಪ" ಇನ್ನೊಂದು ಅರ್ಥದಲ್ಲಿ ಮುಗ್ಧ ಮಕ್ಕಳ ಕುತೂಹಲಕ್ಕೆ ಮಳೆಯು– ಜಾಲರಿಯುಳ್ಳ ದೊಡ್ಡ ಕೊಡೆ!

ಅದು ತೂರ್ತ/ಉದುರುತ್ತಾ; ಇಳೆಯಲ್ಲಿ ನುಸುಳಿ, ಸೇರಿಕೊಳ್ಳುತ್ತಾ; ಜಡಚೇತನಗಳಿಗೆಲ್ಲ "ಮನಃಪೂರ್ತವಾಗಿ ಸಂದು" ಹೋಗುತ್ತಿದೆ.

---

## ಮೋಡ

### ಬೇಸುರ

**ಪ್ರಳಯ ಪೂರ್ವದ ರೌದ್ರ, ಸದ್ದಿಲ್ಲದೀ ಸಂಚು /ಯುದ್ಧ ಬಡಕರ ಶುದ್ಧ ಶಾಂತತಾವಾದದೊಲು/ ಪರಿಣಾಮ ಬೇಸುರವಲಾ! (2–2, 3)**

: (ಆಲಂ) ಅಸಂಬದ್ಧವಾದುದು.

*ಕವಿಯು ಮೋಡವನ್ನು ನೋಡುತ್ತ 'ಯುದ್ಧ ಬಡುಕರ ಶುದ್ಧಶಾಂತತಾವಾದವನ್ನು' ಪ್ರತಿಮಾತ್ಮಕವಾಗಿ ಚಿತ್ರಿಸಿ ಅದು ಅಸಂಬದ್ಧವಾದುದು ಎಂಬ ಧ್ವನಿ ಹೊಮ್ಮಿಸಿದ್ದಾರೆ.

---

## ಕಿಡಿ

### ಮೀನು

**ಕೋಟಿ ಕೋಟಿ ಕೋಟಿ ಮಿಾನು (2–4)**

*ಕಿಡಿ ಪದ್ಯದಲ್ಲಿ ಬರುವ 'ಮೀನು' ಎಂಬ ಪದಕ್ಕೆ ಕಿಟೆಲ್ ಶಬ್ದಕೋಶದಲ್ಲಿ ನಕ್ಷತ್ರ ಎಂಬ ಅರ್ಥವೂ ಇದೆ. ಇಲ್ಲಿ ಮೀನನ್ನು ನಕ್ಷತ್ರ ಎಂದು ಅರ್ಥೈಸಬೇಕೆನಿಸುತ್ತದೆ.

---

## ಪಾರ್ವತಿ ನೀನೇ ಸಲಹು

### ಒಂದಾವಣೆ

**ಜೀವದೇವನೊಂದಾವಣೆ ಇಲ್ಲದ/ ನೀರಿಲ್ಲದ ನೆಲ ಬರಡಲ್ಲಾ? (9–3, 4)**

: ಒಂದುಗೂಡುವಿಕೆ; ಸೇರುವಿಕೆ; ಐಕ್ಯ.

*ಜೀವ ಮತ್ತು ದೇವನ ಐಕ್ಯ ನಡೆಯೆ ಈ ನೆಲದ ಜೀವನ್ನೋಲ್ಲಾಸ. ಆ ಒಂದುಗೂಡಿಕೆ ಇಲ್ಲದ್ದು ನೀರಿಲ್ಲದ ನೆಲದಂತೆ ಬರಡು.

* * * * * *

**ಅಭಕ್ತ**

**ಅನೀಶವೆಂಬುದು ರಾಜ್ಯವೆ ಅಲ್ಲ /ಅಭಕ್ತವಾದರೆ ಇರ ಸಲ್ಲ (12–3, 4)**

: ಅನ್ನವಿಲ್ಲದ ಸ್ಥಿತಿ.

*ಒಡೆಯನಿರದಿದ್ದರೆ ರಾಜ್ಯವಿಲ್ಲ. ಅನ್ನವಿಲ್ಲದಿದ್ದರೆ ಒಡಲು ಇಲ್ಲ.

---

## ಸ್ವಾತಂತ್ರ್ಯದೇವಿಗೆ

**ಕರಣ ಹಸುಗೆ**

**ಜೀವನ ಕಲೆ ಬೆಳಗಲಲ್ಲಿ /ತಿಳಿದು ಕರಣ ಹಸುಗೆಯ (14–3, 4)**

: (ವೀ ಶೈ.) ದೇಹದಲ್ಲಿರುವ ಸಕಲ ತತ್ತ್ವಗಳನ್ನು ವಿಂಗಡಿಸಿ ಹೇಳುವ ಶಾಸ್ತ್ರ.

*ಕನ್ನಡವು ಕನ್ನಡಿಗರ ಕೀರ್ತಿಯನ್ನು ಸದಾ ಪ್ರತಿಬಿಂಬಿಸಲಿ. ಹಾಗೆ ಕನ್ನಡಿಸುವಾಗ ಕರಣ ಹಸುಗೆ ತಿಳಿದು ಜೀವನ ಕಲೆ ಬೆಳಗಲಿ.

---

## ೧೧. ಹೃದಯ ಸಮುದ್ರ (೧೯೫೬)

## ಹೃದಯ ಸಮುದ್ರ

**ಪುಟ್ಟಪೂರಾ**

**ಬಂಗಾರ ನೀರ ಕಡಲಾಚೆಗೀಚೆಗಿದೆ ನೀಲ ನೀಲ ತೀರಾ /ಮಿಂಚು ಬಳಗ ತೆರೆ ತೆರೆಗಳಾಗಿ ಅಲೆಯುವುದು ಪುಟ್ಟಪೂರಾ (1–1, 2)**

*ಅಧ್ಯಾತ್ಮದ ಭಾವಲಹರಿಗೆ ಒಳಗಾದ ಬೇಂದ್ರೆಯವರು ಸೃಷ್ಟಿಗೋಚರ ಅದ್ಭುತ ಸೃಷ್ಟಿಯಲ್ಲಿ ಅದರ ಮಿಂಚು ಪೂರ್ತಿ ಪುಷ್ಟಿಗೊಂಡು(ಪುಟ್ಟ–ಪುಷ್ಟಿ) ಹರಿದಾಡುವುದನ್ನು ಮೇಲಿನಂತೆ ಬಣ್ಣಿಸಿದ್ದಾರೆ.

* * * * * *

**ನೆರೆ**

**ಕರೆ ಬಂದಿತಣ್ಣ, ತೆರೆ ಬಂದಿತಣ್ಣ ನೆರೆ ಬಂದಿತಣ್ಣ ಬಳಿಗೆ (2–1)**

: ತುಂಬಿ ಹರಿಯುವ ನೀರು; ತುಂಬು ಪ್ರವಾಹ; ಮಹಾಪೂರ.

* * * * * *

**ಸಿಕ್ಕಲ್ಲು**

**ಕಂಡವರಿಗಲ್ಲೊ ಕಂಡವರಿಗಷ್ಟೆ ತಿಳಿದ್ದದ ಇದರ ಬೆಲೆಯು /ಸಿಕ್ಕಲ್ಲಿ ಅಲ್ಲ ಸಿಕ್ಕಲ್ಲೆ ಮಾತ್ರ ಒಡೆಯುವದು ಇದರ ಸೆಲೆಯು /ಕಣ್ಣರಳಿದಾಗ ಕಣ್ ಹೊರಳಿದಾಗ ಹೊಳೆಯುವದು ಇದರ ಕಳೆಯು. (3–2, 3)**

*ಟಾಲ್‌ಸ್ಟಾಯ್ ಅವರು "without mysticism there can be no poetry. Without poetry mysticism is superstition" ಎಂದು ಹೇಳಿದ್ದಾರೆ. ಅಧ್ಯಾತ್ಮದ ಗೂಢವನ್ನು ಹೊಂದಿದ ಕಾವ್ಯ ಸಹೃದಯನನ್ನು ಚಿಂತನಶೀಲನನ್ನಾಗಿಸಿ, ಅವನನ್ನು ಅಂತರಾತ್ಮದ ಶೋಧಕ್ಕೆ ಒಳಗಾಗುವಂತೆ ಮಾಡುತ್ತದೆ. ಬೇಂದ್ರೆ ಅವರು ಅಚಿಂತ್ಯಾನುಭವವನ್ನು ನಮ್ಮದಾಗಿಸಿಕೊಳ್ಳಬಹುದು ಎಂಬ ಧನಾತ್ಮಕ ಭಾವದಲ್ಲಿ–ಅಪರ ವಿದ್ಯಾದಾಹಿಯನ್ನು ತಮ್ಮ ಕಾವ್ಯ ಗಾರುಡಿಯಿಂದ ಸೆಳೆದಿದ್ದಾರೆ. ಈ ಮೇಲೆ ಉದ್ಧರಿಸಿರುವ "ಕಂಡವರಿಗಲ್ಲೊ ಕಂಡವರಿಗಷ್ಟೆ ತಿಳಿದಾದ ಇದರ ಬೆಲೆಯು" ಎಂಬಲ್ಲಿ ಮೊದಲ ಪದ ಕಂಡವರು ಎಂದರೆ ಸಿಕ್ಕ ಸಿಕ್ಕವರು, ಇದರ ಅನುಭವವೇ ಇಲ್ಲದ ಇತರರು, ಪರರು. ಅಂತಹ ಜನಗಳಿಗೆ ಪರಾರ್ಥದ ಅರಿವು ಸಾಧ್ಯವಿಲ್ಲ. ಅದು ತಿಳಿಯುವುದು ಕಂಡವರಿಗಷ್ಟೆ ಅಂದರೆ, 'ಅಹುದೋ, ಅಲ್ಲವೊ ನಾವು ಕಂಡ ಕಾಣ್ಕೆಯ

ದೈವ' (ಭರತೇಶ ವೈಭವ, 4–13) ಎಂಬ ದರ್ಶನ. ಆ ಅನುಭವ ಸಿಕ್ಕಸಿಕ್ಕವರಿಗೆ ಸಿಕ್ಕಿದ ಕಡೆ ಎಲ್ಲ ದೊರಕುವಂತದ್ದಲ್ಲ. ಅದು ನೀರಿಗಾಗಿ ಬಾವಿ ತೋಡುವ ರೈತ ಎಷ್ಟೇ ಆಳವಾದರೂ ಸರಿ, ತೋಡುತ್ತಾ ಜಲ ಹರಿವ ಜಲಗಣ್ಣು ಹೊಂದಿದ ಸಿಕ್ಕಲು–ಸಿಕ್ಕಾಗ ಗುದ್ದಲಿಯ ಹೊಡೆತದಿಂದ ಚಿಮ್ಮಿಸುವ ನೀರು. ಸಾಧನಾ ಪಥದಲ್ಲಿ ಸಿಕ್ಕಲ್ಲು–ಅಧ್ಯಾತ್ಮದ ಸೆಲೆ–ಸಿಗುವವರೆಗೂ ಸಾಧನೆ ಬಿಡದೆ ಮುಂದುವರಿಯುವ ಸಾಹಸ.

* * * * * *

**ಒಂದ್ಽದೋ ಒಂದ್ಽದ**

**ಬಂದವರ ಬಳಿಗೆ ಬಂದದ ಮತ್ತು ನಿಂದವರ ನೆರೆಗು ಒಂದ್ಽದೋ ಒಂದ್ಽದ (4–1, 2)**

ಅಧ್ಯಾತ್ಮ ಜೀವಿಯನ್ನು ಹೊಸದ್ವೀಪಗಳಿಗೆ ಕರೆದೊಯ್ಯಲು "ಅಂಬಿಗನು ಬಂದ ನಂಬಿಗನು ಬಂದ ಬಂದ್ಽದ ದಿವ್ಯಗಳಿಗೆ" ಎಂದು 'ಹೃದಯ ಸಮುದ್ರ'ದ ಗೀತವನ್ನು ಬೇಂದ್ರೆ ಹಾಡಿದ್ದಾರೆ. ಆ ದಿವ್ಯ ಘಳಿಗೆ "ಬಂದವರ ಬಳಿಗೆ ಬಂದದ ಮತ್ತು ನಿಂದವರ ನೆರೆಗು ಒಂದ್ಽದೋ ಒಂದ್ಽದ" ನಿಂದವರ ನೆರೆಗು ಎಂಬಲ್ಲಿ ನೆರೆಗು ಎಂಬ ಪದ ಸಮೀಪ, ಹತ್ತಿರ ಎಂಬ ಅರ್ಥದಲ್ಲಿ ಲೀನವಾಗುತ್ತದೆ ಮತ್ತು "ಅಲ್ಲಿ ಒಂದೇ ಇರುವುದು ಎರಡಿಲ್ಲ" ಎಂಬ ತತ್ತ್ವ ಅಭಿಪ್ರೇತವಾಗಿದೆ.

---

## ಶ್ರೀ ಅರವಿಂದರಿಗೆ

**ಚಾಟು**

**ಕಣ್ಣಿವೆ ಚಾಟಿಗೆ ಕಟ್ಟಿದೆ/ ಆನಂದದ ಹುಟ್ಟು. (2–1, 2)**

: ಆಸರೆ; ರಕ್ಷಣೆ; ಮಳೆ,ಗಾಳಿ, ಬಿಸಿಲು ಮೊದಲಾದುವುಗಳಿಂದ ರಕ್ಷಿಸಿಕೊಳ್ಳಲು ಮಾಡಿಕೊಂಡ ರಕ್ಷಣಾ ಸ್ಥಾನ,–ಮರೆ, ತಡಿಕೆ ಮೊದಲಾದದ್ದು.

*ಬೇಂದ್ರೆಯವರು ಶ್ರೀ ಅರವಿಂದರ ಭಾವಚಿತ್ರದ ದರ್ಶನದಿಂದ ಉದ್ದೀಪ್ತರಾಗಿ– ನಿನ್ನ ಕಣ್ಣಿನ ಎವೆಯ ಚಾಟಿಗೆ/ ಆಸರೆಗೆ ಆನಂದದ ಜೇನು ಹುಟ್ಟು ಕಟ್ಟಿದೆ– ಎಂದು ವರ್ಣಿಸಿದ್ದಾರೆ.

---

# ಶ್ರೀಗುರುವೆ !

## ಅರುವೆ

**ಶ್ರೀಗುರುವೆ ಅರುವೆ, ಶರಣಾಗಿ ಬರುವೆ, ಕರುಣೆಯನು ಕೋರಿ ಬರುವೆ /ಹೃತ್‌ಪ್ರಕೃತಿ ತಂದ ಕಿಡಿ ಹೂವುಗಳನು ಶ್ರೀಚರಣಕೆರೆಯುತಿರುವೆ (1–1, 2)**

ಶ್ರೀಗುರುವು ಲೋಕತಂತ್ರಬಲ್ಲವನು. ನಿನ್ನೆ ಇಂದು ನಾಳೆಯನ್ನು ಸಮನ್ವಯಗೊಳಿಸಿಕೊಳ್ಳುವ ಪ್ರತಿಭೆಯವನು. 'ಅರ್' ಧಾತುವಿಗೆ ಧರ್ಮ ಎಂದು ಅರ್ಥ. ಸಾಮಾಜಿಕ, ಸಾಂಸ್ಕೃತಿಕ ನಿಜಧರ್ಮ ತಿಳಿದವನು ಧರ್ಮದ ತಿರುಳಾದವನು–ಅರುವೆ.

* * * * * *

## ತಿರುಮೂರ್ತಿ

**ಕಣ್ಣಿಂದ ನಿನ್ನ ನನ್ ಕಣ್ಣ ಸೇರಿ ನನ್ನ ಎದೆಯೊಳಣ ಬೆಳಕನೆತ್ತಿ,/ ತಿರುಮೂರ್ತಿ ಮಾಡು ನನ್ನನ್ನು ನಿನ್ನ ಚಿನ್ಮೋದ–ಬೋಧ ಬಿತ್ತಿ (3–1, 2)**

*ಒಬ್ಬ ಯೋಗಿಯಾದವನು ತನ್ನನ್ನು ನಂಬಿ ಬಂದ ಶಿಷ್ಯನಿಗೆ ದೃಷ್ಟಿಯ ಮೂಲಕ ಒಳಗಣ್ಣನ್ನು ತೆರೆಸುವುದು ಅನಿವಾರ್ಯ. ಹೀಗೆ ಒಳಗಣ್ಣು ತೆರೆದಾಗ ಅವನ ಜಡದೇಹವು ಸಾಧನಾ ದೇಹವಾಗಿ ಪರಿಣಮಿಸುತ್ತದೆ. ವಿಶಿಷ್ಟಾದ್ವೈತ ಸಂಪ್ರದಾಯದಲ್ಲಿ 'ತಿರು' ಎಂಬ ಪದಕ್ಕೆ ಮಹತ್ವ ನೀಡಿದ್ದಾರೆ. ದೇಹವನ್ನು ಮಂಗಳಗೊಳಿಸುವ ಕ್ರಿಯಾಕಲ್ಪವು ಅಲ್ಲುಂಟು. ಇದನ್ನು ಬೇಂದ್ರೆ ಅವರು ತಿಳಿದಿದ್ದರಿಂದ ದೃಷ್ಟಿಪಾತದ ಮೂಲಕ ತನ್ನ ದೇಹವು "ತಿರುಮೂರ್ತಿ"ಯಾಗಿ ಸಂಭವಿಸಲೆಂದು ಆಶಿಸುತ್ತಾರೆ. ಇಲ್ಲಿರುವ 'ತಿರು' ಎಂಬ ಪದಕ್ಕೆ 'ಶ್ರೀ' ಎಂಬುದೂ ಉಂಟು. ಕನ್ನಡಿಗರೂ ತಮಿಳರೂ ವೇಂಕಟೇಶ್ವರನನ್ನು ಇರುವ ಜಾಗಕ್ಕೆ ತಿರುಪತಿ(ಶ್ರೀಪತಿ) ನೆಲೆಸಿರುವ ಬೀಡೆಂದು ಅರ್ಥ. ಪ್ರಧಾನವಾಗಿ 'ದೈವ' ಎಂಬ ಕಾಣ್ಕೆಯೇ ಇಲ್ಲುಂಟು.

* * * * * *

## ಕ್ಷೇತ್ರಜ್ಞ

**ಆಂತರ್ಯದೊಂದು ಚೈತನ್ಯ ನಿನ್ನ ಕೈಂಕರ್ಯ ಕರ್ತೃವಾಗಿ /ಕ್ಷೇತ್ರಜ್ಞ ಬರಲಿ ಚೈತ್ಯೇಶನಾಗಿ ಮಧುಬೋಧ ಮೋದ ಮಾಗಿ (5–1, 2)**

*ಗೀತೆಯಲ್ಲಿ ಕ್ಷೇತ್ರ–ಕ್ಷೇತ್ರಜ್ಞ ಯೋಗ ಎಂಬ ಮಾತು ಬರುತ್ತದೆ. ಕ್ಷೇತ್ರ ಎಂದರೆ ದೇಹ ಎಂದು ಅರ್ಥ. ಈ ಕ್ಷೇತ್ರಕ್ಕೆ ಚೈತನ್ಯ ಬರಬೇಕಾದರೆ ಕ್ಷೇತ್ರಜ್ಞನ ಕೃಪೆ ಬೇಕು. ಗುರುವು ಕ್ಷೇತ್ರಜ್ಞನಾಗಿ ಬಂದರೆ, ಶಿಷ್ಯನು ಚೈತ್ಯೇಶನಾಗಲು ಸಾಧ್ಯ. ಚೈತ್ಯ ಮತ್ತು ಚೈತ್ಯಾಲಯ ಎಂಬ ಮಾತುಗಳು ನಮ್ಮ ಸಂಸ್ಕೃತಿಯಲ್ಲಿ ಬಳಕೆಯಲ್ಲಿವೆ.

ಚೈತ್ಯವೆಂದರೆ ಯಜ್ಞ ಎಂದರ್ಥ. ಅಂತರ್ಯಜ್ಞವು ಮುಖ್ಯ ಎಂಬ ಸೂಚನೆಯನ್ನು ಬೇಂದ್ರೆ ಅವರು ಇಲ್ಲಿ ನೀಡುತ್ತಿದ್ದಾರೆ. ಅದು ಮಧುಬೋಧ. ಈ ಮಧುಬೋಧದಿಂದ ಸಂತೋಷ ದೊರಕಬೇಕು. ಆದರೆ, ಈ ಮೋದವು ಮಾಗುವುದು ಅನಿವಾರ್ಯ. ಇದಕ್ಕೆಲ್ಲ ಗುರುಕೃಪೆಯ ಅಗತ್ಯವಿದೆ. ಹೀಗಾಗಿ, ಕ್ಷೇತ್ರದಲ್ಲಿ ಕ್ಷೇತ್ರಜ್ಞನನ್ನು ಇರಿಸಿಕೊಂಡಾಗ ಮಾತ್ರ ಬೋಧಕ್ಕೆ ಅವಕಾಶ. ಈ ಬೋಧವು ಮೋದವಾಗುವ, ಆನಂದವಾಗುವ, ಕ್ರಿಯೆಗೆ ಶಿಷ್ಯನು ಪಾತ್ರನಾಗುತ್ತಾನೆ.

* * * * * *

**ಜವನವರು**

**ಹೇ ಭವನೆ ಶಿವನೆ, ಜವನವರ ಜವಕೆ ಶವವಾಗದಂತೆ ಮಾಡು. (6–1)**

:ಯಮದೂತರು.

ಜವ= ನಿಗ್ರಹ; ನಿರ್ಬಂಧ.

*ಯಮದೂತರ ನಿಗ್ರಹಕ್ಕೆ ಒಳಗಾಗಿ ಶವವಾಗದಂತೆ ಮಾಡು ಎಂದು ಶಿವನಲ್ಲಿ ಪ್ರಾರ್ಥಿಸಿದ್ದಾರೆ.

---

## ನಾನಲೆಯುತ್ತಿದ್ದೆ

**ತನಿಮಿಂಚು**

**ಆಃ ನೀನು ಬಂದೆ ತನಿಮಿಂಚಿನುರುಳಿ ತನ್ನನ್ನೆ ತೂಗುವಂತೆ (2–1)**

: ಉಜ್ವಲವಾದ ಮಿಂಚು; ಕಣ್ಣನ್ನು ಕೋರೈಸುವ ಮಿಂಚು.

*ಯೋಗಸೂತ್ರಗಳು ಯೋಗಿಗಳನ್ನು (1) ಪ್ರಾಥಮಕಲ್ಪಿತ (2) ಮಧುಭೂಮಿಕ (3) ಪ್ರಜ್ಞಾಜ್ಯೋತಿ (4) ಅತಿಕ್ರಾಂತ ಭಾವನೀಯ ಎಂದು ನಾಲ್ಕು ವಿಧದಲ್ಲಿ ವಿಂಗಡಿಸುತ್ತವೆ. ಇದರಲ್ಲಿ ಮೂರನೆಯ ಹಂತದಲ್ಲಿ ಯೋಗಿ ತನ್ನ ದುಃಖಗಳನ್ನೆಲ್ಲ ನೀಗಿಕೊಂಡು ಅಂತರಂಗದಲ್ಲಿ ದಿವ್ಯ ಬೆಳಕನ್ನು ಕಾಣುವನು ಎಂಬ ಪ್ರತೀತಿಯಿದೆ. ಇದನ್ನು ಪತಂಜಲಿಯ ಯೋಗಸೂತ್ರಗಳು 'ವಿಶೋಕಾ ವಾ ಜ್ಯೋತಿಷ್ಮತೀ'(1.36) ವರ್ಣಿಸುತ್ತದೆ. ಬೇಂದ್ರೆ ಸಹ ಇಂಥದೊಂದು ದಿವ್ಯಾನುಭೂತಿಯನ್ನು ಹೊಂದಿದ್ದರು ಎನಿಸುತ್ತದೆ. ಅವರು ತಮ್ಮ ಆ ಅನುಭವದ ಕುರಿತು "ಸಹಸ್ರತಂತೀ ನಿಃಸ್ವನದಂತೆ' ಪದ್ಯದ ಭಾವಕೋಶದಲ್ಲಿ ಬರೆದುಕೊಂಡಿರುವರು. ಧ್ಯಾನಸಿದ್ಧರಾದ ಸ್ವಾಮಿ ವಿವೇಕಾನಂದರಿಗೂ ಸಹ ಕಣ್ಮುಚ್ಚಿದೊಡನೆ ಒಳಬೆಳಕು ಗೋಚರಿಸುತ್ತಿತ್ತಂತೆ

***

**ತನಿರನ್ನದೊಂದು ಕೆಂಗಿಡಿಯ ಕುಡಿಯೆ ಸಿಡಿದರಳಿ ಉರುಳಿದಂತೆ (ಹೃದಯ ಸಮುದ್ರ: ಶ್ರೀ ಗುರು–ಕರುಣ–ಚರಣ)**

ತನಿರನ್ನ: ಶ್ರೇಷ್ಠವಾದ ರತ್ನ.

---

## ಅರವಿಂದನಾಭನ ಪಾದಾರವಿಂದಕ್ಕೆ

### ಅರವಿಂದಮಯವಾದ ಮಾನಸವು

**ಆಸ್ಯಾರವಿಂದವು ನಲಿವನು ಸೂಸುವ ತೆರ ನಿನಗೆ ಸೂಸಲಿ ಮಂಗಲವು/ ಎಂದಿತು ಅರವಿಂದ ಪದಭೃಂಗ ಅರವಿಂದು! ಅರವಿಂದಮಯವಾದ ಮಾನಸವು. (1–3, 4)**

*ಯೌಗಿಕ ಚಿಂತನೆಯಲ್ಲಿ ಮನಸ್ಸಿಗೆ ಮಹತ್ವದ ಸ್ಥಾನವುಂಟು. ಮನಸ್ಸು ವಿಕಲ್ಪವನ್ನು ಗ್ರಹಿಸಬಲ್ಲುದು. ಈ ವಿಕಲ್ಪವು ಸಕಲ್ಪವಾಗಿ ಪರಿಣಮಿಸಬೇಕಾದರೆ ಮಾನಸಸ್ಥಿತಿ ಅಥವಾ ಮಾನಸಯೋಗ ಅನಿವಾರ್ಯ. ಗುರು ಅರವಿಂದರು ಅತಿಮಾನಸ ಯೋಗದ ಸ್ತರವನ್ನು ಏರಿರುವುದು ಸರಿಯಷ್ಟೆ. ಪ್ರತಿಯೊಬ್ಬ ವ್ಯಕ್ತಿಯು ವ್ಯಕ್ತಿ–ಮುಕ್ತನಾಗಬೇಕಾದರೆ ಮಾನಸಯೋಗ ಅನಿವಾರ್ಯ. ಮನಶ್ಶಾಸ್ತ್ರದಲ್ಲಿ ಪರಾಮಾನಸ ಶಾಸ್ತ್ರ (ಪ್ಯಾರ ಸೈಕಾಲಜಿ) ಎಂಬ ಪ್ರಭೇದ ಉಂಟು. ಉಪನಿಷತ್ತು ಮಾನಸ ಯೋಗದ ಮೇಲೆ ಹೆಚ್ಚು ಒತ್ತನ್ನು ನೀಡುತ್ತದೆ. ಗುರುವು ಕೇವಲ ಗುರುವಾಗದೆ ಆತನು ಅರವಿಂದ ಗುರುವಾಗುವುದು ಅಗತ್ಯ ಮತ್ತು ಅನಿವಾರ್ಯ. ಗುರು–ಶಿಷ್ಯ ಸಂಬಂಧದಲ್ಲಿ ಮಾನಸಯೋಗಕ್ಕೆ ಮಹತ್ವದ ಸ್ಥಾನವನ್ನು ಬೇಂದ್ರೆ ಅವರು "ಅರವಿಂದಮಯವಾದ ಮಾನಸವು" ಎಂಬ ಮಾತಿನ ಮೂಲಕ ಅಭಿವ್ಯಂಜಿಸುತ್ತಿದ್ದಾರೆ.

---

## ಚಿತ್ತಭಿತ್ತಿಯ ಚಿತ್ರ

### ಕನ್ನನಾರು

**ಬಣ್ಣ ಒಡೆಯುತಿವೆ ಕಣ್ಣ ಪಡೆಯುತಿದೆ ಸಣ್ಣ ಕನ್ನನಾರು. (1–4)**

*ಮನುಷ್ಯ ಜೀವವು ಬಣ್ಣಗಳಲ್ಲಿ ತನ್ನನ್ನು ನೋಡಿಕೊಳ್ಳಲು ಬಯಸುತ್ತದೆ. ಈ ಬಣ್ಣವು ಅವನ ನಿಜದ ನೆಲೆಯನ್ನು ತಿಳಿಯಲು ಅಡ್ಡಿಪಡಿಸುತ್ತದೆ. ಅದ್ವೈತದಲ್ಲಿ ಮಾಯೆಯೆಂಬ ಮಾತನ್ನು ಬಳಸುವುದುಂಟು. ಇದು ಕಣ್ಣ ಕಪ್ಪಡಿ. ಈ ಕಣ್ಣು ಬಣ್ಣಗಳೊಳಗೆ ಆನಂದವನ್ನು ಕಾಣುತ್ತದೆ. ಆದರೆ, ಬೇಂದ್ರೆ ಅವರು ಒಳಗಣ್ಣನ್ನು ಪಡೆಯಬೇಕಾದರೆ ಬಣ್ಣಗಳನ್ನು ಕಳಚಿಕೊಳ್ಳುವುದು ಅನಿವಾರ್ಯವೆಂದು ಹೇಳುತ್ತಾರೆ. ಹೀಗೆ, ಬಣ್ಣಗಳನ್ನು

ಕಳಚಿಕೊಂಡಾಗ ಒಳಗಣ್ಣಿಗೆ ನಾರು–ನರುಗಂಪು ಬರಲು ಸಾಧ್ಯ. ಇಲ್ಲಿ ಬಣ್ಣ, ಕಣ್ಣ ಮತ್ತು ಸಣ್ಣ ಎಂಬ ಮಾತುಗಳು ಒಂದರೊಡನೊಂದು ಸಂಬಂಧಗಳನ್ನು ಕೀಲಿಸಿಕೊಂಡು ಅದರ ಬೇರೆಬೇರೆ ಅವಸ್ಥಾಂತರಗಳು ಕವಿಸಹಜ ಮನೋಧರ್ಮದಲ್ಲಿ ಆಧ್ಯಾತ್ಮೀಕರಣಗೊಂಡಿವೆ.

ಕಬ್ಬು ಮೊದಲಾದ ಗಿಡ ಬೆಳೆಯುವಾಗ ಗಿಣ್ಣಿನೊಳಗಿಂದ ಗಿಡ ಚಿಗುರಲು ಕಣ್ಣೊಡೆಯುವ ಅಗತ್ಯದ ಅರ್ಥವೂ ಇಲ್ಲಿ ಸೂಚಿತವಾಗಿದೆ.

* * * * * *

**ಕರುಗೊಳ್**

**ಓ ತಾಯಿ ತಂದೆ ಶಿವವೆಂದೆ ನಿಮಗೆ ಕರುಗೊಳುವ ಅರುವಿನಿಂದೆ. (2–3)**

:ಎರಕವಾಗು; ಎರಕದಿಂದ ಪ್ರತಿಮೆಯಾಗು.

ಬೇಂದ್ರೆಯವರಿಗೆ ಶ್ರೀಮಾತಾರವಿಂದರು ತಾಯಿ ತಂದೆ ಮತ್ತು ಶಿವ–ಮಂಗಳ, ಆನಂದ, ಮುಕ್ತಿ. ಅವರು ನೀಡಿದ ವಿವೇಕದಿಂದ ತಾನು ಕರುಗೊಳುವೆ ಎಂದು ವಿನಮ್ರವಾಗಿ ತಿಳಿಸಿದ್ದಾರೆ.

* * * * * *

**ಚವಲಂಬ**

**ಪೊಸ ಜಗದ ಯುಗದ ಚವಲಂಬ ತೆರೆದು ಕರೆಯುವದು ಅಂಬೆಯಾಗಿ (3–2)**

: ಕಣ್ಣೆವೆ; ರೆಪ್ಪೆ.

*ಬೇಂದ್ರೆ ಅವರು 'ಶ್ರೀಮಾತಾರವಿಂದರ ದರ್ಶನ ಭಾವವು ಒಳಗೆ ಉದ್ದೀಪನಗೊಂಡಾಗ' ರಚಿಸಿದ ಕವನ ಇದಾಗಿದೆ. ಶ್ರೀ ಮಾತೆಯವರು ತಾಯಿಯಾಗಿ ತನ್ನನ್ನು ಹೊಸ ಜಗದ ಯುಗದ ರೆಪ್ಪೆ ತೆರೆದು ಕರೆದರು ಎಂದು ಅಭಿವ್ಯಕ್ತಿಸಿರುವ ರೀತಿ ಅಧ್ಯಾತ್ಮದ ಅರಿವಾಗಿದೆ.

***

**ಚವಲಂಬವನವಲಂಬಿಸಿ/ ನಗೆಯು ಕಣ್ಣಗೊನೆಗಿದೆ.(ಸೂರ್ಯಪಾನ: ಸ್ವಾತಂತ್ರ್ಯದೇವಿಗೆ)**

ಕಣ್ಣೆವೆಯನ್ನು ಅವಲಂಬಿಸಿ ಕಣ್ಣಿನ ಗೊನೆಗೆ ನಗೆ ಹೊಮ್ಮುತ್ತದೆ ಎಂದು ನಗೆ ಮತ್ತು ಕಣ್ಣಿನ ಆಂತರ್ಯವನ್ನು ಪ್ರಕಟಿಸಿದ್ದಾರೆ.

# ಮಹಾ ಪ್ರಸ್ಥಾನ

## ವಿಚಿಕೇತ

**ಸಾವಿತ್ರ ಮಂತ್ರ ಯಮತಂತ್ರವನ್ನೆ ಸಂಯಮಿಸಿ ಅಮಲವಾಗಿ/ ನಚಿಕೇತ ಅಗ್ನಿ ವಿಚಿಕೇತಿಸಿತ್ತು ನವಕಮಲ ಕಮಲವಾಗಿ (2–3, 4)**

*ಜೀವವು ಎರಡು ಬಗೆಯ ಅಗ್ನಿಗಳನ್ನು ಹೊಂದಿದೆ ಎಂಬ ತತ್ವ ಅನಾದಿಯಾದುದು. ಅವು, ನಚಿಕೇತಾಗ್ನಿ ಮತ್ತು ಜಾತವೇದಾಗ್ನಿ. ಈ ಅಗ್ನಿಗಳಲ್ಲಿ ನಚಿಕೇತವು ಚಿಕಿತ್ಸಕ ಭಾವವನ್ನು ತಳೆಯುತ್ತದೆ. ಮಾತು ನಚಿಕೇತವಾಗುವುದು ಒಂದಾದರೆ, ಅದನ್ನು ವಿಚಿಕೇತಿಸುವುದು ಅನಿವಾರ್ಯ. ವಿಶೇಷವಾದ ಚಿಕಿತ್ಸಕ ನೋಟವನ್ನು ವಿಚಿಕೇತವೆಂದು ಬೇಂದ್ರೆ ನುಡಿದಿದ್ದಾರೆ.

ನಮ್ಮೊಳಗಿರುವ ನಚಿಕೇತನನ್ನು ವಿಶೇಷವಾದ ಚಿಕಿತ್ಸಕ ಎತ್ತರಕ್ಕೆ ಏರಿಸುವುದು ಗುರುವಿನ ತಂತ್ರ. ಸಾವಿತ್ರ ಮಂತ್ರದಿಂದ ಅಥವಾ ಸವಿತೃ ಮಂತ್ರವನ್ನು ಬಳಸಿ, ಯಮನ ತಂತ್ರವನ್ನು ಸಂಯಮಿಸಿದ್ದು, ಸಾವಿತ್ರಿ ಉಪಾಖ್ಯಾನದಲ್ಲಿ ದೊರಕುತ್ತದೆ. ಅದರ ಮುಂದಿನ ರೂಪವಾಗಿ ನಚಿಕೇತ ಅಗ್ನಿಯು ಜಾತವೇದ ಅಗ್ನಿಯಾಗಿ ಪರಿಣಮಿಸಬೇಕೆಂಬ ಭಾವಸ್ರೋತ ಇಲ್ಲಿ ಅಡಗಿದೆ.

ನಚಿಕೇತ ಅಗ್ನಿಯು ವೈಯಕ್ತಿಕವಾದುದು. ಜಾತವೇದ ಅಗ್ನಿಯು ಸಮಷ್ಟಿರೂಪವಾದುದು. ಹೀಗಾಗಿ, ನಚಿಕೇತವು ವಿಚಿಕೇತಿಸುವುದು ಅಗತ್ಯ ಎಂಬ ಭಾವ. "ವಿಶೇಷ ಚಿಕಿತ್ಸ ಭಾವಃ"–ವಿಚಿಕೇತಃ

* * * * * *

## ಶಮಿಸು

**ಕಳೇವರದ ನೀರಲ್ಲಿ ಶಾರದೆಯ ದೀಪ್ತಿ ತೊಳಗುತಿಹುದು/ ಹಣತೆ ತುಂಬ ನೇಹದಲಿ ನಗೆಯ ಹೂಬತ್ತಿ ಬೆಳಗುತಿಹುದು/ ಎದೆಯ ಹಾಲಿನಲಿ ಬಗೆಯ ಸಕ್ಕರೆಯ ಹರಳು ಕರಗುತಿಹುದು/ ತೇಜದಲ್ಲಿ ತಮ ಶಮಿಸಿ ಸೋಮ ರಸಿಕತೆಯೊಳರಗುತಿಹುದು. (5–1, 2, 3, 4)**

: ಲಯವಾಗು.

*ಅಂತರಂಗದ ದಿವ್ಯಜ್ಯೋತಿಯನ್ನು ಮೇಲಿನ ನಾಲ್ಕು ಸಾಲುಗಳಲ್ಲಿ ನಾಲ್ಕು ಹಂತಗಳಲ್ಲಿ ವರ್ಣಿಸಲಾಗಿದೆ. ನಾಲ್ಕನೆಯ ಸಾಲು ಜ್ಯೋತಿಯನ್ನು ವರ್ಣಿಸಿ ತಮತೇಜದಲ್ಲಿ ಶಮಿಸುವುದನ್ನು ವಿವರಿಸುತ್ತದೆ. ಮೂರನೆಯ ಸಾಲು ಜ್ಯೋತಿಗೆ ಕಾರಣವಾಗುವ

ಅಂತರಂಗದ ಇಂಧನವನ್ನು ಅಂದರೆ ಎದೆಯ ಹಾಲನ್ನು (ಭಾವಶಕ್ತಿಯನ್ನು) ವರ್ಣಿಸಿ ಅದರೊಳಗೆ ಸಕ್ಕರೆ ಅಂದರೆ ಬದುಕಿನ ಪ್ರೀತಿ ಕರಗುವುದನ್ನು ವಿವರಿಸುತ್ತದೆ.

ಎರಡನೆಯ ಸಾಲು ಜ್ಯೋತಿಗೆ ಮತ್ತು ಇಂಧನಕ್ಕೆ ಆಧಾರವಾದ ಹಣತೆಯನ್ನು ವರ್ಣಿಸಿ ಬದುಕಿನ ಉತ್ಸಾಹವನ್ನು ಹೂಬತ್ತಿಗೆ ಹೋಲಿಸಲಾಗಿದೆ. ಇನ್ನು ಮೊದಲನೆಯ ಸಾಲು ಅರವಿಂದರ ಕಳೇಬರವನ್ನು ವರ್ಣಿಸುತ್ತಿದೆ. ಶ್ರೀ ಅರವಿಂದರು 5 ಡಿಸೆಂಬರ 1950ರಂದು ದೇಹತ್ಯಾಗವನ್ನು ಮಾಡಿದರು. ಅವರ ಸಮಾಧಿಯ ದರ್ಶನ ಮಾಡಿಕೊಂಡು ಹಿಂದಿರುಗುವಾಗ ಸೃಷ್ಟಿಯಾದ ಸಾಲುಗಳಿವು. ಶ್ರೀ ಅರವಿಂದರ ಕಳೇಬರ ಇಲ್ಲಿ ಬೇಂದ್ರೆಯ ಕಣ್ಣಿಗೆ ಶಾರದೆಯ ದೀಪ್ತಿಯಂತೆ ಕಾಣಿಸುತ್ತಿದೆ.

---

## ಶ್ರೀಮಾತೆಗೆ

### ತನಿಬೆಳಕು

**ಕಣ್ಣುಗಳ ಬಣ್ಣ ನೀನ್ಸು/ ಉಣ್ಣಿಸೌ ತನಿಬೆಳಕು–ಹಣ್ಣು–ಜೇನು. (2–1, 2)**

*ಕವಿಯು ಶ್ರೀಮಾತೆಯವರನ್ನು ರೂಪಕಾತ್ಮಕವಾಗಿ 'ಕಣ್ಣುಗಳ ಬಣ್ಣ ನೀನು' ಎಂದು ಬಣ್ಣಿಸಿ– ತಾಯಿ ನೀನೆ ನನ್ನ ಅರಿವು ಎಂದಿದ್ದಾರೆ. ಜ್ಞಾನವೇ ಬೆಳಕು. ಅದು ತನಗೆ ತನಿಬೆಳಕು ಹಿತವಾದ ಕಾಂತಿ. ಆ ಹಿತವು ತನಗೆ ಜೀವ ಪೋಷಕ ಹಣ್ಣು ಮತ್ತು ಸವಿಯಾದ ಜೇನು. ಅದನ್ನು ನನಗೆ ಉಣಿಸು ಎಂದು ಪ್ರಾರ್ಥಿಸಿದ್ದಾರೆ.

* * * * * *

### ಒಗುಮಿಗಿಸು, ಭಾನು

**ಬಗೆಯೊಳಿಹ ಜಗವೆ ನೀನ್ಸು /ಒಗುಮಿಗಿಸಿ ಬಾರೆ ಬಾ ಆಗಿ ಭಾನು. (3–1, 2)**

: ಅತಿಶಯವಾಗಿಸು; ಹೆಚ್ಚಾಗಿಸು.

: ಒಳಪು; ಸೂರ್ಯ.

*ತಾಯಿ ನನ್ನ ಭಾವದಲ್ಲಿರುವ ಜಗವಾದ ನೀನು ಅತಿಶಯವಾಗಿ ವಿಶಾಲವಾಗುತ್ತ ಸೂರ್ಯನಂತೆ ಹೊಳೆಹೊಳೆದು ಬಾ.

---

## ಪಾದಪದ್ಮಕೆ ಪ್ರಾರ್ಥನೆ

### ಭ್ರಮರವೃತ್ತಿ, ಕಳ

**ತೊಟ್ಟು ಹನಿ ರಸಕಾಗಿ ಹುಡುಕುವ ಹುಚ್ಚು ಹಿಡಿದಿಹ ಹುಳಕೆ/ ಭ್ರಮರವೃತ್ತಿಯ ಬಿಡಿಸಿ ನುಗ್ಗಿಸು ಒಳಕೆ ಬೆಳಕಿನ ಕಳಕೆ (4-1, 2)**

: ನಾನಾ ಬಗೆಯ ಹೂವುಗಳಿಂದ ರಸವನ್ನು ಸಂಗ್ರಹಿಸುವುದು ದುಂಬಿಯ ಕೆಲಸ.

: ಧಾನ್ಯವನ್ನು ಒಕ್ಕುವುದಕ್ಕಾಗಿ ಸಿದ್ಧಪಡಿಸಿದ ಸ್ಥಳ-ಕಳ;ಕಣ.

* ಮನಸ್ಸು ಆಸೆಗಳನ್ನು ದುಂಬಿಯ ರೀತಿ ಬೆನ್ನಟ್ಟಿ ಹೋಗುತ್ತದೆ. ಅದರಿಂದ ಬಿಡಿಸಿ ಬೆಳಕಿನ ಕಣಕ್ಕೆ ಅಥವಾ ವಿಸ್ತಾರವಾದ ಜಾಗಕ್ಕೆ ನನ್ನನ್ನು ಕರೆದೊಯ್ಯಿ ಎಂದು ಕವಿ ಇಲ್ಲಿ ಪ್ರಾರ್ಥಿಸಿದ್ದಾರೆ.

ಭ್ರಮರ ಎಂದರೆ ಚಂಚಲತ್ವದ ಸಂಕೇತ. ಅದನ್ನು ಬಿಡಿಸುವುದು ಗುರುಮಾತಾರವಿಂದರ ಕೃಪೆ.

* * * * * *

### ಹುಲುಸು

**ಅಳಿಗೆ ಕತ್ತಲು; ಹುಲಿಗೆ! ಹುಲುಸಿರಲಮ್ಮ ಬೆಳಕಿನ ಬೆಳೆಗೆ (4-3)**

*ಸಮೃದ್ಧಿ, ಸೊಂಪು ಸೂಚಿಸುವ ಪದ-ಹುಲುಸು. ಬೇಂದ್ರೆ ಬೆಳಕಿನ ಕವಿ. ಅವರು "ಕತ್ತಲೀನ ಹಾಳಾಗಬೇಕು, ಬೆಳಕಿನ ಬಾಳಾಗಬೇಕು" ಎಂದು ಆಶಿಸಿದವರು. ಬೆಳಕು ಅವರ ಕಾವ್ಯದ ಸ್ಥಾಯಿಭಾವ, ಅವರು ಬೆಳಕಿನ ಬೆಳೆಯಾದ ಜ್ಞಾನ, ಸತ್ಯ, ಶಾಂತಿ ಸದಾ ಸೊಂಪಾಗಿ ಸಮೃದ್ಧವಾಗಲಿ ಎಂದು ಯಾವತ್ತೂ ಆಶಿಸಿದ್ದಾರೆ.

* * * * * *

### ಚೈತ್ಯ

**ಭ್ರಾಂತಿಯಳಿಯಲಿ ಬರಲಿ ಕರಣದ ಶಾಂತಿ ಚೈತ್ಯದ ಕಾಂತಿ (5-2)**

*ಬೇಂದ್ರೆ ಅವರು ಶ್ರೀಮಾತಾರವಿಂದರ ಚಿಂತನೆಯನ್ನು ತಮ್ಮ ಜೀವಭಾವದ ಭಾಗವಾಗಿಸಿಕೊಂಡವರು. ಅದರ ಮನನದಲ್ಲಿ ಅಚಿಂತ್ಯಾನುಭವದ ಸಾಧ್ಯತೆಯನ್ನು ವ್ಯಕ್ತಿಯು ಹೊಂದಲು ಸಾಧ್ಯ ಎಂದು ಕನ್ನಡದಲ್ಲಿ ಸರಳವಾಗಿ ಹೇಳಿದರು. ಆತ್ಮಶೋಧದ ಸತ್ಯದ ನಡೆಯಲ್ಲಿ, ಜೀವಾತ್ಮ ಕಾಂತಿಯಿಂದ ಶೋಭಿಸುವನು ಎಂದು ಹೇಳಿದ ನುಡಿಯಿದು.

ಕರಣ–ಜ್ಞಾನೇಂದ್ರಿಯ. ಪಂಚಕರಣಗಳು–ಕಣ್ಣು, ಕಿವಿ, ಮೂಗು, ನಾಲಗೆ ಮತ್ತು ಚರ್ಮ ಎಂಬ ಐದು ಇಂದ್ರಿಯಗಳು. ಅಧ್ಯಾತ್ಮಜೀವಿ ಭ್ರಾಂತಿಯಿಂದ ಬಿಡುಗಡೆಗೊಂಡು ಪಂಚಕರಣಗಳನ್ನು ತನ್ನ ಹಿಡಿತದಲಿಟ್ಟುಕೊಂಡು ಅದರ ಶಾಂತ ಅನುಭವದಲ್ಲಿ ತನ್ನ ಒಡಲನ್ನು ಅಂಕೆಯಲ್ಲಿಟ್ಟುಕೊಳ್ಳಬೇಕು. ಮನ, ಬುದ್ಧಿ, ಅಹಂಕಾರ ಚಿತ್ತವೆಂಬ ಅರಿವಿನಿಂದ ಬಿಡುಗಡೆಗೊಳ್ಳಬೇಕು. ಬಯಲಾಗಬೇಕು. ಆಗ ಅವನ ಚೈತ್ಯ ಜೀವಾತ್ಮವು ಕಾಂತಿಯಿಂದ ಶೋಭಿಸುತ್ತದೆ.

* * * * * *

**ಬಲಗೊಳು**

**ಪಾದಪದ್ಮಂಗಳಿಗೆ ಜೀವದ ಹಂಸನಾ ಬಲಗೊಂಬೆ (8–4)**

: ಬಲಭಾಗದಿಂದ ಸುತ್ತು ಹಾಕು; ಪ್ರದಕ್ಷಿಣೆ ಮಾಡು.

*ಶ್ರೀ ಮಾತೆಯವರ ಪಾದಪದ್ಮಗಳಿಗೆ ತಾನು ಬಲಭಾಗದಿಂದ ಸುತ್ತು ಹಾಕುವೆ ಎಂದು ತನ್ನ ಭಕ್ತಿಯನ್ನು ಪ್ರಕಟಪಡಿಸಿದ್ದಾರೆ.

---

## ಓ ತಾಯಿ–ಮಾಯಿ

**ಶಿವಜಾಯಿ**

**ಓ ತಾಯಿ, ಮಾಯಿ, ಶಿವಜಾಯಿ, ಕಾಯಿ ನನ! ಯಾಕ ತೆರೆವೆ ಬಾಯ್ಸಿ?/ ಯಾ ಹಾದಿಲಿಂದ ನಾ ಹೋದರೇನು ಆಗ್ತೇನ ಅಲ್ಲೆ ನಾಯಿ (1–1, 2)**

: ಶಿವನ ಪತ್ನಿ; ಪಾರ್ವತಿ.

"ಜಾಯೆ" ಧಾರವಾಡದ ನುಡಿಯಲ್ಲಿ "ಇ"ಕಾರಾಂತವಾಗಿ "ಜಾಯಿ" ಆಗಿದೆ. ಪತ್ನಿಯನ್ನು ಜಾಯೆ ಎನ್ನುವರು.

*ಮನುಷ್ಯ ಲೋಕವು ನಾಯಿಯನ್ನು ಹೀನಾರ್ಥವಾಗಿ ಭಾವಿಸಿದೆ. ಆದರೆ, ಸಂಸ್ಕೃತಿ ಮತ್ತು ಅಧ್ಯಾತ್ಮದ ದಾರಿಗಳಲ್ಲಿ ನಾಯಿಗೆ ಪ್ರತ್ಯೇಕ ಸ್ಥಾನವನ್ನು ನೀಡಿದ್ದಾರೆ. ಮಾನವ ಸಂಸ್ಕೃತಿಯಲ್ಲಿ ನಾಯಿಯು ಒಂದು ಮುಖ್ಯ ಭಾಗ. ಅದು ದಾರಿ ತೋರಿಸುವ ಒಂದು ಪ್ರತಿಮೆ. ಬೇಂದ್ರೆ ಅವರು ದತ್ತಸಂಪ್ರದಾಯದ ರಹಸ್ಯವನ್ನು ಬಲ್ಲವರು. ಆ ರಹಸ್ಯದ ಸೂಚ್ಯಾರ್ಥವಾಗಿ ಈ ಸಾಲು ಇದೆ. ಲೌಕಿಕ ವಾಸನೆಯನ್ನು ಮುಕ್ತಗೊಳಿಸುವ ಪ್ರತಿಮೆಯಾಗಿಯೂ ಬಳಸಲಾಗಿದೆ.

* * * * * *

**ಮುಸುಗುಡು, ಬೀಸು**

**ಮುಸುಗುಡುತ ಹೊರಟೆ ಬಯಲಾಗ ನನ್ನ ಮುಗದಾಣ ಭಾಳ ಬೀಸು.** **(9–2)**

: ಆಯಾಸ; ಸಿಟ್ಟು ಮುಂತಾದವುಗಳಿಂದ ಮುಸುಮುಸು ಎಂದು ಶಬ್ದಮಾಡು.

: ವಿಶಾಲವಾದುದು; ವಿಸ್ತಾರವಾದುದು.

*ಗುರುವಾದವನು ಜ್ಞಾನಕ್ಕಾಗಿ ಅಲೆದಾಡುವ ಶಿಷ್ಯನನ್ನು ವಿಡಂಬಿಸುವ ಪದ್ಯವಿದು. ಹಾಗೆ ವಿಡಂಬಿಸುವ ಅಲ್ಲಮ "ಎತ್ತನೇರಿ ಎತ್ತನರಸುವರು ಎತ್ತ ಹೋದರು ಕಾಣಾ ಗುಹೇಶ್ವರ" ಎಂದು ಹಾಡಿದ್ದಾನೆ. ಇಲ್ಲಿ ಬೇಂದ್ರೆ ಜ್ಞಾನದ ಹುಡುಕಾಟದಲ್ಲಿರುವ ಶಿಷ್ಯ ಹಾಗೂ ಅಂತಹ ಶಿಷ್ಯನನ್ನು ವಿಡಂಬಿಸುತ್ತಿರುವ ಗುರು ಇವರಿಬ್ಬರ ಸಂಭಾಷಣೆಯನ್ನು ನಾಟಕೀಯವಾಗಿ ನಿರೂಪಿಸಿದ್ದಾರೆ. ಆ ಗುರು ಗಂಡೂ ಹೌದು, ಹಾಗೆಯೇ ಹೆಣ್ಣೂ ಆಗಬಹುದು. ಆ ಗುರು ತಾಯಿ ಮಾಯಿಯೂ ಆಗಬಹುದು. ಜ್ಞಾನಾಕಾಂಕ್ಷಿಯಾದ ಶಿಷ್ಯನನ್ನು ಇಲ್ಲಿ ನಾಯಿಗೆ ಹೋಲಿಸಲಾಗಿದೆ ಅಥವಾ ಶಿಷ್ಯನೇ ತನ್ನನ್ನು ನಾಯಿಯೆಂದು ನಿರ್ವಚಿಸಿಕೊಂಡಿರುವನು. ಮೇಲಿನ ಸಾಲುಗಳನ್ನು ನಾನು ಹೀಗೆ ಗ್ರಹಿಸಿದ್ದೇನೆ: "ಜ್ಞಾನಕ್ಕಾಗಿ ನೀನು ಬಯಲಲ್ಲಿ ನಾಯಿಯಂತೆ ಅಲ್ಲಿ ಇಲ್ಲಿ ಮೂಸುತ್ತಾ ಹೊರಟಿರುವೆ. ಎಷ್ಟೇ ದೂರಕ್ಕೆ ಹೋದರೂ ನಿನ್ನ ಮೂಗುದಾರ ನನ್ನ ಕೈಲಿದೆ, ನಿನ್ನ ಕೇಂದ್ರ ನಾನೇ ಆಗಿರುವೆ ಮೂಗುದಾರಕ್ಕೆ ಕಟ್ಟಿರುವ ನನ್ನ ಕೈಯ ಹಗ್ಗ ಉದ್ದವಾಗಿರುವ ಕಾರಣ ನಿನಗೆ ಎಲ್ಲೆಡೆ ಅಲೆದಾಡಲು ಸಾಧ್ಯವಾಗಿದೆ".

---

## ಪ್ರತ್ಯಕ್ಷ

**ಕೊರಳಿಸು, ಬೆರಳಿಸು**

**ಹುರುಳಿನ ಅರಳರಳಿಸಿ/ ಮಾಲೆ ಮಾಡಿ ಕೊರಳಿಸಿ/ ಹೃದಯ ವೀಣೆ ಬೆರಳಿಸಿ/ ಕುಣಿಸು ಜಗಕಲಾಪಿನೀ/ ಬಾರೆ ಬಾ ಮನೋನ್ಮನೀ.** **(2–1, 2, 3, 4, 5)**

: ಕೊರಳಿಗೆ ತೊಡಿಸು; ಹಾಕು.

: ಬೆಟ್ಟಿನಿಂದ ಬಾಜಿಸು; ಮಿಾಟು, ನುಡಿಸು.

*ತಾಯಿ ಜಗನ್ಮಾತೆಯೇ ಬಾ. ನಮ್ಮಲ್ಲಿಯ ಶಕ್ತಿ, ಚೈತನ್ಯದ ಹೂವನ್ನು ಅರಳಿಸಿ ಮಾಲೆಮಾಡಿ ಕೊರಳಿಗೆ ತೊಡಿಸು. ನಮ್ಮಲ್ಲಿ ಪ್ರೀತಿ, ಕರುಣೆ ಜಾಗೃತಗೊಳುವಂತೆ ಹೃದಯವೀಣೆಯನ್ನು ನುಡಿಸು ಎಂದು ಮನೋನ್ಮನಿ–ಪಾರ್ವತಿ ಶಕ್ತಿದೇವತೆಯನ್ನು ಪ್ರಾರ್ಥಿಸಿದ್ದಾರೆ.

ಕೊರಳು ಮತ್ತು ಬೆರಳು ನಾಮಪದಗಳು ಇಲ್ಲಿ ಕೊರಳಿಸಿ, ಬೆರಳಿಸಿ ಎಂದು ಕ್ರಿಯಾಪದವಾಗಿ ಪ್ರಯೋಗವಾಗಿವೆ.

---

## ದರ್ಶನ

**ಕಣ್ ಕಾಣಿಕೆ**

**ಕಂಡಿಯಿಂದ ಕಂಡೇವೆ/ ಕಣ್ ಕಾಣಿಕೆ ಎಂದು (2–1, 2)**

: ಕಣ್ಣಿನಿಂದ ಕಾಣುವಿಕೆ; ಪ್ರತ್ಯಕ್ಷ ಕಾಣುವಿಕೆ.

---

## ತಾಯ–ನಗೆ

**ಹೂಳು**

**ಮುಚ್ಚಿದೆರಡು ತುಟಿಗಳಲ್ಲಿ ಅರ್ಥವೆಲ್ಲ ಹೂಳಿದೆ (2–4)**

: ಅಡಗು; ಹುದುಗು; ಮರೆಯಾಗು.

*ನಮ್ಮ ಜೀವನದ, ಅಧ್ಯಾತ್ಮದ ಹಲವು ಪ್ರಶ್ನೆಗಳಿಗೆ ಉತ್ತರವೆಂಬಂತೆ ಶ್ರೀಮಾತೆಯವರ ಮುಚ್ಚಿದೆರಡು ತುಟಿಗಳಲ್ಲಿ ಅರ್ಥವೆಲ್ಲ  ಅಡಗಿದೆ.

---

## ನಾಲ್ವರು ತಾಯಂದಿರು

**ಹೇಳಿ ಕೇಳಿ, ಹಸುಹರಣ**

**ಕೂಸು ನಾನು ಹೇಳಿ ಕೇಳಿ (1–10)**

ನೀವೇ ಬಲ, ನೀವೇ ಹೊಲ, ನೀವೇ ಚಲ/ ಕಲಿಸಿರವ್ವ ಕಲಿಸಿರಿ ಹಸುಹರಣವ ಬಲಿಸಿರಿ (2–12, 13, 14)

: ಎಲ್ಲರಿಗೂ ಗೊತ್ತಿರುವಂತೆ; ತಿಳಿದೂ ತಿಳಿದು.

: ಎಳೆಯ ಪ್ರಾಣ; ಕೋಮಲವಾದ ಜೀವ.

*ಬೇಂದ್ರೆಯವರು ಮಹೇಶ್ವರಿ, ಮಹಾಕಾಳಿ, ಮಹಾಲಕ್ಷ್ಮಿ, ಮಹಾಸರಸ್ವತಿ ದೇವಿಯರನ್ನು 'ನಾಲ್ವರು ತಾಯಂದಿರು' ಎಂದು ಸ್ತುತಿಸಿದ್ದಾರೆ. ಎಲ್ಲರಿಗೂ ಗೊತ್ತಿರುವಂತೆ ಕೂಸು ನಾನು. ನನ್ನದು ಹಸು ಹರಣ/ಎಳೆಯ ಪ್ರಾಣ. ತಾವೇ ಸರ್ವಸ್ವ, ತಾವು ನನ್ನನ್ನು ಬೆಳೆಸಿ ಬಲಿಷ್ಠನನ್ನಾಗಿ ಮಾಡಿ ಎಂದು ಪ್ರಾರ್ಥಿಸಿದ್ದಾರೆ.

---

## ಬೆಳಕಿನ ಲಿಂಗ

### ಗುಡುಗಾಡು

**ಗುಡುಗಾಡೊ ಗುಡುಗಾಡೊ ಲಿಂಗವೇ (2–1)**

: (ಆಲಂ)ಗಟ್ಟಿಯಾಗಿ ಮಾತಾನಾಡು; ಕೂಗಾಡು.

*ಯೋಗಿ ಅರವಿಂದರು ಬ್ರಹ್ಮಸಮಾಧಿಸ್ಥರಾದಾಗ ಅವರನ್ನು ಕುರಿತು ರಚಿಸಿದ ಕವನ 'ಬೆಳಕಿನ ಲಿಂಗ'. ಮಿಂಚಿನ ಲಿಂಗವಾಗಿದ್ದ ಅವರು ಮಾತಾಡಬೇಕು ಎಂದು ಆಶಿಸಿ ಅಲಂಕಾರಿಕವಾಗಿ ಗುಡುಗಾಡೊ ಗುಡುಗಾಡೊ ಗಟ್ಟಿಯಾಗಿ ಮಾತಾಡು ಎಂದು ಚಿತ್ರಿಸಿದ್ದಾರೆ.

---

## ಅದ ಬರಿದೆ ನುಡಿಸಬಹುದೇ?

### ಭೇಕಿಸು

**ಹುಲುಗೊಡ್ಡು ಮೋಡ ಹುಸಿಗುಡುಗಿದಾಗ/ ಕೆಲ ಜೀವ ಭೇಕಿಸುವವು/ ಮೈ ನವಿರ ನವಿಲು ಮೈಯುಣ್ಣದೇನೆ/ ಬರಿದೆಂತು ಕೇಕಿಸುವವು? (2–1, 2, 3, 4)**

*ಬೇಂದ್ರೆಯವರು ಮೇಲಿನ ನುಡಿಯ ಮೊದಲೆರಡು ಸಾಲಿನಲ್ಲಿ ಹುಸಿಯಾದುದಕ್ಕೆ, ಕೃತಕವಾದುದಕ್ಕೆ ಪ್ರತಿಕ್ರಿಯಿಸುವ ಹುಲುಜೀವ ಕಪ್ಪೆ ವಟಗುಟ್ಟುವುದನ್ನು ವಿಕೃತಿಯ ರೂಪಕವಾಗಿ ಚಿತ್ರಿಸಿದ್ದಾರೆ. ಮಳೆ ಬರದಿದ್ದರೂ ಮೋಡ ಗುಡುಗಿದಷ್ಟಕ್ಕೆ ಕಪ್ಪೆ ವಟಗುಟ್ಟುತ್ತದೆ. ಕಪ್ಪೆ ಮುಟ್ಟಲು ಅಸಹ್ಯ, ಅದು ಕುಪ್ಪಳಿಸುತ್ತದೆ. ಅದು ಒಂದು ವಕ್ರಜೀವಿ.

ಅವರು, ಮೂರು ಮತ್ತು ನಾಲ್ಕನೇ ಸಾಲಿನಲ್ಲಿ, ಪ್ರಕೃತಿಯಲ್ಲಿ ಸಹಜ ಆನಂದವನ್ನುಂಡು ಸೊಬಗಿನಿಂದ ಕಲಾತ್ಮಕವಾಗಿ ಮೂಡುವ ಸಂಸ್ಕೃತಿಯ ರೂಪಕವಾಗಿ ಮೈ ನವಿರ ನವಿಲನ್ನು ಚಿತ್ರಿಸಿದ್ದಾರೆ.

ಸೂಕ್ಷ್ಮಭಾವದ ಕಲಾತ್ಮಕ "ಮೈ ನವಿರ ನವಿಲು" ಮಳೆಯನ್ನು ಮೈಯುಂಡು ತಾನು ಅನುಭವಿಸಿದಾಗ ಕೇಕೆ ಹಾಕುತ್ತದೆ. ನವಿಲಿನ ಒಂದು ನವಿರಾದ ಗರಿಯನ್ನು ಮುಟ್ಟುವುದು ಆಹ್ಲಾದ. ಅದರ ನರ್ತನ ನಯನ ಮನೋಹರ. ಅದು ಸೌಂದರ್ಯದ ಪ್ರತೀಕ.

ಮೇಲಿನ ನುಡಿಯಲ್ಲಿ ಪ್ರಕೃತಿಯ ಪ್ರತಿಮೆಗಳೊಡನೆ ತುಂಬಾ ನವಿರಾಗಿ ಕೃತಕ ವಿಕೃತಿಯನ್ನು, ಕಲಾತ್ಮಕ ಸಂಸ್ಕೃತಿಯನ್ನು ಬೇಂದ್ರೆ ಪ್ರತಿಭೆ ಇಲ್ಲಿ ಪಡಿಮೂಡಿಸಿದೆ.

* * * * * *

**ಒಳಬಾಳು**

**ಬಾಳಸೆಲೆಯ ನುಡಿಬೇಕು, ಬಣ್ಣ /ದೊಳಬಾಳ ಆಳಬೇಕು. (5–1, 2)**

: ಒಳಗಿನ ಬದುಕು; ಅಂತರಂಗದ ಜೀವನ.

*ನಮ್ಮ ಒಳಬಾಳು/ ಅಂತರಂಗದ ಜೀವನ ಶುದ್ಧವಾಗಿರಬೇಕು. ಅದೇ ಸಂಸ್ಕೃತಿ ಎಂಬ ಭಾವ ಈ ನುಡಿಯಲ್ಲಿದೆ.

---

## ಇದೆ ಇಲ್ಲಿಯೆ

**ಪಾಟ**

**ಸವಿನುಡಿಗಳ ಒಡನಾಟವೆ/ ನಿನ್ನೊಡನಾಟದೊಲು/ ನಿನ್ನೊಡನಾಡುತಲಿದೆ ನ/ ನ್ನೆದೆಯೇ ಪಾಟದೊಲು (1–13, 14, 15, 16)**

* ಕವನದ ಭಾವಸಂದರ್ಭ: "ಎದೆಯ ಡವಡವಿಕೆಯಲ್ಲಿ ಇದೆ ಇದೆಯೆಂಬ ಧ್ವನಿ ಸ್ಫುರಿಸಿದಾಗ ಬಂದ ಲಹರಿ". ಅನಂತಶಕ್ತ ಈ ಎದೆಯ ಬಡಿತದೊಡನೆ ನನ್ನಲ್ಲಿ ಇದ್ದಾನೆ ಎಂಬ ಭಾವ ಆಸ್ತಿಕನದು. ಅದರ ಧ್ಯಾನದಲ್ಲಿ ಒಂದಾದ ಕವಿಯು ನನ್ನದೆಯೇ ಪಾಟದೊಲು/ಗಾಯನದಂತೆ ನಿನ್ನೊಡನಾಡುತಲಿದೆ ಎಂದು ಉಸಿರಾಟದ ಸಂಗೀತದಲ್ಲಿ ಆನಂದಮುಖಿಗಳಾಗಿದ್ದಾರೆ.

ಪಾಟದ ಇನ್ನೊಂದು ಅರ್ಥ Breadth, expanse, extension.

ಗಾಯನದ ರಸಮಾರ್ಗದಲ್ಲಿ ಸಾಗುವ ಹೃದಯಗೀತ ಅನಂತ ಶಕ್ತನಲ್ಲಿಗೆ ವಿಸ್ತಾರಗೊಳ್ಳುತ್ತಿದೆ. ಕರ್ತೃವನ್ನು ಕ್ರಿಯೆಯನ್ನು ವಿಸ್ತರಿಸುವ ಅರ್ಥವೆಲ್ಲವನ್ನೂ "ಪಾಟ"ಪದದಲ್ಲಿ ಬೇಂದ್ರೆ ಅಡಗಿಸಿಟ್ಟಿದ್ದಾರೆ.

---

## ಎಲ್ಲ ಆಟ–ಮಾಟ–ನಗೆ !

### ಬಿಗಿ

**ನೆಲವನ್ನು ತಿರುಗುವೊಲು/ ತಿರುಗುವದು ನಿಂತವೊಲು/ ಮಾಡಿರುವ ನಿನಗೆ/ ಯಾವುದಿದೆ ಬಿಗಿ? ಎಲ್ಲ/ ಆಟ, ಮಾಟ, ನಗೆ (1–1, 2, 3, 4, 5)**

*ದೇವರ ಸೂತ್ರಧಾರಿತ್ವವನ್ನು ಕಂಡ ಬೇಂದ್ರೆ ಅವರು ಅನಂತಶಕ್ತನಿಗೆ ಯಾವೂದೂ "ಬಿಗಿ" ಅಲ್ಲ– ಕ್ಲಿಷ್ಟವಾದ, ಕಷ್ಟಕರವಾದ, ಬಿಡಿಸಲಾಗದ ತೊಡಕಿನದು ಯಾವೂದೂ ಇಲ್ಲ. ಅವನಿಗೆ "ಎಲ್ಲ ಆಟ, ಮಾಟ, ನಗೆ". ಎಂದು ಕವನ ರಚಿಸಿದ್ದಾರೆ. ಅದಕ್ಕೆ, ಅವರ ಗಾರುಡಿಗ ಚಿತ್ರಣದ ವಸ್ತು ನಾವು ನಿಂತ ಪೃಥ್ವಿಯೇ ಆಗಿದೆ!.

---

## ಬಂದ ಸ್ವಸ್ಥತೆ ನಿಲಲಿ

### ಸ್ವಸ್ಥತೆ

**ಬಂದ ಸ್ವಸ್ಥತೆ ನಿಲಲಿ ಮಲೆಯೊಲು, ನೆಲವು ನೆಲೆ ಬಿಡದಂತೆ. (1–1)**

: ಸ್ವರ್ಗ ವಾಸಿತ್ವ: ಸ್ವರ್ಗವಾಸ.

ಕವಿಯು ಸ್ವರ್ಗವಾಸ ಬಂದರೆ, ಅದು ಮಲೆ(ಪರ್ವತ)ಯಂತೆ ಮತ್ತು ಅದನ್ನು ಆವರಿಸಿರುವ ಕಾಡಿನಂತೆ ಸ್ಥಿರವಾಗಿ ಮತ್ತು ಸದಾ ಹಸಿರಾಗಿರಲಿ ಎಂದು ಪ್ರಾರ್ಥಿಸಿದ್ದಾರೆ.

* * * * * *

### ಗುಡಿಗಟ್ಟು

**ತಮ್ಮ ನುಡಿ ಗುಡಿಗಟ್ಟಿದರೆ ಸರಿ ಜಗವೆ ನೀನಂದಂತೆ. (1–6)**

:ದೃಢವಾಗು.

*ವ್ಯಕ್ತಿಯ ನುಡಿ ಗುಡಿಗಟ್ಟಿದರೆ/ ದೃಢವಾದರೆ ಅರ್ಥಾತ್ ಸತ್ಯದಲ್ಲಿ ಬೇರೂರಿದರೆ, ಆಗ ಅವನ ನುಡಿಗೆ ಜಗತ್ತು ಮಾನ್ಯತೆ ನೀಡುವುದು.

---

## ಕಂಡುದನೆ ಒಳಗೊಂಡು

**ಬೆದೆ**

**ಆಕಾಶಗಂಗಾ ತಟಾಕ ತೇಜಃ ಪುಂಜ/ ದಲ್ಲಿ ಒಳಗಿನ ಬೆದೆಗೆ ಚುಕ್ಕಿ ಹೊಳೆವಂತೆ (1–3, 4)**

:ಪಕ್ವತೆ; ಯೋಗ್ಯವಾದ ಸ್ಥಿತಿ.

---

## ಇಂದ್ರಜಾಲ

**ಒಳವರ್ಣ, ಗಿಣಿಗಿಣಿಲು, ಒಗುಮಿಗು**

**ಅದೊ ಕರ್ಣದಲ್ಲಿ, ಒಳುವರ್ಣದಲ್ಲಿ ಸ್ವರಸ್ವರ್ಣವಲ್ಲಿ ಅರಳಿ/ ರಸರಾಗದಲ್ಲಿ ಅನುರಾಗವಲ್ಲಿ ಹೊಸ ಒಲವು ಲಹರಿ ಮರಳಿ/ ಕರೆಯುತಿಹುದು ಬಗೆಬಗೆಯ ನಗೆಯು ಒಗುಮಿಗುವ ನಾಕದಲ್ಲಿ./ ಗಿಣಿಗಿಣಿಲು ಗಂಟೆ ಮಧುರಸವನೀಂಟೆ ಗಂಧರ್ವಲೋಕದಲ್ಲಿ (5–1, 2, 3, 4)**

:ಒಳ್ಳೆಯ ಬಣ್ಣ.

:ಒಂದು ಅನುಕರಣ ಶಬ್ದ.

:ಆಧಿಕ್ಯ; ಹೆಚ್ಚಳ; ಅತಿಶಯ.

*ಇದು ಯೋಗಿಯ ಅನುಭವಕ್ಕೆ ಬರುವ ಅಲೌಕಿಕ ದರ್ಶನಗಳನ್ನು ವರ್ಣಿಸುವ ಪದ್ಯವಾಗಿದೆ. ಆ ಅಲೌಕಿಕ ವಿಸ್ಮಯವನ್ನು ಕಂಡು ತೃಪ್ತನಾಗದೆ ಅದನ್ನೂ ಮೀರಿ ಮುಂದುವರೆಯಬೇಕೆಂಬುದು ಯೋಗಸಾಧನೆಯ ಆಶಯವಾಗಿದೆ. ಈ ಪದ್ಯದ ಭಾವಕೋಶದಲ್ಲೂ ಬೇಂದ್ರೆ ಇದನ್ನೇ ಹೇಳಿದ್ದಾರೆ. ಏಕೆಂದರೆ ಈ ಅಲೌಕಿಕ ಅನುಭವ ಯೋಗಿಯನ್ನು ಸುಲಭವಾಗಿ ಮೋಹವಶನನ್ನಾಗಿಸಿ ಅವನ ಸಾಧನೆಯನ್ನು ಸ್ಥಗಿತಗೊಳಿಸುತ್ತದೆ. ಇಂತಹ ಅನುಭವವನ್ನು ಅಲ್ಲಮ ತನ್ನ ವಚನಗಳಲ್ಲಿ 'ಸುಖ ಸಮಾಧಿ' ಎಂದು ಕರೆದು ವರ್ಣಿಸಿರುವನು. ಆ ಸುಖ ಸಮಾಧಿಯನ್ನು ಬೇಂದ್ರೆ 'ತೇಜವೊಡೆದು ಪರಪುಷ್ಟವಾದ ಗ್ರಹಮಾಲೆಯಾದ ಹಾಗೆ' ಎಂದು ಈ ಕವನದಲ್ಲಿ ವಿವರಿಸಿರುವರು. ಇಲ್ಲಿ ಗ್ರಹ ಎಂಬ ಪದಕ್ಕೆ ಪ್ಲಾನೆಟ್ ಎಂಬ ಅರ್ಥದ ಜೊತೆಗೆ ಹಿಡಿದಿಟ್ಟುಕೊಳ್ಳುವುದು, ವಶವರ್ತಿಯನ್ನಾಗಿಸುವುದು ಎಂಬರ್ಥವೂ ಉಂಟು. ಅನುಭವ ಪರಪುಷ್ಟವಾಗಬಾರದು. ಹೊರಗಿನ ಪ್ರೇರಣೆಯಿಂದ ಸದೃಢವಾಗಬಾರದು, ಅನುಭವ ಸ್ವಯದಲ್ಲೇ, ಸ್ವಯದೊಂದಿಗೇ ಪೂರ್ಣವಾಗಬೇಕು ಎಂಬ ಇಂಗಿತ ಇದ್ದಂತಿದೆ. (ಪರಪುಷ್ಟ: ಬೇರೆಯವರ ಪೋಷಣೆಗೆ ಒಳಗಾದ).

---

## ಪರಮೆ–ತುಂಬಿ

### ಪರಮೆ

**ತುಂಬಿ ಮೊರೆದು ಪರಮೆಯನು ಕರೆಯುತಿದೆ/ ತುಂಬು ಬಾಳಿಗಾಗಿ (3–1, 2)**

:ದುಂಬಿ; ಭ್ರಮರ.

*ಬೇಂದ್ರೆಯವರು ಇಲ್ಲಿ ಪರಮೆ ಪದವನ್ನು ಹೆಣ್ಣು ತುಂಬಿ ಎಂಬ ಅರ್ಥದಲ್ಲಿ ಬಳಸಿದ್ದು. ಅವುಗಳ ಒಲ್ಮೆಯ ಕೂಡುವಿಕೆಯಿಂದ ತುಂಬು ಬಾಳು ಎಂದು ಹೇಳಿ, ಈ ಜಗದ ಜೀವಿಗಳ ತುಂಬು ಸವಿಯನ್ನು ತಿಳಿಸಿದ್ದಾರೆ.

---

## ಸುದರ್ಶನದಲ್ಲಿ

### ಕದಿರು

**ದೇವಕೇಂದ್ರದಿ ಕದಿರುತಿದ್ದ ಆಶೀರ್ವಾದ/ ಫಲಿಪ ಸುಮಸಮಯ ಅವತೀರ್ಣವಾದಂತೆ. (2–1, 2)**

: ಮಿಂಚು; ಹೊಳೆ; ಪ್ರಕಾಶಿಸು.

*ಅರವಿಂದರ 'ಸುಪ್ರಾಮೆಂಟಲ್ ಮ್ಯಾನಿಫೆಸ್ಟೇಷನ್' ಎಂಬ ಪರಿಕಲ್ಪನೆಯನ್ನು ಬೇಂದ್ರೆ ಈ ಪದ್ಯದ ಭಾವದಲ್ಲಿ ಸುಪ್ರಮಾನಸದ ಅಪ್ರಮೇಯ ಕಿರಣಗಳು ಎಂದು ಅನುವಾದಿಸಿದ್ದಾರೆ. ಭವಿಷ್ಯದಲ್ಲಿ ಹೊಸ ಮಾನವ ಜಾತಿ ಹುಟ್ಟುತ್ತದೆ. ಆ ಹೊಸ ಮಾನವಜಾತಿ ಜನ್ಮಜಾತವಾಗಿ ತನ್ನ ಪ್ರತಿಭೆ, ಜ್ಞಾನ, ಸಾಮರ್ಥ್ಯ ಹಾಗೂ ದಿವ್ಯತೆಗಳನ್ನು ಒಳಗೊಂಡಿರುತ್ತದೆ ಎಂಬುದು 'ಸುಪ್ರಾಮೆಂಟಲ್ ಮ್ಯಾನಿಫೆಸ್ಟೇಷನ್' ಕಲ್ಪನೆಯ ಪ್ರತಿಪಾದನೆಯಾಗಿದೆ. ಆ ಹೊಸ ಮಾನವಕುಲದ ಉದಯದ ಮುನ್ಸೂಚನೆ ಬೇಂದ್ರೆಯ ಈ ಪದ್ಯದಲ್ಲಿದೆ. ಇದೇ ಹಿನ್ನೆಲೆಯಲ್ಲಿ ಅವರ 'ಒಲವು ಲಿಂಗ' ಪದ್ಯವನ್ನೂ ಪರಿಭಾವಿಸಬಹುದು.

***

ಕಾರ್ಬೋರ್ನ್ ಕಣವೇ ಕೆಂಬೋನ್ನಾಗಿ ಕಿನಿಕಿನಿ ಕದಿರುವದು(ಜೀವಲಹರಿ:ಒಲವು ಲಿಂಗ)

(ಕಿನಿಕಿನಿ= ಕೆಂಪಾಗಿ; ಕೆಚ್ಚನೆ)

---

# ಮಧ್ವ

## ದೃಷ್ಟಾ ದೃಷ್ಟಿಯೋಗ

**ಶುಭಮಕ್ಕೆ ನಮ್ಮ ದೃಷ್ಟಾದೃಷ್ಟಿ ಯೋಗಕ್ಕೆ (2–4)**

: ನೋಟಗಳು ಪರಸ್ಪರ ಸೇರುವಿಕೆ, ದರ್ಶನ.

*ಮಧ್ವ ಎಂಬುದು ಮಧು ಎಂಬ ಪದದಿಂದ ನಿಷ್ಪನ್ನವಾಗಿದೆ. ಇದನ್ನು ಉಪನಿಷತ್ತಿನ 'ರಸ'ದ ಕಲ್ಪನೆಗೆ ಹೋಲಿಸಬಹುದು (ರಸೋ ವೈ ಸಃ). ಪದ್ಯದಲ್ಲಿ ಸಾಧಕನು 'ಬಂದೆನಿದೋ ನಾನಹಂಕಾರ ಶಿಖರಕೆ ಹಾರಿ' ಎಂದಿರುವನು. ಅಹಂಕಾರವೆಂದರೆ ಅಹಮಿಕೆ, ನಾನೆಂಬ ಭಾವ ಎಂದರ್ಥ. ಜ್ಞಾನಪ್ರಾಪ್ತಿಗೆ ಈ ನಾನೆಂಬ ಭಾವವನ್ನೂ ಮೀರಬೇಕಾಗುತ್ತದೆ ಎಂದು ಅರವಿಂದಯೋಗವು ಬೋಧಿಸುತ್ತದೆ. ನಾನೆಂಬ ಭಾವವಿರುವಷ್ಟೂ ಕಾಲ ನೀನೆಂಬ ಭಾವವೂ ಇರುತ್ತದೆ ಇದನ್ನೇ ದೃಷ್ಟಾದೃಷ್ಟಿಯೋಗ ಎಂದಿರುವುದು. ಈ ದೃಷ್ಟಾದೃಷ್ಟಯೋಗ ಯೋಗದಾಚೆಗೆ ಅದ್ವೈತವಿದೆ, ಅಲ್ಲಿ ದ್ವೈತವು ಲಯವಾಗುತ್ತದೆ. ಈ ದ್ವೈತಭಾವಕ್ಕೆ ಶುಭವಾಗಲಿ ಎಂದು ಕವಿ ಹಾರೈಸುತ್ತಿರುವರು. ಅಂದರೆ ಈ ದ್ವೈತಭಾವ ಲಯಗೊಂಡ ಮೇಲೆ ಉಳಿವ ನಾನು–ನೀನೆಂಬುದಿರದ ಅಪಾರವಾದ ಆನಂದಭಾವವನ್ನು ಇಲ್ಲಿ ಕವಿ ಧ್ಯಾನಿಸುತ್ತಿರುವರು

---

# ಮೋದ ಹರುಷದ ಸಸಿ

## ಅಹಮನ್ನಾದ

**ಊದುತಿದೆ ಉಸಿರಾಡುತಿದೆ ಬ್ರ/ ಹ್ಮಾದಿ ತೃಣಪರ್ಯಂತ ಒಂದೇ/ ನಾದ ಅಹಮನ್ನಾದ ಬ್ರಹ್ಮಾಸ್ವಾದ ನಿರ್ಘೋಷ. (1–4, 5, 6)**

* 'ಅಹಮನ್ನಾದ' ಎಂಬುದು ತೈತ್ತಿರೀಯ ಉಪನಿಷತ್ತಿನ ಒಂದು ಮಂತ್ರದ ಸಾಲಾಗಿದೆ. 'ನಾನೇ ಅನ್ನವಾಗಿದ್ದೇನೆ' ಎಂಬುದು ಈ ಸಾಲಿನ ಅರ್ಥ. ಮುಂದಿನ ಸಾಲುಗಳಲ್ಲಿ ಈ ಉಪನಿಷತ್ತಿನ ಋಷಿಯು ನಾನು ಬ್ರಹ್ಮನಿಗಿಂತಲೂ ಮುಂಚೆಯೇ ಜನಿಸಿದ್ದೇ... ಹೀಗೆ ಹಾಡುವನು. ಈ ರೀತಿ ಅನ್ನದಿಂದ ಪ್ರಾಣ, ಪ್ರಾಣದಿಂದ ಮನಸ್ಸು, ಮನಸ್ಸಿನಿಂದ ಜ್ಞಾನ, ಅನಂತರ ಆನಂದ ಉಂಟಾಗುತ್ತದೆ. ಇದು ಪಂಚಕೋಶಗಳ ವಿವರ. ಇದು 'ಬ್ರಹ್ಮನಿರ್ವಾಣ'ಕ್ಕೆ ದಾರಿ.

* * * * * *

**ಪಡಿಸಾದ**

**ಅದು ಅದೋ ದಿಕ್ಕೆಲ್ಲ ಒಂದೇ ನಾದ ಪಡಿಸಾದ (3–6)**

:ಪಡಸಾದ; ಪ್ರತಿಧ್ವನಿ; ಪ್ರತಿಶಬ್ದ.(ಮರಾ:ಪಡಿಸಾದ್,ಪಡಸಾದ್)

***

ಏತರ ಒಸಗೆಯು ಇದು? ಯಾ ಹಿಗ್ಗಿನ ಪಡಸಾದ?(ಹೃದಯಸಮುದ್ರ: ಗುರು ನೆನೆದರೆ)

ಗೋಳಗುಮುಟದಂತೆ ಸೃಷ್ಟಿ ನುಡಿಸುವ ಪಡಿಸಾದವ(ಸೂರ್ಯಪಾನ: ಸ್ವಾತಂತ್ರ್ಯದೇವಿಗೆ)

---

## ನೀರು

**ತೊರೆ**

**ಮೋಡ ಎರೆವುದು ಮಲೆಯ ತಲೆಯಲಿ, ಬೆಟ್ಟ ಸುರಿವುದು ಕೊಳ್ಳಕೆ/ ಕೊಳ್ಳ ತೊರೆವುದು ನದಿಗೆ, ಎಲ್ಲವು ಮತ್ತೆ ಕಡಲಿನ ಹಳ್ಳಕೆ (6–1, 2)**

: ಹರಿ; ಪ್ರವಹಿಸು.

*ಮಲೆಗೆ ಮೋಡ ಎರೆಯುವುದು ಎಂದು ಹೇಳಿದ ಕವಿ ಆ ನೀರು ಕೊಳ್ಳಕ್ಕೆ ಹರಿಯುವುದನ್ನು 'ಬೆಟ್ಟ ಸುರಿವುದು' ಎಂಬ ರೂಪಕದಲ್ಲಿ ಚಿತ್ರಿಸಿದ್ದಾರೆ. ಆ 'ಕೊಳ್ಳ ತೊರೆವುದು ನದಿಗೆ' ಎಂದು ಹೇಳಿ ಕೊಳ್ಳ ಹರಿಯುವುದನ್ನು 'ತೊರೆ' ಕ್ರಿಯಾಪದದಲ್ಲಿ ತಿಳಿಸಿದ್ದಾರೆ. ನೀರು ಕೊಳ್ಳಬಿಟ್ಟು ಸಾಗುವುದನ್ನು 'ತೊರೆ' ಪದವು ಧ್ವನಿಸುತ್ತದೆ. ಕವಿಯು 'ಎರೆ' 'ಸುರಿ' 'ತೊರೆ' ಕ್ರಿಯಾಪದಗಳಲ್ಲಿ ನೀರಿನ ಚಲನಶೀಲತೆ ತನ್ನ ಗತಿಯನ್ನು ಹೆಚ್ಚಿಸಿಕೊಳ್ಳುತ್ತಾ ಸಾಗುವುದನ್ನು ಸೂಚಿಸಿದ್ದಾರೆ. ನೀರಿನ ಪ್ರವಹಿಸುವಿಕೆಯು ತೊರೆ–ಹೊಳೆ, ನದಿಯಾಗುತ್ತದೆ. ಹೊಳೆಗೆ ತೊರೆ ಎಂಬ ಅರ್ಥವಿದೆ.

* * * * * *

**ಜೀವನ**

**ನಿನ್ನ ಜೀವನ ಕುಡಿದು ಸುತ್ತಗೂ ಮಣ್ಣ ತುಂಬಿದೆ ಜೀವನಾ/ ಬೆಳಕಿಗೆತ್ತಲು ಕಣ್ಣ ತೆರೆದಿದೆ ಹುಡುಕ ಬಯಸಿದೆ ದೇವನಾ (12–1, 2)**

*ಹಳಗನ್ನಡ ಕಾವ್ಯದಲ್ಲಿ ನೀರನ್ನು 'ಜೀವನ' ಎಂದು ಕರೆದಿದ್ದಾರೆ. ಬೇಂದ್ರೆ ಅವರು ಜಲವು ಮಣ್ಣಿಗೆ ಜೀವ ತುಂಬಿ, ಬೆಳಕಿಗೆ ಎತ್ತಲೂ ಹಸಿರಾಗಿ ಕಣ್ಣ ತೆರೆದು ದೇವನನ್ನು

ಹುಡುಕುವ ಆಶ್ಚರ್ಯವನ್ನು ಚಿತ್ರಿಸಿದ್ದಾರೆ.

* * * * * *

**ನಿಕ್ಕಳ**

**ತಲೆಯಲಲೆದರು ಬುಡದೊಳಿದೆ ನೆಲೆಗೊಂಡ ನಿಲವಿನ ನಿಕ್ಕಳ (16–1)**

: ಸಂಪೂರ್ಣವಾದುದು; ಅಖಂಡವಾದುದು(ಮರಾ. ನಿಕ್ಕಳ, ನಿಖಳ, ನಿಖ್ಖಳ/ಸಂ:ನಿಖಿಲ)

ಮರವು ಸಂಪೂರ್ಣವಾಗಿ, ಅಖಂಡವಾಗಿ ಬುಡದಲ್ಲಿ ನೆಲೆಗೊಂಡ ಅರ್ಥವನ್ನು 'ನಿಕ್ಕಳ' ಪದ ಹೊಂದಿದೆ. ಇದು ಕವಿಯ ದೇಸಿ ಸೊಗಡು.

---

## ಶ್ರೀ ವಿಶ್ವನಲ್ಲಿ ಯಜಮಾನನಾಗಿ

**ಇಳಿಬೆಳಕು, ಸುಳಿಯೇರು**

**ನಿನ್ನ ಕೃಪೆಯ ಇಳಿಬೆಳಕಿನಲ್ಲಿ ಸುಳಿಯೇರಿ ಬಂತು ಪ್ರೀತಿ (4–1)**

: ಇಳಿದು ಬರುವ ಬೆಳಕು, –ಪ್ರಭೆ.

:ಚಿಗುರು; ಸುಳಿಬರು.

*ಭಗವಂತನ ಕೃಪೆಯಿಂದ ಇಳಿದು ಬರುವ ಬೆಳಕಿನ ಪ್ರಭೆಯಲ್ಲಿ 'ಪ್ರೀತಿ' ಸುಳಿಯೇರಿ/ ಚಿಗುರಿ ಬಂತು ಎಂದು ಕವಿ ಜೀವಲೋಕದಲ್ಲಿ ಸಹಜವಾಗಿ ಮೈದೋರಿದ ಪ್ರೀತಿಯನ್ನು ತಿಳಿಸಿದ್ದಾರೆ.

* * * * * *

**ತಂಬಿಗೆ**

**ತಂಬಿಗಿಯ ಒಳಗೆ ತುಂಬಿರುವ ನೀರೆ ವರಶಕ್ತಿ ಎನಿಸುವಂತೆ (6–3)**

*ಉತ್ತರ ಕರ್ನಾಟಕದವರು ಪೂಜೆಯಲ್ಲಿ ನೀರುತುಂಬಿ ಇಡುವ ಚೆಂಬು–ಕುಂಭವನ್ನು "ತಂಬಿಗಿ" ಎಂದು ಕರೆಯುವರು. ದಕ್ಷಿಣ ಕರ್ನಾಟಕದಲ್ಲಿ 'ಕಳಶ' ಎನ್ನುವರು. ಬೇಂದ್ರೆ ಅವರು ಜಗದ ಚೈತನ್ಯ ಶ್ರೀ– ನೀರೆ/ಸ್ತ್ರೀಯನ್ನು ಆಕೆಯ ಮಂಗಳ ಭಾವ, ಪಾತಿವ್ರತ್ಯ ಎಲ್ಲವೂ ಧ್ವನಿತವಾಗುವಂತೆ 'ತಂಬಿಗಿ' ಪದ್ಯದಲ್ಲಿ ಹಿಡಿದಿಟ್ಟಿದ್ದಾರೆ. ಅದು ಭಾರತೀಯ ಕಾವ್ಯಪರಂಪರೆಯಲ್ಲಿ ಮಾತೆಯ ವರಶಕ್ತಿಯನ್ನು ನಮ್ಮ ಧಾರ್ಮಿಕ ಹಿನ್ನೆಲೆಯಲ್ಲಿ

ವ್ಯಕ್ತಪಡಿಸಿರುವ ಅಪರೂಪ ಕಾವ್ಯ ಕುಸುರಿ. ವಾಚ್ಯಾರ್ಥದಲ್ಲಿ 'ತಂಬಿಗಿ' ಕುಂಭವಾದರೆ, ವ್ಯಂಗ್ಯಾರ್ಥದಲ್ಲಿ 'ತಮ್ಮ ಬಿಗಿ' ಸಾಧಿಸಿದ ಅರ್ಥ ವ್ಯಂಜಿತವಾಗುತ್ತದೆ.

* * * * * *

**ಪೆರುಮಾಳು**

**ಆಳಾಗಿ ಹೊರಟು ಆಳುವದು ಜಗವ ಪೆರುಮಾಳೆ ಜನಿಸುವಂತೆ (6–4)**

: ಪರಮಾತ್ಮ;ದೇವರು.(.ತಮಿ.ಮ:ಪೆರುಮಾಳ್; ತೆಲು:ಪೆರುಮಾಳ್ಳು)

* * * * * *

**ತಳಸೋಸು**

**ತಮವನ್ನೆಲ್ಲ ತಳಸೋಸಿ ಮಾಡು ಸ್ಥಿರ ಶಾಂತಿ ಕಾಂತಿಯಾಗಿ (8–1)**

: ತಳದವರೆಗೂ ಬೆದಕಿ ಶೋಧನೆಮಾಡು; ಸಂಪೂರ್ಣವಾಗಿ ನೋಡು; ಶೋಧಿಸು.

*ಕವಿ ಅನಂತಶಕ್ತನಲ್ಲಿ ತನ್ನಲ್ಲಿರುವ ಅಜ್ಞಾನದ ಅಂಧಕಾರವನ್ನು ತಮೋಗುಣ(ಮೂರು ಮೂಲಗುಣಗಳು: ಸತ್ವಗುಣ, ರಜೋಗುಣ, ತಮೋಗುಣ)ವನ್ನು ತಳಸೋಸಿ/ ತಳದವರೆಗೂ ಬೆದಕಿ ಶೋಧನೆ ಮಾಡು ಅದನ್ನು ಇಲ್ಲವಾಗಿಸಿ ನನ್ನಲ್ಲಿ ಸ್ಥಿರಶಾಂತಿ ಕಾಂತಿ ಮೂಡಿಸು ಎಂದು ಅನನ್ಯವಾಗಿ ಪ್ರಾರ್ಥಿಸಿದ್ದಾರೆ.

***

ಮೋಹೆಂಜೋದಾರೋ ಸಂಸ್ಕೃತಿಯು ದ್ರಾವಿಡರದಿದ್ದದ್ದಾದರೆ ಕನ್ನಡವನ್ನು ಇನ್ನೂ ತಳ ಸೋಸಿ ನೋಡುವ ಅಗತ್ಯವು ಬಹಳೇ ಇದೆ. (ಸಾಹಿತ್ಯ ಸಂಶೋಧನ–143)

---

## ಮೈಯು ನೀನು

**ಒಳಲು**

**ತಾಯಿ ನಿನ್ನ ಒಳಲೊಡನೆ ಮಾತ್ರ, ಈ ಜೀವ ಸಾಮ್ಯವಿರಲಿ(1–4)**

: ಒಳತಿರುಳು.

*ತನ್ನ ತಾಯಿಯ ಒಡಲ ಚಿಗುರು ಆದ ಕವಿ 'ಅಂಬಿಕಾತನಯದತ್ತ'ರು ಅವಳ ಒಳ ತಿರುಳುವಿನಲ್ಲಿ ಮಾತ್ರ ತನ್ನ ಜೀವ ಸಾಮರಸ್ಯವಿರಲಿ ಎಂದು ಪ್ರಾರ್ಥಿಸಿದ್ದಾರೆ.

* * * * * *

## ಹೊಲ್ಲಾಗು

**ಕಲ್ಲಾಗಲೇನು ಹೊಲ್ಲಾಗಲೇನು ಅದು ಬಲ್ಲತನಕೆ ಸಲ್ಲ (4–1)**

: ಕೆಡುಕಾಗು; ಅನಿಷ್ಟವಾಗು.

*ತಾಯಿ ನಿನ್ನ ಬಲ್ಲತನ /ಶಕ್ತಿ, ಸಾಮರ್ಥ್ಯ ನನ್ನಲ್ಲಿರುವ ತನಕ ಬಂಡೆಯಂತಹ ಕಷ್ಟ, ಯಾವುದೇ ಕೆಡುಕಾದರೂ(ಹೊಲ್ಲಾಗು) ನಾನು ಅದನ್ನು ಎದುರಿಸಬಲ್ಲೆ ಎಂಬ ಭಾವವನ್ನು ಕವಿ ವ್ಯಕ್ತಪಡಿಸಿದ್ದಾರೆ.

* * * * * *

## ಅಸವಸ, ರಸಕಸಿ

**ಅಸವಸವು ಬೇಡ, ರಸಿಕಸಿಯು ಬೇಡ, ಹೊಸ ರಸಿಕವೃತ್ತಿ ಬೇಕು (4–3)**

:ಅವಸರ; ಆತುರ; ತ್ವರೆ.

:ತಿಕ್ಕಾಟ; ಮನಸ್ತಾಪ.(ಮರಾ. ರಸಕಸ್, ರಸಘಸ್)

*ಈ ಜೀವನದಲ್ಲಿ ಅಸವಸ/ ಆತುರ ಬೇಡ. ರಸಕಸಿ/ ಮನಸ್ತಾಪ ಬೇಡ. ಹೊಸ ರಸಿಕ ವೃತ್ತಿ ಬೇಕು.

* * * * * *

## ಮಾತೃಮೂಢ

**ನಿನಗೇನು ಬೇಕು ಅದು ನನಗೆ ಬೇಕು, ಬೇಡಾದುದೆನಗೆ ಬೇಡ/ ಈ ಜ್ಞಾನಪಿಂಡ ಬೆಳೆಯುತ್ತ ಬರಲಿ, ಹುಟ್ಟಾನೆ ಮಾತೃಮೂಢ (5–3, 4)**

*ಈ ಪದ್ಯದಲ್ಲಿ ಕವಿ ತಾಯಿಯನ್ನು, (ಅಥವಾ ಶ್ರೀಮಾತೆಯನ್ನು ಅಥವಾ ಅರಿವನ್ನು) ತನ್ನ ದೇಹದೊಂದಿಗೆ ತಾದಾತ್ಮ್ಯಭಾವದಿಂದ ಪರಿಭಾವಿಸುತ್ತಿದ್ದಾನೆ. ಅನುಭಾವಿಯಾದವನು ಹುಟ್ಟಿದ ನೆಲೆಯೊಂದಿಗೆ ವ್ಯಾಮೋಹ ಬೆಳಸಿಕೊಳ್ಳುವುದಿಲ್ಲ ಎಂಬ ನಂಬಿಕೆ ಇದೆ. ಹೊಸ ಒಡಂಬಡಿಕೆಯಲ್ಲಿ ಯೇಸುವಿನ ಈ ವಚನವಿದೆ "ತಾಯ್ತಂದೆಯರನ್ನು ತೊರೆದುಕೊಂಡವರು ಮಾತ್ರ ನನ್ನನ್ನು ಅನುಸರಿಸಬಲ್ಲರು". ಇಲ್ಲಿ ತಾಯ್ತಂದೆ ಎಂಬುದು ಒಂದು ರೂಪಕವಾಗಿದೆ. ಅಲ್ಲಮನೂ ಸಹ "ಹುಟ್ಟಿದ ನೆಲೆಯ ತೃಷ್ಣೆಯ ಬಿಡದವರಿಗೆ ಲಿಂಗಾನುಭವದ ಮಾತೇಕೋ?" ಎಂದು ತನ್ನ ವಚನದಲ್ಲಿ ಕೇಳುವನು. ಇಲ್ಲಿ ಮಾತೃ ಮೂಢನೆಂದರೆ ತಾಯಿಯನ್ನು, ಹುಟ್ಟಿದ ನೆಲೆಯನ್ನು ಬಿಟ್ಟವನು ಎಂದರ್ಥ. ತಾಯಿಯ ಗರ್ಭವು ಪಿಂಡವನ್ನು ತನ್ನೊಳಗಿಟ್ಟುಕೊಂಡು ಬೆಳೆಸುತ್ತದೆ. ಪಿಂಡ ಪೂರ್ತಿಯಾಗಿ ಬೆಳೆದ ಮೇಲೆ ಆ ಗರ್ಭವೇ ಪಿಂಡದ ಪಾಲಿಗೆ ಒಂದು ಸೆರೆಮನೆಯಾಗುತ್ತದೆ, ಆಗಷ್ಟೇ

ಮಗು ಗರ್ಭದೊಳಗಿಂದ ಹೊರಬರುವುದು. ಜ್ಞಾನಿಯಾದವನು ತನ್ನನ್ನು ಪೋಷಿಸಿದ್ದ ಸಕಲವನ್ನೂ ಪರಿತ್ಯಾಗ ಮಾಡುವನು. ಅಲ್ಲಮ ಮತ್ತೊಂದು ವಚನದಲ್ಲಿ ಅಂತಹ ಅನುಭಾವವನ್ನು "ತಂದೆ ತಾಯಿ ಇಲ್ಲದ ಕಂದಾ" ಎಂದು ಕರೆದು ವರ್ಣಿಸಿರುವನು.

---

## ಗಿರಿಶಿಖರ

### ಓಜ

**ಗುಡ್ಡದಲ್ಲೆ ಗುಡಿ ಕೊರೆದರಲ್ಲ ಕಣ್ಗಂಡ ಓಜರೆಲ್ಲ (4–1)**

:ಶಿಲ್ಪಿ.

*ಶಿಲ್ಪಿಗಳು ತಾವು ಮನಸಿನಲ್ಲಿ ರೂಪಿಸಿಕೊಂಡ ರೂಪವನ್ನು ಆಯ್ಕೆ ಮಾಡಿದ ಗುಡ್ಡದಲ್ಲಿ ಕೊರೆದಿದ್ದಾರೆ.

---

## ಗೆಳೆಯ ಶಂಕರ ಗೌಡರಿಗೆ

### ಸರಿಜೀರು

**ತಂತಂತಿಯಾಗಿ ಸರಿಜೀರು ಹಿಡಿದಿಹುದು ನಿಮ್ಮ ಜೀವತಂತು. (5–2)**

:(ಸಂಗೀತ)ಶುದ್ಧವಾದ ಶ್ರುತಿ.

*ಗೆಳೆಯ ಶಂಕರಗೌಡರ ಜೀವತಂತು–ಬಾಳಿನ ಸೂತ್ರವು, ಸರಿಜೀರು/ ಶುದ್ಧ ಶ್ರುತಿಯಂತಿತ್ತು ಎಂದು ಸಂಗೀತದ ಪ್ರತಿಮೆಯ ಮೂಲಕ ಚಿತ್ರಿಸಿದ್ದಾರೆ.

*   *   *

### ಹೆಣ್ಣುಗರುಳು

**ಹೆಣ್ಣುಗರುಳಿನಲಿ ತೂಗಿ ನೋಡಿದಿರಿ ಹೊನ್ನು ಮಣ್ಣುಗಳನು (11–3)**

* (ಆಲಂ) ಮೃದುವಾದ ಮನಸ್ಸು; ಕರುಣೆ, ಮಮತೆಗಳಿಂದ ಕೂಡಿರುವ ಹೃದಯ.

---

## ೧೨. ಚೈತ್ಯಾಲಯ (೧೯೫೭)

## ವಿದ್ಯುತ್ ಪುತ್ರನ ಅವತಾರ

**ಗರಿಗೊಳ್ಳು**

**ಗರಿಗೊಂಡ ಬಲ ಇಳಿದು ಬಂದವಾಗ (2–2)**

: (ಆಲಂ)ಹುರುಪುಗೊಳ್ಳು; ಉತ್ಸಾಹಗೊಳ್ಳು.

* 'ದೇವಲೀಲೆಯನ್ನು ತಿಳಿದುಕೊಂಡು ಬಾಳಬೇಕೆಂಬ ಅಪೇಕ್ಷೆ'ಯ ಭಾವ ಸಂದರ್ಭ ಹೊಂದಿದ ಕವನ 'ವಿದ್ಯುತ್ ಪುತ್ರನ ಅವತಾರ.' ಆ ವಿದ್ಯುತ್ ಪುತ್ರನಲ್ಲಿ ಶಾಂತಿ, ಮಾಧುರ್ಯ, ಪರಿಶುದ್ಧ ರಾಗ, ಹುರುಪು, ಉತ್ಸಾಹದೊಂದಿಗೆ ಬಲಗೊಂಡು ಬಂತು ಎಂಬುದನ್ನು 'ಗರಿಗೊಂಡ ಬಲ' ನುಡಿಗಟ್ಟಿನಲ್ಲಿ ತಿಳಿಸಿದ್ದಾರೆ.

* * * * * *

**ಡೆಂಡಣಿಸಿ**

**ಡೆಂಡಣಿಸಿ ಕಳಚಿ ಬಿದ್ದವು ಪುರಾತನಾಯಸ ಕವಚ/ ಗೋಡೆ ಸಿಡಿದೊಡೆದು ಬಿದ್ದಿತು ಪುರಾಣ ಪ್ರಕೃತಿ (5–1, 2)**

: ನಡುಗು; ಅಲುಗಾಡು; ಕಂಪಿಸು.

* ಬೇಂದ್ರೆ ಅವರು 'ತರುಣತರ ಸೌಂದರ್ಯ, ಸುವಿಚಾರ, ಸುಪ್ರಭೆಯ ಜಗದಿ। ಹೊಕ್ಕ ದೇವನು ಮತ್ತೆ ತನ್ನ ಹೊಸತನದಿ' ಎಂದು ನವನವೀನ ವೈಜ್ಞಾನಿಕ ಶೋಧದ ವಿದ್ಯುತ್ ಪುತ್ರನನ್ನು ಚಿತ್ರಿಸಿದ್ದಾರೆ. ಆ ತರುಣ ಪ್ರಭೆಗೆ ಪುರಾತನ ಆಯಸ–ಕಬ್ಬಿಣದ ಕವಚ, ಕಂಪಿಸಿ ಕಳಚಿ ಬಿದ್ದವು. ಹೊಸ ಚಿಂತನೆಯಲ್ಲಿ, ಹೊಸ ಆವಿಷ್ಕಾರದಲ್ಲಿ, ಹೊಸ ಸತ್ಯಶೋಧಗಳಲ್ಲಿ 'ಸಿಡಿದೊಡೆದು ಬಿದ್ದಿತು ಪುರಾಣ ಪ್ರಕೃತಿ'.

---

## ಬಂಧವಿಮೋಚನೆ

**ರಿಂಗಣ**

**ಮನದ ರಿಂಗಣದ ರಂಗಭೂಮಿಯನು ಅಗೆದು ಬಗೆದು ನಾನು/ ಆತ್ಮಮೌನಿ ಮುನಿಯಾದೆ ಬಾನಿನಲಿ ನಿಂತ ಹಾಗೆ ಭಾನು. (1–1, 2)**

: (ಸುತ್ತುತ್ತಾ ಮಾಡುವ) ಒಂದು ವಿಶಿಷ್ಟ ಬಗೆಯ ಕುಣಿತ ನೃತ್ಯ.

* 'ಬಂಧವಿಮೋಚನೆ'ಯು ಶ್ರೀ ಅರವಿಂದರ 'liberation' ಕವನದ ಭಾವಾನುವಾದ. ಬಂಧ ವಿಮೋಚನ ಸ್ಥಿತಿಯೆಂದರೆ ಶೂನ್ಯಭಾವ. ಅದನ್ನು ಬೇಂದ್ರೆಯವರು 'ಬಾನಿನಲಿ ನಿಂತಹಾಗೆ ಭಾನು' ಎಂದು ರೂಪಕಾತ್ಮಕವಾಗಿ ತಿಳಿಸಿದ್ದಾರೆ.

ಆ ಸ್ಥಿತಿಗೆ ಏರುವುದರ ಮೊದಲು ಈ ಜೀವನ ನಾಟಕದಲ್ಲಿ ಮನದ ರಿಂಗಣದಲ್ಲಿ ಕುಣಿದೆ ಎಂದು ತಿಳಿಸಿದ್ದಾರೆ.

* * * * * *

### ತುಂದಿಲ, ಪ್ರಶಮ, ಥಳಕು

**ನನ್ನ ಹೃದಯವಾನಂದತುಂದಿಲವು ಪ್ರಶಮದೊಳಗು ಥಳಕು (3–2)**

: ತುಂಬಿದುದು; ಪರಿಪೂರ್ಣ.

: ಶಾಂತತೆ; ಸಮಾಧಾನ; ಪ್ರಶಾಂತಿ; ಉಪಶಮನ; ತಣಿವು.

: ಹೊಳಪು; ಮಿನುಗು; ಕಾಂತಿ.

*ಬಂಧ ವಿಮೋಚನೆಗೆ ಒಳಗಾದಾಗ 'ಮನವು ಗಂಭೀರ ಗುಂಭ ತುಂಬೆಲ್ಲ ಹಿಗ್ಗು ಬೆಳಕು'. ಆಗ ನನ್ನ ಹೃದಯದಲ್ಲಿ ಆನಂದ ತುಂಬಿ, ಸಮಾಧಾನಗೊಂಡು ಕಾಂತಿ ಆವರಿಸಿತು.

---

## ಸುವರ್ಣದೀಪ

### ದಳವೇರು, ದಳ್ಳಿಸು

**ನನ್ನ ಮಿದುಳು ದಳವೇರಿ ದಳ್ಳಿಸಿತು ಸ್ವರ್ಣದೀಪ್ತಿ ಇಳಿಯೆ(1–1)**

: ಕಾಂತಿಹೊಂದು.

: 1. ಹೊಳೆ; ಥಳಥಳಿಸು.

2. (ಆಲಂ) ಸಡಗರಿಸು; ಸಂಭ್ರಮಿಸು; ಅತಿ ಆನಂದ ಪಡು.

*ಇದು 'The golden light' ಕವನದ ಭಾವಾನುವಾದ. ಸ್ವರ್ಣದೀಪ್ತಿ ಇಳಿದಾಗ ನನ್ನ ಮಿದುಳು ದಳವೇರಿತು. (ಕಾಂತಿ ಹೊಂದಿತು) ಅತ್ಯಾನಂದದಿಂದ ಥಳಥಳಿಸಿತು.

---

## ವಿಶ್ವಾವತಾರ

### ಹೊತ್ತು

**ಹೃದಯ ಗುಹೆಯಲ್ಲಿ ಹಿಗ್ಗು ಹೊತ್ತಿಹುದು ಅಗ್ನಿಸತ್ವದಂತೆ (1–2)**

: ಉಂಟಾಗು; ಒದಗು; ಪ್ರಾಪ್ತವಾಗು.

*ಲೋಕದಲ್ಲಿ ಯಾವ ವಿಕಾಸ ಸಂಭವಿಸುತ್ತಿರುವುದೋ ಅದು ಅಂತರಂಗದಲ್ಲೂ ಸಂಭವಿಸುತ್ತಲೇ ಇದೆ.

---

## ಅತಿಥಿ

### ಯಾಹೊತ್ತು

**ಮೃತ್ಯುಲೋಕವನು ಅಮೃತನಂತೆ ಯಾಹೊತ್ತು ಕಾಣುವವನ (1–3)**

: ಎಲ್ಲ ಕಾಲದಲ್ಲಿಯೂ; ಸದಾಕಾಲವೂ.

*ನಿದ್ದೆಗೊಮ್ಮೆ ನಿತ್ಯಮರಣ.. ಎಂಬ ಸಾಲುಗಳ ಮುಂದುವರಿದ ಭಾಗವಿದು. ನಿತ್ಯಮರಣ, ನವೀನ ಜನನಗಳು ಪ್ರಕೃತಿಗೆ ಸಂಬಂಧಿಸಿದ ಆವರ್ತನವಾಗಿವೆ. ಆದರೆ, ಈ ಆವರ್ತನದ ಹಿಂದೆ ಹುಟ್ಟು ಸಾವುಗಳಿಲ್ಲದ, ಪರಿವರ್ತನೆ, ಆವರ್ತನೆಗಳಿಲ್ಲದ ತತ್ವವೊಂದಿದೆ. ಆ ತತ್ತ್ವವನ್ನು ಕುರಿತು ಕವಿ ಇಲ್ಲಿ ನುಡಿಯುತ್ತಿರುವ ಆ ತತ್ತ್ವಕ್ಕೆ ಅತಿಥಿ ಎಂಬ ಹೆಸರಿಟ್ಟಿರುವರು.

---

## ಮೈ

### ಇಟುಕುಮನೆ

**ಇಟುಕುಮನೆಯ ವಾಮನನು ಬೆಳೆದ ಹೇಗೋ಼ ವಿಶ್ವಯೋಗಿ/ ಈ ಪ್ರಪಂಚದೊಡನೊಡನೆ ಸಾಗಿ ವಿಶ್ವಾಕಾರನಾಗಿ(4–1,2)**

: ಇಕ್ಕಟ್ಟಾದ ಮನೆ.

*ವಿಷ್ಣುವಿನ ದಶಾವತಾರಗಳಲ್ಲಿ ಐದನೆಯದು ವಾಮನ. ಅದು ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ತುಳಿಯಲು ವಿಷ್ಣುವು ಧರಿಸಿದ ಕುಬ್ಜಾವತಾರ. ಅವನ ಕುಳ್ಳಾದ ಶರೀರವನ್ನು

ಬೇಂದ್ರೆಯವರು 'ಇಟುಕುಮನೆ' ಎಂದು ಕರೆದಿದ್ದಾರೆ.

---

## ಬೆಳಕು

**ಫಡಕು**

**ಬೆಳಕು, ಹೊತ್ತಿರದ ಬೆಳಕು ತನ್ನ ತಾನಾದ ಅಚ್ಚವೆಳಕು/ ಪಾವಿತ್ರ್ಯ ಮುದ್ರೆಯಲ್ಲಿದ್ದ ಗೂಢ ತೆರೆದಿತ್ತು ತನ್ನ ಫಡಕು (2–1, 2)**

: ಬಾಗಿಲು, ಕಿಟಕಿ ಮೊದಲಾದವುಗಳ ಕದ–ರೆಕ್ಕೆ.

*ಒಂದು ಸಣ್ಣ ಹರಳನ್ನೆತ್ತಿ ಅವಳು ನಿಂತಿದ್ದ ಕಿಡಕಿಯ ಪಡಕಿಯ ಒಗೆದ(ಚೇನಾದ ಬಾಳು–ಬದುಕು)

'ಕಲ್ಪನಾತೀತ ಚಮತ್ಕಾರಗಳ, ಆಶ್ಚರ್ಯಕರ ಸಂಗತಿಗಳ ಅಸ್ತಿತ್ವ ಇರುತ್ತದೆ. ಅದನ್ನು ಗುರುತಿಸುವ ಕಣ್ಣುಬೇಕು' ಎಂಬ ಭಾವಸಂದರ್ಭ ಹೊಂದಿದ 'ಆಹಾ–ಊಹಾ' ಕವನದಲ್ಲಿ 'ಫಡಕು' ಪದವನ್ನು 'ಕಣ್ಣರೆಪ್ಪೆ' ಎಂಬ ಅರ್ಥದಲ್ಲಿ ಚತುರೋಕ್ತಿಯಾಗಿ ಬಳಸಿದ್ದಾರೆ.

ಯಾಕ ಕಣ್ಮುಚ್ಚಿ ದುಡುಕಬೇಕು?/ ಫಡಕು ತೆರೆದು ಹುಡುಕ ಬೇಕು(ಚತುರೋಕ್ತಿ ಮತ್ತು ಇತರ ಕವನಗಳು: ಆಹಾ–ಊಹಾ)

---

## ಸರ್ವಸಾಕ್ಷಿ

**ಮುಗುಳಿಸು, ತಾಳು**

**ಪೂಜೆಯಿಲ್ಲದಾ ಪೂಜ್ಯನು ಹೃದಯದಿ/ ಪೂ –ನಗೆ ಮುಗುಳಿಸಿ ತಾಳುವನು. (4–2)**

: ಅರಳಿಸು; ವಿಕಾಸಗೊಳಿಸು.

: ಪಡೆ, ಹೊಂದು.

*ಇದು 'omnipresence' ಕವನದ ಭಾವಾನುವಾದ. ಸರ್ವಸಾಕ್ಷಿಯಾದ ಅನಂತಶಕ್ತ ಪೂಜೆಯಿಲ್ಲದಾ ಪೂಜ್ಯ. ಅವನು ನಮ್ಮ ನಿರ್ಮಲ ಭಕ್ತಿಯನ್ನು ತನ್ನ ಹೂ–ನಗೆಯನ್ನು ಅರಳಿಸಿ ಸಂತೋಷದಿಂದ ಪಡೆಯುವನು.

---

# ಅದ್ವೈತ

**ಪಾಳು**

**ಇಹದ ಭಂಡ ಕಥೆ ಮುಗಿಸಿದಂತೆ ಪಾಳಿನಲ್ಲಿ ಒಂಟಿ ನಡಿಗೆ (1–3)**

: ಹಾಳು ಬಿದ್ದ ಜಾಗ; ಬೀಳು ಬಿದ್ದ ಸ್ಥಳ.

*ಇದಕ್ಕೆ ಸರದಿ ಸಾಲು ಎಂಬರ್ಥವೂ ಉಂಟು.

* * *

**ತಂತು**

**ನಿರಾಕಾರ ಏಕಾಂತ ತಂತು ಸುತ್ತುತ್ತಲಿತ್ತು ನನ್ನ(2–1)**

: ಎಳೆ; ದಾರ; ನೂಲು; ಸೂತ್ರ.

*ಜೀವಾತ್ಮ ಎಂಬರ್ಥದಲ್ಲಿ ಬಳಸಿರಬಹುದು.

---

# ಮಾನವ–ಬೌದ್ಧಿಕ ಪ್ರಾಣಿ

**ಅಭಂಡ, ಹಳವು**

**ಬಟಾಬಯಲು ಇದು, ಹೋ ಅಭಂಡ ತಾನರ್ಥಹೀನ ಹಳವು (1–3)**

: ಮೇರೆಯಿಲ್ಲದ (ಮರಾ.ಅಭಂಡ)

: ಕಾಡು; ಅರಣ್ಯ.

*ಈ ಕವನ 'Man The Thinking Animal' ನ ಭಾವಾನುವಾದ. ಈ ಭುವಿಯ ಮೇಲಿನ ಬದುಕನ್ನು ನೋಡಿದರೆ ಇದು ಬಟಾಬಯಲು. ಬಟ್ಟ ಬಯಲು ಒಂದು ದ್ವಿರುಕ್ತಿ. ಇದು ಶೂನ್ಯ, ನಿರರ್ಥಕ ಎಂಬ ಅರ್ಥವನ್ನು ಧ್ವನಿಸುತ್ತದೆ. ಇದು ಅಭಂಡ(ಮೇರೆಯಿಲ್ಲದ್ದು) ಹಾಗೂ ಅರ್ಥಹೀನವಾದ ಕಾಡು. ಈ ಭೂಮಿಯಲ್ಲಿ ಅಕಸ್ಮಾತ್ತಾಗಿ ಈ ನರನು ಜನ್ಮ ತಳೆದಿದ್ದಾನೆ.

**ಹಳುವ ತಪ್ಪಿದ ಹಕ್ಕಿ/ ಬಟ್ಟ ಬಯಲೊಳು ಸಿಕ್ಕಿ/ ಕೊಂಡು ತೊಳಲಾಡುವದು ಗೂಡಿಗಾಗಿ(ಗರಿ: ಕೀರ್ತಿ)**

---

## ಸಾಕ್ಷಿ ಮತ್ತು ಚಕ್ರ

**ಬಿಡುಗಣ್ಣ, ಎದೆಗೆಳೆಯ**

**ಯಾರಣ್ಣ ನೀ ಬಿಡುಗಣ್ಣನೇ। ಎದೆಗೆಳೆಯ! ಕುಳಿತಿಹೆ ತಣ್ಣನೇ (1–1)**

: ತರೆದ ಕಣ್ಣು; ರೆಪ್ಪೆ ಬಡಿಯದಿರುವವನು; ದೇವತೆ.

: ಹೃದಯದ ಸ್ನೇಹಿತ; ಆಪ್ತ ಗೆಳೆಯ.

*ರೆಪ್ಪೆ ಬಡಿಯದಿರುವವನು– ಬಿಡುಗಣ್ಣ. ಅವನು ದೇವತೆ. ಅವನನ್ನು ಕವಿ ಎದೆಗೆಳೆಯ/ ಆಪ್ತಸ್ನೇಹಿತ ಎಂದು ಕರೆದು ಆತ್ಮೀಯವಾಗಿ ಮಾತಾಡಿದ್ದಾರೆ. ಇದು 'The Witness And the wheel'ಕವನದ ಭಾವಾನುವಾದ.

---

## ಹುಲಿ ಮತ್ತು ಹುಲ್ಲೆ

**ನಾತ**

**ನಯನ ನಿಗಿನಿಗಿ ಎದೆಯ ದೃಢಪಡೆ ಏನೊ ನಾತವ ಹಿಡಿದಿದೆ (1–3)**

: (ಆಲಂ) ಸುಳಿವು; ಮುನ್ಸೂಚನೆ.

*ನಾತ–ಮೂಗಿನಿಂದ ಕಂಡು ಹಿಡಿಯುವ ದ್ರವ್ಯಗುಣ, ವಾಸನೆ. ಅದು ಗಂಧ; ಪರಿಮಳ; ದುರ್ಗಂಧದ ಅರ್ಥ ಹೊಮ್ಮಿಸುತ್ತದೆ.

ಬೇಂದ್ರೆಯವರು ಹುಲಿಯ ನಯನ ತೀಕ್ಷ್ಣವಾಗಿ, ಹೃದಯ ದೃಢತೆಯಿಂದ ಸಾಗುವಾಗ ಹಿಡಿದ ನಾತವನ್ನು ಸುಳಿವು, ಮುನ್ಸೂಚನೆ ಎಂಬ ಧ್ವನ್ಯರ್ಥದಲ್ಲಿ ಬಳಸಿದ್ದಾರೆ.

'The Tiger And The Deer' ಕವನದ ಭಾವಾನುವಾದ.

---

## ಪ್ರಾಣಾಂಗನೆ

**ಕೂಚು**

**ಏನು ಹಾರಿಕೆಯ ದೌಡು ಇಡುವೆ ಆ ಚಿರಂತನದ ಕೂಚು (1–4)**

: ಶಿಬಿರದಿಂದ ಸೈನ್ಯದ ರವಾನೆ; ದಂಡಿನ ಚಲನೆ.

ಬೇಂದ್ರೆ ಅವರು ಪೂರ್ಣಯೋಗದ ಆನಂದ ವರ್ಣನೆಯನ್ನು ಮಾಡುತ್ತಾ ಸದಾ ಸನ್ನದ್ಧವಾಗಿರುವ ಜೀವಂತ ಚಿರಂತನದ ಪ್ರತೀಕವಾಗಿ ದಂಡಿನ ಚಲನೆಯ ಪದ 'ಕೂಚು' ಬಳಸಿದ್ದಾರೆ.

---

## ಉತ್ಕ್ರಾಂತಿ

**ಯುಗಜುಗ, ತಿರುಪಣಿ**

**ಯುಗಜುಗದ ತಿರುಪಣಿಯ ದಾರಿಯನು ಸಾವಕಾಶ ಹತ್ತಿ (1–4)**

: ವಿಶ್ವದ ದೀರ್ಘವಾದ ಕಾಲಖಂಡ;(ಕೃತ, ತ್ರೇತಾ, ದ್ವಾಪರ ಮತ್ತು ಕಲಿಯೆಂಬ ನಾಲ್ಕು ಯುಗಗಳು) ಯುಗಜುಗ(ದ್ವಿರುಕ್ತಿ)

: ತಿರುವುಗಳಿಂದ ಕೂಡಿರುವುದು; ಸುತ್ತುಗಳನ್ನುಳ್ಳದ್ದು.

*ಈ ಯುಗದ ದಾರಿ ತಿರುಪಣಿ(ತಿರುವು)ಗಳಿಂದ ಕೂಡಿರುವುದು ಆಗಿದೆ. ಇಲ್ಲಿ ಸಾವಕಾಶವಾಗಿ ಹತ್ತಿ ಸಾಗಬೇಕು.

***

**ಯುಗಜುಗದ ಪರಿಪಾಕದಿಂದ ಬರಲಿರುವಂಥ ಸ್ನೇಹ ಸಾರದ ಹದವನರಿವೆವೇ? (ಉಯ್ಯಾಲೆ:ಸುಹೃದ)**

---

## ಸಾವಿತ್ರಿ

**ದುಮುಕ**

**ಸಾವು ದುಮುಕ ಸಲ್ಲ (2–8)**

: ಎರಡು ಮುಖಗಳಿಂದ ಕೂಡಿದುದು.

*ಸಾವಿಗೆ ಒಂದೇ ಮುಖ. ಅದಕ್ಕೆ ಎರಡು ಮುಖವಿಲ್ಲ.

---

## ಪೆರುಮಾಳನ ಕೆಂದಾವರೆ

### ಚೀನಾಂಶುಕ

**ಆನಂತ್ಯದ ತಪಚಿತ್ರಿತ ಚೀನಾಂಶುಕವಾಗೆ (5–3)**

: ಚೀನಾದೇಶದಲ್ಲಿ ತಯಾರು ಮಾಡಿದ ಬಟ್ಟೆ, ವಸ್ತ್ರ, ರೇಶ್ಮೆ ವಸ್ತ್ರ (ಚೀನ+ಅಂಶುಕ) ಅಂಶುಕ/ಉಡುವ ಅಥವಾ ಹೊದೆಯುವ ಬಟ್ಟೆ.

*ಭಾರತದಲ್ಲಿ ರೇಶ್ಮೆಯನ್ನು ಚೀನಾಂಶುಕ ಎಂದು ಕರೆಯುತ್ತಿದ್ದರು. ಅದು ಚೀನಾಂಬರ. ಸೂರ್ಯದೇವನ ಉದಯ ಕಾಲ–ರೇಶ್ಮೆ ವಸ್ತ್ರದಂತಹ ಬಂಗಾರದ ಪಾರದರ್ಶಕ ಹೊಳಪು, ವರ್ಣದ ಸೊಬಗು, ಮೃದು ಆಹ್ಲಾದ ಒಂದು ಬೆಡಗು. ಕಾಳಿದಾಸನ 'ಅಭಿಜ್ಞಾನ ಶಾಕುಂತಲ' ನಾಟಕದಲ್ಲಿ ದುಶ್ಯಂತನ ರಥದ ಬಾವುಟವನ್ನು ವರ್ಣಿಸುವಾಗ 'ಚೀನಾಂಶುಕಮಿವ ಕೇತೋಃ' ಎಂಬ ಮಾತುಂಟು. ಅಲ್ಲಿಂದಲೇ ಬೇಂದ್ರೆಯವರು ಈ ಪದವನ್ನು ಹೆಕ್ಕಿದ್ದಾರೆ.

---

## ಮಾನಸ ಆತ್ಮದಲ್ಲಿ

### ಬಿಳಿಗಾವು

**ನಾಳೆ ನಾಡಿದಿನ ಬಾಳಕಾಳು ಬೆಳೆಸೆನುವ ಮೋದಮುದ್ರೆ/ ದೈವದುನ್ಮಾದದಲ್ಲಿ ಬಿಳಿಗಾವು ಎದ್ದ ಭಾವಭದ್ರೆ (9–3, 4)**

: ತಾವರೆಯದಂಟು.

*ಬೇಂದ್ರೆ ಅವರು 'ಸಾವಿತ್ರಿ' ಮಹಾಕಾವ್ಯದ ಕೆಲವು ನುಡಿಗಳ ಭಾವಾನುವಾದ ಮಾಡಿದ್ದಾರೆ. ಅಲ್ಲಿಯ ಎರಡು ಸಾಲುಗಳು 'ಸಾವಿತ್ರಿ'ಯ ಆಂತರ್ಯದ ಪ್ರಕಾಶವನ್ನು ಹೊರಹೊಮ್ಮಿಸಿವೆ. ಸಾವಿತ್ರಿಯು ಯಮನೊಂದಿಗೆ ಸಂವಾದದಲ್ಲಿ ತೊಡಗಿ ಆತನ ಸಾವಿನ ಪಾಶದಿಂದ ತನ್ನ ಪತಿ ಸತ್ಯವಾನನನ್ನು ಬಿಡುಗಡೆಗೊಳಿಸಿಕೊಂಡಳು. ಅದು ಅವಳ 'ನಾಳೆ ನಾಡಿದಿನ ಬಾಳಕಾಳು ಬೆಳೆಸೆನುವ ಮೋದ ಮುದ್ರೆ'– ಸಂತತಿಯ ಬೆಳಸು. ಶುದ್ಧ ಚೇತನವಾದ ಸಾವಿತ್ರಿಯಲ್ಲಿ 'ಬಿಳಿಗಾವು/ತಾವರೆಯ ದಂಟು ಮೂಡಿ, ಅಲ್ಲಿ ಎದ್ದ ಭಾವ ಮುದ್ರೆ' ಸಂತತಿಯ ಆಹ್ಲಾದ.

---

## ವಚನಗಳು

**ಶಮಿ**

**ಏಕಾಕಿ, ಪರಮಶಮಿ ಆಗಿ ನಮ್ಮೀಮನವು/ ನಿನ್ನ ನೆಲೆಯಲ್ಲಿಯೇ ನೆಲೆಸಬೇಕು (9–1, 2)**

: ಶಾಂತ ಸ್ವಭಾವದವನು.

*ಅನಂತಶಕ್ತನ ಅರಿವಿಗೆ ಒಳಗಾಗುವುದೆಂದರೆ ಏಕಾಕಿಯಾಗಿ, ಪರಮಶಮಿ/ ಶಾಂತಸ್ವಭಾವದವನು ಆಗುವುದು. ಮನಸ್ಸು ಅವನ ಧ್ಯಾನದಲ್ಲಿಯೇ ಲೀನವಾಗುವುದು.

---

## ಚೈತ್ಯಾಲಯ

**ಹುರಿಮಂಜು**

**ಇದು ಉಷಾಮಿಷದ ಪೊಸನೇಹ ಸೇರಿ ಕಳೆ/ ಏರಿದೆ ಹುರಿಮಂಜಿಗೆ (1–3, 4)**

: 1. ಒಂದು ಬಗೆಯ ಬಣ್ಣ; ಮಾಸಲು ಕಂದುಬಣ್ಣ; ಕಾವಿಬಣ್ಣ.

2. ಕೆಮ್ಮಣ್ಣು; ಕೆಂಪುಮಣ್ಣು.

(ಮರಾ. ಹುರಮೂಜ್, ಹುರಮೋಜ್)

* * * * * *

**ಕಥಕ್ಕಳಿ**

**ಕಥಕ್ಕಳಿಯ ಪುತ್ಥಳಿಯೆ! (1–7, 8)**

: (ಮಲಯಾಳದಲ್ಲಿ ಪ್ರಚುರವಾಗಿರುವ) ಒಂದು ಬಗೆಯ ನೃತ್ಯನಾಟಕ.

* * * * * *

**ತವದ**

**ನವೋನವದ ಭವಭವದ ತವದ ವೈ/ ಭವವ ಒಟ್ಟಿ ತಂದು/ ಕುರುಡು ಬಯಲಿಗಿಗೊ ಕಣ್ಣು ಬರೆವ ಕೈ/ ವಾಡ ಚಿಗುರ್ತಿಂದು/ ದುಂದು ದುಂದು ದುಂದುಭಿಸುತಿಹುದು ಇಕೊ!/ ಹಲವು ಮುಖದಲೊಂದು. (3–5 ರಿಂದ 10)**

*ಅಂಬಿಕಾತನಯದತ್ತರಿಗೆ ಶ್ರೀಮಾತಾರವಿಂದರ ಕವನವೆಂದರೆ ಭಾವ ದೇವಾಲಯ. 'ತವದ' ಮಹಾಕವಿ ಪಂಪ ಬಳಸಿರುವ ಪದ.

"ನೆಗಳ್ದ ನೀಲಾಂಜನೆ ತನ್ನಾಟಮನೊರಳ್ದು ನೋಡುವ

ನೋಟಕರಂ ತವದ ಮಾಳ್ಕೆಯಿಂ ಮೋಹಿಸಿದಳ್"(ಆದಿಪುರಾಣ 9–38)

ಕುಗ್ಗದ, ಕಡಿಮೆಯಾಗದ, ಕ್ಷಯಿಸದ, ಸವೆಯದ ಅರ್ಥವನ್ನು 'ತವದ' ಹೊಂದಿದೆ. ಪಂಪನ ಕಾವ್ಯದಲ್ಲಿ ನೀಲಾಂಜನೆ ನೋಟಕರನ್ನು ತವದ ಮಾಳ್ಕೆಯಿಂದ ಮೋಹಿಸಿದರೆ, ಬೇಂದ್ರೆ ಅವರ ಕಾವ್ಯದಲ್ಲಿ –ನವೋನವದ ಭವಭವದ ತವದ ವೈಭವದಿಂದ– ಕುರುಡು ಬಯಲಿಗೆ ಕಣ್ಣು ಬರೆವ ಕೈವಾಡ ಚಿಗುರಿದೆ.

---

## ೧೩. ಜೀವಲಹರಿ (೧೯೫೭)

### ದೀಪದ ಮಲ್ಲಿ

**ಪ್ರಣತಿ, ಭರತಿ**

**ಕರದೊಳಿದೆ ಬರಿ ಹಣತಿ, ಎದೆಗಣ್ಣೊಳಿದೆ ಪ್ರಣತಿ,/ ಆರತಿಯು ಆರದಿದೆ, ತುಂಬು ಭರತಿ. (5–3, 4)**

: ಬತ್ತಿಯ ದೀಪವನ್ನು ಹಚ್ಚಲು ಬಳಸುವ, ಸಾಮಾನ್ಯವಾಗಿ ಮಣ್ಣಿನ ಅಥವಾ ಲೋಹದ ದೀಪದ ಬಟ್ಟಲು; ಸೊಡರು. (ಸೊಡರು=ದೀವಿಗೆ;ದೀಪ)

: ತುಂಬಿದ; ಸಂಪೂರ್ಣವಾದ.

*ದೀಪದ ಮಲ್ಲಿ ಕಂಚಿನಲ್ಲಿ ಎರಕಹೊಯ್ದ ಸುಂದರಮೂರ್ತಿ. ಆ ಧ್ಯಾನಮೂರ್ತಿಯನ್ನು ನೋಡಿ ಬೇಂದ್ರೆಯವರು ಅದರ ಕರದಲ್ಲಿ ಬರಿ ದೀಪದ ಬಟ್ಟಲು ಇದೆ, ಎಣ್ಣೆಯಿಲ್ಲ. ಶಿಲ್ಪಿ ರಚಿಸಿರುವ ಆ ಮೂರ್ತಿಯ ಎದೆಗಣ್ಣಿನಲ್ಲಿ ಉರಿವ ಸೊಡರು ಇದೆ. ಆ ಉಜ್ವಲ ಕಣ್ಣಿನ ಆರತಿ ಆರದೆ ಇದ್ದು ಅತಿಶಯವಾಗಿ ತುಂಬಿ ಪ್ರಜ್ವಲಿಸುತ್ತಿದೆ ಎಂದು ಪ್ರತಿಮಾತ್ಮಕವಾಗಿ ಬಣ್ಣಿಸಿದ್ದಾರೆ.

---

### ಮುತ್ತೈದೆ

**ಮುತ್ತಯ್ಯ**

**ಮುತ್ತಯ್ಯ ಮುಳುಮುಳು ಅತ್ತ (1–3)**

: ಮುದುಕ; ವೃದ್ಧ.

*ಭಾವ ಸಂದರ್ಭ: ಒಬ್ಬ ತಪಸ್ವಿನಿಯ ಮಂಗಲಮಯ ಜೀವನ ಕುರಿತು. ಪತ್ನಿ ಲಕ್ಷ್ಮೀಬಾಯಿ 1950ರಲ್ಲಿ ಮರಣಶಯ್ಯೆಯಲ್ಲಿದ್ದು ಅದರಿಂದ ಪಾರಾದ ಸಂದರ್ಭ ನೆನೆದು ರಚಿಸಿದ ಕವನ. ಪತ್ನಿ – ತಪಸ್ವಿನಿಯಂತೆ ಕಂಡಿದ್ದು ಇದರ ವೈಶಿಷ್ಟ್ಯ.

*       *       *       *       *       *

**ಮೂಗತಿ**

**ಕೈ ಮುಗಿದಂತೆ ಮುಗಿದುಕೊಂಡವು ಕಣ್ಣು ನಾಸಾಗ್ರ/ ದೃಷ್ಟಿಯಲಿ ಮೂಗು ಮೂಗತಿ ಕಂಡು. (3–3, 4)**

: ಮೂಗುತಿ; ನಾಶಾಭರಣ; ಮೂಗುಬೊಟ್ಟು.

*ಕವಿಪತ್ನಿ ಲಕ್ಷ್ಮಿಬಾಯಿಯ ತೀವ್ರ ಕಾಯಿಲೆಯ ಕ್ಷಣವನ್ನು ಕವಿ 'ಮುತ್ತೈದೆ' ಕವನದಲ್ಲಿ ಹಿಡಿದಿಟ್ಟಿದ್ದಾರೆ. ಸುಮಂಗಲಿಯಾದ ಲಕ್ಷ್ಮೀಬಾಯಿಯವರು ತನ್ನ ಪತಿವ್ರತಾಧರ್ಮವನ್ನು ಒಂದು ವ್ರತದಂತೆ ಆಚರಿಸಿದವರು. ಅವರು ಕೊನೆ ನೋಟದಲ್ಲಿ ತನ್ನ ಜೊತೆಯವನನ್ನು, ಹೊಟ್ಟೆಮಕ್ಕಳನ್ನು ಕಣ್ತುಂಬಿ ನೋಡುತ್ತಾರೆ. ಅವರಿಗೆ ಓಲೆ, ಮೂಗುತಿ, ಕೈಬಳೆಗಳು ಹದಿಬದೆಯ ಸಂಕೇತ. ಪತಿವ್ರತೆಯಾದ ಅವರು ಸದಾ ತನ್ನ ಪತಿ ಮತ್ತು ಮಕ್ಕಳ ಕ್ಷೇಮವನ್ನು ಧ್ಯಾನಿಸುತ್ತಿದ್ದರು. ಅದನ್ನು ಬೇಂದ್ರೆಯವರು ರೂಪಕಾತ್ಮಕವಾಗಿ 'ನಾಸಾಗ್ರದೃಷ್ಟಿಯಲಿ ಮೂಗು ಮೂಗುತಿಕಂಡು' ಎಂದು ಬಣ್ಣಿಸಿದ್ದಾರೆ.

---

# ನಾದಬೇಕು

## ಸಂವಾದ

**ದಾಸ ಶರಣ ಸಂವಾದ ಬೇಕು–ಏಕೀಕರಣಕ್ಕ ಕಾದಬೇಕು (11–4)**

*ಬೇಂದ್ರೆ ಅವರು ನಾದಬೇಕು ಕವನದಲ್ಲಿ "ದಾಸಶರಣ ಸಂವಾದ ಬೇಕು" ಎಂದು ತಿಳಿಸಿ, 'ಕಗ್ಗ' ಕವನದಲ್ಲಿ– 'ಹರ' ಅನ್ನು 'ಹರಿ' ಅನ್ನು ಅನ್ನಬಹುದಲ್ಲಾ ಅದರ ಹೊರ್ತು ಗತಿ ಇನ್ನು ಮುಂದಿಲ್ಲಾ–ಎಂದು ಹೇಳಿದ್ದಾರೆ. ಅನಂತಶಕ್ತ ಭಗವಂತನನ್ನು ಯಾವ ಹೆಸರಿನಲ್ಲಾದರೂ ಕರೆಯಬಹುದು. "ಅವನಿಲ್ಲದೇ ಗತಿ ಇಲ್ಲ" ಎಂಬ ಚಿಂತನೆ ಅವರದು. ದೇವರನಾಮ ನಂಬಿಕೆಗಳ ಪಂಥದಲ್ಲಿ ವಾದ ಎಂದಿಗೂ ಸಲ್ಲದು. ಅದು ಅವರವರ ಮಾರ್ಗ. ಆದರೆ, ಆ ಪಥ ಅನಂತಶಕ್ತನ ಅರಿವಿಗಾಗಿ ನಡೆಸುತ್ತಿರುವ ಸಾಧನೆ ಎಂದಾಗ ಪ್ರತಿ ಪಂಥದಲ್ಲಿರುವ ಸಮಾನ ನೆಲೆ–ಸೆಲೆಗಳನ್ನು ಅರಿಯಲು ಸಂವಾದ ಬೇಕು. ಬೇರೆಯವರ ಧರ್ಮವನ್ನು ಗೌರವಿಸಬೇಕು. ನಮ್ಮ ಆಚರಣೆಗೆ 'ಸಂವಾದ'ವೇ ಮುಖ್ಯ.

***

ಬೇಂದ್ರೆ ಅವರದು, ವೈಚಾರಿಕ ವೈಜ್ಞಾನಿಕ ಮನೋಭಾವದ ಸತ್ಯಶೋಧ ಆಲೋಚನೆ. ಅವರು ಯಾವುದೇ ಬಗೆಯ ಮೌಢ್ಯವನ್ನು ಸೂಕ್ಷ್ಮವಾಗಿ ಖಂಡಿಸುತ್ತ, ಈ ಜಗದ ವಿಸ್ಮಯವನ್ನು ಬೆರಗಿನಿಂದ ಕಾಣುತ್ತ, ಇದನ್ನೆಲ್ಲ ನಡೆಸುವ ಅನಂತಶಕ್ತ ಒಬ್ಬನಿದ್ದಾನೆ ಎಂದು ಅಚಲವಾಗಿ ನಂಬಿದ್ದವರು. ಅವನನ್ನು 'ಈಶ್ವರ' ಎಂದು ಕರೆದು ಅವನಿಗೆ ಶರಣಾದವರು. ಕಾಣದ ಈಶ್ವರ ಸದಾ ತನ್ನ ಚೇತನದಲ್ಲಿ ಒಂದಾಗಿ ಆತ್ಮಸಾಕ್ಷಿಯಲ್ಲಿ ಜಾಗೃತನಾಗಿರುತ್ತಾನೆ. ಅವನು ತನ್ನಲ್ಲಿದ್ದಾನೆ ಎಂಬ ಅದ್ವೈತ ಸಿದ್ಧಾಂತಿಗಳು ಅವರು. ಆ ಚಿಂತನೆ ಕಾವ್ಯದಲ್ಲಿ ಹರಿದಿರುವುದು ಹೀಗೆ:

"ಮೂಢತನಕ್ಕ ಮರ‍್ಯಗಬೇಕು/ ಆತ್ಮಸಾಕ್ಷಿಲೆ ಕರ‍್ಯಗಬೇಕು/ ಈಶ್ವರ ಮೂರ್ತಿಗೆ ಎರ‍್ಯಗಬೇಕು ಶಕ್ತನಾಗ್ಯಾಕ್ಯ/ ಭಕ್ತಿಯು ಇಲ್ಲ, ಶಕ್ತಿಯು ಇಲ್ಲ, ಇಂಥ ಬದುಕು ಯಾಕ?(ಜೀವಲಹರಿ:ಕಗ್ಗ)

ಈ ಬದುಕಿನಲ್ಲಿ ಭಕ್ತಿ-ಶಕ್ತಿಯ ಜೊತೆಗೆ ಶ್ರದ್ಧೆ ಮುಖ್ಯ ಎಂಬುದನ್ನು ಬೇಂದ್ರೆ ಕಾವ್ಯವು ತಿಳಿಸುತ್ತದೆ.

***

ಬೇಂದ್ರೆ ಅವರು ಓರ್ವ ಭಕ್ತಕವಿ. ಜೀವನ ಶ್ರದ್ಧೆಗೆ ಇಂಬು ಶುದ್ಧಭಕ್ತಿ, ಸರ್ವ ಸಮರ್ಪಣ ಭಾವ ಎಂಬುದನ್ನು ಅವರ ಕಾವ್ಯವು ಮತ್ತೆಮತ್ತೆ ಸಾರುತ್ತಿದೆ. ಅದು ಜೀವನ ಭಕ್ತಿ. ಅದರಿಂದ, ದೇವರನ್ನು ಒಲಿಸುವುದು ಸಾಧ್ಯ ಎಂಬ ಅರಿವನ್ನು ಅವರ ಕಾವ್ಯ ಪ್ರಕಾಶಿಸುತ್ತಿದೆ.

ಶಿವಧಾರಾ ಜನಿವಾರ ಏನ್ಸ ಹಿಡೀ ನೀ ಸೂತ್ರದ ಆಧಾರ.

ಜೀವದ ಭಕ್ತಿಲೆ ದೇವನ್ನೊಲಿಸಬೇಕು. ಇದು ಜೀವನ ಸಾರ.(ಜೀವಲಹರಿ:ಕಗ್ಗ)

---

# ಕಗ್ಗ

## ನೀಗಿಸು

**ಮುಟ್ಟಿದ್ದೆಲ್ಲಾ 'ಬೂದಿ' ಮಾಡಿದಾ ಭಸ್ಮಾಸೂರಾ$_{ss}$ /ಅವನ ನೀಗಿಸಿಬಿಟ್ಟಿತ್ತಣ್ಣಾ ಮೋಹಿನಿ ಅವತಾರಾ (2-3, 4)**

*ಮುಟ್ಟಿದ್ದನ್ನೆಲ್ಲ ಬೂದಿಯಾಗಿಸುತ್ತಿದ್ದ ಭಸ್ಮಾಸುರನನ್ನು ಮೋಹಿನಿ ನೃತ್ಯದಲ್ಲಿ ಕುಣಿಸುತ್ತ ಅವನ ಕೈ ಅವನ ತಲೆಯ ಮೇಲೆ ಬರುವಂತೆ ಮಾಡಿ ಅವನಿಂದಲೇ ಅವನು ಧ್ವಂಸವಾಗುವಂತೆ ಮಾಡಿದ್ದು, ಒಂದು ವಿಶಿಷ್ಟ ಕುತೂಹಲ ಭರಿತ ಪುರಾಣ ಕಥೆ. ಮೋಹಿನಿಯು, ಅವನನ್ನು ನಾಶ ಪಡಿಸಿದ್ದನ್ನು ಹೇಳುವಾಗ ಬೇಂದ್ರೆ ಅವರು, 'ನೀಗಿಸಿ' ಎಂಬ ಗ್ರಾಮ್ಯ ಪದವನ್ನು ಬಳಸಿ ಕಥೆಯಲ್ಲಿ ಜಾನಪದದ ದನಿ ಹೊಮ್ಮಿಸಿದ್ದಾರೆ.

* * * * * *

## ಲಂಡೋ ಬಂಡೋ ಆಟ, ಮೂರಾಬಟ್ಟಿ

**ಲಂಡೋ ಬಂಡೋ ಆಟವಾಡಿ/ ಮೂರಾಬಟ್ಟಿ ಮನಿ ಆತಂತ (4-1, 2)**

: ಲಂಡತನದಿಂದ ಆಡುವ ಆಟ; ಭಂಡಾಟ.

ಲಂಡ=ದುಷ್ಟತನ, ಕೆಟ್ಟತನ.

: ಹಾಳು; ನಾಶ; ಕೇಡು.(ಮರಾ. ಮೂರಾಬಟ್ಟೀ)

*ಬೇಂದ್ರೆಯವರು- ಮದುವೆಯಾಗಿ ಹೆಣ್ಣುಮಕ್ಕಳನ್ನು ಗೋಳು ಹೊಯ್ದುಕೊಳ್ಳುವ ಗಂಡು ಮಕ್ಕಳನ್ನು ಸದಾ ದ್ವೇಷಿಸುತ್ತಿದ್ದರು. ಅವರಿಗೆ ಲಂಡೋಬಂಡೋ ಆಟ ಆಡಬೇಡಿ. ನಿಮ್ಮ ಭಂಡಾಟ ಬಿಡಿ. ಸಂಸಾರವನ್ನು ಮೂರಾಬಟ್ಟಿ/ ನಾಶಮಾಡಬೇಡಿ ಎಂದು ತಿಳಿ ಹೇಳುತ್ತಿದ್ದರು. ಅದೇ ಇಲ್ಲಿ 'ಕಗ್ಗ' ರೂಪವಾಗಿದೆ.

* * * * * *

**ಕಾಮಿ**

**ಹೆಣ್ಣಿನ ಮೋಹದ ಹದ್ಯಾನ ಕೆಡಿಸಿ/ ಮಕ್ಕಳ ಹಾದಿ ಮೊದಲ್ಯಾನ ಬಿಡಿಸಿ/ ಕಂತ್ರಾಟ ನಿನ್ನದು ಹ್ಯಾಂಗಾರೆ ನಡಿಸಿ ಕುಣೇಬ್ಯಾಡೋ ಮೂಢಾ/ ಬಾಳೆ ಮಾಡ್‌ತಾವ ಅಕ್ಕರೆ ಬರುವಂಗ ಕಾಮಿ ಬಾವುಗ ಜೋಡಾ (6-1, 2, 3, 4)**

*ದಕ್ಷಿಣ ಕರ್ನಾಟಕದ ನನ್ನಂತಹವನಿಗೆ 'ಕಾಮಿ' ಎಂದ ತಕ್ಷಣ ಮನಸ್ಸಿನ ಮುಂದೆ ನಿಲ್ಲುವುದು ಕಾಮುಕ, ವಿಷಯಲಂಪಟ ಎಂಬ ವ್ಯಕ್ತಿಯ ಚಿತ್ರ. ಆದರೆ, ಉತ್ತರ ಕರ್ನಾಟಕದಲ್ಲಿ ಹೆಣ್ಣು ಬೆಕ್ಕಿಗೆ 'ಕಾಮಿ' ಎಂದು ಕರೆಯುತ್ತಾರೆ. ಗಂಡು ಬೆಕ್ಕಿಗೆ 'ಬಾವುಗ' ಎನ್ನುತ್ತಾರೆ.

ಬೇಂದ್ರೆ ಅವರು ಬೆಕ್ಕುಗಳ ಪ್ರೀತಿಯ ಬಾಳುವೆ ನೋಡಿ ಆ ಮೂಕಜೀವಿಗಳೇ ಲೇಸು. ಈ ಮನುಷ್ಯ ಎಷ್ಟು ಹದಗೇಡಿ ಎಂದು ನೊಂದು ನುಡಿದು, ಅವನಿಗೆ ಎಚ್ಚರದ ಚಾಟಿ ಬೀಸಿ ಸರಿದಾರಿಗೆ ತರಲು ಪ್ರಯತ್ನಿಸಿದ್ದಾರೆ. ಇದು ಬೇಂದ್ರೆ ಅವರ-ಜನಜೀವನ ಹಸನಾಗಬೇಕಾದರೆ ಕುಟುಂಬ ಉತ್ತಮವಾಗಿರಬೇಕೆಂಬ ಸಾಮಾಜಿಕ ಎಚ್ಚರ.

***

ಬೇಂದ್ರೆ ಅವರು 'ರಾಗರತಿ' ಕವನದಲ್ಲಿ "ಕಾಮಿ ಬೆಕ್ಕಿನ್ಹಾಂಗ ಭಾಂವೀ ಹಾದಿ ಕಾಲಾಗ ಸುಳಿತ್ತಿತ್ತ। ಎರಗಿ ಹಿಂದಕ್ಕುಳಿತಿತ್ತ" ಎಂದು ಒಂದು ಮೋಹಕ ಸಂಜೆಯ ಮನೋಹರ ಹೆಣ್ಣಿನ ನಿಸರ್ಗಚಿತ್ರವನ್ನು ಕಾವ್ಯದಲ್ಲಿ ಸೆರೆ ಹಿಡಿದಿದ್ದಾರೆ. ಕಾಮಿ ಬೆಕ್ಕಿನ ಹೋಲಿಕೆಯನ್ನು ಬಾವಿಯ ಹಾದಿಗೆ ಕೊಡಲಾಗಿದೆ, ಕಾಮಿ ಬೆಕ್ಕು ಕಾಲಕಾಲಲ್ಲಿ ಸುಳಿದಾಡಿ ಅಡ್ಡಾಟಕ್ಕೆ ತೊಂದರೆ ಮಾಡುವಂತೆ ಬಯಕೆಯ ಹೆಣ್ಣಿನ ವಿಚಾರ ಅಡ್ಡಾಟದ ಗತಿಗೆ ಭಂಗವನ್ನು, ಆತಂಕವನ್ನು ಸೃಷ್ಟಿಸುತ್ತದೆ.

ಸಾಮಾನ್ಯವಾಗಿ ಮುಗಿಲನ್ನು-ಆಕಾಶವನ್ನು ಪುರುಷನಿಗೆ; ನೆಲವನ್ನು-ಪೃಥ್ವಿಯನ್ನು ಸ್ತ್ರೀಗೆ ಹೋಲಿಸಲಾಗುತ್ತದೆಯಷ್ಟೆ. ಇಲ್ಲಿ ಸಂಧ್ಯಾ ಸಮಯದ ಮೂಲಕ ಮುಗಿಲು ಸ್ತ್ರೀ ರೂಪ ತಾಳಿದೆ. ಸಂಧ್ಯಾಕಾಲ ಶೃಂಗಾರಿಕ ವಿಚಾರಗಳ ಹುತ್ತ ಎಂಬುದನ್ನು ಕವಿ

ಸೂಚಿಸಿದ್ದಾರೆ. ನಿಸರ್ಗ ಚಿತ್ರಣ ವಾಚ್ಯ, ನಾಯಕ, ನಾಯಿಕೆ ವಿಚಾರ ಧ್ವನಿತ ಎಂಬುದಾಗಿ ಗ್ರಹಿಸಬೇಕಾಗುತ್ತದೆ. ಪರಿಣಾಮಕಾರಿಯಾದ ಪರಿಸರದ ಚಿತ್ರಣ ಅನನ್ಯವಾಗಿದೆ.

* * * * * *

## ಕಿಲಿಬಿಲಿ

**ಬಿರುಕು ಬಿರುಕಿಗೂ ಗುಬ್ಬಿಯ ಮ್ಹನಿ/ ಹಾಳು ಭಾವಿಯೊಳ್ಗು ಕಿಲಿಬಿಲಿ ಧ್ವನಿ (7–1, 2)**

: ಹಕ್ಕಿಗಳ ಚಿಲಿಪಿಲಿ ಶಬ್ದ.

*ನಾವು ಶೂರರು ಎಂದು ಬೀಗುವ ಪುರುಷರೆ 'ಹಾಳು ಭಾವಿಯೊಳಗಿರುವ ಹಕ್ಕಿಗಳ ಕಿಲಿಬಿಲಿ ದನಿ ಕೇಳಿ. ಆ ಪಕ್ಷಿಗಳ ಪ್ರೀತಿಯ ಬಾಳು ನೋಡಿ. ಅದೇ ಸ್ವರ್ಗ. ಅಂತಹ ಸ್ವರ್ಗದ ಸಂಸಾರದಲ್ಲಿ ಪ್ರೀತಿಯ ಪತ್ನಿಯ ಸುಖ ಕಾಣಿರಿ. ಸಂತತಿಯಲ್ಲಿ ಶಕ್ತಿಯ ಭಕ್ತಿ ಶಿವನ ಮೇಳ ಇರುವುದನ್ನು ಅರಿಯಿರಿ' ಎಂದು ತಿಳಿ ಹೇಳಿ ಬೇಂದ್ರೆ 'ಕಗ್ಗ' ರಚಿಸಿದ್ದಾರೆ.

* * * * * *

## ಬಸವೆ

**ಬೀದಿ ಬೀದಿಗೆ ಬಸವೇರಿಲ್ಲ ಕಸಬೇರೋ ಅವರ್ು/ ನಾಯಿ ಪಾಡಿನ ನರಕದ ಕಿಂಡಿ ಅವ್ವರ ತವರೂರು. (9–3, 4)**

*ದೇವರ ಹೆಸರಿನಲ್ಲಿ ದೇವಾಲಯದ ಸೇವೆಗಾಗಿ ಮೀಸಲು ಬಿಟ್ಟ ಹುಡುಗಿ; ತಂದೆ ತಾಯಿಯು ತಮಗೆ ಒದಗಿದ ಯಾವುದೋ ದುರ್ಭರ ಸಂದರ್ಭದಲ್ಲಿ ತಮ್ಮ ಮಗಳನ್ನು ದೇವರಿಗೆ ಅರ್ಪಿಸುವುದಾಗಿ ಹರಕೆ ಹೊತ್ತು ಚಿಕ್ಕಂದಿನಲ್ಲಿಯೇ ಮೀಸಲು ಬಿಡುತ್ತಾರೆ. ಈ ದೇವದಾಸಿ ಸಂಪ್ರದಾಯವು ಪ್ರಾಚೀನವಾದುದು. ಕೆಲವು ಕಡೆ ಇಂತಹವರನ್ನು 'ದೇವದಾಸಿ'ಯರೆಂದೂ, 'ಜೋಗಿತಿ'ಯರೆಂದೂ ಕರೆಯುತ್ತಾರೆ. ಇಂದು ಈ ಪದ್ಧತಿಯು ಶಿಥಿಲಗೊಂಡು ತನ್ನ ಗೌರವವನ್ನು ಕಳೆದುಕೊಂಡು ಹೀನಾಯದ ಸ್ಥಿತಿಗೆ ಇಳಿದಿರುವುದನ್ನು ಕಾಣಬಹುದು.

* * * * * *

## ಗಂಟಿ ಚವುಡಿ

**ಗಂಟಿ ಚವುಡಿಗಳು ಎಲ್ಲರಕಿಂತ ಮುಂಚೆ ಬರಬಹುದು. (10–04)**

: ಮುಚ್ಚಿಟ್ಟಿದ್ದನ್ನು ಹೊತ್ತುಕೊಂಡು ಹೋಗುವವನು; ಗಂಟುಕಳ್ಳ.(ಮರಾ–ಗಂಠೀಛೋಡ್)

ಸಂತೆ ನೆರೆಯುವುದಕ್ಕೆ ಮೊದಲು ಗಂಟಿ ಚವುಡಿಗಳು ಕಳ್ಳತನದ ಯೋಜನೆ ಹಾಕಲು ಎಲ್ಲರಿಗಿಂತ ಮೊದಲು ಅಲ್ಲಿ ಸೇರುತ್ತಾರಂತೆ!

* * * * * *

## ಸನುಮಂತ

**ಗೆಳೆತನದಿಂದ ಒಗತಾನ ಮಾಡೋ/ ಅದು ಅವಗ ಸನುಮಂತಾ/ ಕಣ್ಣೀರ ಕಡಲು ಅಲಕ್ನ ಹಾರುವಿ ಜಿಗಿಧಾಂಗ ಹನುಮಂತಾ. (13–5, 6, 7, 8)**

*ಸಮ್ಮತ, ಒಪ್ಪಿಗೆ ಎಂಬ ಪದ ಜನಪದರ ನಾಲಗೆಯಲ್ಲಿ ಸನುಮಂತಾ, ಸನುಮತಾ ಎಂದು ಬಳಕೆಯಾಗುತ್ತದೆ. ಬೇಂದ್ರೆ ಅವರು ಮನುಷ್ಯನಿಗೆ ಈ ನೆಲದ ಬದುಕಿನಲ್ಲಿ ಆ ಅನಂತಶಕ್ತನಿಗೆ ಸಮ್ಮತವಾಗುವಂತೆ ಬದುಕುವ ಒಳಸೂತ್ರವನ್ನು ಮೇಲಿನ ನುಡಿಯಲ್ಲಿ ನೀಡಿದ್ದಾರೆ. ಈ ಸಂಸಾರವೆಂಬ ಸಾಗರ ಜಿಗಿದು ಸೈ ಎನಿಸಿಕೊಳ್ಳುವುದು ತುಂಬಾ ಕಷ್ಟ. ಆದರೆ, ಸತಿಯನ್ನು ನಯವಿನಯಗಳ ಗೆಳೆತನದಿಂದ ಒಲಿಸಿಕೊಂಡು, ಒಗೆತನ/ಸಂಸಾರ ಮಾಡಿದರೆ ಅದು ಆ ಭಗವಂತನಿಗೂ ಒಪ್ಪಿಗೆಯಾಗುವುದು. ಆಗ, ಸಂಸಾರವೆಂಬ "ಕಣ್ಣೀರ ಕಡಲು ಅಲಕ್ನ ಹಾರುವಿ। ಜಿಗಿಧಾಂಗ ಹನುಮಂತಾ". ಸಂಸಾರಿಯಾದವನು ಒಗೆತನ/ಕೂಡಿ ಬಾಳುವ ಸೂಕ್ಷ್ಮಕಲೆ ಅರಿತು ಸಖಿಯ ನಾದಾನುಸಾರಿಯಾಗಬೇಕು.

* * * * * *

## ಪಂಟು

**ಯಾತಕ್ಕೇನೋ ಹಾಕಿ ಗಂಟು/ ಅಂಬಿಕ್ಯಾತನಯ ಹೊಡಿದನೊ ಪಂಟು (14–1, 2)**

*ಬೇಂದ್ರೆ ಅವರು ತಮ್ಮ ವಿಸ್ತಾರ ಓದಿನ ಹಾಗೂ ಆಳ ಜೀವನಾನುಭವದ ಅರಿವಿನಲ್ಲಿ ಗಾರುಡಿಗ ಕಾವ್ಯವನ್ನು ರಚಿಸುವಾಗ ತಮ್ಮನ್ನೇ ತಾವು ಮೇಲಿನಂತೆ ಚಿತ್ರಿಸಿಕೊಂಡಿದ್ದಾರೆ.

'ಪಂಟು' ಎಂಬುದು ಹೆಮ್ಮೆಯ ಮಾತು, ಜಂಬದ ನುಡಿ ಆಗಿ ಇಲ್ಲಿ ಪ್ರಯೋಗವಾಗಿದೆ. ಹಾಗೆ ಪಂಟು ಹೊಡೆದಾಗಲೂ ಆ ಕಾವ್ಯ ಅದರ ಆಂತರ್ಯದ ಹಲವು ಅರ್ಥಗಳಿಂದ ಅದನ್ನು ಓದಿದವರಿಗೆ ಅವರವರ ಸಾಮರ್ಥ್ಯಕ್ಕೆ ತಕ್ಕಂತೆ ದೃಷ್ಟಾಂತಗಳನ್ನು, ಸಾದೃಶ್ಯಗಳನ್ನು ಒದಗಿಸುತ್ತದೆ.

***

**ಯಾರೊ ಯಾರನೊ ನೋಡುವಾಗ ಮೂಡಿತು ನಂಟು/ ಹಾದಿಯಲ್ಲಿ ಬಿದ್ದಿತು ಗಂಟು– ಹೊತ್ತರಗೊ ಗಂಟು/ ಬಡಿಯಬೇಡಿ ಪಂಟು(ಸೂರ್ಯಪಾನ: ಮಧುವಾತಾ ಋತಾಯತೇ)**

ಈ ನುಡಿಯಲ್ಲಿ ಬೇಂದ್ರೆ ಅವರು ಹೊತ್ತರಗೊ ಗಂಟು ಎಂಬ ನುಡಿಗಟ್ಟನ್ನು ಪ್ರಯೋಗಿಸಿದ್ದಾರೆ. ಹಾದಿಯಲ್ಲಿ ಸಿಕ್ಕಿದವರ ಜೊತೆ ಮಾತು ಎಂದರೆ ಹೊತ್ತು–ಕಾಲ, ಸಮಯವನ್ನು ಅರಗು–ಜೀರ್ಣವಾಗಿಸುವ ಒಂದು ತಾತ್ಕಾಲಿಕ ಗಂಟು. ಕಾಲಹರಣ; ಹೊತ್ತರಗೋ ಗಂಟು. ಆ ಸಮಯದಲ್ಲಿ ಒಣ ಹೆಮ್ಮೆಯ ಮಾತು–ಪಂಟು, ಬಡಿಯಬೇಡಿ ಎಂಬ ಕಿವಿ ಮಾತು ಹೇಳಿದ್ದಾರೆ.

* * * * * *

**ಹಿಗ್ಗಾಮುಗ್ಗಾ, ಕಗ್ಗ**

**ಅಂಬಿಕಾತನಯ ಕಟ್ಟಿದ ಕಗ್ಗಾ/ ಜಗ್ಗ ಬ್ಯಾಡ ನೀ ಹಿಗ್ಗಾ ಮುಗ್ಗಾ/ ಹುರಿ ಐತಿ ಒಳಗs ಬರಿದಲ್ಲಾ ಹಗ್ಗಾ (21–1, 2, 3)**

: ಹಿಂದಕ್ಕೆ ಮತ್ತು ಮುಂದಕ್ಕೆ ಎಂಬರ್ಥದಲ್ಲಿ ಬಳಕೆಯಾಗುವ ಒಂದು ಅವ್ಯಯ.

: 1. ಕೆಲಸಕ್ಕೆ ಬಾರದ; ನಿಷ್ಪ್ರಯೋಜಕವಾದ.

2.ಬೇಸರದ ಹರಟೆ; ಗೊಡ್ಡುಕತೆ.

*ಅಂಬಿಕಾತನಯದತ್ತರು ಕಟ್ಟಿದ ಕಗ್ಗವು ಒಂದು ನಿಷ್ಪ್ರಯೋಜಕವಾದ, ಗೊಡ್ಡುಕತೆ ಎಂದು ತಿಳಿಯಬೇಡ. ಅದನ್ನು ಹಿಗ್ಗಾ ಮುಗ್ಗಾ ಜಗ್ಗಬೇಡ. ಅದರ ಒಳಗೆ ಹುರಿ/ಬಿಗುವು; ಬಲವು ಇದೆ.

---

## ಕಿಡಿ–ಕಿಡಿ

**ಹೊರಪು**

**ಎತ್ತಲೂ ಮುಸುಕಿರುವ ಮುಗಿಲೆ ಓಡಿಲ್ಲಿಂದ/ ಹೊರಪು ಬೇಕಾಗಿಹುದು ಹೊಲದ ಬೆಳೆಗೆ./ ಜೀವನವನೇ ಸುರಿಸಿ ಜೀವವನು ಹೀರದಿರು/ ದಿವ್ಯತೆಯ ಬೆಳೆ ಬರಲಿ ಜೀವಕಳೆಗೆ. (7–12, 3, 4)**

*ಬೇಂದ್ರೆ ಅವರು ಓರ್ವ ಪರಿಣತ ಕೃಷಿಕನ ರೀತಿ ಪ್ರಕೃತಿಯೊಡನೆ ಸಂವಾದ ನಡೆಸಿರುವುದು ಅಚ್ಚರಿಯನ್ನುಂಟು ಮಾಡುತ್ತದೆ. ಅವರು ಧಾರವಾಡದ ಕಾಮನಕಟ್ಟೆಯಲ್ಲಿ ಹುಟ್ಟಿದ ಮನೆಗೆ ಕೆಲವು ಗಜಗಳ ದೂರದಲ್ಲಿ ಈಗಲೂ ಹೊಲ ಇದೆ. ರೈತರೊಡನೆ ಬಾಲ್ಯ ಕಳೆದ ಬೇಂದ್ರೆ ಒಕ್ಕಲುತನದ ಒಳಮರ್ಮವನ್ನು ಅರಿತವರಾಗಿದ್ದರು.

ಮಳೆ ಹೆಚ್ಚಾದರೆ ಬೆಳೆ ಕೊಳೆತು ಹೋಗುತ್ತದೆ. ಅನಾವಶ್ಯಕವಾದ ಮಳೆ ರೈತನಿಗೆ ಬೇಡ. ಅದರ ಹೊರತು ಅವನಿಗೆ 'ಹೊರಪು' ಬೇಕು ಉತ್ತಮ ಬೆಳೆಗೆ. ಮಳೆಯ ಮೋಡಗಳಿಲ್ಲದೆ ಆಕಾಶವು ನಿರ್ಮಲವಾಗಿ ಕಾಂತಿಯುಕ್ತವಾಗಿರುವುದು 'ಹೊರಪು'.

'ಜೀವನ' ಎಂದರೆ ನೀರು. ಅದು ಹೆಚ್ಚಾದಾಗ ಬೆಳೆಯ ಜೀವವನ್ನೇ ಹೀರುತ್ತದೆ. ಹಾಗಾಗದೇ, "ದಿವ್ಯತೆಯ ಬೆಳೆ ಬರಲಿ ಜೀವ ಕಳೆಗೆ" ಎಂದಿದ್ದಾರೆ.

ಮನುಷ್ಯನು ಈ ನೆಲದ ಬದುಕಿನಲ್ಲಿ ಜೀವನ ಸವೆಸುವುದರತ್ತಲೇ ಪೂರ್ಣ ತೊಡಗದೇ ಕಾಂತಿಯುತ ಹೊರಪು, ದಿವ್ಯತೆಗೆ ಆಶಿಸಲಿ ಎಂಬ ಧ್ವನಿಯೂ ಈ ಕಾವ್ಯದಲ್ಲಿದೆ.

ಬೀದರದಲ್ಲಿ ಮಳೆ ಬಾರದಿರಲು, ಬಿಸಿಲು ತೆರೆ ಎನ್ನಲು 'ಉಗಾಡಕುಡ' ಪದ ಜನಬಳಕೆಯಲ್ಲಿದೆ.

***

**ಒಕ್ಕಲಕು, ಹಕ್ಕಲಕು ಹೊರಪು ಕೊಡಲಿ/ ಜೋಳ ಕೈ ಕಾಯುತಿದೆ ತೆರಪು ಬಿಡಲಿ(ಸಂಚಯ: ಮಳೆಗೆ ಪ್ರಾರ್ಥನೆ)**

***

**ತೇಲಿ ಬಿಡುವೆನು ಹಾಳಿ ಹಡಗಗಳ ಹುಡುಗರಾ/ಟ ದೊಳೆಂತು ಅಂತು, ಕಾರ್ಮೋಡ ಕತ್ತಲೆ ಕವಿದ/ ಹೊತ್ತು ಹೊರಪಾಗಿ ಬೆಳಗುವವರೆಗೆ, ಮನೆಯ ಕಸವನೆ ಸರಕು ಮಾಡಿ.( ಉಯ್ಯಾಲೆ: ಹಾಳಿ ಹಡಗ)**

---

## ಹುಚ್ಚನ ಹಾಡು

### ಕುಚ್ಚು

**ಹುಚ್ಚನ ಮಾತ ಕೇಳಿಕೊಂಡು/ ರೊಚ್ಚಿಗ್ಯಾರು ಏಳುತಾರೊ/ ಚುಚ್ಚತ್ತ್ವದ ಏನೋ ಮಾತು/ ತಮ್ಮದ್ದ್ಸ ತಮಗ್ಸ/ ಕುಚ್ಚ್ಸತದ ಅವರ ಮನಸು/ ಒಳಗಿಂದೊಳಗ (1–1 ರಿಂದ 6)**

: ಕುದಿಯುವಂತೆ ಮಾಡು; ಮರಳಿಸು; ಚೆನ್ನಾಗಿ ಕಾಯಿಸು; ಬೇಯಿಸು.(ಕುದಿ+ಇಸು)

*ಬೇಂದ್ರೆ ಅವರು ಮೇಲಿನ ನುಡಿಯಲ್ಲಿ ಹುಚ್ಚನ ನುಡಿಯು ಬುದ್ಧಿ ನೆಟ್ಟಗಿರುವವರಿಗೆ ಮಾರ್ಮಿಕವಾಗಿ ತಿವಿಯುವುದನ್ನು ಮಾನಸಿಕ ತಜ್ಞರಂತೆ ವಿಶ್ಲೇಷಿಸಿದ್ದಾರೆ.

ಹುಚ್ಚ ಹೇಳುವ ಸತ್ಯವು ಬುದ್ಧಿ ಸಮ ಇರುವವನೆನಿಸಿಕೊಂಡವನಿಗೆ ಚುಚ್ಚುತ್ತದೆ. ಅವನ ನಡೆಯ ಸರಿ ಬೆಸೆಯನ್ನು ಒಳಗಿಂದೊಳಗೆ ಮರಳಿಸಿ, ಅವನ ಮನಸ್ಸನ್ನು ಕುಚ್ಚುತ್ತದೆ/ ಕುದಿಸುತ್ತದೆ. ಹುಚ್ಚನ ಮಾತಿಗೆ ರೊಚ್ಚಿಗೇಳದಿದ್ದರೂ ಅವನ ನುಡಿ–ನಾನೇ ಸರಿ ಎಂದು ತಿಳಿದವನನ್ನು ಒಳಗಿಂದೊಳಗೆ ಬೇಯಿಸುತ್ತದೆ. ಅದು ಹೊರಗೆ ವ್ಯಕ್ತಪಡಿಸುವ ರೊಚ್ಚಿಗಿಂತ ಅಧಿಕ ಒತ್ತಡದ ಮನಃಸ್ಥಿತಿ, ಮನೋಶೋಧ, ನೋವು.

* * * * * *

### ಪುಗ್ಗಿ

**ಬರೋವಾಗ ಎರಡು ಪುಗ್ಗೆ/ ಕದ್ದು ತರಬೇಕು (3–7, 8)**

*ಕಡಲೆ ಹಿಟ್ಟಿಗೆ ಉಪ್ಪು, ಕಾರ ಮೊದಲಾದವನ್ನು ಬೆರಸಿ ದುಂಡಗೆ ಉಬ್ಬುವಂತೆ ಕರಿದು ಮಾಡುವ ಖಾದ್ಯವನ್ನು ಉತ್ತರ ಕರ್ನಾಟಕದಲ್ಲಿ ಪುಗೆ, ಪುಗ್ಗೆ, ಬುರುಬುರಿ

ಎಂದು ಕರೆಯುವರು. "ಒಂದು ಲಾವಣಿಯ ಪ್ರಾರಂಭ ಭಾಗ, 1946ರಲ್ಲಿ ಗದಗಿನ ಸಾಹಿತ್ಯೋತ್ಸವದ ನಾಟಕಕ್ಕಾಗಿ ಬರೆದಹಾಡು" ಎಂಬ ಭಾವ ಸಂದರ್ಭ ಹೊಂದಿದ 'ಹುಚ್ಚನ ಹಾಡು' ಕವನದಲ್ಲಿ ಮೇಲಿನಂತೆ ಈ ಪದ ಬಳಸಲಾಗಿದೆ.

---

## ಬಿಚ್ಚು ಮಾತು

### ಅಬ್ಬರ ತುಬ್ಬರ, ಭರಪೂರ

**ಒಬ್ಬರನ ಕಂಡರ ಒಬ್ಬರ ಮನಸು/ ಅಬ್ಬರ ತುಬ್ಬರ ಆಗತೈತಿ/ ಇಬ್ಬರ ಕೂಡಿ ಬದುಕಿನ ಹಬ್ಬ ಮಾಡಿಲ್ಲ ಭರಪೂರಾ. (2–1, 2, 3)**

: ಕ್ಷುಬ್ಧ, ಮೇಲೆ ಕೆಳಗೆ.

: ಸಂಪೂರ್ಣವಾಗಿ; ಪೂರ್ತಿಯಾಗಿ.(ಹಿಂ,ಮರಾ.ಭರ್‌ಪೂರ್)

*ಇದೊಂದು ಲಾವಣಿಯ 'ಬಿಚ್ಚುಮಾತು'. ಒಬ್ಬರನ್ನು ಕಂಡರೆ ಇನ್ನೊಬ್ಬರಿಗೆ ದ್ವೇಷ ಅಸೂಯೆ, ಅವರಿಬ್ಬರದೂ ಕದಡಿದ ಮನಸ್ಸು ಎಂಬುದನ್ನು ಉತ್ತರ ಕರ್ನಾಟಕದ ಆಡುನುಡಿ ಅಬ್ಬರ ತುಬ್ಬರ ಪದದಲ್ಲಿ ಬಿಚ್ಚು ಮಾತಾಗಿ ಹೇಳಿದ್ದಾರೆ. ಅಂತಹ ಒಬ್ಬರಿಗೊಬ್ಬರು ಒಟ್ಟುಗೂಡಿ ಪ್ರೀತಿಯಿಂದ ಮನತುಂಬಿ ಒಂದು ಹಬ್ಬವನ್ನು ಮಾಡಿಲ್ಲ. ಇದು ಎಂತಹ ಬಾಳು?

---

## ಕಣಿಕೆ

### ಮುರುಕು

**ಮುದಿಸೂಳೆಗೊಬ್ಬ ಎಳೆಸೂಳೆ ಕಟುಕಿದಳು:/ ಸಾಕಮ್ಮಾ ಮುರುಕು ಒಯ್ಯಾರ! (1–1,2)**

: ನಟನೆ; ಸೋಗು.

*    *    *    *    *    *

### ಕಣಿಕೆ

**ಕವಲೆತ್ತಿಗೂನು ಕಣಿಕೆ (2–4)**

: ಸೆಜ್ಜೆ, ಜೋಳ ಮೊದಲಾದುವುಗಳ ತೆನೆ ಕತ್ತರಿಸಿದ ಮೇಲೆ ಉಳಿದ ಕಡ್ಡಿ.

---

# ಹಲವು ಮಾತೆ, ಜಗನ್ಮಾತೆ

## ಧೂಮಕೇತು

**ಹಳದಿ ಕೆಂಪ ಬಿಳಿಯ ಕರಿಯ ಕುರುಕ್ಷೇತ್ರ ಹೂಡಿರೆ/ ಪಡುವಲಲ್ಲಿ ಧೂಮಕೇತು ಬಾಲ ಬೀಸಿ ಮೂಡಿರೆ (2–1, 2)**

: ಹೊಗೆಯಂತೆ ಕಾಣಿಸಿಕೊಳ್ಳುವ ಒಂದು ಉಲ್ಕೆ. (ಅತಲಾಂತಿಕ ಕಡಲ= ಅಟ್ಲಾಂಟಿಕ್ ಸಾಗರ)

*ಈ ವಿಶ್ವವು ವರ್ಣವೈಷಮ್ಯದಿಂದ ಕುರುಕ್ಷೇತ್ರವಾಗಿದೆ. ಪಶ್ಚಿಮದಲ್ಲಿ ಅದು ಧೂಮಕೇತುವಿನಂತೆ ಅನಿಷ್ಟಕಾರಕವಾಗಿದೆ. ಅತಲಾಂತಿಕ ಕಡಲ/ಅಟ್ಲಾಂಟಿಕ್ ಸಾಗರದ ತೆರೆಗಳಲ್ಲಿ ಮನುಷ್ಯಲೋಭ ಕುಣಿಯುತ್ತಿರಲು–ಶಾಂತಜಲ ಅಶಾಂತವಾಗಿದೆ. ಈ ಭೂಲೋಕ ಕ್ಷೋಭೆ/ಅಲ್ಲೋಲ ಕಲ್ಲೋಲಕ್ಕೆ ಈಡಾಗಿದೆ.

* * * * * *

## ಭೂಮ

**ಹೋಮ ಸಾಕು ಭೂಮ ಬೇಕು ಭೂದೇವಿಯ ಬೇಡಿಕೆ (7–1)**

*ಭೂಮ ಎಂದ ತಕ್ಷಣ ಮಹತ್ತರವಾದ, ಸಮೃದ್ಧಿಯ ಅರ್ಥ ಮನಸ್ಸಿನ ಮುಂದೆ ಸುಳಿಯುತ್ತದೆ. ಆದರೆ ಬೇಂದ್ರೆಯವರು ಮೇಲಿನ ಸಾಲಿನಲ್ಲಿ 'ಭೂಮ'ವನ್ನು 'ಆಹಾರ' ಎಂಬ ಅರ್ಥದಲ್ಲಿಯೂ ಬಳಸಿದ್ದಾರೆ. ಅದೇ ಭೂದೇವಿಯ ಬೇಡಿಕೆ. ಈ ನೆಲದ ಜನಕ್ಕೆ ಹೋಮ ಸಾಕಾಗಿದೆ, ಭೂಮ–ಆಹಾರ ಬೇಕಾಗಿದೆ ಎಂಬುದು ಕವಿಯ ಚಿಂತನೆ.

* * * * * *

## ವಿಜ್ಞ

**ಸಜ್ಞ ವಿಜ್ಞ ಭಕ್ತಿಯುಕ್ತ ಜೀವನವೇ ಕರ್ಮವು. (10–4)**

: ತಿಳಿದ; ವಿದ್ವತ್ತಿನಿಂದ ಕೂಡಿದ.

*ಎಲ್ಲವನ್ನು ತಿಳಿದ ಭಕ್ತಿಯುಕ್ತ ಜೀವನವೇ ದೇವರ ಅರ್ಚನೆ.

* * * * * *

## ಅರುಣಿಸು

**ಸತ್ಯ ದೃಷ್ಟಿ ಅದೇ ಸೃಷ್ಟಿ ಎನುವ ಭಾವ ಅರುಣಿಸು (15–2)**

: ಉದಯವಾಗುವ ಹಾಗೆ ಮಾಡು; ಮೂಡಿಸು.

*ಇದು '01–11–1956ರಂದು ಕರ್ನಾಟಕ ರಾಜ್ಯೋದಯದ ದಿನ ತುಮಕೂರಿನಲ್ಲಿ ಓದಿದ ಕವನ' ಎಂಬ ಭಾವ ಸಂದರ್ಭ ಹೊಂದಿದೆ. ಬೇಂದ್ರೆಯವರು ವಿಶ್ವಮಾತೆ, ಭೂಮಿತಾಯಿ, ಭಾರತಮಾತೆ, ಕನ್ನಡಮಾತೆ ಮತ್ತು ತನ್ನನ್ನು ಹಡೆದ ತಾಯಿ ಅಂಬಿಕೆ ಈ ಐದು ಐದೆಯರನ್ನು ಆರಾಧಿಸಿದವರು. ಅವರು ಈ ತಾಯಿಯರಲ್ಲಿ–ವಿಶ್ವಶಾಂತಿಗಾಗಿ ಸತ್ಯದೃಷ್ಟಿಯೊಂದೇ ಎಲ್ಲ ಸೃಷ್ಟಿಯ ಮೂಲ–ಆ ಭಾವವನ್ನು ನಮ್ಮಲ್ಲಿ ಅರುಣಿಸು/ ಮೂಡಿಸು ಎಂದು ಪ್ರಾರ್ಥಿಸಿದ್ದಾರೆ.

---

# ಹಾರೈಕೆ

## ನೂಗು

**ಊರ್ಧ್ವಗತಿಯಲೇ ಮನೋರಥವು ಸಹ ಅಪಾರ್ಥವೆನಿಸದೆ ನೂಗಲಿ (1–1)**

: ನುಗ್ಗು

*ಉತ್ತಮ ಅಥವಾ ಮೇಲಾದಗತಿ ಉರ್ಧ್ವಗತಿ. ಆ ಮುಖವಾಗಿ ಅಪಾರ್ಥವೆನಿಸದ ರೀತಿ ನಮ್ಮ ಮನೋರಥ ನುಗ್ಗಲಿ.

* * * * * *

## ತಂಬೆಳಕು, ಹೊಂಬೆಳಕು

**ತಂಬೆಳಕಾಗಲಿ ನಂಬೆಳಕೆನುವೊಲು ಹೊಂಬೆಳಕೇ ಹೊರಸೂಸಲಿ (2–1)**

: ಬೆಳುದಿಂಗಳು; ಚಂದ್ರಿಕೆ.

: 1.ಹಳದಿ ಬಣ್ಣದ ಕಾಂತಿ; ಹೊಂಬಣ್ಣದ ಪ್ರಕಾಶ.

2.(ಆಲಂ)ಜ್ಞಾನದ ತೇಜಸ್ಸು; ಅರಿವಿನ ಬೆಳಕು.

*ಈ ಪ್ರಕೃತಿ ನೀಡುವ ತಂಬೆಳಕು/ಬೆಳುದಿಂಗಳು ನಮ್ಮ ಬೆಳಕು ಎನ್ನುವ ರೀತಿ ನಮ್ಮ ಹೊಂಬೆಳಕು/ಜ್ಞಾನದ ತೇಜಸ್ಸು ಬೆಳಗಲಿ ಎಂಬುದು ಕವಿಯ ಹಾರೈಕೆ.

ಹೊಂಬಣ್ಣದ ಪ್ರಕಾಶವೇ ಹೊಂಬೆಳಕು. ಅದನ್ನು ಕವಿ 'ಅರಿವಿನ ಬೆಳಕು' ಎಂದು ಆಲಂಕಾರಿಕವಾಗಿ ಹೇಳಿದ್ದಾರೆ.

---

# ದಿವ್ಯ-ಧ್ವನಿ

**ಕುಡಗ**

**ಕುಡಗರು ತುಳುವರು ತೊಡಗರು ಬಡಗರು (2-1)**

: ಕೊಡಗು ನಾಡಿನ ನಿವಾಸಿ; ಕೊಡಗ.

*ಕರ್ನಾಟಕ ಏಕೀಕರಣ ಸಂದರ್ಭದಲ್ಲಿ ವಿವಿಧ ಭಾಷಾ ಸಮುದಾಯದವರನ್ನು ನಾವೆಲ್ಲ ಒಂದು ಎಂಬ ಭಾವದಲ್ಲಿ ಬಂಧಿಸಿ ರಚಿಸಿದ ಕವನದಲ್ಲಿ ಕುಡಗರು ಎಂಬ ಪದ ಕೊಡಗರನ್ನುದ್ದೇಶಿಸಿ ಬಳಕೆಯಾಗಿದೆ.

---

# ಕನ್ನಡದ ಪಾವನ ಪರಂಪರೆ

**ಕಟಕು**

**ಧಾರ್ವಾಡ ಕಟಕು ಬಂಡೆಯ ಮೇಲೆ ಹಬ್ಬಿತ್ತು/ ವನವಾಸಿ ಕುಂತಳದ ಭವ್ಯ ಜಾಗ.(1-3, 4)**

: ಬಿಳುಪು ಅಥವಾ ಕೆಂಪು ಬಣ್ಣದ ಗಟ್ಟಿ ಮಣ್ಣಿನ ಒಂದು ಪ್ರಕಾರ.

*ಧಾರವಾಡ ಪ್ರದೇಶದ ಭೂಲಕ್ಷಣವನ್ನು ಕಟಕು ಬಂಡೆಯೆಂದು ಕವಿ ತಿಳಿಸಿದ್ದಾರೆ. ಇದನ್ನು ವನವಾಸಿಯೆಂದು ಕುಂತಳವೆಂದು ಹೇಳುತ್ತಿದ್ದರು. ಕುಂತಲವು ಚಂದ್ರಹಾಸನ ರಾಜಧಾನಿಯಾಗಿತ್ತು.

***

**ಧಾರವಾಡದ ಶಿಲೆಯು ಆ ಅನಾದಿ ಬುನಾದಿ/ ಅದರ ತಳಹದಿ ಯಾರು ಅಗೆದುದುಂಟು?(ಜೀವಲಹರಿ: ನೆನವು)**

* * * * * *

**ಕೊಂಕ**

**ಮಲೆನಾಡು ಮುಂದೆ ಸಾಗರಬಿದ್ದು ಅಪ್ಪುವದು,/ ತುಳು ಕೊಂಕ ಮತ್ತೆ ಗೋಕರ್ಣ ಗೋವೆ. (3-3, 4)**

: ಒಂದು ದೇಶದ ಹೆಸರು. ಈಗಿನ ಕೊಯಮತ್ತೂರು ಪ್ರದೇಶ.

* * * * * *

### ದಿವ್ಯಧ್ವನಿ, ಣಮೋ

**ಕೇಳಿದಿರೊ ದಿವ್ಯಧ್ವನಿ ಜೀವದ ಣಮೋಕಾರ/ ಕನ್ನಡದ ಟಂಕಾರ; ಧರ್ಮಸಾರ. (7–1, 2)**

*ಮಹಾವೀರನು ಕೈವಲ್ಯಸಿದ್ಧಿ ಪಡೆದಾಗ ಮೌನಧ್ವನಿ ಹೊಮ್ಮುತ್ತದೆ. ಅದೇ ದಿವ್ಯಧ್ವನಿ. ಅವನ ಆಪ್ತಶಿಷ್ಯ ಘನಧರನಿಗೆ ಆ ಮೌನಧ್ವನಿಯ ಮಾತುಗಳು ಅರ್ಥವಾಗುತ್ತದೆ. ಅದನ್ನು ಅವನು ಜನಸಾಮಾನ್ಯರಿಗೆ ಅಂದಿನ ಆಡುಭಾಷೆಯಲ್ಲಿ ತಿಳಿಯುವಂತೆ ವ್ಯಾಖ್ಯಾನ ಮಾಡುತ್ತಾನೆ. ಅದು ಜೈನ ಆಗಮದಲ್ಲಿ ಬರುವ ವಿವರ.

"ಣಮೋ ಸಿದ್ಧಾಣಂ.. .." ಎಂಬುದು ಜೈನರ ಮಹಾಮಂತ್ರ. ಅದು ಪ್ರತಿಯೊಂದು ಜೀವಕ್ಕೂ ಜಿನ ಆಗುವ ಯೋಗ್ಯತೆಯಿದೆ ಎಂಬ 'ಜೀವದ ಣಮೋಕಾರ'/ನಮಸ್ಕಾರ, ಕನ್ನಡಿಗರು ಧರ್ಮದ ಗುರಿ ಸಾಧಿಸಿದ ಟಂಕಾರ/ಧನುಸ್ಸಿನ ಶಬ್ದ.

* * * * * *

### ಗೊಂದಣ ನೃತ್ಯ

**ಬಾಳು ಗೊಂದಣನೃತ್ಯ (13–1)**

: ಬಾಳು ಒಂದು ಸಾಮೂಹಿಕ ನೃತ್ಯ ಎಂಬುದನ್ನು ಗೊಂದಣನೃತ್ಯ ಧ್ವನಿಸುತ್ತದೆ.

---

## ನೆನವು

### ಕಣ್ಣರಿಕೆ

**ಸತ್ಯಸೂರ್ಯನ ಇದಿರುಗೊಂಡು ಕಣ್ಣರಿಕೆಯಲಿ/ ಗರುಡನೊಲು ಅಮೃತಕ್ಕೆ ಹಾರುತಿಹುದು. (16–3, 4)**

: ಸಾಕ್ಷಾತ್ ಲಕ್ಷ್ಯವಹಿಸುವಿಕೆ; ಪ್ರತ್ಯಕ್ಷವಾದ ಮೇಲ್ವಿಚಾರಣೆ; ದೇಖರೇಖಿ.(ಉ.ಕ)

*ಕಾವ್ಯ ಅಮೃತಕ್ಕೆ ಹಾರುವ ಗರುಡ; ಅವನ ಗರುಡಿಯಲ್ಲಿಯೂ ಶರಣಾಗುವ ಶರ–ಭಾವ ಇರುವುದು' (ಸಾ.ವಿಸ್ವ ಪು:84) ಎಂದು ಬೇಂದ್ರೆ ಹೇಳಿದ್ದಾರೆ.

ವಿ.ಕೃ ಗೋಕಾಕರು ಸತ್ಯಸೂರ್ಯನನ್ನು ಎದುರುಗೊಂಡು ಅದರ ಕಣ್ಣರಿಕೆಯಲಿ/ಸಾಕ್ಷಾತ್ ಲಕ್ಷ್ಯ ವಹಿಸುತ್ತ ಗರುಡನಂತೆ ಅಮೃತಕ್ಕೆ ಹಾರಿದವರು ಎಂದು ಬೇಂದ್ರೆ ಬಣ್ಣಿಸಿದ್ದಾರೆ.

---

## ಪಾರಿವಾಳ–ಸಿಂಹ–ಬಂಟ

### ಕ್ಷಣ ಭಂಗುರ, ಡಿಂಗರ

**ಕ್ಷಣ ಭಂಗುರದೀ ಕಾಯ ದುಡಿಸಿ ಕಾಯಕ ಮಾಡಿ. (13–1, 2)**

: ಸ್ವಲ್ಪ ಕಾಲದಲ್ಲಿಯೇ ನಾಶವಾಗತಕ್ಕ; ಸ್ಥಿರವಲ್ಲದ; ಕ್ಷಣಿಕ.

: ಸೇವಕ; ಅಡಿಯಾಳು; ಕಿಂಕರ; ಭಕ್ತ.

* 'ನರರ ವೀರ ಕರ್ಮದಲ್ಲಿ'ರುವ ವೀರ ತನ್ನನ್ನು ಡಿಂಗರ ಅರ್ಥಾತ್ ಸೇವಕ, ಭಕ್ತ ಎಂದು ಕರೆದುಕೊಂಡಿದ್ದಾನೆ. ಅವನು ಕ್ಷಣ ಭಂಗುರವಾದ/ಸ್ಥಿರವಲ್ಲದ ಶರೀರವನ್ನು ದುಡಿಸಿ ಕಾಯಕ ಮಾಡಬೇಕು. ಅದೇ ದೇವನನ್ನು ಮೆಚ್ಚಿಸುವ ಭಕ್ತನ ಲಕ್ಷಣವೆಂದು ತಿಳಿಸಿದ್ದಾನೆ.

---

## ರವೀಂದ್ರ ದರ್ಶನ

### ಜಪಾಕುಸುಮ

**ಜಪಾಕುಸುಮದೊಲು ಉಷಾರಮಣಿಯಿರೆ/ ಜಪಾನವಿದೆ ರಮ್ಯ (13–1, 2)**

: ದಾಸವಾಳದ ಹೂವು.

*ಪ್ರಖ್ಯಾತ ಚಿತ್ರಕಾರರಾಗಿದ್ದ ಶಂಕರರಾವ್ ಎನ್. ಅಳಂದಕರ ಬೇಂದ್ರೆಯವರ ಗೆಳೆಯರು. ಅವರ 'Gurudeva in cultural symbols' ಎಂಬ 32 ಚಿತ್ರಮಾಲಿಕೆಯನ್ನು ನೋಡುತ್ತ ಸ್ಫುರಿಸಿದ ಉಕ್ತಿಗಳು.

ಆ ಚಿತ್ರದಲ್ಲಿ ಜಪಾನ್ ದೇಶವನ್ನು ನೋಡುತ್ತ ಮುಂಜಾನೆಯ ಉಷಾರಮಣಿ ಜಪಾಕುಸುಮ/ದಾಸವಾಳದ ಹೂವಿನಂತೆ ಕೆಂಪು ಮೃದು ಮಧುರ. ಅದರಂತೆ ಜಪಾನ್ ರಮ್ಯ ಎಂದು ಬೇಂದ್ರೆ ಬಣ್ಣಿಸಿದ್ದಾರೆ.

* * * * * *

### ಮೇಗೆರೆ

**ನೆನವಿನ ಹಿಮಗಿರಿ ಕೊರೆದಿದೆ/ ಒಲವಿನ ಮೇಗೆರೆಯೋ (20–3, 4)**

: ಮೇಲೆ ಎಳೆದ ಗೆರೆ– ರೇಖೆ.

*ರವೀಂದ್ರ-ಚಿತ್ರಾವಲಿಯನ್ನು ನೋಡುತ್ತ ಬೇಂದ್ರೆಯವರು ಕವಿ ರವಿಂದ್ರರು ಈಗ ಇಲ್ಲದಿದ್ದರೂ ಅವರ ಕೀರ್ತಿ ಕಣ್ಮರೆಯಾಗುವುದಿಲ್ಲ. ಅವರ ಸುಂದರ ಮೂರ್ತಿಯನ್ನು ಚಿತ್ರಕಾರ ತನ್ನ 'ನೆನಪಿನ ಹಿಮಗಿರಿ'ಯಿಂದ ಒಲವಿನ ಮೇಗೆರೆ/ರೇಖೆಯಲ್ಲಿ ಚಿತ್ರಿಸಿದ್ದಾರೆ ಎಂದು ವರ್ಣಿಸಿದ್ದಾರೆ.

* * * * * *

**ತಮಸ್ಸು**

**ಜ್ಞಾನದ ಜ್ಯೋತಿ ಜಗದ ತಮಸ್ಸಿಗೆ ಹಿಡಿದಂತಿದೆ ದೀಪ (23-2)**

: ಕತ್ತಲು; ಅಜ್ಞಾನ.

*ಚಿತ್ರದಲ್ಲಿ ರವೀಂದ್ರರ ರೂಪವನ್ನು ನೋಡುತ್ತ ಕವಿಯು ಜಗದ ತಮಸ್ಸು-ಅಜ್ಞಾನವೆಂಬ ಕತ್ತಲೆಗೆ ಹಿಡಿದ ದೀಪದಂತೆ-ಜ್ಞಾನ ಜ್ಯೋತಿ ರವೀಂದ್ರರ ರೂಪ ಬೆಳಗುತ್ತಿದೆ ಎಂದು ಉಪಮಾನಾತ್ಮಕವಾಗಿ ಚಿತ್ರಿಸಿದ್ದಾರೆ.

---

## ಓಮರ

**ಭರತಿ ಓಹಟಿ**

**ಭರತಿ ಓಹಟಿಯ, ಕ್ಷಯವ ವೃದ್ಧಿಯನು ಅರಿಯದೆನ್ನ ಹಿಗ್ಗು. (4-1)**

: ಸಮುದ್ರದ ಉಬ್ಬರ ಮತ್ತು ಇಳಿತ.

*ಸಮುದ್ರದ ಉಬ್ಬರ ಮತ್ತು ಇಳಿತವೇ ಭರತಿ ಓಹಟಿ. ಅದರಲ್ಲಿ ಕ್ಷಯ ಮತ್ತು ವೃದ್ಧಿಯಿದೆ. ತನ್ನದು ಆ ಉಬ್ಬರ ಇಳಿತವಿಲ್ಲದ ಉಕ್ತಿ, ಸ್ಥಿತಪ್ರಜ್ಞನ ಹಿಗ್ಗು ಎಂಬುದು ಉಮರ್ ಖಯ್ಯಾಮ್‌ನ ಉಕ್ತಿ.

---

## ದೈವ-ಯೋಜನೆ

**ಒಟಕರು**

**ಗಾಳಿಯೋ ಮಟಮಾಯ ಮಾತಾಡ ಮಳೆರಾಯ/ ಒಟಕರಾಗಿದೆ ಒಣಗಿ ನೀರ ಅಂಚು. (1-3, 4)**

: ಒಣಗಿರುವ ಸ್ಥಿತಿ; ಹೆಕ್ಕಳಿಕೆ.

*ಕಾಲು ಇಟ್ಟಲ್ಲಿ ಕಾದ ಹೆಂಚಿನಂತಿರುವ ಬೇಸಿಗೆಯಲ್ಲಿ ಮಳೆ ಇಲ್ಲದೆ ನೆಲ ಒಣಗಿರುವ ಸ್ಥಿತಿಯನ್ನು ಒಟಕರಾಗಿದೆ ಎಂಬ ಜನರ ನುಡಿಯಲ್ಲೆ ವರ್ಣಿಸಿದ್ದಾರೆ.

* * * * * *

### ಎಸರು

**ಉಗೆಯಿಲ್ಲ ನಗೆಯಿಲ್ಲ ಹೊಗೆಯಿಲ್ಲದೀ ನೀರು/ ಬಿಸಿಲುಗುದುರೆಯ ಹಾಗೆ ಎಸರುತಿಹುದು. (2–3, 4)**

: ಕುದಿ; ತಳಮಳಿಸು.

*ಬಿಸಿಲಿನ ಝಳದಲ್ಲಿ ಹರಿಯುವ ನೀರಿನಂತೆ ಕಾಣುವ(ಕಲ್ಪನೆಯ) ದೃಶ್ಯವೇ ಮರೀಚಿಕೆ/ ಬಿಸಿಲುಗುದುರೆ. ಅದನ್ನು ಬೇಂದ್ರೆಯವರು ಜನಪದ ಬದುಕಿನ ಹಿನ್ನೆಲೆಯ ಒಲೆಯ ಮೇಲೆ ಕುದಿಯಲು ಇಟ್ಟ ನೀರಿನ 'ಎಸರು' ಪ್ರತಿಮೆಯಲ್ಲಿ ಚಿತ್ರಿಸಿದ್ದಾರೆ.

* * * * * *

### ಬಗ್ಗರ, ಒರಲು

**ಹೃದಯ ಭೇದಕವಾದ ಬಡತನದ ಜಯಭೇರಿ/ ಬಗ್ಗರನ್ನೇರಿ ಸಾರುವದು ಒರಲಿ.(7–1, 2)**

: ಎದೆಗೂಡು.

: ಅರಚು; ಕೂಗಿಕೊಳ್ಳು.

*ಬಡತನದಲ್ಲಿ ಅನ್ನ ಆಹಾರವಿಲ್ಲದೆ ವ್ಯಕ್ತಿ ಕ್ಷೀಣನಾಗಿ ಎದೆಗೂಡಿನ ಮೂಳೆ ಮೇಲೆದ್ದು ಕಾಣುತ್ತದೆ. ಅದನ್ನು ಗ್ರಾಮೀಣರು 'ಬಗ್ಗರಿ ಮೂಳೆ ಎಣಿಸಂಗೆ ಬಿಟ್ಕಂಡಿದೆ' ಎಂದು ಹೇಳುತ್ತಾರೆ. ಬಡತನದ ಜಯಭೇರಿ ಅವನ ಎದೆಯ ಮೂಳೆಯನ್ನೇರಿ ನರಳಲು, ಅರಚಿಕೊಂಡು/ಒರಲಿ ಸಾರುತ್ತಿದೆ ಎಂದು ಭಯಾನಕ ಧ್ವನಿಯಲ್ಲಿ ಚಿತ್ರಿಸಿದ್ದಾರೆ.

---

## 'ಗಿರಡಿ–ಬುರಡೀ' ಅವರ ಸಾಮಾಜಿಕ ತತ್ತ್ವಜ್ಞಾನ

### ಗಿರಡಿ–ಬುರಡೀ, ಠಾಕು ಠೀಕು

**ಒಳಗೊಂದು, ಏನೋ ಶೂನ್ಯ, ಭುರ್ ಭುಷ್ಯಂತಿ./ ಹೊರಗೊಂದು–ಅಂದರಿನ್ನೊಂದು, ಠಾಕು ಠೀಕಿನ ಠೀವಿ. (1–1, 2)**

: ಅರ್ಥ ಹೀನ ಪೊಳ್ಳು ಮಾತಿನ ಬುರುಡೆ ಬಿಡುವ ಪುಡಾರಿಯನ್ನು ಬೇಂದ್ರೆ ಅವರು 'ಗಿರಡಿ–ಬುರಡೀ' ಎಂಬ ಜೋಡು ಪದದಲ್ಲಿ ವಿಡಂಬಿಸಿದ್ದಾರೆ.

: ಆಡಂಬರ; ಡೌಲು.

* 'ಗಿರಡಿ–ಬುರಡೀ' ಅವರ ಸಾಮಾಜಿಕ ತತ್ತ್ವಜ್ಞಾನ ಕವನವು 'ನಮ್ಮ ಹಂಡಬಂಡ ಜೀವನದ ಒಂದು ಅಭಂಡ ಚಿತ್ರ' ಎಂಬ ಕಾವ್ಯಸಂದರ್ಭ ಹೊಂದಿದೆ.

ಅಂತಹ ವ್ಯಕ್ತಿಗಳು ಒಳಗೆ ಪೂರ್ಣ ಟೊಳ್ಳು ಎಂಬುದನ್ನು ಬರಿ ಭುರ್ ಎಂದು ಶಬ್ದ ಹೊಮ್ಮಿಸುವ ಸತ್ತ್ವರಹಿತ ಮಾತಿನವರು ಎಂಬುದನ್ನು 'ಭುರ್ ಭುಷ್ಯಂತಿ' ಪದ ಧ್ವನಿಸುತ್ತದೆ. ಆದರೆ, ಅವರು ಹೊರಗೆ ಕಾಣುವುದು 'ಠಾಕು ಠೀಕಿನ ಠೀವಿ'/ಆಡಂಬರ ಉಡುಗೆ ತೊಡುಗೆಯಿಂದ.

* * * * * *

**ಕೋಡಗ**

**ಲಂಚಲಂಚನ್ನುಗಳ ನೀಡುತಿರಬೇಕು/ ಕೋಡಗರಿಗು ಕೋಡಂಗಿಗಳಿಗೂ (3–8, 9)**

: ಕಪಿ ಸ್ವಭಾವದವನು; ಚಪಲ ಬುದ್ಧಿಯುಳ್ಳವನು.

*ಕವಿಯು ಲಂಚ ಪಡೆಯುವವರನ್ನು ಕೋಡಗ, ಕೋಡಂಗಿ ಎಂದು ಕರೆದಿದ್ದಾರೆ. ಅವರಿಗೆ ಲಂಚವನ್ನು ಮತ್ತು ಉಪಹಾರ ಸೇವೆಗಳನ್ನು ಮಾಡುತ್ತಿರಬೇಕು ಎಂದು ಅವರ ಅಸಲಿ ಗುಣ ಲಕ್ಷಣಗಳನ್ನು ವಿಡಂಬಿಸಿದ್ದಾರೆ.

* * * * * *

**ಮುಂಗಾಲುಪುಟಿಗೆ**

**ಸಂತತವಾಗಿ ಉದ್ಧಟನ ಆನುದಾರತೆಯ ಕುಹಕತನದಲಿ/ ಮುಂಗಾಲುಪುಟಿಗೆಯಲಿ ಮುನ್ನುಗ್ಗುತಿರಬೇಕು (4–2, 3)**

: ಹಾರಿಕೆಯ ಮಾತು; ಜಾರಿಕೆಯ ಮಾತು; ಉಡಾಫೆಯ ಮಾತು.

*ಪುಡಾರಿಗಳ ಲಕ್ಷಣವನ್ನು ಚಿತ್ರಿಸುತ್ತ ಅವರ ಹಾರಿಕೆಯ, ಜಾರಿಕೆಯ, ಉಡಾಫೆಯ ನಡೆನುಡಿಯನ್ನು 'ಮುಂಗಾಲು ಪುಟಿಗೆ' ಪದದಲ್ಲಿ ಅಭಿವ್ಯಕ್ತಿಸಿದ್ದಾರೆ.

## ಕೃಷ್ಣಪಕ್ಷದ ಮಧ್ಯರಾತ್ರಿ

### ಖೋಡಿ

**'ಕೆಟ್ಟ ಬುದ್ಧಿಯೆ ಬಾಯಿಮುಚ್ಚು ಕೆಡಬೇಡ./ ಮಂಗಮನವೇ ವಾದಸಾಕು ಖೋಡಿ' (4–3, 4)**

: ದರಿದ್ರ; ಕುತ್ಸಿತವ್ಯಕ್ತಿ.

*ದೇವರು ಧರ್ಮ ಮುಂತಾದವುಗಳನ್ನು ಛೇಡಿಸುತ್ತ ಬೇಂದ್ರೆಯವರು 'ಕೃಷ್ಣಪಕ್ಷದ ಮಧ್ಯರಾತ್ರಿ' ಕವನವನ್ನು ಬರೆದಿದ್ದಾರೆ. ದೇವರು ಹುಟ್ಟಿ ಬರುವುದು ಮುಂತಾದ ಮಾತೆಲ್ಲ ಬರಿ ಕಥೆ. ಅದೊಂದು ಕೆಟ್ಟ ಬುದ್ಧಿಯ ಮಾತುಗಾರಿಕೆ. ಅದು ಬಾಯಿ ತೆಗೆದು ಕೆಡುವುದು ಬೇಡ. ಮಂಗ ಮನದ ಖೋಡಿ/ಕುತ್ಸಿತ ವ್ಯಕ್ತಿ ನಿನ್ನ ವಾದ ಸಾಕು, ನಿಲ್ಲಿಸು ಎಂದು ಹೇಳಿದ್ದಾರೆ.

---

## ನಮ್ಮ ಬಾಳು ತೋರಿಕೆ

### ಬೆಡಗು

**ಹೊಸಬಾಳಿನ ಬೆಡಗು ಸಾಕು/ ಬೆಳಕು ಬೇಕು ಹಾಡಿಗೆ (5–3, 4)**

: ಥಳುಕು; ಹೊರಮಿಂಚು.

*ನಮ್ಮ ಜೀವನ ಸಂಗೀತಕ್ಕೆ ಜ್ಞಾನದ ಬೆಳಕು ಬೇಕು. ಇದು ಅವಶ್ಯ. ಆದರೆ, ಹೊಸ ಜೀವನ ಶೈಲಿ ಎಂದು Fashionನ ಥಳಕು ಸಾಕು.

* * * * * *

### ಕಸುಗಾಯಿ, ಪಾಡು

**ನಿನ್ನಿನದು ಕಸುಗಾಯಿ/ ಇಂದಿನದು ತುಸು ಪಾಡು/ ನಾಳೆ ಹಣ್ಣಾದಾಗ ಬಂದೀತು ಹಾಡು. (10–1, 2, 3)**

: ಬಲಿಯದಿರುವ  ಕಾಯಿ; ಎಳಸಾದ ಕಾಯಿ; ಒಗರು ಕಾಯಿ; ಹೀಚುಕಾಯಿ.

: ಹಣ್ಣಿಗೆ ಬರುತ್ತಿರುವ ಕಾಯಿ; ಪಕ್ವವಾಗುತ್ತಿರುವ ಕಾಲ.

* ದಿನದಿನವು ಉತ್ತಮಿಕೆಯತ್ತ ಸಾಗುತ್ತ ಜೀವಿ ಪಕ್ವವಾಗಬೇಕು ಎಂಬ ಚಿಂತನೆ ಈ ಕವಿತೆಯಲ್ಲಿ ಮಡುಗಟ್ಟಿದೆ.

---

## ಸದ್ದು

**ದುರುಗುಮುರುಗಿ**

**ಹಾವಾಡಿಗರು, ಗೊಂದಲಿಗರು, ಡೊಂಬರು, ದುರುಗುಮುರುಗಿಗಳು (4–3)**

* ಇವರು ದುರ್ಗಾದೇವತೆಯ ಅಥವಾ ಮಾರಮ್ಮನ ಉಪಾಸಕರಲ್ಲಿ ಒಂದು ಬಗೆ. ಇವರು ದಪ್ಪವಾಗಿರುವ ಹಿಡಿಯುಳ್ಳ ಮತ್ತು ಸಣ್ಣತುದಿಯುಳ್ಳ ಒಂದು ಬಗೆಯ ಚಾವಟಿಯಿಂದ ತಮ್ಮ ತೋಳುಗಳನ್ನು ಸುತ್ತುವಂತೆ ದೇಹಕ್ಕೆ ಹೊಡೆದುಕೊಳ್ಳುತ್ತಾರೆ.

---

## ಕಥೆಯಾದಳು–ಹುಡುಗಿ

**ಭಣಿತ**

**ಕಣ್ಣುಣಿತಕೆ ನಗೆ ಭಣಿತಕೆ/ ಮನೆ ಹೋಯಿತು ನಡುಗಿ. (3–4, 5)**

: ಹೇಳಿಕೆ; ಮಾತು; ವಚನ.

*ಹೆಣ್ಣು ಮಗು ಬೆಳೆದು 'ಹೂ ಬಿಟ್ಟಳು ಹುಡುಗಿ' ಎಂಬಂತೆ ಮನೆಯಲ್ಲಿ ಕಂಪಿನಂತೆ ಓಡಾಡುತ್ತಾಳೆ. ಅವಳ ಕಣ್ಣುಣಿತ ನಗೆಮಾತಿನ ಲಹರಿಗೆ ಮನೆ ಉತ್ಸಾಹದಲ್ಲಿ ನಡುಗಿ ನಲಿಯುತ್ತದೆ.

---

## ಇವನೊಬ್ಬ ಬೈರಾಗಿ

**ಮಾಕಾಲ, ಕುತ್ತುಸುರು**

**ನಮ್ಮ ನೆತ್ತಿಗಳ/ ನ್ಯೊತ್ತಿ ಹಿಚುಕುತ್ತಿರಲು ಮಾಕಾಲ ಬಂದು/ ಕುತ್ತುಸುರನಾಡಿಸುವೆ–ವಜ್ಜರ್ಲೇಕೆಂದು (3–2, 3, 4)**

: ಶಿವನ ಹೆಸರುಗಳಲ್ಲಿ ಒಂದು, ಮಾಕಾಲ(ಮಹಾಕಾಳ)ನು ಶಿವನ ಪ್ರಮಥಗಣಗಳಲ್ಲಿ ಒಬ್ಬ.

: ಮೇಲುಸಿರು; ಏದುಸಿರು.

*ವಿರಕ್ತಿಯ ಸಾಧನೆಯ ನಿರರ್ಥಕತೆಯನ್ನು ಇಲ್ಲಿ ಬೇಂದ್ರೆ ವಿವರಿಸಿದ್ದಾರೆ.

---

## ೧೪. ನಮನ (೧೯೫೮)

## ಸೌಭಾಗ್ಯದರ್ಶನ

**ಮೀನಪಿಲ್ಲೆ**

**ಸುತ್ತು ಕಾಲುಂಗುರವು, ಮೀನಪಿಲ್ಲೆ/ ಹಸಿರು ಕಂಕಣ, ಕಣ್ಣ ಕಾಡಿಗೆಯ ನಲ್ಲೆ/ ಮುಡಿದ ಹೂವಿಗು ಮಿಗಿಲು ನುಡಿಯ ಹೂವು/ ತುಟಿ ನಗೆಯೊಳಗಿರುವ ಮಲ್ಲಿಗೆಯು ಮಾವು (ಸಾಲು: 113–116)**

: ಮೀನಿನ ಆಕಾರದ, ಕಾಲುಂಗುರದಂತಹ ಒಂದು ಆಭರಣ.

*ಬೇಂದ್ರೆ ಅವರು ಸೌಭಾಗ್ಯಲಕ್ಷ್ಮಿ ಗೃಹಿಣಿಯ ಲಕ್ಷಣಗಳನ್ನು ವರ್ಣಿಸುತ್ತ ಅವಳ ಸದಾ ಚಲನಶೀಲ ಎಚ್ಚರದ ಲಕ್ಷಣವನ್ನು 'ಮೀನಪಿಲ್ಲೆ'ಯಲ್ಲಿ ಧ್ವನಿಸಿದ್ದಾರೆ. ಅವಳಮಾತು ಮತ್ತು ನಗೆಯ ಕಂಪು ಮಲ್ಲಿಗೆಯಾದರೆ ಅದರ 'ಸವಿ'ಯನ್ನು ಮಾವು ಧ್ವನಿಸುತ್ತದೆ. ಇದೊಂದು ಸುಮಧುರ ಲಕ್ಷಣದ ಭಾರತೀಯ ಗೃಹಿಣಿಯ ನುಡಿಚಿತ್ರವಾಗಿದೆ.

---

## ಕೋಗಿಲೆಗೆ

**ಪಾಲಾಬಿಡು, ಒಡನುಡಿ**

**ಎಷ್ಟೇ ಅಷ್ಟೇ ಪಾಲಾ ಬಿಟ್ಟ್ಯಾ? ಒಡನುಡಿಯೇ ಸಾಕು. (5–1)**

: ಪಾಲಾಪೂ ಬಿಡು; ಜೊತೆಬಿಡು; ಠೂಬಿಡು; ಸಂಗಬಿಡು(ಮರಾ–ಪಾಲವ=ಸಂಬಂಧ)

: ಸ್ಪಷ್ಟವಾದ ಮಾತು; ಬಿಚ್ಚುನುಡಿ.

* 'ಕೋಗಿಲೆಗೆ' ಕವನದ ಭಾವಸಂದರ್ಭ: 'ಕೂಗುವ ಕೋಗಿಲೆ ಯಾವಾಗಲೂ ಗಂಡು. ಆದರೆ ಒಕ್ಕಲು ಮಗಳ ಅಕ್ಕರೆಯಲ್ಲಿ ಅದು ಹೆಣ್ಣು, ಗೆಳತಿ.'

ಒಕ್ಕಲು ಮಗಳು ವಸಂತಕಾಲದಲ್ಲಿ ಬಂದು ಕೂಗುವ ಗೆಳತಿ ಕೋಗಿಲೆಯೊಡನೆ ನಡೆಸಿದ ಮಧುರಸಂವಾದವೇ ಈ ಕವನ. ಕೋಗಿಲೆ ಅವಳಿಗೆ 'ಮಿದು ಮಾಟಗಾರ್ತಿ'. ಅವಳು ಹಲವು ಮಾಸಗಳು ಕಾಣದಿರಲು ಒಕ್ಕಲ ಮಗಳು ಚಡಪಡಿಸಿದ್ದಾಳೆ. ಬಾಲ್ಯದ ಗೆಳತಿಯರ ಠೂ ಬಿಡುವ ಆಟ ನೆನಪಾಗಿ 'ಎಷ್ಟೇ ಅಷ್ಟೇ ಪಾಲಾ ಬಿಟ್ಟ್ಯಾ?' ಎಂದು ಪ್ರಶ್ನಿಸಿ, 'ಒಡನುಡಿಯೇ'– ಬಿಚ್ಚು ಮಾತಾಡೇ ಅಷ್ಟೇ ಸಾಕು ಎಂದು ನೇಹದೊಲ್ಮೆಯಲ್ಲಿ ಕೇಳುತ್ತಿದ್ದಾಳೆ.

* * * * * *

**ಕೋರಿಹುಳ**

**ಕೋರಿಹುಳದಿಂ ಪಾತರಗಿತ್ತಿಯು ಕುಣಿಯುತ ಬರುವಂತೆ/ ಮಾಗಿಯ ಬೆನ್ನನ್ನು ಬಿರಿಯುತ ಬಂದಿತು. ಸುಗ್ಗಿಯು ಅದರಂತೆ! (40–1, 2)**

: ಕಂಬಳಿಯಂತಹ ರೋಮಗಳಿಂದ ತುಂಬಿದ ಮೈಯುಳ್ಳ, ಒಂದು ಬಗೆಯ ಚಿಟ್ಟೆಯ ಮರಿಹುಳು; ಕಂಬಳಿಹುಳು.

*ಈ ಮೇಲಿನ ಸಾಲುಗಳಲ್ಲಿ ಕವಿಯು ಕೋರಿಹುಳದಲ್ಲಿ ಸುಂದರ ಪಾತರಗಿತ್ತಿ ಮತ್ತು ಮಾಗಿಯಲ್ಲಿ ಮಧುಮಾಸದ ಸುಗ್ಗಿ ಅವಿತು ಕುಳಿತಿರುವ ಅಪೂರ್ವ ಚಿತ್ರಣವನ್ನು ನೀಡಿದ್ದಾರೆ. ಅವುಗಳನ್ನು ಬಿರಿದು ಹೊಮ್ಮಿ ಬರುವ ಆಕರ್ಷಣೀಯ ಚಿಟ್ಟೆ ಮತ್ತು ಸೊಬಗಸಿರಿ ಸುಗ್ಗಿಯನ್ನು ಕಾಣುವುದೇ ಸಹೃದಯನ ಉಲ್ಲಾಸ.

---

## ಒಂದೆ ತಾಯಿಯ ಮಕ್ಕಳು

**ಪ್ರಾಜ್ಯ**

**ಪ್ರಾಜ್ಯ ಸಾಮ್ರಾಜ್ಯಂಗಳು! (12–2)**

: 1. ಬಹಳವಾದ; ಅತಿಶಯವಾದ.

2. ಉತ್ತಮವಾದ; ಶ್ರೇಷ್ಠವಾದ.

---

## ‘ತತಃಕಿಂ?’

**ತತಃಕಿಂ**

: ಅದು ಏನು ?

**ಗುಮ್ಮನಗುಸುಕ**

**ಸುಮ್ಮನಿರುವರೋ ಗುಮ್ಮನಗುಸುಕರು (5–1)**

*ತನ್ನ ಒಳಗಿನ ಭಾವವನ್ನು ತೋರ್ಪಡಿಸದೆ ಯಾರೊಂದಿಗೂ ಬೆರೆಯದಿರುವವನು; ಒಂಟಿಯಾಗಿರುವವನು.

---

## ಓ ಆಷಾಢಾ

### ಹುಲುಗಲ, ಗಿಲಗಂಚೀಕಾಯಿ, ಹೂರಣ

**ಹುಲುಗಲದ್ಹಾಂಗs ಗಿಲೀಗಿಲೀ ಅಂತ್ಯಾವ। ಗಿಲಗಂಚೀಕಾಯಿs/ ಹೊಟ್ಟಿಯೊಳಗs ಹೂರಣೆಲ್ಲ್ಯಾ। ಬಿಡತಾವ್ಯೋs ಬಾಯಿs (1–1, 2)**

: ಹುಲುಗಿಲು; ಹೊಂಗೆಮರ; ತಮಾಲವೃಕ್ಷ.

: 1.(ಉ.ಕ) ಒಂದು ಬಗೆಯ ಭಕ್ಷ್ಯ; ಕರ್ಜಿಕಾಯಿ.

2.ಗಿಲಕು ಮರ.

3. ಗಿಲಿಗಿಲಿ ಎಂದು ಸದ್ದು ಮಾಡುವ ಒಂದು ಬಗೆಯ ಮಕ್ಕಳ ಆಟಿಕೆ; ಗಿಲಕಿ.

: ಕಡುಬು, ಹೋಳಿಗೆ ಮೊದಲಾದವುಗಳಲ್ಲಿ ತುಂಬುವ ಹುದುಗಲು.

*ಆಷಾಢದಲ್ಲಿ ಹೊಂಗೆಮರದ ಹೊಂಗೆಕಾಯಿಯ ಒಳಗಿನ ಬೀಜ ಒಣಗಿ ಅದು ಗಿಲೀಗಿಲೀ ಎಂದು ಶಬ್ದಮಾಡುತ್ತದೆ. ಅದೇ ಕಾಲದಲ್ಲಿ 'ಮೊದಲ ಬಿತ್ತಿಗೆ ಮೊಳಕೆ ಹೊಡೆದು ಗೋಣು ಚೆಲ್ಲಿರುವ' ಬೀಜವು ಉಳಿದು ಬೆಳೆಯಲು ರೈತನು ಮಳೆಗಾಗಿ ಆಷಾಢದ ಮೋಡವನ್ನು ನೋಡುತ್ತಿರುತ್ತಾನೆ. ರೈತ ಮತ್ತು ಇಡೀ ಪ್ರಕೃತಿ ಮಳೆಗಾಗಿ ಬಾಯಿಬಿಟ್ಟು ಕಾಯುತ್ತಿರುತ್ತದೆ. ಸಾಕಷ್ಟು 'ಹೊಟ್ಟೆಯೊಳಗೆ ಹೂರಣ ಇಲ್ಲದೆ' ಕರ್ಜಿಕಾಯಿ ಗಿಲೀ ಗಿಲೀ ಎಂದು ಶಬ್ದ ಮಾಡುತ್ತದೆ.

**'ನರಗಳ ನೂಲಿನ/ ಪರೆ ಪರೆ ಚೀಲಾ/ ತೆರೆ ತೆರೆಯಾಗಿದೆ/ ಜಿರಿಜಿರಿಯಾಗಿದೆ/ ಅದರೊಳಗೊಂದು/ ಎಲುವಿನ ಬಲೆಯು!'**(ನಾದಲೀಲೆ: ಭೂಮಿತಾಯಿಯ ಚೊಚ್ಚಿಲ ಮಗ) ಸ್ಥಿತಿಯ ರೈತನ ಹೊಟ್ಟೆಯೊಳಗೂ ಸಾಕಷ್ಟು ಹೂರಣ ಇಲ್ಲ. ಹಾಗಾಗಿ ಅವನ ಚಡಪಡಿಕೆ ಗಿಲಿಗಂಚೀ ಕಾಯಿಯ ರೀತಿಯದ್ದಾಗಿದೆ ಎಂದು ಕವಿ ರೂಪಾಕಾತ್ಮಕವಾಗಿ ಅವನ ದಾರುಣತೆಯನ್ನು ಚಿತ್ರಿಸಿದ್ದಾರೆ.

* * * * * *

### ಮಣ್ಣೆತ್ತು

**ಮೊದಲ ಬಿತ್ತಿಗೀ ಮೊಳಕೀ ಒಡೆದು ಗೋಣು ಚೆಲ್ಲ್ಯಾವ/ ತೂಕಾ ತಪ್ಪಿದ ಮೂಕ ಪ್ರಾರ್ಥನೀ ಮುಗಿಲಿಗೆ ಸಲ್ಲ್ಯಾವ/ ಎಲ್ಲ್ಯಾವ ಎಲ್ಲ್ಯಾವ ಮೋಡಾ/ ಮಣ್ಣೆತ್ತೂನೂ ನೀರಡಿಸ್ಯಾವ್ಯಾ/ ಒಕ್ಕಲಿಗ್ಯಾನ ಕಣ್ ಬಿಡಿಸ್ಯಾವ್ಯs ಓ ಆಷಾಢ। (2–1 ರಿಂದ 5)**

* 'ಮೊದಲ ಬಿತ್ತಿಗೇ ಮೊಳಕೀ ಒಡೆದು ಗೋಣು ಚೆಲ್ಲಿದ' ಬೀಜ ಹಕ್ಕಿಳಿ ಎಬ್ಬಿಸಿಕೊಂಡು ನಿಂತಿರುತ್ತವೆ. ಹಾಗೆ ಮಡಿಲೊತ್ತಿಕೊಂಡು ನಿಂತಾಗ ಅಲ್ಲಿ ಮೊಳಕೆ ಕಾಣಿಸುತ್ತದೆ.

ಅದು ಮಳೆ ನೀರಿಗೆ ಕಾಯುತ್ತಿರುತ್ತದೆ. ಸ್ವಲ್ಪ ಮಳೆ ಆದರೂ ಹಕ್ಕಳಿ ನೆನೆದು ಕರಗಿ ಹೋಗುತ್ತದೆ. ಮೊಳಕೆಗೆ ಉಟಾವ್ ಸಿಗುತ್ತದೆ; ಬೆಳೆ ಬಾಳುತ್ತದೆ.

ರೈತರು ಮಳೆಗಾಗಿ ಪ್ರಾರ್ಥಿಸುತ್ತಾ ಆಷಾಢದಲ್ಲಿ ಮಣ್ಣಿನ ಪೂಜೆಯನ್ನು ಮಾಡುತ್ತಾರೆ. ಜೇಷ್ಠ ಬಹುಳ ಅಮಾವಾಸ್ಯೆಯನ್ನು ಮಣ್ಣೆತ್ತಿನ ಅಮಾವಾಸ್ಯೆ ಎಂದು ಕರೆಯುತ್ತಾರೆ. ಅಂದು ಮಣ್ಣಿನ ಜೋಡಿ ಎತ್ತುಗಳನ್ನು ತಯಾರಿಸಿ ರೈತರು ಪೂಜೆ ಮಾಡುತ್ತಾರೆ. ಮಣ್ಣೆತ್ತನ್ನು ಪೂಜಿಸುವಾಗ ತೀವ್ರ ಮಳೆಯ ಅಭಾವವಿರುವುದನ್ನು ಕವಿ 'ಮಣ್ಣೆತ್ತೂನೂ ನೀರಡಿಸ್ಯಾವ' ಎಂದು ಧ್ವನಿಪೂರ್ಣವಾಗಿ ಚಿತ್ರಿಸಿದ್ದಾರೆ.

ಮಳೆ ಬೀಳುವುದು ಅನಿಶ್ಚಿತವಾಗಿರುತ್ತದೆ. ಆಗ ಮಳೆಗಾಗಿ ಕಾದ ರೈತ ಚಡಪಡಿಸುತ್ತಿರುತ್ತಾನೆ. ಆ ಚಿಂತೆ ಅವನನ್ನು ಕಣ್‌ಕಣ್ ಬಿಡುವಂತೆ ಮಾಡುತ್ತದೆ. ಅದನ್ನು ಕವಿ 'ಒಕ್ಕಲಿಗ್ಯನ ಕಣ್ ಬಿಡಿಸ್ಯಾವ ಓ ಆಷಾಢ' ಎಂದು ಪ್ರತಿಮಾತ್ಮಕವಾಗಿ ವರ್ಣಿಸಿದ್ದಾರೆ.

ಅಕಸ್ಮಾತ್ತಾಗಿ ಆ ಸಮಯಕ್ಕೆ ಆಷಾಢದ ಮಳೆ ಬಾರದೆ ಇದ್ದರೆ ಬೀಜ ಸತ್ತು ಹೋಗುತ್ತದೆ. ಹಾಗಾಗಿ ಹುಸಿಹೋದ ಆಷಾಢಮಾಸವನ್ನು ರೈತ 'ಓ ಆಷಾಢಾ ಆಷಾಢಾ। ತಡಮಾಡಬ್ಯಾಡಾ' ಎಂದು ಅಲ್ಪರಿಯುತ್ತಾನೆ (ಗೋಳಾಡು; ಶೋಕಿಸು).

* * * * * *

## ಮೃಗಾ

**ಮೃಗಾ ಆತು ಮೃಗಜಲಾ। ಹೊಲಾ ಆತು ಬರಿ ನೆಲಾ (5–1)**

: ಮೃಗಶಿರ; ಮೃಗಾ ನಕ್ಷತ್ರ; ಇಪ್ಪತ್ತೇಳು ನಕ್ಷತ್ರಗಳಲ್ಲಿ ಐದನೆಯದು ಮತ್ತು ಈ ನಕ್ಷತ್ರದಲ್ಲಿ ಬರುವ ಮಳೆ.

* ಕವನದ ಭಾವ ಸಂದರ್ಭ:'ಹುಸಿ ಹೋದ ಆಷಾಢ ಮಾಸವನ್ನು ಕುರಿತು ಅಂಗಲಾಚಿ ಬೇಡಿಕೊಂಡು ಮೃಗಾ ನಕ್ಷತ್ರದ ಮಳೆಗಾಗಿ ತಪಿಸುವ ಜೀವಲೋಕದ ವಿಹ್ವಲತೆಯನ್ನು ಬಣ್ಣಿಸಲಾಗಿದೆ'. ಆಷಾಢದಲ್ಲಿ ಬೀಳುವ ಮೃಗಶಿರ ಮಳೆಯನ್ನು, ನಿರೀಕ್ಷಿಸುತ್ತ ರೈತರು 'ಮೃಗಾಕೂಡ್ತು', 'ಮಿರುಗನ ಮಳಿಕೂಡ್ತು' ಎಂದು ಹೇಳುತ್ತಾರೆ. ಆ ಮೃಗಾ ಮಳೆಯು ಭ್ರಮೆ ಹುಟ್ಟಿಸಿ ಬೀಳದೆ ಇರುವುದನ್ನು ಬೇಂದ್ರೆ ಅವರು 'ಮೃಗಜಲಾ ಆತು' ಎಂದು ಧ್ವನಿಪೂರ್ಣವಾಗಿ ಬಣ್ಣಿಸಿದ್ದಾರೆ. ಆ ಮರೀಚಿಕೆಯಲ್ಲಿ ರೈತ ಕಂಗಾಲಾಗಿ ಹೋಗುತ್ತಾನೆ. ಆಗ 'ಹೊಲಾ ಆತು ಬರಿ ನೆಲಾ'.

ಹಾಗೆ ಆಗದಿರಲಿ ಎಂದು ರೈತ ಆಷಾಢನನ್ನು ಪ್ರಾರ್ಥಿಸುವ ಆಶಾಭಾವನೆಯ ಧನಾತ್ಮಕ ಚಿಂತನೆ ಬೇಂದ್ರೆಯವರದು. ಅವರು ಆಷಾಢನನ್ನು ಪ್ರಾರ್ಥಿಸಿದ್ದಾರೆ: 'ಏಳುವ ಬೆಳೀ ಬಾಳುವಿಗಾಗಿ/ ಕತ್ತ ಎತ್ತಿರಲಿ. ಓ ಆಷಾಢ'.

## ಅಳಿಯಾನ ಪತ್ರ ಬಂತು

**ಘಳಿಸಾಳಿ, ಮಜಕೂರು**

**ಅಳಿಯಾನ ಪತ್ರ ಬಂತು ಗೆಳೆಯಾನ ಅಕ್ಷರದಾಗ/ ಘಳಿಸಾಳಿ ಇಲ್ಲದ್ಯಾನ ಜೋರಾ॥ (1–1, 2)**

*                    *

ಹಣದ ಅಂಕಿ ಮತ್ತ ತೀಡಿ ತೀಡಿ ಮೂಡಸ್ಯಾನ/ ಸಹೀನ ಎಲ್ಲಾ ಮಜಕೂರಾ.(5–1,2)

: ಗಳಿಸುವ ವ್ಯಕ್ತಿ; ಸಂಪಾದಿಸುವ ವ್ಯಕ್ತಿ.

: ಕಾಗದ ಪತ್ರ ಮೊದಲಾದವುಗಳಲ್ಲಿ ಬರೆಯುವ ಅಥವಾ ಬಾಯಿಯಲ್ಲಿ ಹೇಳುವ ವಿಷಯ; ಸಮಾಚಾರ; ಸುದ್ದಿ(ಮರಾ: ಮಜಕೂರ್, ಮಜ್ಕೂರ್)

*ಇದೊಂದು ಉಪಹಾಸಿಕ ಕವನ. ಇದರಲ್ಲಿ ಹಣದ ಬೇಡಿಕೆಯನ್ನು ತನ್ನ ಗೆಳೆಯನ ಕೈಲಿ ಪತ್ರ ಬರೆಸಿದ ಅಳಿಯನ ಚಿತ್ರವಿದೆ.

ಆ ಅಳಿಯ ಘಳಿಸಾಲಿ–ಸಂಪಾದನೆ ಇಲ್ಲದವನು. ಆ ಅಳಿಯನಿಗೆ ಎಲ್ಲಕ್ಕಿಂತ ಮುಖ್ಯವಾಗಿ ಬೇಕಾದ್ದು ಹಣ. ಅದನ್ನು ಬೇಂದ್ರೆ ಅವರು 'ಹಣದ ಅಂಕಿ ಮತ್ತ ತೀಡಿ ತೀಡಿ ಮೂಡಸ್ಯಾನ' ಎಂದು ಭೇಡಿಸಿದ್ದಾರೆ.

---

## ಸಸಾರ ಅಲ್ಲವೊ ಸಂಸಾರ

**ಸಸಾರ**

**ಸಸಾರ ಅಲ್ಲವೊ ಸಂಸಾರ/ ಅದು ನಿಃಸಾರವು ಅಲ್ಲ ಪೂರಾ/ ಇದ ತಿಳಿದೂ ಬಾಳುವವ ಧೀರಾ (1–1, 2, 3)**

: ಸುಲಭ; ಸಲೀಸು.

*ಸಸಾರ ಪದ ಬಳಸುತ್ತ ಸಂಸಾರದಲ್ಲಿ ಸಾರವಿದೆ, ನಿಸ್ಸಾರವಲ್ಲ ಎಂಬುದನ್ನು ಅಭಿವ್ಯಕ್ತಿಸಿದ್ದಾರೆ.

***

**ಅಪಾರ ಸಂಸಾರದಾಗ ಸಸಾರ ಅಲ್ಲೋ ತಮ್ಮ ಭವದ ಅಂತಪಾರ!(ಜೀವಲಹರಿ: ಕಗ್ಗ)**

---

## ಕೀಟ್ಸ್ (ಪ್ರಣಯೋಕ್ತಿ)

**ಗರ್ಕಾಗು**

**ಬರಿ ಮೂರು ದಿನದ ಹಳೆ ಮುರುಕದಲ್ಲಿ ಗರ್ಕಾದ ಹುಸಿಯ ಬೆಡಗಿ (3–1)**

: ಮಗ್ನವಾಗು; ತಲ್ಲೀನವಾಗು.

---

## ಸ್ವಯಂಪ್ರಭೆ

**ಪಂಜೆ**

**ಸಂಗೀತದಲ್ಲಿ ಸೌಂದರ್ಯ ಕಾಣೆ, ಅದು ಜಾಳು ನೇಯ್ಗೆ ಪಂಜೆ (ಸಾಲು: 1–3)**

: ಪಂಚೆ; ಗಂಡಸರು ಉಡುವ ಹಾಗೂ ಹೊದೆಯುವ ಬಟ್ಟೆ.

*ವಿರಹ ವೇದನೆಗೆ ಒಳಗಾದ ಸ್ವಯಂಪ್ರಭೆಗೆ ಸಂಗೀತ 'ಜಾಳು ನೇಯ್ಗೆ ಪಂಜೆ'ಯಾಗಿತ್ತು ಎಂದು ರೂಪಕಾತ್ಮಕಾಗಿ ಕವಿ ಚಿತ್ರಿಸಿದ್ದಾರೆ.

*        *        *        *        *        *

**ಚೂಪು, ಸರಿಸಪಾಟು, ಚಿತ್ತು ಕಾಟು**

**ರೂಪದಲ್ಲಿ ಇರಲಿಲ್ಲ ಚೂಪು ಆಗಿತ್ತು ಸರಿಸಪಾಟು/ ಬಣ್ಣದಲ್ಲು ಕೊರದಿಲ್ಲ ಕಣ್ಣು ಇತ್ತಲ್ಲಿ ಚಿತ್ತು ಕಾಟು. (2–1, 2)**

: 1. ಕಣ್ಣು; ನೇತ್ರ.

2. ನೋಟ; ಕಾಣ್ಕೆ; ದೃಶ್ಯ.

3. ಹರಿತವಾದ.

: ಮಟ್ಟಸವಾದ; ಚಪ್ಪಟೆಯಾದ.

: ಬರೆದುದನ್ನು ಹೊಡೆದುಹಾಕುವುದಕ್ಕಾಗಿ ಮಾಡಿದ ರೇಖೆ ಮೊದಲಾದವುಗಳ ಚಿಹ್ನೆ.

*ಲಲಿತಾಂಗನ ಆಯುಷ್ಯ ಮುಗಿದು ಹೋದಮೇಲೆ ಸ್ವಯಂಪ್ರಭೆ ವಿರಹ ವೇದನೆಗೆ ಒಳಗಾಗುತ್ತಾಳೆ. ಆಗ ಅವಳ 'ರೂಪದಲ್ಲಿ ಇರಲಿಲ್ಲ ಚೂಪು'. ('ಚೂಪು' ಪದ ತನ್ನಲ್ಲಿ 'ನೋಟ' ಎಂಬ ಅರ್ಥವನ್ನು ಹೊಂದಿದ್ದು ಆ ನೋಟದಲ್ಲಿಯ 'ಹರಿತ'–ಚಲನೆ ರಭಸ, ತೀವ್ರತೆಯನ್ನು ಧ್ವನಿಸುತ್ತದೆ). ಆ ಯಾವ ಚೂಪು ಅವಳ ಕಣ್ಣಿನಲ್ಲಿ ಇರಲಿಲ್ಲ. ಅವಳ

ಆಕಾರ 'ಆಗಿತ್ತು ಸರಿಸಪಾಟು'. ಸರಿಸಪಾಟು ಪದ ಅವಳ ರೂಪುರಹಿತ ಸ್ಥಿತಿಯನ್ನು ವ್ಯಂಗ್ಯಾತ್ಮಕವಾಗಿ ಅಭಿವ್ಯಕ್ತಿಸಿದೆ. 'ಸರಿಸಪಾಟು' ಪದದಲ್ಲಿಯ 'ಸರಿ' ಕಳೆದುಹೋಗು; ನಷ್ಟವಾಗು ಎಂಬ ಅರ್ಥವನ್ನು ಹುದುಗಿಸಿಕೊಂಡಿದೆ.

ಲಲಿತಾಂಗನೊಡನೆ ಸಂಭೋಗ ಶೃಂಗಾರದಲ್ಲಿದ್ದಾಗ ಅವಳ ಕಣ್ಣು ಹೊಳಪಿನಿಂದ ಬಣ್ಣಗೊಂಡು ಬರೆಹದಲ್ಲಿ- ಅಕ್ಷರವಾಗಿ ಪ್ರಕಟಗೊಂಡಿತ್ತು. ಅದು ವಿಪ್ರಲಂಭ ಶೃಂಗಾರದಲ್ಲಿ 'ಚಿತ್ತು ಕಾಟು' ಆಗಿದೆ ಎಂದು ಬೇಂದ್ರೆ ಪ್ರತಿಮಾತ್ಮಕವಾಗಿ ಬಣ್ಣಿಸಿದ್ದಾರೆ.

---

## ಬರುವರು ಬರುವರು

### ಗರುವ

**ಅವರು ನಮ್ಮ ಗರುವರು/ ನಾಡ ನೊಗವ ಹೊರುವರು (3-22, 23)**

: ಶ್ರೇಷ್ಠ, ಗೌರವಕ್ಕೆ ಪಾತ್ರನಾದವನು; ಹಿರಿಯ; ದೊಡ್ಡವನು.

*ಹುತಾತ್ಮರಾದ ಸ್ವಾತಂತ್ರ್ಯ ವೀರರ ನೆನವಿನಿಂದ ಜೀವನದ ಆದರ್ಶಗಳು ಉಜ್ಜ್ವಲಿತವಾಗಬೇಕು. ಆದರೆ, ವೈರ ಪ್ರಜ್ವಲಿತವಾಗಬಾರದು.

---

## ಇದು ಸ್ವಾತಂತ್ರ್ಯವೋ?

### ಪ್ರಾಲೇಯ, ಗರ್ವ, ವಿಗುರ್ವಿಸು

**ಆ ಲಯವೊ ಯಾ ಲಯವೊ, ಪ್ರಾಲೇಯ ಪರ್ವತದ/ ಗರ್ವವೆ ವಿಗುರ್ವಿಸುವ ಘನ ಹಿಮಾಲಯವೋ (ಸಾಲು: 4-1, 2)**

: ಹಿಮ; ಮಂಜು.

: ಜಂಭ, ಹೆಮ್ಮೆ.

: ಮೆರೆ; ಪ್ರದರ್ಶಿಸು.

*ಸ್ವಾತಂತ್ರ್ಯವೆಂಬುದು ಭಾರತೀಯರ ಗರ್ವ-ಹೆಮ್ಮೆಯನ್ನು ಪ್ರದರ್ಶಿಸುವ ಹಿಮಾಲಯ ಎಂದು ರೂಪಕಾತ್ಮಕವಾಗಿ ಬಣ್ಣಿಸಿದ್ದಾರೆ.

---

## ತವಕ

**ತಬಕ, ಸ್ತಬಕ, ತವಕ**

**ಎದೆಯ ತಬಕದಲಿ/ ಸುಮನಸ್ತಬಕ/ ಎತ್ತಿದೆ ಉಜ್ವಲ ಜ್ವಾಲೆ/ ತಕಪಕ ತಕಪಕ/ ಕುಣಿವುದು ತವಕ/ ಮೇಲಿದೆ ಕರುಣಾಮಾಲೆ. (4–1 ರಿಂದ 6)**

: ತಾಂಬೂಲ, ಪೂಜೆಯ ಸಾಮಾನು ಮೊದಲಾದವುಗಳನ್ನು ಇಡಲು ಉಪಯೋಗಿಸುವ, ಚಿತ್ರಕೆಲಸದ ಲೋಹದ ತಟ್ಟೆ.(ಅರ.ಹಿಂ.ಮರಾ.ತಬಕ್)

: ಹೂವು ಮೊದಲಾದವುಗಳ ಗೊಂಚಲು,– ಗುಚ್ಛ

: (ಅತಿಯಾದ) ಬಯಕೆ, ಆತುರ, ಉತ್ಸುಕತೆ.

*ಭಕ್ತನು ಉತ್ಸುಕತೆಯಿಂದ ತನ್ನ ಎದೆಯೆಂಬ ಮಂಗಳಾರತಿ ತಟ್ಟೆಯ ಜ್ಯೋತಿ ಮತ್ತು ಮನಸ್ಸೆಂಬ ಹೂ ಗೊಂಚಲ ಕಂಪಿನಲ್ಲಿ ಒಂದಾಗಿ ಕುಣಿಯುವಾಗ– ಅನಂತಶಕ್ತನ ಕರುಣಾಮಾಲೆ ಅವನ ಮೇಲಿರುತ್ತದೆಂಬ ಆಶಯ ಕವಿಯದಾಗಿದೆ.

---

## ಇದು ವಾರ್ಷಿಕ ವರದಿ

**ಉಪರಾಟಿ**

**ಕಟ್ಟಿದ್ದನೆ ಒಡೆಯುವರು/ ಓಡಿಸುವರು ಹಿಡಿಯುವರು/ 'ಭೂ' ಬಿಡುವರು, 'ಥೂ' ಎನುವರು/ ಇದು ಜೀವದ ಬ್ಯಾಟಿ/ ನಡೆದಿದೆ ಉಪರಾಟಿ. (2–1 ರಿಂದ 5)**

: (ಉ.ಕ) ಅಸ್ತವ್ಯಸ್ತ; ತಿರುವುಮುರುವು (ಮರಾ. ಉಪರಾಟಾ,ಉರಫಾಟಾ)

*ಇಂದಿನ ಆಳುವವರ ವರ್ತನೆಯನ್ನು ಕಂಡು ನೊಂದು ಮೇಲಿನಂತೆ ಕವಿ ನುಡಿದಿರುವರು.

---

## ಅಪ್ರತಿ–ಮಾ

**ಮಾವಣಾ, ಬೇವಣಾ, ಸಾವಣಾ, ಜೀವಣಾ.**

**ಬಂತು ವರ್ಷ–ಘನದ ಹರ್ಷ/ ಕೇಕಿಸಿತ್ತು ಶ್ರಾವಣಾ/ ಭೇಕಿಸಿದರು ಕೆಸರು ಕೆರೆ/ ಬನ ಬನದೊಳು ಬೇರೆ ತೆರೆ/ ಆಷಾಢದ ಮಾವಣಾ/ ಅಮೃತ ಉಂಡ ಬೇವಣಾ/ ಬಾಳತಾಯಿ**

**ಸಾವಣಾ/ವೀರಭೋಜ್ಯ ಜೇವಣಾ (11–1 ರಿಂದ 8)**

: ಮಾವಣ್; ಮಾವಿನಹಣ್ಣು.

: ಬೇವಿನಹಣ್ಣು.

: ಚಾಂದ್ರಮಾಸದ ಐದನೆಯ ತಿಂಗಳು; ಶ್ರಾವಣಮಾಸ.

: ಊಟ; ಆಹಾರ; ಭೋಜನ.

*ಬೇಂದ್ರೆ ಅವರು ಸಮೃದ್ಧ ಬೆಳೆತಂದು ಸಕಲ ಜೀವರಾಶಿಗಳನ್ನು ಪೋಷಿಸುವ ಶ್ರಾವಣವನ್ನು ನೆನೆನೆನೆದು ಕಾವ್ಯ ರಚಿಸಿದ್ದಾರೆ. ಮಳೆ ಬಂದು ಹರ್ಷತರುವುದೇ ಶ್ರಾವಣ. ಮಳೆಗಾಲದಲ್ಲಿ ಗಂಡು ನವಿಲು ಹೆಣ್ಣು ನವಿಲನ್ನು ಆಕರ್ಷಿಸಲು ಕೇಕಿಸಿ, ರೆಕ್ಕೆ ಹರಡಿ ನರ್ತನಗೈಯುತ್ತದೆ. 'ಗಿರಿಶಿಖಿರದಿ ಶಿಖೆಯನೆತ್ತಿ ಶಿಖಿಯ ಕೇಕೆ ಕರೆವುದು'. (ಸೂರ್ಯಪಾನ: ನೃತ್ಯಯಜ್ಞ) ಅದು ಶ್ರಾವಣದ ಬಣ್ಣಬೆಡಗು ಸಂತಸದ ಪ್ರತೀಕ. ಮಳೆಗಾಲದಲ್ಲಿ ಬೇಕ–ಕಪ್ಪೆಯು ಭೇಕಿಸಿ–ವಟಗುಟ್ಟುತ್ತ ಶ್ರಾವಣ ಸಂತಸವನ್ನು ಕೆಸರು ಕೆರೆಯಲ್ಲಿ ಸಾರಿ ಹೇಳುತ್ತದೆ. ಆಗ ಬನಬನದಲ್ಲಿ ವಿವಿಧ ಸಸ್ಯಗಳು ಹಲವು ರಂಗಿನಲ್ಲಿ ಕಂಗೊಳಿಸಿ ಇಡೀ ಪ್ರಕೃತಿ ಆಕರ್ಷಣೀಯವಾಗಿರುತ್ತದೆ. ಆಷಾಢ ಮುಗಿಯುತ್ತ ಬಂದು ಮಾವು ಪಕ್ವವಾಗಿ ಅಮೃತದ ಸವಿ ಹೊಂದಿರುತ್ತದೆ. ಬೇವು ಕಹಿ, ಬೇವಿನ ಹಣ್ಣು ಸಿಹಿ. ಅದನ್ನು ಸವಿಯುವುದೇ 'ಅಮೃತ ಉಂಡ ಬೇವಣಾ'. ಭೂಮಿತಾಯಿಯು ಜಗದ ಬಾಳತಾಯಿಯಾಗಿ ಸಾವಣದಲ್ಲಿ ಕಂಗೊಳಿಸುತ್ತಿರುತ್ತಾಳೆ. ಅವಳು ಬೆಳೆಯಿಂದ ತುಂಬಿ ಜೀವಕೋಟಿಗೆ ವೀರಭೋಜ್ಯ–ಶಕ್ತಿ ಚೈತನ್ಯವನ್ನು ತುಂಬುವ ಭೋಜನ ನೀಡುತ್ತಿರುತ್ತಾಳೆ.

---

# ಸುಪ್ರಭಾತೇ

## ಸುಪ್ರಭಾತೇ (ಬದುಕಿನ ವ್ಯಾಖ್ಯಾನ)

1. ಯಾವುದದು?

ಬದುಕು ವರ್ಣಿಸಲಾಗದುದು, ಮೌನದಲ್ಲಿ ಅರಿವಿಗೆ ಬರುವಂತಹುದು. ಭಾವಕೋಶದ ಮೂಲಕ ಗ್ರಹಿಕೆಗೆ ನಿಲುಕುವಂತಹುದು, ಹೃದ್ಗುಹೆಯಲ್ಲಿ ಮಿಡಿಯುವಂತಹುದು. ನುಡಿಗೆ ನಿಲುಕದ (ಅವಾಚ್ಯಂ) ಅದನ್ನು ವಾಚ್ಯವಾಗಿಸಿದರೆ ಅದು ಸತ್ತೇ ಹೋಗುತ್ತದೆ. ಅದನ್ನು ಗಂಗೆಯ ಹಾಗೆ(ಸುರತಟಿನಿ=ಗಂಗೆ, ಇವ=ಹಾಗೆ) ತಲೆಯ ಮೇಲೆ(ಶಿರಸಿ) ಧರಿಸಬೇಕು(ವಿಧಾರ್ಯಂ)॥1॥

2. ಅದರ ಸ್ವರೂಪವೇನು?

ಅದು ಓಂಕಾರ ಸ್ವರೂಪದ್ದು (ಅನಾಹತ=ಓಂಕಾರ). ಸಚ್ಚಿದಾನಂದ ಸ್ವರೂಪದ್ದು, ಭೂತಕಾಲದಲ್ಲೂ(ಅತೀತಂ), ಭವಿಷ್ಯದಲ್ಲೂ(ಉತ್ತರೋತ್ತರಮ್) ಅದು ಶಾಂತ ಸ್ವರೂಪದ್ದು, (ಆ ಸ್ವರೂಪದ) ಅಂತರ್ನೇತ್ರ ತೆರೆದಾಗ (ಕಾಣಿಸುತ್ತದೆ). (ಆ ಸ್ವರೂಪ) ವಿಶ್ವದ ಉದ್ಧಾರಕ್ಕೆ (ವಿಶ್ವೋದ್ಧಾರ್ಯಮ್) ಅವತರಿಸಿದೆ॥2॥

3. ಆ ಸ್ವರೂಪ ಎಲ್ಲಿ ಹುದುಗಿದೆ? ತನ್ನೊಳಗೆ ಏನನ್ನು ಹುದುಗಿಸಿಕೊಂಡಿದೆ?

ಆ ಸ್ವರೂಪ ತನ್ನೊಳಗೆ ಚಿನ್ನವನ್ನು ಧರಿಸಿಕೊಂಡಿದೆ(ಹಿರಣ್ಯಗರ್ಭಂ). ಮಧುವನ್ನು ಒಳಗೊಂಡಿದೆ. (ಸಂದರ್ಭ=ಒಳಗೊಳ್ಳು) (ಚಿನ್ನ-ಜೇನು ಇವೆರಡನ್ನು ಬುದ್ಧಿ ಭಾವಗಳಿಗೆ ಹೋಲಿಸಬಹುದೇ?), ಅದು ತಾಯಿಯ ಮಮತೆಯಂತೆ ಅಕಾರಣವಾದುದು ಅಲ್ಲವೇ? (ಬತ=ಅಲ್ಲವೇ?), (ಅದು ತನ್ನೊಳಗೆ)ಸತ್ಯವನ್ನೇ ಕೇವಲ ಅದೊಂದನ್ನೇ(ಹುದುಗಿಸಿಕೊಂಡಿದೆ), ನಾಶವಿಲ್ಲದ (ಅನಿವಾರ್ಯಮ್= ನಾಶವಿಲ್ಲದ್ದು) ಇದು (ಬೇರೆಲ್ಲೂ ಇಲ್ಲ) ನಮ್ಮ ಶರೀರದೊಳಗೇ ಹುದುಗಿದೆ. (ಪಿಂಡ=ಶರೀರ).॥3॥

4. ಅದನ್ನು ಹೇಗೆ ಪರಿಭಾವಿಸಬೇಕು?

ಅದು (ತತ್) ಅಂದರೆ ಬದುಕು ನಾಟ್ಯ ಗೃಹವಾಗಿದೆ. ಭಾರತ ರೂಪದ್ದಾಗಿದೆ(ಭಾರತ ಎಂದರೆ ನಾಟಕ ಎಂಬ ಅರ್ಥವೂ ಇದೆ). (ಅಂತರಂಗದ) ಸಾಕ್ಷಿಯೇ ಪ್ರೇಕ್ಷಕನಾಗಿರುವನು. ಅದು ನಾಟಕ ದೀಪವಾಗಿದೆ (ನಾಟಕದೀಪ ಎಂಬ ಪದವನ್ನು ಶ್ರೀ ವಿದ್ಯಾರಣ್ಯರು ತಮ್ಮ ಪಂಚದಶೀ ಕೃತಿಯ 5ನೇ ಅಧ್ಯಾಯದಲ್ಲಿ ಬಳಸಿರುವರು.) ರಂಗದ ಮೇಲೆ ಬೀಳುವ ಬೆಳಕನ್ನೇ ಬದುಕನ್ನು ನಿರ್ವಚಿಸುವುದಕ್ಕೆ ಬಳಸಿಕೊಂಡಿರುವರು. ರಂಗದ ಮೇಲೆ ಚಕ್ರವರ್ತಿಯೇ ಬರಲಿ ಅಥವಾ ಸೇವಕನೇ ಬರಲಿ ಬೆಳಕು ಸಮಾನವಾಗಿ ಬೀಳುತ್ತಿರುತ್ತದೆ. ಸೇವಕನೆಂಬ ಕಾರಣಕ್ಕೆ ದೀಪ ತನ್ನ ಪ್ರಕಾಶವನ್ನು ಕುಂದಿಸುವುದಿಲ್ಲ. ಹಾಗೆಯೇ ದೊರೆಯೆಂಬ ಕಾರಣಕ್ಕೆ ಪ್ರಕಾಶವನ್ನು ಹಿಗ್ಗಿಸುವುದೂ ಇಲ್ಲ. ಅದೇ ರೀತಿ ಅಂತರಂಗದ ಸಾಕ್ಷಿಯೂ ಬದುಕಿನ ನಾಟಕದೊಂದಿಗೆ ವರ್ತಿಸುತ್ತಿರುವನು. ಎಲ್ಲ ಸಂದರ್ಭಗಳಿಗೂ ಸಮಾನವಾಗಿ ಸಾಕ್ಷೀರೂಪನಾಗಿರುವನು. ಕೆಲವು ಸನ್ನಿವೇಶಗಳು ಮನಸ್ಸನ್ನು ವಿಹ್ವಲಗೊಳಿಸಬಹುದು ಆದರೆ, ವಿಹ್ವಲಗೊಳ್ಳುವುದು ಮನಸ್ಸು, ಸಾಕ್ಷಿಯಲ್ಲ ಎಂದು ವಿದ್ಯಾರಣ್ಯರು ವಿವರಿಸುತ್ತಾರೆ. ಈ ವಿವರಣೆಗೆ ಅವರು 'ನಾಟಕದೀಪ' ಎಂಬ ದೃಷ್ಟಾಂತವನ್ನು ಬಳಸಿಕೊಳ್ಳುತ್ತಾರೆ. (ಬೇಂದ್ರೆ ಈ 'ನಾಟಕದೀಪ' ಕಲ್ಪನೆಯನ್ನು ತಮ್ಮ ಹಲವು ಪದ್ಯಗಳಲ್ಲಿ ಬಳಸಿಕೊಳ್ಳುವರು.) ವಿವೇಕವನ್ನು ಅದ್ಧರಿಸಿಕೊಳ್ಳಬೇಕಿದೆ. (ಉತ್ತರಣೀಯಮ್-ಪಾರುಗಾಣಿಸತಕ್ಕದ್ದು) ತನ್ನ ಶರೀರದಲ್ಲಿ (ಸ್ವ ಅಂಗೇ), ಆಲೋಚನೆಯಲ್ಲಿ (ಲಿಂಗ= ಆಲೋಚನೆ) ಧರ್ಮವನ್ನು ಧರಿಸಿಕೊಳ್ಳಬೇಕು॥4॥

5. ಅದರ ಕಾರ್ಯ ಯಾವ ತರಹದ್ದು?

ಅಪೂರ್ವವಾದ ಅದು (ಯತ್=ಅದು) ನಟರಾಜನಲ್ಲಿ ನೆಲೆಸಿದೆ(ನಟರಾಜ: ಕುಂಬಾರ- ಕುಂಬಾರನ ಸೃಷ್ಟಿಯಾದ ಮಡಕೆಯನ್ನು ಬೇರೆ ಬೇರೆಯಾಗಿ ನೋಡುವಂತೆ ಸೃಷ್ಟಿ-

ಸೃಷ್ಟಿಕರ್ತರನ್ನು ಬೇರ್ಪಡಿಸಲು ಬರುವುದಿಲ್ಲ. ಅದನ್ನು ನಾಟ್ಯ-ನಟರ ಅವಿನಾ ಸಂಬಂಧವಾದ ನಟರಾಜನ ರೂಪಕದಲ್ಲಿ ವಿವರಿಸಲಾಗಿದೆ). ಲೀಲಾಯಿತಮ್ ಇದಮ್ ಅದೃಷ್ಟಪೂರ್ವಮ್= ಈ ಲೀಲೆಯು ಹಿಂದೆಂದೂ ಕಾಣಿಸಿದ್ದಿಲ್ಲ. ಐದು ಮುಖಗಳಲ್ಲಿ (ಪಂಚಭೂತಗಳಲ್ಲಿ) ವಿಸ್ತರಿಸಿರುವ(=ಆಯತಮ್)ಈ ಜಗತ್ತು ನರ-ನಾರೀ ಸಂಬಂಧದಂತೆ ಪ್ರವೃತ್ತವಾಗಿದೆ.॥5॥

6. ಆ ಕಾರ್ಯ ಹೇಗೆ ಮುಂದುವರಿಯುತ್ತಿದೆ?

ಮೇಲಿಂದ ಮೇಲೆ (ಉಪರ್ಯುಪರಿ) ಆನಂದಮಯವಾಗಿ ಸೃಷ್ಟಿಯಾಗುತ್ತಿದೆ. ಈ ಸೃಷ್ಟಿಯ ಪಾಡಿನ ಮೂಲದಲ್ಲಿ(ಕಾರಣ ಕ್ಷೇತ್ರೇ) ಭಗವಂತನ ಹಾಡಿದೆ, ಬದುಕಿನ ಪ್ರಕ್ರಿಯೆಯಲ್ಲೇ (ಕರಣೆ) ಆಗುವಿಕೆಯೂ(ಪರಿಣಮಿತಂ) ಸಂಭವಿಸುತ್ತಿದೆ. ಇದು ಶಿವ-ಶಕ್ತಿ ಸಂಪುಟದ ಸಹಜ ಕೃತಿಯಾಗಿದೆ.

---

## ೧೫. ಸಂಚಯ (೧೯೫೯)

## ‘ಚಾಂಗದೇವ ಪಾಸಷ್ಟಿ’

**ವಟ**

**ಶ್ರೀ ವಟೇಶ ತಾನಡಗಿ ಮೂಡುವನು/ ಜಗದ ಮಾಟವಾಗಿ (1–1, 2)**

: ಆಲ.

* ಆಲದ ಮರದ ಒಡೆಯ ಶಿವ.

*　　*　　*　　*　　*　　*

**ಸಮ್ಯಕ್ಕು**

**ಸಮ್ಯಕ್ ಸ್ವರೂಪದಲ್ಲಿ (5–3, 4)**

: ಯೋಗ್ಯವಾದುದು.

*　　*　　*　　*　　*　　*

**ಸಂವಿತ್ತು**

**ಸಂವಿತ್ತಿನಲ್ಲಿ/ ಬೆಳಗುವದು ಎಲ್ಲ ಮೋಡಿ. (12–3, 4)**

: ಜ್ಞಾನ; ಬುದ್ಧಿ.

***

**ಜೀವದ ಚಿತ್ತು ಜಗತ್ತಿನ ಸತ್ತು/ ತಿಳಿದಾನಂದ ಸಂವಿತ್ತು.. (ಜೀವಲಹರಿ: ಶಬ್ದ!)**

*　　*　　*　　*　　*　　*

**ಗಳಿಗೆ**

**ವಸ್ತ್ರಕ್ಕೆ ಗಳಿಗೆ ಹಾಕಿದರು ಏನು/ ಅದು ವಸ್ತ್ರವಲ್ಲವೇನು? (15–1, 2)**

: ಬಟ್ಟೆ ಮುಂತಾದವುಗಳ ಮಡಿಕೆ,–ಪದರ.

*　　*　　*　　*　　*　　*

## ದೃಷ್ಟಾರ, ದೃಶ್ಯ, ದರ್ಶನ

**ತನ್ನೊಳಗೆ ತಾನು ತಾನಾಗಿ ತನ್ನ/ ಕಂಡಿರಲು ಜಗದ ಹುಟ್ಟೆ/ ದೃಷ್ಟಾರ ದೃಶ್ಯ ದರ್ಶನದ ತ್ರಿಪುಟಿ/ ಯಾಗಿತ್ತು ಮೂರು ಬಟ್ಟೆ! (18–1, 2, 3, 4)**

: ದ್ರಷ್ಟಾರ; ದೈವಿಕವಾದ ತಿಳಿವಳಿಕೆಯನ್ನು ಹೊಂದಿದವನು; ದಿವ್ಯ ದೃಷ್ಟಿಯುಳ್ಳವನು; ದಾರ್ಶನಿಕ; ಪ್ರವಾದಿ.

: 1. ಕಣ್ಣಿಗೆ ಕಾಣುವ; ದೃಷ್ಟಿಗೆ ಗೋಚರವಾಗುವ.

2. ಕಾಣ್ಕೆ; ನೋಟ.

: 1. ಕಾಣ್ಕೆ; ಕಣಸು; ವಿಶೇಷವಾದ ಅಂತರಂಗದ ಅರಿವು.

2. (ತತ್ತ್ವಶಾಸ್ತ್ರ) ತತ್ತ್ವಕ್ಕೆ ಸಂಬಂಧಿಸಿದ ವಿಷಯ–ಗ್ರಂಥ–ಮೀಮಾಂಸೆ ಮುಂತಾದವು; ಆಧ್ಯಾತ್ಮಿಕ ಸಿದ್ಧಾಂತ; ತತ್ತ್ವಶಾಸ್ತ್ರ.

* * * * * *

## ಸಂದು

**ಅರಿತವನ ಅರಿವು ಆ ಅರಿತದೊಡನೆ/ ಇರುತಿಹುದು ಒಂದು ಸಂದು. (19–3, 4)**

: ಸಹವಾಸ; ಸಂಬಂಧ.

* ಕವಿಯು ಅರಿವು ಮತ್ತು ಅರಿವು ಪಡೆದವನ ಸಂಬಂಧವನ್ನು ಇಲ್ಲಿ ಹೇಳಿದ್ದಾರೆ. ಅರಿವಿಗೆ ಒಳಗಾದ ವ್ಯಕ್ತಿ ಅದರ ಸಹವಾಸದಲ್ಲಿ ಇರುವುದನ್ನು 'ಸಂದು' ಪದ ಒಂದುಗೂಡಿಸಿದೆ.

* * * * * *

## ಕಾಣ್ಕೆ, ಎಕ್ಕಟಿ

**ಕಾಣ್ಕೆ ತೊಳೆದ ಎಕ್ಕಟಿಯ ಕಾಂಬತನ/ ದೊಂದು ಗುಂಭಗೂಢ (35–1, 2)**

: ಕಾಣುವಿಕೆ; ನೋಟ; ದರ್ಶನ.

: ಏಕಾಂತವಾದ; ರಹಸ್ಯವಾದ.

* ಅಧ್ಯಾತ್ಮ ದರ್ಶನವೆಂಬುದು ಆಳವೂ ನಿಗೂಢವೂ ಆದ ಶುದ್ಧರಹಸ್ಯವನ್ನು ಕಾಣುವಂತಹದು. ಆ ಗುಟ್ಟು ಗೊತ್ತಾದ ನಂತರ 'ಇದೆ ತಾನು ತಾನಾಗಿ ಮೆರೆದು ಇರುವಂಥ ರೀತಿ'.

***

ಅಹುದೊ ಅಲ್ಲವೊ ನಾವು ಕಂಡ ಕಾಣ್ಕೆಯು ದೇವ(ಭರತೇಶ ವೈಭವ: 4–13)

*   *   *   *   *   *

**ಸೂಸಲು**

**ಸಿಹಿಯನ್ನೆ ಸಿಹಿಯು ಸವಿದಾಗ ಬಾಯಿ/ ಹಿಡಿಸದೆಯೆ ಸೂಸಲಹುದೆ? (41–1, 2)**

: (ನಗೆ ಮುಂತಾದುವು) ಕಾಣಿಸಿಕೊಳ್ಳುವುದು; ಗೋಚರಿಸುವಿಕೆ.

* ಅವರು ಪರಸ್ಪರರನ್ನು ಕಂಡಾಗ ಉಂಟಾದ ನಗೆ, ಆನಂದ, ಆಹ್ಲಾದವನ್ನು 'ಸೂಸಲು' ಪದ ಪ್ರಕಟಪಡಿಸಿದೆ.

*   *   *   *   *   *

**ಪಾಡು, ಮೀಸಲು**

**ನಮ್ಮ ನಿಮ್ಮ ಸೇರುವಿಕೆ ಪಾಡು, ಬೇ/ ರೇನು ಮೀಸಲಹುದೇ (41–3, 4)**

: ಸರಿಯಾದುದು; ಯೋಗ್ಯವಾದುದು; ಉಚಿತವಾದುದು.

: ಒಂದು ನಿರ್ದಿಷ್ಟವಾದ ಉದ್ದೇಶಕ್ಕಾಗಿ, ದೇವರು ಅತಿಥಿ ಮೊದಲಾದವರಿಗೆ ಪ್ರತ್ಯೇಕವಾಗಿ ತೆಗೆದಿರಿಸಿದ ಆಹಾರ, ನೀರು, ಹಾಲು, ಹಣ, ಹಸು ಇತ್ಯಾದಿ ಯಾವುದಾದರೂ ವಸ್ತು, –ಬಳಸದೆ ಕಾದಿರಿಸಿದ ವಸ್ತು; ಮುಡಿಪು.

* ಯೋಗಿಗಳು ಒಬ್ಬರಿಗೊಬ್ಬರು ಸೇರುವಿಕೆ ಯೋಗ್ಯವು, ಉಚಿತವು ಆದುದು ಎಂಬುದನ್ನು ಕವಿಯು 'ಪಾಡು' ಪದದಲ್ಲಿ ಹೇಳುತ್ತ ಅದಕ್ಕೆ ಯಾವುದೇ ಮೀಸಲು ಬೇಕಾಗಿಲ್ಲ ಎಂದು ತಿಳಿಸಿದ್ದಾರೆ.

*   *   *   *   *   *

**ಓವಿ, ಸಿದ್ಧ**

**ಓ ಸಖನೆ ಜೀವ ಹೊರಟಿತ್ತು ಭೇಟಿಗೇ/ ಓವಿಗೋವುಗೊಟ್ಟೇ/ ಸಿದ್ಧ ಭೇಟಿ ಮುರಿದೀತು ಎಂದು ಇ/ ದ್ದಲ್ಲೆ ಇದ್ದು ಬಿಟ್ಟೆ. (42–1, 2, 3, 4)**

: (ಛಂದ) ಮರಾಠಿಯಲ್ಲಿ ಒಂದು ಪದ್ಯಜಾತಿ.(ಮರಾ–ಓವೀ)

: ಅಣಿಮಾದಿ ಅಷ್ಟಸಿದ್ಧಿಗಳನ್ನು ಸಾಧಿಸಿದವನು; ಅಲೌಕಿಕ ಸಾಮರ್ಥ್ಯವುಳ್ಳವನು.

* ಚಾಂಗದೇವ ಪಾಸಷ್ಟಿ ಮಹಾರಾಷ್ಟ್ರ ಸಂತಕವಿ ಶ್ರೀ ಜ್ಞಾನದೇವನ ಒಂದು ಸಂಪೂರ್ಣ ಕೃತಿಯ ಜೀವ ಭಾವಾನುವಾದ. ಚಾಂಗದೇವ 800 ವರ್ಷ ಬಾಳಿದ ವೃದ್ಧಯೋಗಿ.

ಜ್ಞಾನದೇವನಿಗೆ ಆಶೀರ್ವಾದ ಬರೆಯಬೇಕೊ? ನಮಸ್ಕಾರ ಬರೆಯಬೇಕೊ? ಎಂಬ ಇತಿಮಿತಿಯಲ್ಲಿ ಏನೂ ಬರೆಯದೆ ಬಿಳಿಹಾಳಿಯನ್ನೇ ಕಾಗದವೆಂದು ಕಳುಹಿಸಿದ್ದ ಚಾಂಗದೇವ. ಆತನ ಹೃದಯದ ಅಪೇಕ್ಷೆಗೆ ಜ್ಞಾನದೇವ ನೀಡಿದ ಉತ್ತರ 65ಪಾಸಷ್ಟಿ 'ಓವಿ'ಗಳಲ್ಲಿದೆ.

ಗುರುಚಾಂಗದೇವನಿಗೆ ಓಗೊಟ್ಟ ಜ್ಞಾನದೇವನ ಓವಿರಚನೆಯ ಆಂತರ್ಯದ ಅಲೌಕಿಕ ಸಂವಾದವನ್ನು ಬೇಂದ್ರೆಯವರು 'ಓವಿಗೋವುಗೊಟ್ಟೆ' ಎಂದು ತಿಳಿಸಿದ್ದಾರೆ. ಅದು ಒಳ ಭಾವದ ಅರಿವಿನ ಸಂವಹನ.

ಸಿದ್ಧರ ಕೃಪೆಯೆಂದರೆ ಫಲ ದೊರೆತ ಅನುಭವ. ಆ ಪರಿಣಾಮಕ್ಕೆ ತಾನು ಒಳಗಾಗಿರುವಾಗ, ಆ ಆನಂದಾನುಭವದಲ್ಲಿಯೇ ತಲ್ಲೀನನಾಗಿ ಜ್ಞಾನದೇವ ಹೇಳಿದ್ದಾನೆ.

'ಸಿದ್ಧ ಭೇಟಿ ಮುರಿದೀತು ಎಂದು ಇ/ದ್ದಲ್ಲೆ ಇದ್ದುಬಿಟ್ಟೆ.' ಚಾಂಗದೇವನ ಸಿದ್ಧಾನುಭವದಲ್ಲಿ ಒಂದಾದ ಜ್ಞಾನದೇವನು ಆತನನ್ನು ಸದಾ ಕಾಣುತ್ತಿರುತ್ತಾನೆ. ತಾನು ಅವನಿಂದ ಪ್ರತ್ಯೇಕವಾಗದೆ ಸದಾಕಾಲ ಅವನಲ್ಲಿ ಬೆರೆತು ಹೋಗಿರುತ್ತಾನೆ. ಹಾಗಾಗಿ ಹೇಳುತ್ತಾನೆ.

'ನಿನ್ನ ನಾನು ಕಾಣುವದೆ ಎಂದು ನೆನೆ/ ದಾಗ ಕಂಡೆ ನನ್ನ' (43–1, 2)

* ತಾದಾತ್ಮ್ಯ ಭಾವದ ಅಭಿನ್ನತೆಯ ಸವಿಯಲ್ಲಿರುವಾಗ ಜ್ಞಾನದೇವನು ಗುರುಚಾಂಗದೇವನನ್ನು ಮುಖತಃ ದರ್ಶನ ಮಾಡಲು ಹಠಮಾಡುವುದಿಲ್ಲ. ತನ್ನ ಅನುಭವವನ್ನು ಕಳೆದುಕೊಳ್ಳಲು ಇಚ್ಛಿಸುವುದಿಲ್ಲ.

'ದರ್ಶನಕ್ಕೆ ಹಠಮಾಡಿ ನಾನು ಕಳ/ ಕೊಳ್ಳಬೇಕೆ ನಿನ್ನ?' (43–3, 4)

* * * * * *

**ಪರಿಪಾಟಿ**

**ಜ್ಞಾನದೇವನಾ ಮಾಟ ಹೆಣೆದ ಪರಿ/ ಪಾಟಿ ಪದವ ಕೇಳು (65–3, 4)**

: ರೀತಿ; ಕ್ರಮ; ವಿಧಾನ.

---

## ನಾಲ್ವೇ ಸುಖಮಸ್ತಿ

**ಹರವು, ಕ್ಷರ, ಅಕ್ಷರ, ಬುಗ್ಗೆ.**

**'ಓ ಹರವೆ! ಓ ಹಿಗ್ಗೆ!**

**ಕ್ಷರಕು ಅಕ್ಷರಕು ನಡುವಿರುವ ಒಂದೇ ಬುಗ್ಗೆ.. (ಸಾಲು 31, 32)**

: ಉಬ್ಬು; ಹಿಗ್ಗು.

: 1. ಕರಗಿ ಹೋಗುವ ಮಾರ್ಪಡುವ ಸ್ವಭಾವವುಳ್ಳ.

2. ವಿಕಾರ ಹೊಂದತಕ್ಕ; ಮಾರ್ಪಡುವ ಸ್ವಭಾವವುಳ್ಳ.

: ನಾಶವಿಲ್ಲದ; ಮರಣವಿಲ್ಲದ; ವಿಕಾರವಿಲ್ಲದ; ಸ್ಥಿರವಾದ.

: ನೀರು ಉಕ್ಕುವ ಸ್ಥಳ; ಚಿಲುಮೆ; ಒರತೆ.

* ನಶ್ವರದ ಬಾಳಿನಲ್ಲಿ ಸ್ಥಿರವಾದುದೆಂದರೆ ಹಿಗ್ಗು ಒಂದೆ.

***

**ಹಿಗ್ಗ ಹರಹುವಾ ಮೊಗ್ಗಿಯಾಗದಿರೆ ಏತಕಂಥ ಇರವೂ$_{sss}$?(ಉತ್ತರಾಯಣ: ಭೀಷ್ಮ ಉತ್ತರಾಯಣ)**

---

## ಕೃತಜ್ಞತೆ

**ಬಸಿ**

**ನಿನ್ನ ಬಸಿಯು ಇಂಗದಿರಲಿ/ ತೊರೆದ ಕರುವಿಗಾಗಿ ಕೂಡ/ ತೊರೆಯ ಕರೆವ ಕರುಳೊಲು (1-4, 5, 6)**

: ಒಸರು; ಸ್ರವಿಸು; ಜಿನುಗು.

*ತೊರೆದ ಕರುವಿಗಾಗಿ ತೊರೆ ಬಿಡುತ್ತ ಹಾಲು ಕರೆಯುವ ಗೋವಿನ ಕರುಳ ವಾತ್ಸಲ್ಯದಂತಹದು ಭಗವಂತನ ಕರುಣೆ. ಅವನ ಪ್ರೀತಿ ವಾತ್ಸಲ್ಯದ ಕರುಣರಸ ಸದಾ ಜಿನುಗುತ್ತ ಪೋಷಿಸುತ್ತಿರಲಿ ಎಂದು ಕವಿ ಪ್ರಾರ್ಥಿಸಿದ್ದಾರೆ.

---

## ಬದುಕಬೇಕು!

**ಸೆಲೆಕೊಡು**

**ಚುಂಬಿಸುವ ಅಲೆಗೆ ನೆರೆ/ ನಂಬಿಸುವ ಗೀತ ಸೆಲೆ/ ಗೊಡುತಿರಲು ಅದನೊಂದೆ ನೋಡುತಿರುವೆ (4-1, 2, 3)**

: ಪ್ರತಿಧ್ವನಿಸು; ಮಾರ್ದನಿಕೊಡು.

* * * * * *

**ಧಾಳಾಧೂಳಿ, ಕಾಳ್ಕಿಚ್ಚು.**

**ಇದನುಳಿಸು ಅದನು ಅಳಿ/ ಸೆಂಬ ಧಾಳಾಧೂಳಿ/ ಸುಟ್ಟು ಹೊಗೆ ಕಾಳ್ಕಿಚ್ಚು ಚಾಚುತಿರಲು. (5–1, 2, 3)**

: ಆಕ್ರಮಣ; ಮುತ್ತಿಗೆ.

: ಕಾಡಿನ ಬೆಂಕಿ; ದಾವಾನಲ.

---

## ಹರಿಹರ ಸಮರಸ

**ಇಳಿ, ಅಳಿಮಾನಸ**

**ಮಾನವನ ಮಾನವನು ಇಳಿ ಮಾನದಿಂದೆತ್ತಿ/ ಅಳಿ ಮಾನಸರು ಆಗದಂತೆ ಹೊತ್ತಿಸೆ, ಹೊತ್ತಿ. (3–3, 4)**

: ಕಡಮೆಯಾಗು; ಕುಂದು; ಕುಗ್ಗು.

: ಕೆಟ್ಟ ಮನುಷ್ಯ; ಅಲ್ಪಮನುಷ್ಯ.

---

## ಜಾನಪದ ಅನುಭಾವಿಯ ಹಾಡು

**ಪಡಬಿಟ್ಟೀ**

**ಕೈಯ ಕುಟ್ಟಿ ತಟ್ಟೀ/ ತಿಣಕುವೆ/ ಸುಳ್ಳೀ ಪಡಬಿಟ್ಟೀ (1–3)**

: ಉತ್ತದೆ, ಬಿತ್ತದೆ, ಬೆಳೆತೆಗೆಯದೆ, ಫಲಪಡೆಯದೆ(ಹೊಲವನ್ನು) ನಿಷ್ಪ್ರಯೋಜಕಗೊಳಿಸಿರುವುದು.

(ಉತ್ತರ ಕರ್ನಾಟಕದಲ್ಲಿ)– ಪಡಜಮೀನು, ಬೀಳುಭೂಮಿ, ಬಂಜರು ಭೂಮಿ, ಪಡಬಿಟ್ಟಭೂಮಿ– ಇವು ಸಮಾನಾರ್ಥಕ ಪದಗಳಾಗಿ ಬಳಕೆಯಾಗುತ್ತವೆ.

ಉತಾರಗಳಲ್ಲಿ ಕೂಡ ಪಡ ಜಮೀನು ಎಂದು ಬರೆಯುವುದು ಸಾಮಾನ್ಯ.

* * * * * *

**ದುಸುಮೂಸು**

**ದುಸುಮೂಸು ಮಾಡಿ, ನೀ/ ಅಲ್ಲೆ ತಿರುಮುರುಗುತಿರುವೆ (1–5, 6)**

: ಧುಸುಮುಸು, ಅಂತಸ್ತಾಪ; ದುಮುಗುಡುವಿಕೆ; ಆಂತರಿಕ ಕೋಪ.(ಮರಾ: ಧುಸ್ ಮುಸ್)

* * * * * *

**ಪುರಮಾಸಿ**

**ಮೀಸಿ ಮೀಸಿ ಪುರಮಾಸಿ ಮಾಡಿ (2–5)**

: ಚೆನ್ನಾಗಿ, ಉತ್ತಮವಾಗಿ, ಸುಂದರವಾಗಿ (good looking)

'ಆಯ್ತಾರ ಆಯ್ತಾರ ಅಮಾಸಿ ದ್ವಾಸಿ ಹೊಯ್ದಾಳ ಪುರಮಾಸಿ' ಎನ್ನುವ ನುಡಿಗಟ್ಟು ಹಳ್ಳಿಯ ಮಕ್ಕಳ ಬಾಯಲ್ಲಿ ಈಗಲೂ ಕೇಳಿ ಬರುತ್ತದೆ.

---

## 'ಕರ್ನಾಟಕ ಗತವೈಭವ'ವು ಪ್ರಸಿದ್ಧವಾದದ್ದನ್ನು ಕೇಳಿ

**ಸೂಳು**

**ಸೂಳ ಹತ್ತಿತ್ತು ಹಾಡು (2–4)**

: ಜೋರಾದ ಧ್ವನಿ; ಆರ್ಭಟ; ಬೊಬ್ಬೆ.

*ಹಾಡುಗಾರರ ದಂಡುಮೇಳದಲ್ಲಿ ಸ್ಫೂರ್ತಿಯಿಂದ ಬೊಬ್ಬಿರಿದು ಹಾಡುವುದನ್ನು ಕವಿಯು 'ಸೂಳ ಹತ್ತಿತು ಹಾಡು' ಎಂದು ವರ್ಣಿಸಿದ್ದಾರೆ.

* * * * * *

**ತರಲ, ವೊರವಿ**

**ಸ್ಥಿರವಾಗು ಸ್ಥಿರವಾಗು ಮೋಹನದ ನೋಟವೇ,/ ಎರಗಿ ನಿನ್ನಯ ಮುಂದೆ ಮರುಗಲೆನಗೊಂದಿಷ್ಟು/ ತರಲತನವೇಕಿಂತು ವೊರವಿನೊಳು ಬಿದ್ದಂಥ ಚಂದ್ರಮನ ಬಿಂಬದಂತೆ. (3–1, 2, 3)**

: ಅತ್ತಿತ್ತ ಚಲಿಸುವ; ಕಂಪಿಸುವ; ಚಂಚಲವಾದ; ಅಸ್ಥಿರವಾದ.

: ಒರವು; ಒರತೆ; A Spring; A flow etc.,

*ಕವನದ ಭಾವ ಸಂದರ್ಭ: ಶ್ರೀ ಆಲೂರರ ಪ್ರಬೋಧ ಕೃತಿ ಪ್ರಕಟವಾಯಿತೆಂದು ಪೂನಾ ಪಟ್ಟಣದಲ್ಲಿದ್ದಾಗ ಕೇಳಿ ಪ್ರಾಯದ ಉಲ್ಲಾಸದಿಂದ ಬರೆದದ್ದು.

ಬೇಂದ್ರೆಯವರ ಸ್ಫೂರ್ತಿಯ ಸೆಲೆ ಶ್ರೀ ಆಲೂರು ವೆಂಕಟರಾಯರು. ಅವರನ್ನು ಚೆನ್ನಾಗಿ ಬಲ್ಲ ಬೇಂದ್ರೆಯವರು 'ಕರ್ಣಾಟಕ ಗತವೈಭವ' ಕೃತಿ ನೆನೆದು ರೋಮಾಂಚಿತರಾಗಿದ್ದಾರೆ. ಉಲ್ಲಾಸಗೊಂಡ ಸ್ಥಿರವಾಗದ ಮನಸ್ಸು ಆನಂದಾತಿರೇಕಕ್ಕೆ ಒಳಗಾದುದನ್ನು ಬೇಂದ್ರೆಯವರು 'ಒರತೆಯಲ್ಲಿ ಬಿದ್ದಂಥ ಚಂದ್ರಮನ ಬಿಂಬ'ಕ್ಕೆ ಹೋಲಿಸಿಕೊಂಡು ಉಪಮಾನಾತ್ಮಕವಾಗಿ ತಮ್ಮ ಹರ್ಷವನ್ನು ಕಾವ್ಯವಾಗಿಸಿದ್ದಾರೆ.

* * * * * *

### ನೆರೆಗಣ್ಣು

**ನೆರೆಗಣ್ಣುಗಳಿಗೆ ನೀ ಕಾಣದಿದ್ದರು ನನಗೆ/ ಹರುಷವನ್ನೀಯುವಿಯೆ ಹೃದಯ ಪರಿಸರದಲ್ಲಿ (3–4, 5)**

: ಸಮಿಾಪದ ಕಣ್ಣು.

*ಬೇಂದ್ರೆ ಅವರು ಪೂನಾದಲ್ಲಿದ್ದು ತನ್ನ ಸಮೀಪದ ಕಣ್ಣುಗಳಿಗೆ ಆಲೂರರು ಕಾಣದಿದ್ದರು ತನ್ನ ಒಳಗಣ್ಣು–ಹೃದಯ ಪರಿಸರಕ್ಕೆ ಕಾಣುತ್ತಿದ್ದಾರೆ ಎಂದು ತಿಳಿದು ಕರ್ನಾಟಕ ಕುಲಪುರೋಹಿತರನ್ನು ಧ್ಯಾನಿಸಿದ್ದಾರೆ.

* * * * * *

### ಅರ್ಗಲ

**ಸ್ವರ್ಗಸಾಮ್ರಾಜ್ಯದೊಳಗಲೆದಾಡುವೆನು ಮನದ/ ಅರ್ಗಲೆಯು ಸರಿಯಿತೈ (4–1, 2)**

: ಮುಚ್ಚಿದ ಕದವನ್ನು ತೆರೆಯಲಾಗದಂತೆ ತಡೆಯುವ ಅಡ್ಡಮರ; ತಾಳು; ತಡೆಗೂಟ; ಲಾಳವಿಂಡಿಗೆ; ಅಗುಳಿ.

---

## ಇವರು ಆಲೂರವರು!

### ಕಳಿ

**ಹಣೆಯ ಗೆರೆ, ಕೂದಲೆಳೆ, ಕಳಿತ ಕಳೆ. (3–3)**

: 1. ಹಣ್ಣಾಗು; ಮಾಗು; ಪಕ್ವವಾಗು.

2. ಸಂತೋಷಪಡು,ಹಿಗ್ಗು.

*ಆಲೂರರು ಮಾಗಿದ ಜೀವ. ಸದಾ ಹಿಗ್ಗಿನಿಂದಿರುವ ಚೇತನ. ಆ ತೇಜಸ್ವಿಯನ್ನು ಬೇಂದ್ರೆ ಅವರು 'ಕಳಿತ ಕಳೆ' ಎಂದು ಕರೆದು ಅವರ ಮಧುರ ಭಾವವನ್ನು ಸವಿಯಾಗಿ ನೀಡಿದ್ದಾರೆ.

---

## ಗೆಳೆಯನಿಗೆ ಹರಕೆ

**ಪರಟೆ**

**ಸಾಗಿ ಸಂಗಡ ಬರುವೆ(ಯೋಗಿ ಜೋಗಿಯು ಆಗು)/ ನಿನ್ನ ಕೈ ಪರಟೆಯಾಗಿ (8–3, 4)**

: ಮಡಕೆಯ ಓಡು; ಬೋಕಿ.

---

## ಓ ನಾರಾಯಣ

**ಒಳವು**

**ಒಲವಿಲ್ಲದೊಳವಿಲ್ಲ, ಒಳವಿಲ್ಲದೊಲವೆಲ್ಲಿ?/ ಒಳವು ಒಲವಿನ ಕೂಡ ಲಗ್ನವಾಗಿ (3–1, 2)**

: ಅಂತರಂಗ; ರಹಸ್ಯ.

*ಒಲವು ಒಂದು ಅಂತರಂಗದ ಭಾವ. ಒಲವು ಮತ್ತು ಒಳವು ಲಗ್ನವಾಗಿ ಒಂದಾಗಿವೆ. ಇಲ್ಲಿ ಕವಿ 'ಒಲವು'ನಲ್ಲಿರುವ 'ಲ'ಕಾರಕ್ಕೆ 'ಳ'ಕಾರವನ್ನು ಬಳಸಿದ್ದಾರೆ. ಕಾಲ–ಕಾಳ ಆಗುವಂತೆ. ಇಲ್ಲಿರುವ 'ಒಳವು' ಇನ್ನೊಂದು ಸೂಚ್ಯಾರ್ಥವನ್ನು ನಮ್ಮ ಅರಿವಿಗೆ ತರುತ್ತದೆ. ಅದು ಜೀವನ ರಹಸ್ಯವನ್ನು 'ಒಳವು ಒಲವಿನ ಕೂಡ' ಸೇರುವುದೆಂಬ ಭಾವವೂ ಇಲ್ಲುಂಟು.

---

## ಗೆ(೩)

**ಚೆಲ್ಲಿ, ಚೆಲ್ಲೆಗಣ್**

**ಚೆಲ್ಲಿಯಂದದ ನಿನ್ನ ಚೆಲ್ಲೆಗಂಗಳ ಚೆಲುವ/ ಚೆಲ್ಲಾಟ ಗಳಿಗೆ ಬಿಟ್ಟು (4–1, 2)**

: ಕನ್ನಡಿ; ದರ್ಪಣ.

: ನೀಳವಾದ ಕಣ್ಣು; ಅಗಲವಾದ ಕಣ್ಣು.

* * * * * *

**ಪಾದರ**

**ತನುಧನದ ಮುಡುಪಿಡುವೆ ಮನದ ಪಾದರ ಬಿಡುವೆ (6–3)**

: ಹಾದರ; ವ್ಯಭಿಚಾರ; ಜಾರತನ.

*ಪ್ರಿಯೆಗೆ ತನುಧನವನ್ನು ಮುಡುಪಿಟ್ಟು ಮನಸ್ಸಿನ ಜಾರತನ ಬಿಡುವೆ ಎಂದು ಪ್ರಿಯತಮ ಹೇಳುತ್ತಿದ್ದಾನೆ.

---

## ತಾಯ್ತಂದೆಗೆ

**ಕಣ್ಣಿಲಿ**

**ಕಣ್ಣಿಲಿಯು ಬೆಳಕ ಬಿಸಿಯಿಂದ ಬೆಂದಿಹೆ (1–3)**

: ಕಣ್ಣು ಇಲ್ಲದ್ದು.

---

## ಕಸಪೊರಕೆ?

**ಇಲ್ಲಣ**

**ಮನೆಯೊಳಗೆ ಇಲ್ಲಣವು (3–1)**

: ಹೊಗೆ(ಮಸಿ) ಹಿಡಿದ ಜೇಡರ ಹುಳುವಿನ ನೂಲಿನ ಗುದಿ. ಗೃಹಧೂಮ.

---

## ಒರದಾ! ತಗಣಿ ಒರದಾ

**ಬಡಕ, ಒರದ**

**ಕಾಡುವ ತಗಣಿ ಬಳಗವ। ಬಡಕ, ಬಲಿತಿದು ಎಂದು ನೋಡದೆ। ಒರದಾ! (5–7, 8, 9)**

: ಬಡಕಲಾಗಿರುವುದು; ಸಣಕಲು.

: ಒರಸು; ತಿಕ್ಕು, ತೇಯು; ಉಜ್ಜು.

* * * * * *

**ರದನ**

**ರದನಾ। ಚಾಚುವಿ ನಿನ್ನ ವದನಾ॥ (6–3, 4)**

: ಹಲ್ಲು; ದಂತ.

* * * * * *

**ರಾಪುಮಾಡು**

**ಪಾಪಿ ನಾ ಬಲು ಎನ್ನ ಅವಗುಣ/ ರಾಪುಮಾಡದೆ (7–5, 6)**

: ಗಾಬರಿಯನ್ನುಂಟುಮಾಡು; ಹೆದರಿಸು.

---

## 'ಓಡು'

**ಕರ**

**ಸಿರಿಸುಗ್ಗಿಯು ಕರ ಕೆಂಪು (1–2)**

: ಹೆಚ್ಚಾಗಿ; ವಿಶೇಷವಾಗಿ; ಬಹಳವಾಗಿ.

---

## ಮೂರುದನಿ

**ಕಣಸು**

**ನಾಡಿಗೆ ನಾಳಿನ ಕಣಸಿದೆ/ ಹೃದಯವನೊಡಗೂಡಿ (1–4, 5)**

: 1. ನೋಟ; ಕಾಣ್ಕೆ.

2.ಅತಿಮಾನುಷ ದರ್ಶನ; ಅಲೌಕಿಕ ತೋರಿಕೆ.

*ಬೇಂದ್ರೆ ಅವರು ವ್ಯಕ್ತಿ ಪಡೆಯುವ ಕಾಣ್ಕೆಯಷ್ಟಲ್ಲದೆ, ಒಂದು 'ನಾಡಿಗೆ ನಾಳಿನ ಕಣಸಿದೆ' ಎಂದು ಹೇಳುತ್ತ ಅದಿರುವುದು ಜನರ 'ಹೃದಯವನೊಡಗೂಡಿ' ಎಂದು

ತಿಳಿಸಿದ್ದಾರೆ. ಈ ಮಾತು ಭಾರತೀಯ ಪರಂಪರೆ ಅರಿತು ಮುಂದಿನ ರಾಷ್ಟ್ರಪ್ರಗತಿಗೆ ಜನ ಹೃದಯವಂತರಾಗಬೇಕೆಂಬ ಉನ್ನತ ಚಿಂತನೆಯನ್ನು ನೀಡಿದೆ.

* * * * * *

**ಜಿಹಾಸೆ**

**ಭಾವದ ಹಿಂದಿದೆ ಬೇರೆಯ ಭಾಷೆ/ ಸಂಸಾರ ಜಿಹಾಸೆ. (4–1, 2)**

*ಶ್ರೀಮಂತರ ಮನೆಯ ಕಾವಲು ನಾಯಿ ಬೊಗಳುವುದನ್ನು ಕಂಡ ನಿರ್ಗತಿಕನ 'ಭಾವದ ಹಿಂದಿದೆ ಬೇರೆಯ ಭಾಷೆ। ಸಂಸಾರ ಜಿಹಾಸೆ' ಎಂದು ಬೇಂದ್ರೆ ಹೇಳಿದ್ದಾರೆ. ಆ ನಿರ್ಗತಿಕನಿಗೆ ತನ್ನ ಸಂಸಾರದ ಬಗ್ಗೆ ಉಂಟಾದ ಜಿಗುಪ್ಸೆ, ತನ್ನ ಬಗ್ಗೆ ಉಂಟಾದ ಬೇಸರ, ಜೀವನದ ನಿರುತ್ಸಾಹ ಎಲ್ಲವನ್ನು 'ಜಿಹಾಸೆ' ಪದ ಹಿಡಿದಿಟ್ಟಿದೆ.

---

## ಜಗದ್ರಂಗ

**ಖರ್ವ**

**ಖರ್ವ ಖರ್ವ ಶಂಕ ಜಲಧಿ (6–1)**

: ಹದಿಮೂರು ಅಂಕಗಳಿಗಿರುವ ಒಂದು ಸಂಖ್ಯೆ; ಒಂದು ಸಾವಿರ ಕೋಟಿ.

---

## ಒಳ ಬೆಡಗಿನ ತಿಳಿಹಾಡು

**ಇರಾ**

**ಇರಾ,ಇರಾ, ಏರು (1–2)**

: ಭೂಮಿ(ಸಂ)

---

## ಸಂಚಯ

**ಕುಡ**

**ಬೇರೆ ಕುಡಗಳು/ ಕುಲುಮೆಯಲ್ಲಿವೆ/ ಇಲ್ಲಿ ಕಾವ್ಯದ ಕಮ್ಮಟ (12–1, 2, 3)**

: ಕುಂಟೆ, ನೇಗಿಲುಗಳ ಬಾಯಿಗೆ ತೊಡಿಸುವ ಕಬ್ಬಿಣದ ಪಟ್ಟಿ–ಹಲ್ಲು.

*ಬೇಂದ್ರೆಯವರಿಗೆ ಬೇಸಾಯದಂತೆ ಕಾವ್ಯಕಮ್ಮಟ. ಅಲ್ಲಿ ಸದಾ ಹರಿತವಾಗಿ ಉಪಯುಕ್ತವಾಗುವ ಕುಡಗಳಿರಬೇಕು. ಭಾವಕ್ಕೆ ತಕ್ಕ ಭಾಷೆ, ಅರ್ಥ, ಅಲಂಕಾರ, ಛಂದಸ್ಸು ಒಡಗೂಡಿ ಸೃಷ್ಟಿಯಾಗುವ ಕಾವ್ಯವೆಂಬ ಒಕ್ಕಲುತನಕ್ಕೆ ಬೇಕಾದ ಕುಡಗಳು ಅವರ ಭಾವಕೋಶದ ಕುಲುಮೆಯಲ್ಲಿವೆ.

# ೧೬. ಉತ್ತರಾಯಣ (೧೯೬೦)

## ಭೀಷ್ಮ ಉತ್ತರಾಯಣ

### ವಿತೃಷ್ಣ, ಕೃಷ್ಣ ದ್ವೈಪಾಯನ

**ಕೃಷ್ಣ ಕೃಷ್ಣ ಜಯ ಕೃಷ್ಣ ಮುರಾರೇ/ ವಿತೃಷ್ಣನಾದೆನು ನಾ ಬಾಯಾರೆ (ಸಾಲು:1, 2)**

* *

**ಕೃಷ್ಣ ದ್ವೈಪಾಯನರು ಬಂದರು/ ಭಾರವಾಗಿದೆ ಭಾರತ (ಸಾಲು:29–30)**

: ದಾಹ ನೀಗಿಸಿಕೊಂಡವನು.

*ಇಲ್ಲಿ ಭೀಷ್ಮ "ನನ್ನ ದಾಹವೇ ನನಗೆ ತಣಿವನ್ನು ನೀಡುತ್ತಿದೆ" ಎನ್ನುತ್ತಿರುವನು.

"ಕೃಷ್ಣದ್ವೈಪಾಯನರು ಬಂದರು ಭಾರವಾಗಿದೆ ಭಾರತ". ಕೃಷ್ಣದ್ವೈಪಾಯನ ಅಂದರೆ ವ್ಯಾಸರು. ಅವರು ಮತ್ಸ್ಯಗಂಧಿ ನಡೆಸುತ್ತಿದ್ದ ದೋಣಿಯೊಳಗೆ ಕೂತಾಗ ಸಾವಿರ ಮಂದಿ ಕುಳಿತಷ್ಟು ಭಾರವಾಯಿತು(ಆ ದೋಣಿ ಸಾವಿರ ಜನ ಕೂತಾಗಲಷ್ಟೇ ಮುಂದೆ ಸಾಗುವುದು)ಮತ್ತು ದೋಣಿ ಮುಂದೆ ಸಾಗಿತು. ಮಹಾಭಾರತ ಕತೆ ಎಲ್ಲೆಲ್ಲಿ ನಿಲ್ಲುತ್ತದೋ ಅಲ್ಲೆಲ್ಲ ಅದರಕರ್ತೃ ವ್ಯಾಸ ತಾನೇ ಒಂದು ಪಾತ್ರವಾಗಿ ಒಳಹೊಕ್ಕು ನಿಂತು ಕತೆಗೆ ಚಾಲನೆ ನೀಡುತ್ತಿದ್ದರು.

### ಯುಧಿಷ್ಠಿರ

**ಯುಧಿಷ್ಠಿರನೆಂದಂದು ಕರೆದರು/ ಎಂದೊ ಹೋಗಿದೆ ಸ್ಥೈರ್ಯವು. (ಸಾಲು:61, 62)**

: ಯುದ್ಧದಲ್ಲಿ ಸ್ಥಿರನಾಗಿರುವವನು,–ಅಚಲನಾಗಿರುವವನು; ಧರ್ಮರಾಯನ ಇನ್ನೊಂದು ಹೆಸರು.

*ಕಾವ್ಯ ಸಂದರ್ಭದಲ್ಲಿ ಯುಧಿಷ್ಠಿರನ ಸ್ಥಿರತೆ ಇಲ್ಲದ್ದನ್ನು ಕವಿ ತಿಳಿಸಿದ್ದಾರೆ.

* * * * * *

### ದೇವವ್ರತ

**ದೇವ ದೇವತೆಗಳಿಗು ಆಯ್ತು ದೇವವೃತನ/ ಭಕ್ತಿ ಚಾರಿತ್ರ್ಯವೇ ಅಮೃತ ಪಾನಾ (ಸಾಲು:109, 110)**

*ದೇವವ್ರತ ಒಬ್ಬ ಕೃಷ್ಣಭಕ್ತ. ಕೃಷ್ಣ ತೀರ್ಥವನ್ನು ಅಪನಂಬಿಕೆಯಿಂದ ಸ್ವೀಕರಿಸಿದರೂ ಅವನಿಗೆ ತೀರ್ಥಗ್ರಹಣದ ಫಲಕೊಟ್ಟನು. ದೇವವ್ರತನನ್ನು ತನ್ನ ಕೊಳಲಾಗಿ ಕೃಷ್ಣ

ಮಾಡಿಕೊಂಡನು.

---

## ಕವಿಗೆ ಕಿವಿಗೊಡದಿಹರೆ ಎದೆಯುಳ್ಳವರು?

**ಡಂಭಕ, ಶಂಬರ**

**ಡಂಭಕದ ಮಾತೇಕೆ ಆಡಂ/ಬರದ ನಟನೆಯೆ ಬೇಕೆ, ಸಾಕೋ/ ಆ ದಿಗಂಬರ ಭಾವ ಶಂಬರನಗರ ಸಂಹರಿಸೆ (4–5, 6, 7)**

: ಮೋಸ; ವಂಚನೆ; ಕಪಟ.

: ಪ್ರದ್ಯುಮ್ನನಿಂದ ಹತನಾದ ಒಬ್ಬ ರಾಕ್ಷಸ.

* * * * * *

**ಹೊಕ್ಕರಣೆ**

**ಕನ್ನಡದ ಹೊಕ್ಕರ/ ಣೆಯಲಿ ಘನ ಸೋಪಾನ ರಚನೆಗೆ ಇಂಬು ದೊರೆಕೊಳಿಸಿ. (6–2, 3)**

: (ದೇವಸ್ಥಾನದ ಬಳಿಯಿರುವ ಪವಿತ್ರವಾದ) ಕೊಳ; ಕಲ್ಯಾಣಿ.

* * * * * *

**ಅರುಳು**

**ಕವಿಗೆ ಕಿವಿಗೊಡದಿಹರೆ ಎದೆಯುಳ್ಳವರು ಅರುಳಿನಲಿ (6–6)**

: ಕರುಣೆ; ದಯೆ.

*ಅರುಳು ಪದವನ್ನು ತಮಿಳರು ಈಗಲೂ ದಿನಬಳಕೆಯಲ್ಲಿ ಬಳಸುತ್ತಾರೆ. ಅರುಳ್ ಮುರುಗನ್ ಯೆಂದರೆ ಕರುಣೆ, ದಯೆಯ ಮುರುಗ.

ಅರುಳು ಸಹೃದಯರ ಎದೆಮಿಡಿತ. ಹಾಗಾಗಿ ಅವರು ಸದಾ ಕಾವ್ಯಕ್ಕೆ ಕಿವಿಗೊಡುವರು.

***

ಶ್ರೀಮಾತಾರವಿಂದರ ಅನುಯಾಯಿಯಾದ ಬೇಂದ್ರೆ ಅವರು ಹೀಗೆ ಪ್ರಾರ್ಥಿಸಿದ್ದಾರೆ: **‘ಮಾತಾಯ ಕೃಪೆಯು ಸಿರಿಗುರುವಿನರುಳು ಕರುಳಾಗಿ ಪೊರೆಗೆ ದಯೆಯಿಂದ. (ಹಾಡು ಪಾಡು: ಹಾ! ಆನಂದಾ!)**

---

## ಏನರ್ಥ?

**ಪಾಖಂಡಿ**

**ಪಾಖಂಡಿಗೇಕಯ್ಯ ಐಕ್ಯ ನೀತಿ? (3–3)**

: ವೇದಧರ್ಮವನ್ನು ಖಂಡಿಸುವ ನಾಸ್ತಿಕ ಮತದವರು; ಧರ್ಮಲಂಡ.

---

## ಬೆಳಗು ಜಾವ

**ಮಲಗಂಟು**

**ಮುಚ್ಚಿಲ್ಲ ನನಗೆ, ನಾನು ತೆರವು/ ಬಿಚ್ಚು ಮಲಗಂಟು (1–2, 3)**

: ಸುಲಭವಾಗಿ ಬಿಚ್ಚಲು ಬರದಂತೆ ಮಲಕು ಮಲಕು ಹಾಕಿ(ತೊಡಕು ತೊಡಕಾಗಿ ಹಾಕಿದ) ಕಟ್ಟಿದ ಗಂಟು.

ಸರಗಂಟು, ಮೆಳೆಗಂಟು, ಟಗರುಗಂಟು, ಕಗ್ಗಂಟು, ತಿರುಗಂಟು ಇತ್ಯಾದಿ ಗಂಟುಗಳನ್ನು ಹಾಕುವ ರೂಢಿಯಿದೆ.

---

## ಸಮದಂಡಿಗೆ

**ಮಂಡಿಗೆ, ಪ್ರಸ್ತ**

**ಮನದಾ ಮಂಡಿಗೆಯಿಂದಲೆ ಆದೀತೆ ಪ್ರಸ್ತ? (3–1)**

: ಗೋದಿಯ ಹಿಟ್ಟಿನಿಂದ ಮಾಡುವ ಒಂದು ಬಗೆಯ ಭಕ್ಷ್ಯ; ಮಂಡಕ.

: ಶುಭಕಾರ್ಯ; ಮಂಗಳಕಾರ್ಯ.

---

## ಲಾವಣ್ಯ

**ಬಹುರೂಪಿ, ಸೀಪು**

**ಲವಲವಿಕೆಯಲಿ ಮಿಂಚಿ/ ಮುಚ್ಚಾಟವಾಡುತಿಹ ಬಹುರೂಪಿಯೇ/ ಅಮೃತದಿರವೇ ನನ್ನ/**

**ಮರೆವಿಲ್ಲದರಿವಿನಲಿ ಇಹೆ ಸೀಪಿಯೇ॥. (1–1, 2, 3, 4)**

: ಹಲವು ರೂಪಗಳಿಂದ ಕೂಡಿದುದು.

: ಸಿಹಿ; ಸವಿ.

*ಬೇಂದ್ರೆಯವರಿಗೆ ಕಾವ್ಯವು 'ಕಂಪಿನಕರೆ'ಯಾಗಿರುವಂತೆ 'ಸೀಪು'–ಸವಿಯಾಗಿದೆ. ಕಾವ್ಯವು ತನ್ನ ಲಾವಣ್ಯದ ಲವಲವಿಕೆಯಲ್ಲಿ ಮಿಂಚಿ ಮುಚ್ಚಾಟವಾಡುವ ಬಹುರೂಪಿ. ಅದು ಕವಿಯ ಮರೆವಿಲ್ಲದರಿವಿನ ಸಿಹಿ, ಜೀವಪೋಷಕ ಸವಿ–ಅಮೃತ.

* * * * * *

**ಉರುಪು**

**ಲಾವಣ್ಯದುರುಪಿನಲಿ/ ಮನದ ಗಾಯವು ಮಾಯ್ದು ಗುರುತಾಯಿತು। (4–1, 2)**

: (ನಾಟ್ಯ) ನೃತ್ಯದಲ್ಲಿ ಒಂದು ಭಂಗಿ.

*ಕಾವ್ಯವು ಲಾವಣ್ಯದಲ್ಲಿ ನಲಿವ ಹಾವಭಾವದ ಉರುಪು–ನೃತ್ಯಭಂಗಿ. ಆ ಮೋಹಭಾವದಲ್ಲಿ ರಸಿಕ ಸಹೃದಯನ ಮನದ ಗಾಯ ಮಾಯುತ್ತದೆ.

* * * * * *

**ಲವ, ರವ, ಕರು**

**ನಿನ್ನ ಲವದಲ್ಲಿ ರವ/ ನವನವತೆಯಲಿ ಧ್ವನಿಸಿ ಛಂದವಾಯ್ತು/ ಕಲ್ಪಿಸಿದ ಕರುವಿನಲಿ/ ಏನೊ ಎರಕವ ಹೊಯ್ದು ಅಂದವಾಯ್ತು. (5–1, 2, 3, 4)**

: 1. ಅಲ್ಪ; ಸ್ವಲ್ಪ, ಲೇಶ.

2. ಆಟ; ಕೇಳಿ.

: ಧ್ವನಿ; ಶಬ್ದ; ಪದ.

: ಎರಕ ಹೊಯ್ಯುವುದಕ್ಕಾಗಿ ಮಾಡಿದ ಅಚ್ಚು; ಎರಕದಚ್ಚು; ಪಡಿಯಚ್ಚು.

*ಕಾವ್ಯ ಲಾವಣ್ಯವು ಲವಲವಿಕೆಯಿಂದ ಲವದಲ್ಲಿ–ಆಟದಲ್ಲಿ ನಲಿದಾಡುತ್ತದೆ. ಅದರಲ್ಲಿ ಹೊಮ್ಮುವ ರವ–ಪದಪದವು ನವನವತೆಯಲ್ಲಿ ಧ್ವನಿಸಿ ಹರ್ಷಗೊಂಡು ಛಂದಸ್ಸಾಗುತ್ತದೆ. ಕವಿ ಕಲ್ಪಿಸುವ ಕರು–ಪಡಿಯಚ್ಚಿನಲ್ಲಿ ಭಾವ ಎರಕಗೊಂಡು ಸೊಬಗಿನಿಂದ ಕಂಗೊಳಿಸುತ್ತದೆ.

## ಚಮತ್ಕೃತಿ

**ಸತ್, ವಿಮರ್ಶನ, ಉದ್ಭಿಜ್ಜ.**

**ಕುರುಡಿಗೂ ಸ್ಪರ್ಶವಿದೆ/ ಸತ್ತಿಗೆ ವಿಮರ್ಶವಿದೆ/ ಉದ್ಭಿಜ್ಜದಂತೇನೋ ಮೊಳೆಯುತಿಹುದು (3–4, 5, 6)**

ಓದೇವ ಕಿರಣವೇ/ ಇಹ ಸಹಜ ಹರಣವೇ/ ತಮವ ಭೇದಿಸಿ ದಾರಿ ದೀಪವಾಗು (4–1, 2, 3)

: ಸತ್; ಸತ್ತು; ಯಾವಾಗಲೂ ಇರುವುದು; ಶಾಶ್ವತವಾದುದು.

: ಗುಣದೋಷಗಳ ಪರಿಶೀಲನೆ; ವಿಮರ್ಶೆ.

: ಭೂಮಿಯನ್ನು ಸೀಳಿಕೊಂಡು ಮೊಳೆತು ಬರುವಂತಹದು; ಮರ, ಬಳ್ಳಿ, ಮೊದಲಾದವು.

*ಬೇಂದ್ರೆಯವರು ನಿಸರ್ಗದ 'ಚಮತ್ಕೃತಿ'ಯನ್ನು ಕಂಡು ಆಶ್ಚರ್ಯಗೊಂಡಿದ್ದಾರೆ. ಇದರ ಚಮತ್ಕಾರದಲ್ಲಿ ಕುರುಡಿಗೂ ಸ್ಪರ್ಶವಿದೆ. ಸತ್ತಿಗೆ–ಶಾಶ್ವತವಾದುದಕ್ಕೆ ಗುಣದೋಷಗಳ ಪರಿಶೀಲನ ದೃಷ್ಟಿಯಿದೆ. ಇಲ್ಲಿ ಉದ್ಭಿಜ್ಜ–ಭೂಮಿಯನ್ನು ಸೀಳಿಕೊಂಡು ಮೊಳೆತು ಬರುವ ಬೆಳೆಯಿದೆ. ಇಂತಹ ಅದ್ಭುತ ಜಗದಲ್ಲಿ–ದೇವ ಕಿರಣವೇ ತಮವ ಭೇದಿಸಿ ದಾರಿದೀಪವಾಗು ಎಂದು ಪ್ರಾರ್ಥಿಸಿದ್ದಾರೆ.

---

## ಭಾವದೀಪ

**ಜುಣುಗುಟ್ಟು, ನಿಲಿಂಪ**

**ತಂಪು ಜೊಂಪು ಏರಿತ್ತು ತಲೆಗು ಹುಟ್ಟಿತ್ತು ಕುಸುಮ ಕಂಪ/ ನಾಡಿ ನಾಡಿ ಜುಣುಗುಡುತ ಬಂತು ನಾನಾದೆನೋ ನಿಲಿಂಪ. (ಸಾಲು:3–1, 2)**

: (ಶೀತದಿಂದ) ಜುಂ ಎನ್ನು; ಕೊರೆ.

: ಸುರ; ದೇವತೆ.

*ಬೇಸಗೆಯ ಸುಡುಬಿಸಿಲ ಬೇಗೆಯಲ್ಲಿ–ತಣ್ಣನೆಯ ಕೊಳದಲ್ಲಿ ಕಾಲಿಟ್ಟಾಗಿನ ಸುಖಾನುಭವವನ್ನು ಮೇಲಿನ ಸಾಲುಗಳು ವರ್ಣಿಸಿವೆ. ಜೀವದ ನಾಡಿ ನಾಡಿ ಜುಂ ಎಂದ ನಲಿವಿನಲ್ಲಿ ಸುರ ತಾನೆಂಬ ಅನುಭವದಲ್ಲಿ ಕವಿ ನೆಮ್ಮದಿಯಾಗಿದ್ದಾರೆ.

---

## ವಿತರ್ಕಿ

### ಹುಚ್ಚು, ಕವಡು

**ಹುಚ್ಚಲಾ! ಬಿಚ್ಚಲಾ/ ಎದೆ ಕವಡುಗಂಟು./ ಜೀವ ಜೀವಕ್ಕುಂಟು/ ಬಾಳನಂಟು. (5–8 ರಿಂದ 11)**

: ಮರುಳು; ಬುದ್ಧಿಭ್ರಂಶ; ಮತಿಭ್ರಮಣೆ.

: ಮೋಸ; ವಂಚನೆ; ಕಪಟತನ; ಠಕ್ಕು.

*ಓ ಮರುಳು ಹಿಡಿದ ವ್ಯಕ್ತಿಯೇ! ನಿನ್ನ ಎದೆಯಲ್ಲಿರುವ ಮೋಸ, ವಂಚನೆಯ ಗಂಟನ್ನು ಬಿಚ್ಚು. ಅಲ್ಲಿ ಜೀವ ಜೀವದ ಬಾಳ ನಂಟು ಇದೆ. ಅದನ್ನು ಕಾಣು.

---

## ದೊಂಗಲುನ್ನಾರೂ$_s$ರೇ–ಜಾಗ್ರತ$_s$

### ದೊಂಗಲು, ಹೂಲೀ

**ದೊಂಗಲುನ್ನಾರೂ$_s$ರೇ–ಜಾಗ್ರತ$_s$/ ಎಚ್ಚರಿದೊಂದೇ ಆಗಲಿ ವ್ರತಾ (ಪಲ್ಲವಿ–1, 2)**

* *

ಮನಸ್ಯಾರ$_s$ ಹೂಲೀ ಎಬಿಸಿ/ ಮನಸ್ಯಾರ್ನ ತಿಂತಾರ (4–3, 4)

: ಕಳ್ಳರು; ತುಡುಗರು (ತೆಲುಗು: ದೊಂಗಲು)

: 1. ಹುಯಿಲು; ಗಲಾಟೆ; ಗದ್ದಲ.

2. ದಾಳಿ; ಆಕ್ರಮಣ.

*ಈ ಕವನದ ಭಾವ ಸಂದರ್ಭ: ನಾವು ನಮ್ಮ ಎಚ್ಚರದಲ್ಲಿ ಇರುವುದು ಅವಶ್ಯ. ತುಡುಗರ ಮ್ಯಾಲೆ ಒದರಾಡಿ ಪ್ರಯೋಜನವಿಲ್ಲ. ಮನುಷ್ಯರೇ ಗಲಾಟೆ ಎಬ್ಬಿಸಿ, ದಾಳಿ ಮಾಡಿ ಮನುಷ್ಯರನ್ನು ದೋಚುತ್ತಾರೆ.

---

## ಛಂದ–ಬಂಧ

### ಕುಂಟಲಿ, ಕುಟಿಲತೆ

**ಸತಿಯಿಲ್ಲದೆ ಪತಿಯಿಲ್ಲ/ ಸಂತತಿಯಾ ಗತಿಯಿಲ್ಲ./ ಬಂಧದೊಳಿದೆ ಸಂಬಂಧ/ ಸಹಜೀವನ ಸಖಭಾವನ/ ಇದೇ ಸಭ್ಯರ ರೀತಿ./ ಕುಂಟಲಿಯರ ಕುಟಿಲತೆಯಲಿ/ ಮೂಡುತ್ತಿದೆ ಭೀತಿ. (5–1 ರಿಂದ 7)**

: (ವ್ಯಭಿಚಾರಕ್ಕಾಗಿ) ಗಂಡು ಹೆಣ್ಣುಗಳನ್ನು ಹೊಂದಿಸುವ ದಾಸಿ; ತಲೆಹಿಡುಕಿ.

: ಮೋಸಗಾರಿಕೆ; ಕುಯುಕ್ತಿ; ಕುತಂತ್ರ.

*ಬೇಂದ್ರೆ ಅವರು ದಾಂಪತ್ಯ ಸಂಬಂಧದ ಪಾವಿತ್ರ್ಯತೆ, ಸಹಜೀವನ, ಸಖಭಾವ, ಸಂತತಿಯ ಉದ್ಧಾರ ತಿಳಿಸಿ ಅದನ್ನು ರಸ ಸಹಿತ ಪ್ರೀತಿ ಎಂದು ಹೇಳಿದ್ದಾರೆ. ಜೊತೆಗೆ ಕುಂಟಲಿಯರ ಬಗ್ಗೆ ಎಚ್ಚರದಿಂದಿರಬೇಕೆಂದು ತಿಳಿಸಿದ್ದಾರೆ.

* * * * * *

### ಕರಡಾಗು

**ಕರಡಾಗಿದೆ ಬರಡಾಗಿದೆ/ ರಸರಹಿತ ಪ್ರೀತಿ/ (7–3, 4)**

: ಅಶುದ್ಧವಾಗು; ಕೆಡು; ಹಾಳಾಗು.

---

## ಬಾ ಬೇಗ

### ಏಕಾಕ್ಷ, ಕರೆ

**ಅಗೋ ಅಲ್ಲಿ ಏಕಾಕ್ಷ ದಾಂಪತ್ಯ/ ಕರೆಕರೆಯೊಳೇಕೊ ಕರೆಯುತ್ತಿಹುದು ಬಾ ಬೇಗ (1–7, 8)**

: ಕಾಗೆ

: 1. ಕೂಗು; ಕುಕಿಲು; ಶಬ್ದಮಾಡು.

2. ಬರಹೇಳು; ಬರಮಾಡು; ಆಮಂತ್ರಿಸು; ಆಹ್ವಾನಿಸು.

*ಬಿರುಬೇಸಗೆಯಲ್ಲಿ ಕಾಗೆಯು ಮಳೆಗಾಗಿ ಕರೆ–ಕೂಗಿ, ಬಾ ಎಂದು ಕರೆ–ಬರಹೇಳುವುದನ್ನು ಕವಿ ಇಲ್ಲಿ ಕಾವ್ಯವಾಗಿ ನೀಡಿದ್ದಾರೆ. ಕಾಗೆಗಳು ಒಂದಾದ

ಮೇಲೊಂದು ಕೂಗಿ ಸಂವಾದಿಸುತ್ತವೆ. ಇಲ್ಲಿಯ ಕಾಕ ದಂಪತಿಗಳು ಅದೇ ರೀತಿ ಕರೆ ಕರೆಯೊಳು ಮಳೆಯನ್ನು ಕರೆಯುತ್ತಿವೆ.

* * * * * *

**ಬಾಂಬೊಲ, ಇಂದ್ರಚಾಪ**

**ಬಾಂಬೊಲದಿ ಬರಿದೇನು ಇಂದ್ರಚಾಪದ ಬಣ್ಣ (2–4)**

: ಆಕಾಶದ ನದಿ; ದೇವಗಂಗೆ.

: ಕಾಮನಬಿಲ್ಲು.

---

## ಜೀವಸ್ಪರ್ಶ

**ಪಸರ**

**ಕಾಯ ಕಾಣುವದು ಜೀವ ನೋಡುವದು ಭಾವ ತೋರಲುಂಟು/ ಬೇರೆ ಬೇರೆ ಈ ಪಸರ ಬೆಳೆದರೂ ಐಕ್ಯ ಬೇರೊಳುಂಟು (2–1, 2)**

: ಹರಡು; ವ್ಯಾಪಿಸು; ಹಬ್ಬು.

*ಇರವು, ಅರಿವು, ಹರವು ಐಕ್ಯಗೊಂಡ ವ್ಯಕ್ತಿಯ ವಿಕಾಸದ ಚಿಂತನೆ ಇಲ್ಲಿದೆ.

---

## ಜೋ–ಅರಿವು

**ಅರಬು**

**ಅರಬು ಏಕೆ? ಬರಬೇಕೆ? ಮರೆವೊ? ಓ/ ಅರಿವೆ ಅರಿವೆ ಇಹುದು. (7–1, 2)**

: ಬರ; ಕ್ಷಾಮ; ಅನಾವೃಷ್ಟಿ.

* 'ಈ ಏಕಾಗ್ರತೆಯು ದುರ್ಲಭವಾಗುವುದರಿಂದಲೇ ಸ್ವತಂತ್ರ ವಿಚಾರದ ಬರವೂ ಅರಬೂ ಬೀಳುವುದು' ಎಂದು ಬೇಂದ್ರೆಯವರು 'ವಿಚಾರಮಂಜರಿ'ಯಲ್ಲಿ ತಿಳಿಸಿದ್ದಾರೆ. 'ಹೊಸ ಹೊಚ್ಚ ಅರಿವಿನಲ್ಲಿ' ಬೆಳಕು ಕಾಣಬೇಕಾದ ವ್ಯಕ್ತಿಗೆ ಏಕಾಗ್ರತೆ ಮುಖ್ಯ. ಅದರಿಂದಲೇ ಎಲ್ಲ ನವನವೀನ ವೈಜ್ಞಾನಿಕ ಸಂಶೋಧನೆಗಳು ಆಗಿರುವುದು. ಹಾಗೂ ಸ್ವತಂತ್ರ ವಿಚಾರದ ಹೊಸ ಸಾಮಾಜಿಕ ಜಾಗೃತಿ ಕುಡಿಯೊಡೆದಿರುವುದು. ಆದಕಾರಣ

ಏಕಾಗ್ರತೆಗೆ ಬರ ಬಾರದಂತೆ ಜ್ಞಾನದಾಹಿ ಎಚ್ಚರಿರಬೇಕು. ಆ ಚಿಂತನಾಲಹರಿ ಮೇಲಿನ ಸಾಲಿನಲ್ಲಿದೆ.

---

## ಬೆಳಗಬೇಕು

**ಹೂತು, ಕಾತು, ಬೀತು**

**ಮೈಯ ಗೊರಟದಲಿ ಉಸಿರು ಚಿಗುರುತಿದೆ/ ಬಗೆಯ ಮೊಗ್ಗು ಹೂತು/ ಅರಿವು ಕಾತು ಹಣ್ಣಾಗುತಿಹುದು ಒಳ/ ಹಿಗ್ಗಿ ಬೀಜ ಬೀತು (2–1, 2, 3, 4)**

: (ಮರ, ಬಳ್ಳಿಗಳು)ಹೂವಿನಿಂದ ತುಂಬು; ಹೂವು ಬಿಡು, ಅರಳು; ವಿಕಾಸವಾಗು.

: ಕಾಯಿ ಬಿಡು.

: ಬಿಗಿಯನ್ನು ಕಳೆದುಕೊಳ್ಳು; ಸಡಿಲವಾಗು.

* ಮೈಯ ಗೊರಟದಲ್ಲಿ ವ್ಯಕ್ತಿಯ ಚೇತನವು ಆಲೋಚನಾ ಲಹರಿಯಲ್ಲಿ ದಾಂಗುಡಿಯಿಡುತ್ತ ವಿಕಾಸಗೊಂಡು ಹೂವಿನಂತೆ ಕಂಗೊಳಿಸುವುದನ್ನು ಕವಿಯು 'ಚಿಗುರು', 'ಬಗೆ', 'ಹೂತು' ಪದಗಳಲ್ಲಿ ಪ್ರತಿಮಾತ್ಮಕವಾಗಿ ಚಿತ್ರಿಸಿದ್ದಾರೆ. ಚಿಂತನಶೀಲ ವ್ಯಕ್ತಿಯ ಮಾಗುವಿಕೆಯನ್ನು ಅರಿವು ಕಾತು– ಕಾಯಿ ಬಿಟ್ಟು, ಹಣ್ಣಾಗುತ್ತಿದೆ ಎಂದು ರೂಪಕಾತ್ಮಕವಾಗಿ ಬಣ್ಣಿಸಿದ್ದಾರೆ. ಹಣ್ಣಾದಾಗ ಅವನ ಅರಿವಿನ ಬೀಜ ಒಳ ಹಿಗ್ಗಿನಿಂದ 'ಬೀತು' ಹೋಗಿರುತ್ತದೆ. ಅರ್ಥಾತ್ ಸಂಪೂರ್ಣ ಬೆಳವಣಿಗೆ ಹೊಂದಿ ಬಿಗಿಯನ್ನು ಕಳೆದುಕೊಂಡು ಸಡಿಲವಾಗಿರುತ್ತದೆ, ಬಿತ್ತನೆಗೆ ಯೋಗ್ಯವಾಗಿರುತ್ತದೆ.

---

## ನಮ್ಮ ಕೊನೆಯ ಶರಣು

**ಥಳಿ, ಅಸಿಮಿಸಿ**

**ಮುಂಜಾವಿನ ಕೆಂಜ ಬೆಳಕಿಗೆ/ ಕೆಂಪು ಕಡಿಮೀ ಬಿದ್ದಿದ್ರ/ ಥಳೀ ಹಾಕ್ರಿ ನಮ್ಮ ರಕ್ತದ ಹನ್ನೀs/ ಜಳಕಾ ಮಾಡ್ರಿ/ ಓಕುಳಿ ಯಾಡ್ರಿ/ ಅಸಿಮಿಸಿ ನೋಡಬ್ಯಾಡ್ರಿ/ ಬಂದೈತಿ ನಮ್ಮ ಬಾಳಿಗ್ಹೊನ್ನೀs (ಮೂರು:5–1 ರಿಂದ 6)**

: ಚಿಮುಕಿಸು; ಸಿಂಪಡಿಸು; ಸೂಸು; ಸೇಚನೆಮಾಡು.

: ಹಿಂದೆಗೆಯುವುದು; ಹಿಂದೆ ಮುಂದೆ ನೋಡುವುದು; ಸಂದೇಹ ಪಡು.

*ಕವನದ ಪ್ರಾರಂಭದ ಟಿಪ್ಪಣಿ: ಡಾಕ್ಟರ ಜೋಸ ರಿಝ್ಝುಲರು (1861–1896) ಫಿಲಿಪಾಯನ್ ದ್ವೀಪದ ಸಮರದಲ್ಲಿ 'ಹುತಾತ್ಮ'ರಾದರು. ಇವರನ್ನು ಗಲ್ಲಿಗೇರಿಸುವ ಮುನ್ನಾದಿನ, ಡಿಸೆಂಬರ್ 29–1896 'My Last Fare-well' ಈಕವನ ಅವರು ಬರೆದರು. ಅದರ ಭಾವಾನುವಾದವನ್ನು ಲಾವಣಿ ಛಂದದ ಗತ್ತಿನಲ್ಲಿ ಮಾಡಿದ್ದಾಗಿದೆ.

ಆ 'ಹುತಾತ್ಮ'ನ ರಾಷ್ಟ್ರಪ್ರೇಮ, ತ್ಯಾಗ, ಬಲಿದಾನ ಈ ಕವನದಲ್ಲಿ ಸ್ಫೂರ್ತಿಯುತವಾಗಿ ಹೊಮ್ಮಿ ಬಂದಿದೆ. ಕೆಚ್ಚಿನ ಭಾವಾವೇಶ ನುಡಿನುಡಿಯಲ್ಲಿ ಆವಾಹನೆಗೊಂಡಿದೆ. ಇದನ್ನು ಓದಿದಾಗ 'ನರಬಲಿ' ಕವನ ಬರೆದು ಬ್ರಿಟಿಷರ ಕೆಂಗಣ್ಣಿಗೆ ಗುರಿಯಾಗಿ ಜೈಲುವಾಸ ಅನುಭವಿಸಿದ ಬೇಂದ್ರೆ ಅವರು ಮಾತ್ರ ಈ ಬಗೆಯ ಭಾವಾನುವಾದ ಮಾಡಬಲ್ಲರು ಎನಿಸುತ್ತದೆ. ಇಲ್ಲಿ ಹೋರಾಟದ ಫಲವಾಗಿ ಮುಂದೆ ಬರುವ ಮುಂಜಾವು; ಅಲ್ಲಿ ಹೊಮ್ಮುವ ಕೆಂಬಣ್ಣ ಕ್ರಾಂತಿಯ ಸಂಕೇತ. 'ಕೆಂಜ ಬೆಳಕಿಗೆ' ತುಸು ಕಡಿಮೆಯಾದರೂ ತನ್ನ ರಕ್ತದ ಹನಿಯನ್ನು ಥಳೀ ಹಾಕಿ–ಚಿಮುಕಿಸಿ ಎಂದು ಕೇಳಿಕೊಳ್ಳುವ ಹುತಾತ್ಮನ ನುಡಿಯಲ್ಲಿ ತ್ಯಾಗ, ಸಮರ್ಪಣೆ, ಕ್ರಾಂತಿಯ ಭಾವ ಸಂಮಿಲನಗೊಂಡಿದೆ. ಅಷ್ಟಕ್ಕೆ ನಿಲ್ಲದೆ ಅವನು ಕೇಳಿಕೊಳ್ಳುತ್ತಾನೆ–ಆ ರಕ್ತದೋಕುಳಿಯಲ್ಲಿ ಸಂದೇಹಪಡದೆ, ಹಿಂದೆ ಮುಂದೆ ನೋಡದೆ(ಅಸಿಮಿಸಿ ಮಾಡ ಬ್ಯಾಡ್ರಿ) ಜಳಕಾ ಮಾಡ್ರಿ, ಓಕುಳಿಯಾಡ್ರಿ! ಈ ನುಡಿಯಲ್ಲಿ ಹೋರಾಟದ ಫಲದಲ್ಲಿ ಒಂದಾಗಿ ಹೋಗಿ ಎಂಬ ಧ್ವನಿ ಇದೆ.

ಅವನ ಹೋರಾಟದ ಅಂತಿಮ ನೆಲೆ ತಲುಪಿ ಅವನು ಇಲ್ಲವಾಗುವುದನ್ನು ಬೇಂದ್ರೆ ಅವರು ರೂಪಾಕಾತ್ಮಕವಾಗಿ 'ಬಂದೈತಿ ನಮ್ಮ ಬಾಳಿಗ್ಗೊನೀ$_{ss}$' ಎಂದು ಆ ಹುತಾತ್ಮನ ಬಾಯಿಂದ ಆಡಿಸಿದ್ದಾರೆ. ಬಾಳೆ ಮರಕ್ಕೆ ಗೊನೆ ಬಂದರೆ ಅದರ ಆಯಸ್ಸು ಮುಗಿದಂತೆ.

ಬೇಂದ್ರೆ ಅವರು 'ಸಂಚಯ' ಕವನ ಸಂಕಲನದಲ್ಲಿ ನಾರ್ವೆ, ಗ್ರೀಸ್, ಜಪಾನ್, ಫಿನ್‌ಲ್ಯಾಂಡ್, ಪೋಲ್ಯಾಂಡ್ ದೇಶಗಳ ರಾಷ್ಟ್ರಗೀತೆಗಳನ್ನು ಅನುವಾದ ಮಾಡಿದ್ದಾರೆ. ಬ್ರಿಟಿಷರ ವಿರುದ್ಧ ಹೋರಾಟದ ಸ್ವಾತಂತ್ರ್ಯ ದೀಪ್ತಿಯಲ್ಲಿ ಮಿಂದಿದ್ದ ಬೇಂದ್ರೆಯವರು ಬ್ರಿಟಿಷ್ ದೇಶ, ಅಲ್ಲಿನ ಕವಿ ಲೇಖಕರ ಕುರಿತು ಅನುವಾದ ಮಾಡಿಲ್ಲ. ಅವರು ಆಂಗ್ಲಭಾಷಾ ಪ್ರಾವೀಣ್ಯ ಪಡೆದಿದ್ದರೂ, ದೇಸಿ ಚಿಂತನೆಯ, ಭಾರತೀಯತ್ವದ ದೀಕ್ಷೆ ಹೊತ್ತು ಕಾವ್ಯ ರಚಿಸಿದ ರಾಷ್ಟ್ರಭಕ್ತ.

* * * * * *

## ಹರಾಹೂರಿ, ಗುಜ್ಜಾರಿ, ತೋಡಿ

**ಗಂಧಾತೂರಿ ಬೆಳಕತೂರಿ/ ಬಣ್ಣಾ ತೂರಿ ಹರಾಹೂರಿ/ ಗುಜ್ಜಾರಿ ಲಾವಣಿ ಕಟ್ಟಿ ತೋಡಿ$_{ss}$ (ಹನ್ನೆರಡು: 4–1, 2, 3)**

: ಉತ್ಸಾಹದ ಜಯಘೋಷ.

: ಚಿಕ್ಕ; ಪುಟ್ಟ.

: ಒಂದು ರಾಗದ ಹೆಸರು.(ಸಂಗೀತ), (ಕರುಣರಸ ಪ್ರಧಾನರಾಗ)

*ದೇಶಕ್ಕಾಗಿ ಪ್ರಾಣಾರ್ಪಣೆ ಮಾಡುವಾಗ ತಾಯಿನಾಡನ್ನು ನೆನೆದು ಉತ್ಸಾಹದ ಜಯಘೋಷ–'ಹರಾಹುರಿ'ಯೊಂದಿಗೆ ಮೈ ಮರೆತಿದ್ದಾರೆ. ಆ ಹುಮ್ಮಸ್ಸಿನಲ್ಲಿ ಅವರು ಕರುಣರಸ ಪ್ರಧಾನವಾದ ತೋಡಿ ರಾಗದಲ್ಲಿ ಚಿಕ್ಕ–ಗುಜ್ಜಾರಿ ಲಾವಣಿ ಕಟ್ಟಿ ಹಾಡಿ ಸಂಭ್ರಮಿಸುತ್ತಿದ್ದಾರೆ. ಕರ್ನಾಟಕ ಸಂಗೀತದಲ್ಲಿ ಎಪ್ಪತ್ತೆರಡು ಮೇಳಕರ್ತಗಳುಂಟು. ತೋಡಿರಾಗವು 29ನೆಯ ಮೇಳಕರ್ತ. ಧೀರ ಶಂಕರಾಭರಣದಲ್ಲಿ ಜನ್ಯವಾದುದು. ಹಿಂದೂಸ್ತಾನಿ ಸಂಗೀತದಲ್ಲಿ ಐದಾರು ಬಗೆಯ ತೋಡಿಗಳುಂಟು! ತಾನಸೇನನ ಮಗನ ಹೆಸರು 'ಬಿಲಾಸ್‌ಖಾನ್'. ಅವನು ತಂದೆಯನ್ನು ಕಾಣಲೆಂದು ತಾನಸೇನನಿದ್ದ ಪಟ್ಟಣಕ್ಕೆ ಬರುತ್ತಾನೆ. ತಂದೆಯನ್ನು ಕಾಣಲಾಗಲಿಲ್ಲ. ಅವನು ಮರಣವನ್ನಪ್ಪುತ್ತಾನೆ. ಆಗ ತಾನಸೇನ ಮಗನಿಗಾಗಿ ಹಾಡುತ್ತಾನೆ. ಆ ಸಮಯದಲ್ಲಿ 'ಬಿಲಾಸ್‌ಖಾನ್ ತೋಡಿ' ಹುಟ್ಟುತ್ತದೆ. ಇದು ಹಿಂದೂಸ್ತಾನಿಯಲ್ಲಿ ಪ್ರಸಿದ್ಧಿ ಪಡೆದಿದೆ.

* * * * * *

## ಪಲ್ಲಾ

**ನಂಬಿಗೀಯ ಪಲ್ಲಾ ಮಾಡಿ/ ಜೀವದ ನುಡಿ ಜೋಡಿ/ ಹಾಡತಿರ್ತೇವಿ ಹಗಲು ರಾತ್ರಿ ಕೂಡಿ$_{ss}$ (ಹನ್ನೆರಡು: 5–1, 2, 3)**

*ಹಾಡಿನ ಆರಂಭದಲ್ಲಿದ್ದು ನುಡಿಗೊಂದು ಸಲ ಪುನರಾವರ್ತನೆಗೊಳ್ಳುವ ಭಾಗ ಪಲ್ಲವಿ. ಅದು ಇಲ್ಲಿಯ ಜನರ ನುಡಿಯ 'ಪಲ್ಲಾ' ಆಗಿದೆ. ಈ ಲಾವಣಿಯಲ್ಲಿ ಪಲ್ಲವಿಯಿದೆ.

ತಾಯಿನಾಡಿನ ಬಗ್ಗೆ ಹುತಾತ್ಮನ ನಂಬಿಕೆಯ ಚಿಂತನೆ ಸದಾ ಅವನಲ್ಲಿ ಪಲ್ಲವಿಸುತ್ತಿರುತ್ತದೆ. ಅದು ಹೊರತು ಅವನಿಗೆ ಬೈಗು ಬೆಳಗು ಎಂಬುದಿಲ್ಲ.

---

## ೧೭. ಮುಗಿಲ ಮಲ್ಲಿಗೆ (೧೯೬೧)

## ಮುಗಿಲ ಮಲ್ಲಿಗೆ

**ಮುಗಿಲ ಮಲ್ಲಿಗೆ, ಜಲ್ಲಿ, ಗೊಲ್ಲಿ**

**ಓಹೊ ಹೂವು ಜಲ್ಲಿ ಜಲ್ಲಿ/ ಬಾಗಿದೆ ಅಗೊ ಗೊಲ್ಲಿ ಗೊಲ್ಲಿ (3–1,2)**

: ಒಂದು ಬಗೆಯ ಮಲ್ಲಿಗೆ, (ಆಲಂ) ಕೈಗೆ ಎಟುಕದುದು; ದುರ್ಲಭವಾದುದು.

: ಕುಚ್ಚು; ಗೊಂಡೆ; ಚೌರಿ.

: ಕುಚ್ಚು; ಗುಚ್ಛ.

*ಭಾವ ಸಂದರ್ಭ: ನನ್ನ ಮನೆಯಂಗಳದಲ್ಲಿ ಮುಗಿಲಮಲ್ಲಿಗೆಯ ಮರವೊಂದಿದೆ. ಈ ವಿಷಯ ಸಖೀಗೀತದಲ್ಲಿಯೂ ಬಂದಿದೆ. ಅದರ ಸಾಂಕೇತಿಕ ಅರ್ಥವನ್ನು ಭಾವಿಸಿ ಬರೆದುದು. ಪರಿಣಮನ ಪುಷ್ಪ (transformation flower) ಎಂದೂ ಇದರ ಸಂಕೇತ.

ವಿಶೇಷ: ಶ್ರೀ ಅರವಿಂದರು ಶ್ರೀಮಾತೆಯವರ ತಲೆಯ ಮೇಲೆ ಕೈಯಿಟ್ಟು ಸುಪ್ರಮಾನಸ ಶಕ್ತಿಯ ಅವತರಣವಾಗುವ ಪ್ರಾರ್ಥನೆ ಮಾಡಿದಾಗ ಆಶ್ರಮದ ಸುತ್ತಲೂ ಇದ್ದ ಮುಗಿಲ ಮಲ್ಲಿಗೆಯ ಎಲ್ಲ ಪುಷ್ಪಗಳು ಭೂಮಿಗೆ ಬಿದ್ದ ಘಟನೆ ಆಯಿತು ಎಂಬುದು ನೋಂದು ಆಗಿದೆ. ಶ್ರೀಮಾತೆಯವರಲ್ಲಿ ಪರಿವರ್ತನ ಹಾಗೂ ಅವತರಣ ಕ್ರಿಯೆ ನಡೆದುದರ ಸಂಕೇತ ಇದು ಎಂದು ಭಾವಿಸಲಾಗುತ್ತದೆ.

ಮರದಲ್ಲಿ ಜೋತು ಬಿದ್ದಿರುವ ಮುಗಿಲ ಮಲ್ಲಿಗೆ ಹೂ ಗೊಂಚಲನ್ನು ಕವಿ ಜಲ್ಲಿ, ಗೊಲ್ಲಿ ಎಂದು ಬಣ್ಣಿಸಿದ್ದಾರೆ.

---

## ಗಣಪಸ್ತುತಿ

**ಗಂಡಸ್ಥಳ, ನನೆ, ದಹರಕುಹರ, ಅಹರಹ, ಮಾಕಂದ, ಅಧ್ವರ, ಗೊಣಸು, ತಟ್ಟು.**

**"ಗಣಪ ನಿಮ್ಮ ಗಂಡಸ್ಥಳಕೆ ಕೋ ನಮ್ಮ ನಮಸ್ಕಾರ"/ ಮಾತೃಹೃದಯ ನೆನೆನೆನೆಯೆ ನನೆಯುವಾ ದಿವ್ಯ ಚಮತ್ಕಾರ ॥ಪಲ್ಲ॥**

**ಹಿಮಾಲಯದ ಕೈಲಾಸ ಶಿಖರ ಅದು ಶಿವದ ದಹರಕುಹರಾ/ ಒಬ್ಬರೊಬ್ಬರಲಿ ಇಬ್ಬರೆನದೆ ಅಹರಹರವಾಗಿ ಇಹರಾ/ ಹೃದಯ ಕಂದ, ಮಾಕಂದ ಚಂದ ನೆನೆದೇವು ಪ್ರತಿ ಪ್ರಹರಾ (1–1 ರಿಂದ 3)**

*                *

**ಶಿವಾಶಿವಾ ಶಿವಶಿವಾ ಹರಹರಾ ಶಂಭು ನಿತ್ಯ ಅಧ್ವರಾ (3–1)**

*                *

ಎದ್ದಿರಲಿ ನಾವು, ಮಲಗಿರಲಿ ತಾವು, ತಾ ಕಾಣುತಿರಲಿ ಕನಸು/ ನಮ್ಮನಸು ಛಿದ್ರಗೊಳದಂತೆ ನಿಮ್ಮ ಗಂಡಸ್ಥಳದ ಗೊಣಸು/ ಹಾಕಿರಲಿ ಕಟ್ಟು, ತಮವಿರಲಿ ತಟ್ಟು, ಕಾಣಿಸಲಿ ಆಗಿ ಕಣಸು (7–1, 2, 3)

: ಕಪೋಲ ಪ್ರದೇಶ; ಕೆನ್ನೆ.

: ಚಿಗುರು; ಪಲ್ಲವಿಸು; ಅಂಕುರಿಸು.

: ಸೂಕ್ಷ್ಮವಾದ ಒಳಿತಿನ ಗೂಡು.

: ಪ್ರತಿದಿನ; ದಿನದಿನ.

: ಮಾವಿನ ಮರ.

: (ಸೋಮಪಾನವೇ ಪ್ರಧಾನವಾದ)ಯಜ್ಞ; ಯಾಗ.

: ಕೊಂಡಿ; ಸರಪಣಿಯ ಕುಣಿಕೆ.

: ಮೆಲ್ಲಗೆ ಬಡಿ.

*ಕವನದ ಭಾವ ಸಂದರ್ಭ: ಇದರೊಳಗಿನ ಮೊದಲ ಸಾಲು ಸ್ವಪ್ನ ಸ್ಫೂರ್ತ, ಸ್ವಪ್ನ ರಚಿತ. ಅದು ಪಲ್ಲವಿಯ ಭಾಗ. ಅಂತೆಯೇ ಅದಕ್ಕೆ ಅವತರಣ ಚಿಹ್ನ. ಶಿವ, ಶಕ್ತಿ ಅವರ ಕಂದನಾದ ಗಣಪ ಈ ಮೂವರ ಐಕ್ಯಭಾವ ವರ್ಣಿಸಲಾಗಿದೆ. ಗಂಡಸ್ಥಳದ ಮದೋದಕ ತಾಯಿಯ ತೊರೆಹಾಲು.

*                *

ನಿನ್ನ ತಾಯಿ ಹೃದಯ ನಮ್ಮನ್ನು ನೆನೆದ ಮಾತ್ರಕ್ಕೆ, ನಮ್ಮತ್ತ ಅನುಗ್ರಹದ ದೃಷ್ಟಿ ಬೀರಿದ ಮಾತ್ರಕ್ಕೆ ದಿವ್ಯ ಚಮತ್ಕಾರಗಳು ಉಂಟಾಗುತ್ತವೆ. ನನೆ ಅಂದರೆ ಚಿಗುರುವುದು, ಚಮತ್ಕಾರ ಚಿಗುರೊಡೆಯುತ್ತವೆ.

*                *

ಶಿವ ವಾಸಿಸುವ ಕೈಲಾಸ ಪರ್ವತವನ್ನು ಕವಿ ದಹರಕುಹರ/ಸೂಕ್ಷ್ಮವಾದ ಒಳಿತಿನ ಗೂಡು ಎಂದು ವರ್ಣಿಸಿರುವರು. ಶಿವಪಾರ್ವತಿಯರು ದಿನದಿನವೂ (ಅಹರಹರ್) ಅನ್ಯೋನ್ಯವಾಗಿ ಬದುಕುತ್ತಿರುವರು. ಅಂತಹ ಶಿವಪಾರ್ವತಿಯರ ಹೃದಯಕಂದ,

ಕೈಲಾಸವನದ ಮಾಕಂದ/ಮಾವಿನ ಮರವಾದ ನಿನ್ನ ಚಂದವೇ ಚಂದ. ನಿನ್ನನ್ನು ಪ್ರತಿ ಮುಂಜಾನೆ (ಪ್ರಹರ) ನೆನೆಯುವೆವು.

* *

ನೀನಿರುವ ಸ್ಥಳದಲ್ಲಿ ನಿತ್ಯಯಜ್ಞ ನಡೆಯುತ್ತದೆ. ಆ ಪೂಜೆಯಾದರೂ ಯಾವುದು? ನಾದೋಪಾಸನೆ ಮತ್ತು ಸಾಹಿತ್ಯೋಪಾಸನೆ.

ನಮ್ಮ ಪ್ರಜ್ಞೆ(ನಾವು ಎದ್ದಿರಲಿ, ಮಲಗಿರಲಿ, ಕನಸು ಕಾಣುತ್ತಿರಲಿ) ನಿಮ್ಮ ಅನುಗ್ರಹದಿಂದ ಸದಾ ಜಾಗೃತವಾಗಿರಲಿ, ನಿಮ್ಮ ಗಂಡಸ್ಥಲದ ಗೊಣಸುವಿನ ಶಬ್ದದಿಂದ ಎಚ್ಚರದ ಅವಸ್ಥೆ ಕಟ್ಟಿರಲಿ, ನಿದ್ರಾವಸ್ಥೆಗೆ ತಟ್ಟಾಗಲಿ, ಕನಸಿನ ಅವಸ್ಥೆಗೆ ಅದೇ ಕನಸಾಗಲಿ.

---

# ಲೋಕಾಲೋಕೇ

## ಲೋಕಾಲೋಕೆ, ದ್ವಾದಶ, ಅಭಿಜಿತ್

**ಲೋಕಾಲೋಕೇ ಓಂ ತತ್‌ಸದಿತಿ/ ಲೋಕಾಂತರ್ಗತ ಮಾತಾ ಅದಿತಿ/ ದ್ವಾದಶಗತಿ ದಾಸೋಹಂ ವದತಿ/ ಭಾರತಿ ಶ್ರೀಮಾತೇ./ ಭಾರತಿ ಶ್ರೀ ಮಾತೇ. (1–1 ರಿಂದ 5)**

ಮಘಾ–ಶ್ರವಣಗಳ ಸಾತ್ವಿಕ ಕಂದಾ/ ಅಭಿಜಿತ್ ಅಭಿಜಿತ್ ಅಭಿಜಿತ್ ಎಂದಾ/ ಅಧ್ರುವವಲ್ಲಾ ಧ್ರುವಗತಿಯಂದಾ (2–1, 2, 3)

: ಲೋಕಾ+ಆಲೋಕೇ = ಲೋಕವನ್ನು ಅವಲೋಕಿಸಿದಾಗ.

: ಹನ್ನೆರಡು.

: 1. ಜಯಶಾಲಿ; ವಿಜಯಶೀಲ.

2. ದಿವಸದ ಎಂಟನೆಯ ಮುಹೂರ್ತ; ಹೊತ್ತು ಮೂಡಿದ ಮೇಲೆ ಹದಿನೈದನೆಯ ಗಳಿಗೆಯಿಂದಿಡಿದು ಹದಿನೇಳನೆಯ ಗಳಿಗೆಯ ವರೆಗಿನ ಕಾಲ; ಕುತುಪ ಕಾಲ.

*ಲೋಕವನ್ನು ಅವಲೋಕಿಸಿದಾಗ ಲೋಕ=ಓಂ ತತ್ ಸತ್ ಎಂಬುದು ತಿಳಿಯಿತು(ಇತಿ). ಅದಿತಿ (ದೇವತೆಗಳ ತಾಯಿ) ಲೋಕದ ತಾಯಿ. 'ಲೋಕಾಲೋಕೇ' ಪದ್ಯದ ಹನ್ನೆರಡು ಭಾಗಗಳ(ದ್ವಾದಶ ಗತಿ) ಒಟ್ಟಾರೆ ಅರ್ಥ ದಾಸೋಹಂ ಎಂಬುದನ್ನು ಸಾರುತ್ತಿದೆ. ಭಾರತ ಮುಂದೆ ಲೋಕಗುರುವಾಗುವಳು ಎಂಬುದು ಅರವಿಂದರ ಭವಿಷ್ಯವಾಣಿಯಾಗಿದೆ.

ಶ್ರೀ ಅರವಿಂದರು ಮಘಾ ಶ್ರಾವಣ ಮಾಸಗಳ ಸಾತ್ವಿಕ ಕಂದ. ಅವರು ಸರ್ವವಿಜಯಿ(ಅಭಿಜಿತ್)ಯಾಗಿ ಬಾಳಿದವರು. ಕದಲದ ಧ್ರುವನಕ್ಷತ್ರವೂ

ಗತಿಶೀಲವಾಗುತ್ತದೆ. (ಅಧ್ರುವವಲ್ಲ ಧ್ರುವಗತಿ). ಇಡೀ ಮನುಷ್ಯಕುಲಕ್ಕೆ ಆಧ್ಯಾತ್ಮಿಕ ವಿಕಾಸ ಸಂಭವಿಸುತ್ತದೆ ಎಂದು ಭವಿಷ್ಯ ನುಡಿದವರು ಅವರು.

---

## ಬಾಯಿ ಬ್ರಹ್ಮಾ–ಮೌನ ಬ್ರಹ್ಮಾ

### ಕಣಿ, ಗಣಿ

**ನನ್ನ ಹೃದಯದಾಗ ನಿನ್ನ ಪಾದಾ/ ಅದರ ಮ್ಯಾಲೆ ತೆಯ್ದೆ ನನ್ನ ಹಣಿ/ ಹಣೀ ಮ್ಯಾಲೆ ಬರೀ ನಿನ್ನ ಕಣಿ./ ಮರಣದ ಸಿಪ್ಪೀ ಸುಲಿದು/ ಜನುಮದ ಹಿಪ್ಪೀ ಹಿಳಿದು/ ನಿನ್ನ ಡಂಗರಾ ಸಾರತೇನಿ/ ಕೊಡು ಕೈಯಾಗ ಗಣಿ. (6–1 ರಿಂದ 7)**

: ಭವಿಷ್ಯ ಫಲ.

: ಬಿದಿರಿನ ಕೋಲು; ದಂಡ.

*ಬೇಂದ್ರೆಯವರು ಜಗನ್ಮಾತೆ ತಾಯಿಗೆ ತನ್ನನ್ನು ಸಮರ್ಪಿಸಿಕೊಂಡು ಆ ತಾಯಿಯೇ ತನ್ನ ಕಣಿ–ಭವಿಷ್ಯಫಲ ರೂಪಿಣಿ ಎಂದು 'ಹಣೀ ಮ್ಯಾಲೆ ಬರಿ ನಿನ್ನ ಕಣಿ' ಎಂದು ಧ್ಯಾನಿಸಿದ್ದಾರೆ. ಆ ತಾಯಿಯ ಕೀರ್ತಿಯನ್ನು ಡಂಗೂರ ಸಾರಲು ತನ್ನ ಕೈಯಲ್ಲಿ ಗಣಿ–ಒಂದು ದಂಡ ಕೊಡು ಎಂದು ಕೇಳಿದ್ದಾರೆ.

---

## ಮೀನ–ಕೇತು

### ಅರಣಿ, ಕರಣಿ

**ಅರಣಿಗೆ ಅರಣಿ/ ಬೆಂಕಿಯ ಕರಣಿ/ ಹೊತ್ತಿತು ತಲೆ ಎತ್ತಿ (1–1, 2, 3)**

: ಯಾಗದ ಅಗ್ನಿಯನ್ನು ಹುಟ್ಟಿಸಲು ಉಪಯೋಗಿಸುವ ಬನ್ನಿಯ ಮರದ ಕೊರಡು ಅಥವಾ ಅಶ್ವತ್ಥ ಮರದ ಕೊರಡು.

: 1. ಸೊಂಡಿಲು.

2. ಹಿತ್ತಾಳೆಯ ದೊಡ್ಡ ತುತೂರಿಯಂತಹ ಊದುವ ವಾದ್ಯ.

*ಬೇಂದ್ರೆಯವರು ಅರಣಿಗೆ ಅರಣಿಯನ್ನು ಉಜ್ಜಿ ಹೊಮ್ಮಿಸುವ ಬೆಂಕಿಯನ್ನು ಮೊದಲಿನ ಸಾಲಿನಲ್ಲಿ ಹೇಳಿ, ಎರಡು ಮತ್ತು ಮೂರನೆಯ ಸಾಲಿನಲ್ಲಿ ಅರಣಿಯಿಂದ ಬೆಂಕಿ ಹೊಮ್ಮುವುದನ್ನು ಚಿತ್ರಿಸಿದ್ದಾರೆ. ಕರಣಿಗೆ ಮೇಲೆ ಸೂಚಿಸಿರುವಂತೆ ಎರಡು ಅರ್ಥವಿದೆ.

ಆನೆಯ ಸೊಂಡಿಲಂತೆ ಏರುಮುಖವಾಗುವುದರ ಜೊತೆಗೆ ಬೆಂಕಿಯು ಉರಿಹೊತ್ತಿ ಊದುವ ಶಬ್ದವನ್ನೂ ಒಳಗೊಂಡಿರುತ್ತದೆ. ಹೊತ್ತಿ ತಲೆಯೆತ್ತಿ ಹೊಮ್ಮುವ ಬೆಂಕಿ 'ಕರಣಿ'ಯಲ್ಲಿ ಪ್ರತಿಮಾತ್ಮಕವಾಗಿ ಚಿತ್ರಣಗೊಂಡಿದೆ.

* * * * * *

## ಒತ್ತಿ, ವಾಲಿ

**ಮುದ್ದಿನಾ ಮುದ್ರೀ/ ಒತ್ತೀಸಿ ತಂದ್ರೀ/ ಯಾಕಕ್ಕಾ ಈ ವಾಲಿ/ ತೊಟ್ಟಿಲವಾಗಿ/ ತೂಗುವದವ್ವಾ/ ತುಂತುಂಬಿ ಕಣ್ಣಾಲಿ (6–1 ರಿಂದ 6)**

: ಪರೀಕ್ಷಿಸು; ಒಳಹೊಕ್ಕು ನೋಡು.

: ವಾಲೆ; ಕಿವಿಯಲ್ಲಿ ಧರಿಸುವ ಒಡವೆ; ಕರ್ಣಾಭರಣ.

*ಕುಂತಿಯು ತಾನು ಋಷಿ ದುರ್ವಾಸರಿಂದ ಪಡೆದ ವರವನ್ನು ಪರೀಕ್ಷಿಸಲು ಪ್ರಯತ್ನಿಸಿ ಪಡೆದ ಮಗುವನ್ನು ಕವಿಯು 'ಒತ್ತೀಸಿ ತಂದ್ರೀ' ಎಂದು ಚಿತ್ರಿಸಿದ್ದಾರೆ. ಕವಚ ಕರ್ಣ ಕುಂಡಲಗಳೊಂದಿಗೆ ಜನಿಸಿದ ಅಮೃತ ಪುತ್ಥಳಿಯಾದ ತನ್ನ ಕಂದನನ್ನು ನೋಡುತ್ತ ಕನ್ನಿಕೆಯಾದ ಕುಂತಿ ಜನಾಪವಾದಕ್ಕೆ ಬೆಚ್ಚಿ ದುಃಖಿಸುತ್ತಿದ್ದಾಳೆ.

ಕವನದ ಭಾವ ಸಂದರ್ಭ: ಕಾವ್ಯದ ಜನ್ಮ ಒಂದು ಅದ್ಭುತ ಘಟನೆ. ಅದೊಂದು ಕಾಣಿಕೆಯ ಕುರುಹು. ಸೂರ್ಯನ ಸ್ಪರ್ಶದಿಂದ ಕುಂತಿ ಕರ್ಣನನ್ನು ಪಡೆದು ತೇಲಿ ಬಿಟ್ಟಂತೆ ಕವಿಯು ಪ್ರತಿಭೆಯ ಸ್ಪರ್ಶದಿಂದ ಕಾವ್ಯವನ್ನು ತೇಲಿಬಿಡುತ್ತಾನೆ.

---

# ಸಣ್ಣ–ಸೋಮವಾರ

## ಸಣ್ಣ

**ಬಂತಣ್ಣ ಸಣ್ಣ ಸೋಮವಾರಾ/ ಕಾಣಬೇಕಣ್ಣ ಸೋಮೇಶ್ವರಾ॥ಪ॥**

* 'ಶ್ರಾವಣ' ಪದ ಅಪಭ್ರಂಶವಾಗುತ್ತ ಧಾರವಾಡದ ಗ್ರಾಮೀಣರ ಬಾಯಲ್ಲಿ 'ಸಣ್ಣ' ಆಗಿದೆ. 'ಸಣ್ಣಸೋಮವಾರ' ಪವಿತ್ರವಾಗಿ ಧಾರವಾಡದ ಜನರ ಭಕ್ತಿಭಾವದ ಸಲೆಯಾಗಿದೆ. ಅಂದು ಸೋಮೇಶ್ವರನ ದರ್ಶನ ಭಾಗ್ಯವನ್ನು ಪಡೆದು ಜನ ಧನ್ಯರಾಗುತ್ತಿದ್ದಾರೆ.

* * * * * *

## ಶಾಲ್ಮಲಿ, ಸೆಜ್ಜಿಸಾಲು, ಬೂರಲ

**ಶಾಲ್ಮಲಿ ಸಣ್ಣ ಬಾಲಿ/ ಕಿವಿಯಲ್ಲಿ ತಾಳೆ ವಾಲಿ/ ಗರಿಗರಿ ಬನದಾಗ ಅಡಗಿ/ ಗಂಗಾ ಹೊಳಿಯಾಗಿ/ ಸಾಗರ ಬಿದ್ದು ಸಾಗರಕಾಗಿ/ ಹೊರಟಾಳ ಗೋಕರ್ಣಕಡಿಗಿ/ ಬೂರಲ ದೀಪಮಾಲಿ/ನಂದಿಸಿ ಸೆಜ್ಜಿ ಸಾಲಿ/ ಗತ್ತಿನ ಸಪ್ಪಳಿಲ್ಲದ ನಡಿಗಿ (10–1ರಿಂದ 9)**

*ಬೇಂದ್ರೆಯವರ ಚಿಕ್ಕಂದಿನ ಒಂದು ಅನುಭವ ಮತ್ತೊಂದು ಮಜಲಿನ ಅನುಭವಕ್ಕಾಗಿ ಶಾಲ್ಮಲಿಯ ರೂಪಕಕ್ಕೆ ಜಿಗಿಯುತ್ತದೆ. ಧಾರವಾಡದ ಸೋಮೇಶ್ವರನ ನೆಲದ ಶಾಲ್ಮಲಿ ಚಿಕ್ಕ ನದಿಯಾಗಿ ಹುಟ್ಟಿ ಬೆಳೆವ ರೀತಿಯನ್ನು ಬೇಂದ್ರೆಯವರು ಚಿತ್ರಿಸಿದ್ದಾರೆ. ಅವಳು ಬೆಳೆದು ಗಂಗಾವಳಿಯಾಗಿ ಗೋಕರ್ಣದ ಮಹಾಬಲೇಶ್ವರನನ್ನು ಕಂಡು ಸಾಗರ ಸೇರುವಾಗ ಇಡೀ ಪ್ರಕೃತಿಯೇ ಮಹಾಬಲವಾಗುತ್ತದೆ. ಸಣ್ಣ ಭಾವದ ಸೆಜ್ಜಿಸಾಲು ನಂದಿ ಹೋಗಿ ಹಿರಿದಾದ ಬೂರಲದ ದೀಪದ ಮಾಲೆಯಾಗಿ ಬೆಳಗಿ, ತನ್ನ ಗತ್ತಿನ ಸಪ್ಪಳ ಮಾಡದ ನಡಿಗೆಯಿಂದ ಜೀವಾತ್ಮ ಪರಮಾತ್ಮನನ್ನು ಸೇರಿದ ಭಾವವಾಗಿ ಅಭಿವ್ಯಕ್ತಗೊಳ್ಳುತ್ತದೆ.

ಕೆಲವು ತಿಂಗಳ ಧಾನ್ಯ ಬೆಳೆಯಾಗಿ ಬೆಳೆದು, ದೀಪದ ಕುಡಿಯಂತೆ ಸೆಜ್ಜೆ ತೆನೆಯಿದ್ದು, ಅದು ಆಕಾಶಮುಖಿಯಾದರೂ ಅದಕ್ಕೆ ಅಸಾಮಾನ್ಯತೆಯ ಎತ್ತರಕ್ಕೇರುವ ನಿಲುವಿಲ್ಲ. ಆ ಎತ್ತರ ಭಾವದ ಊರ್ಧ್ವಗಾಮಿತ್ವದ ಸಂಕೇತವಾಗಿ ಬೂರಲಮರವಿದೆ. ಬೂರಲಮರ ಹೂತು, ದೀಪಮಾಲೆಯಂತೆ ಗತ್ತಿನಿಂದ ಸಪ್ಪಳಿಲ್ಲದೆ ಬೆಳಗುವ ರೀತಿ ಅಧ್ಯಾತ್ಮಜೀವಿ ಬೆಳಗಬೇಕು. ಮಹಾಬಲನನ್ನು ಕಾಣಬೇಕು. ಗೋಕರ್ಣದ ಮಹಾಬಲನನ್ನು ಕಾಣಲು ಶಾಲ್ಮಲಿ ಗಂಗಾವಳಿಯಾದಂತೆ ಸಜ್ಜೆ ಧಾನ್ಯದ ವ್ಯಕ್ತಿವಿಕಾಸ ಹೊಂದಿ ಬೂರಲ ವೃಕ್ಷವಾಗಿ ಹೂತು ಮೇಲ್ಮುಖದ ಬೆಳಕು ಕಾಣುವ ಬೆಳಕಾಗಬೇಕು ಎಂಬ ಭವ್ಯರೂಪಕವನ್ನು ಬೇಂದ್ರೆ ನೀಡಿದ್ದಾರೆ.

ಹಾಗೆ ತನ್ನ ಚಿಕ್ಕಂದಿನ ಭಾವ ಬೆಳೆದು ಸುತ್ತಲ ಪ್ರಕೃತಿ ಬೂರಲ ದೀಪಮಾಲೆಯಾಗಿ ಸೆಜ್ಜಿಸಾಲು ಭಾವದ ಕಿರಿತನ ನಂದಿ; ಸಾಗರಬಿದ್ದು ಸಾಗರವಾಗುವ ಅಲೌಕಿಕತೆಯ ಭಾವ, ಗತ್ತಿನ ಸಪ್ಪಳಿಲ್ಲದ ನಡಿಗೆಯಾಗುತ್ತದೆ. ಆ ಗತಿಯಲ್ಲಿ ಶಿವದರ್ಶನವಾದ ಬಗೆಯನ್ನು 'ಶಿವರಾತ್ರಿ ಬೆಳಕೆ, ಬೆಳ್ಳ ಬೆಳಗು, ಕೈಲಾಸಾನೆ ಹೊರಗೂ ಒಳಗು', ಎಂಬ ನುಡಿಗಳಲ್ಲಿ ಮೂಡಿಸಿದ್ದಾರೆ.

* * * * * *

## ಓರಿ

**ನೆನಪಿನ ಓರಿಯೊಳಗ/ ಮಿಣುಕ್ತಾವ ಎಣ್ಣೆ ದೀಪ/ ಎಲ್ಲೆ! ಹೋದಾವೊ ಗೆಳೆಯಾ ಆ ಕಾಲಾ (12–7, 8, 9)**

: ಒಳಮನೆ; ಕೋಣೆ; ಗರ್ಭಗೃಹ.

*ಚಿಕ್ಕಂದಿನ ನೆನಪು, ನೆನಪಿನ ಮನದ ಒಳಕೋಣೆಯಲ್ಲಿ (ಓರಿಯೊಳಗ) ಅನುಭಾವವಾಗಿ ಎಣ್ಣೀದೀಪ ಮಿಣುಗಿದಂತೆ ಶಾಂತವಾಗಿ ಉರಿದು ಬೆಳಕಾಗಿದೆ. ಅಲ್ಲಿ ಬೆಳಕಿರುವುದರಿಂದ ಆ ಕಾಲ ಎಲ್ಲಿಯೂ ಹೋಗಿಲ್ಲ ಅದು ಇಲ್ಲೆ ಇದೆ ಎಂದು ಪ್ರತ್ಯಕ್ಷ ನೋಡಿದ್ದ, ಕಂಡ ನೆನಪು ಆಧ್ಯಾತ್ಮಿಕ ನಿರೂಪಣೆಯಾಗಿ ಅನುಭಾವ ಕಾವ್ಯವಾಗಿ ಇಲ್ಲಿ ಹರಿದಿದೆ.

---

## ವದತೋವ್ಯಾಘಾತ

### ವದತೋವ್ಯಾಘಾತ, ಅನ್ನೆ-ರಂಟಿ

**ಎಲೆ ಮುಳ್ಳು ಕಂಟಿ, ನನಗೆಲ್ಲಿ ಅಂಟಿ ಬಂದಿದ್ದೆ ಅನ್ನೆ-ರಂಟಿ? (1-1)**

: ಹೇಳಿ, ನಡೆದುಕೊಳ್ಳದಿರುವುದು.

: ಅನ್ಯರಿಗೆ ತೊಡಕಿಕೊಂಡಿರುವ, ಬೆಂಬಿಡದ ಜಾತಿಯವರು; ಅಂಟಿಕೊಳ್ಳುವ ಸ್ವಭಾವದವರು; ಜಿಡ್ಡು ಪ್ರವೃತ್ತಿಯವರು.

ಕೆಲವು ಹುಲ್ಲಿನ ಹೊಡೆಗಳಿಗೆ, ಉತ್ರಾಣಿ ಕಡ್ಡಿಗಳಿಗೆ, ಕೆಲವು ಮುಳ್ಳುಗಳಿಗೆ ತಾಕಿದರೆ ಸಾಕು ತಗಲಿಕೊಳ್ಳುವ(ಅಂಟಿಕೊಳ್ಳುವ) ಗುಣವಿದೆ.

ಕೆಲವು ಕಂಟಿ(ಪೊದೆ)ಯ, ಬಳ್ಳಿಯ ದೇಟು ಕಾಂಡಗಳನ್ನು ಕತ್ತರಿಸಿ ಬೇರೆಡೆಗೆ ನೆಟ್ಟರೆ ಅವು ಅಲ್ಲಿಯೇ ಬೇರು ಬಿಟ್ಟು ಬೆಳೆಯುತ್ತವೆ. ಇಂಥವುಗಳಿಗೆ ಮಲ್ಲಿಗೆ (ಬಳ್ಳಿಯ) ಅಂಟು, ಗುಲಾಬಿ ಅಂಟು, ದಾಸವಾಳದ ಅಂಟು ಎಂದು ಹೇಳುವುದು ರೂಢಿಗತವಾಗಿದೆ.

---

## ಯಾರಿಗೆ ಬೇಕಾಗೈತಿ ನಿಮ್ಮ ಕವಿತಾ?

### ಸಾಯಕಲ್ಲ ಮ್ಯಾಲೆ ಟಾಂಗ ಹೊಡಿ

**ಸಾಯಕಲ್ಲ ಮ್ಯಾಲೆ ಟಾಂಗ ಹೊಡಿ (1-9)**

: 'ಟಾಂಗಾ' ಧಾರವಾಡದವರಿಗೆ ಸುಪರಿಚಿತ. ಬೇಂದ್ರೆಯವರು ಟಾಂಗಾದಲ್ಲಿಯೇ ಕುಳಿತು ಇಡೀ ಧಾರವಾಡ ಸುತ್ತುತ್ತಿದ್ದರು. ಆ ರೀತಿಯ ಪ್ರಯಾಣ ಮಾಡುವಾಗ ಉದ್ದಕ್ಕೂ ಅವರು ದನಿಮಾಡಿ ಓದುತ್ತಿದ್ದರು. ಈಗಲೂ ಹಳೆ ಬಸ್‌ಸ್ಟಾಂಡ್ ಹೊರಬದಿಗೆ ಒಂದು ಟಾಂಗಾ ನಿಂತಿರುತ್ತದೆ. ಧಾರವಾಡ ಏರು-ಇಳಿವುಗಳಿಂದ ಕೂಡಿರುವ ಪ್ರದೇಶ. ಟಾಂಗಾ ಅಪರೂಪವಾಗುತ್ತಿದ್ದಂತೆ ಆ ಸ್ಥಾನವನ್ನು ಸಾಯಕಲ್ ಆಕ್ರಮಿಸಿಕೊಂಡವು. ಶಾಲೆ, ಕಾಲೇಜುಗಳಿಗೆ ಹೋಗಿ ಬರಲು ವಿದ್ಯಾರ್ಥಿಗಳು (ಸಿಟಿ ಬಸ್ಸಳಿಲ್ಲದ ಕಾಲದಲ್ಲಿ)

ಸಾಯಕಲ್‌ಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಅದನ್ನು ಕಂಡು ಬೇಂದ್ರೆ ಮೇಲಿನಂತೆ ಹೇಳಿದ್ದಾರೆ.

*        *        *        *        *        *

**ಹಸರಾಣಿ**

**ನಾಚಿಗೇನ್ನಾಚಿಗೀ?_ಹೋಗಾಚಿಗಿ!/ ಎಲ್ಲಾರು ಅಲ್ಲಿ ಹೋಗಿ ಬಂದಾರ/ ಹಸರಾಣಿ ರೊಟ್ಟೀ ತಿಂದಾರ (5–1, 2, 3)**

*ಇದು ಕಬ್ಬಿಣಾಂಶವುಳ್ಳ ನೆಲದಗುಂಟ ಬೆಳೆಯುವ ಸಸ್ಯ. ತುಂಬಾ ಮೃದುವಾಗಿರುವ ಇದನ್ನು ಕಿತ್ತು ತಂದು ಬೇರಿನಿಂದ ಬೇರ್ಪಡಿಸಿ ಪಲ್ಯ ಮಾಡುವುದನ್ನು ಗ್ರಾಮೀಣರು ಚೆನ್ನಾಗಿ ಬಲ್ಲರು. ಸಣ್ಣ ಸಣ್ಣ ಎಲೆಗಳುಳ್ಳ ಇದರ ದೇಟುಗಳೂ ತುಂಬಾ ಸ್ವಾದಿಷ್ಟ. ರೊಟ್ಟಿಯ ಜೊತೆ ಈ ಸೊಪ್ಪಿನ ಪಲ್ಯೆ ಮಾಡಿ ತಿನ್ನುವುದು ರೂಢಿ. ಹೊಸ ತಲೆಮಾರಿನವರಿಗೆ ಇದು ಗೊತ್ತಿಲ್ಲ.

---

## ಮಾರ್ಮಿಕ ವಚನಗಳು

**ಕವಳ**

**ಗವಳಿಗನ ಕವಳ/ ಜೊಲ್ಲ ಸುರಿಸಿತ್ತು (8–3, 4)**

: ತಂಬುಲ.

*        *        *        *        *        *

**ಕಪಾಟ**

**ಛಿದ್ರಗಳಲ್ಲಿ ಅರ್ಥ ಹುಡುಕುತ್ತಾರೆ/ ಕನ್ನಡಿಗಣ್ಣಿನ ಕಪಾಟ ಮೂರ್ತಿಗಳು! (10–4, 5)**

: ಕಣ್ಣಿಗೆ ಅಕ್ಕಪಕ್ಕ ಕಾಣದಂತೆ (ಕುದುರೆಗೆ) ಕಟ್ಟಿದ ಚರ್ಮದ ಪಟ್ಟಿ; ಕಣ್ಣುಪಟ್ಟಿ.

*ಸಣ್ಣತನದ ವ್ಯಕ್ತಿಗಳ ಮಿತಿಯಾದ ನೋಟವನ್ನು ಕವಿ ರೂಪಕಾತ್ಮಕವಾಗಿ ಚಿತ್ರಿಸಿದ್ದಾರೆ.

---

# ಎಚ್ಚರಾಗಿದೆ ಹಳ್ಳಿ

**ಅಘು**

**ರಾಜ ಅಘುವನೆ ತಿಂದ, ಕೋಟಿ ಪ್ರಜೆ ಮತಿ ಮಂದ (2–1)**

: ಅಫೀಮು.

---

# ಭಾವವೇನೇ ಇರಲಿ

## ಅಪರಂಪಾರ, ಹಿರಿದವಳ, ಹಿಂಡವಳ, ಚಪ್ಪರಿಸು

**ಭಾವವೇನೇ ಇರಲಿ, ನಮ್ಮ ಭಾಷೆ ಅಪರಂಪಾರ/ 'ಎಲೆ ನಿನ್ನ ಹಿರಿದವಳ' ಎಂದು ಬಾಲ ಮುರಿಯುವನೊಬ್ಬ; 'ನಿನ್ನ ಹಿಂಡವಳ' ಎಂದು ಡುಬ್ಬ ಚಪ್ಪರಿಸುವನು ಇನ್ನೊಬ್ಬ. (1–1, 2, 3)**

: ಅನಂತ; ಎಲ್ಲೆಮೀರಿದ್ದು.

: ಹಡೆದವಳ; ಹೆತ್ತವ್ವ, ತಾಯಿಯನ್ನು ನಿಂದಿಸುವ ಬಯ್ಗಳು.

: ಎಮ್ಮೆ/ ಹಸುವಿನ ಹಾಲನ್ನು ಹಿಂಡುವ ಮೊದಲು ಕೆಚ್ಚಲು ತೊಳೆಯ ಬೇಕಾಗುತ್ತದೆ. ಆಗ ಮೊಲೆ ಸೆಟೆಯುತ್ತದೆ. ಅನಂತರ ಅದರ ಬೆನ್ನ ಮೇಲೆ ಚಪ್ಪರಿಸಿದಾಗ ತೊರೆ(ಸ್ವರ) ಬಿಡುತ್ತದೆ. ಸಾಮಾನ್ಯವಾಗಿ ಹಳ್ಳಿಗಳಲ್ಲಿ ಹಾಲನ್ನು ಕರೆಯುವವರು ಹೆಂಗಸರು. ಅವರನ್ನು ಪುರುಷ ವಿಕಾರವು 'ನಿನ್ನ ಹಿಂಡವಳ' ಎಂದು ಬೈದು ಎಮ್ಮೆ/ ಹಸುವಿನ ಡುಬ್ಬು ನೇವರಿಸುವರು.

: (ಪ್ರೋತ್ಸಾಹಿಸುವಂತೆ)ಮೈದಡವು; ನೇವರಿಸು.

*ಮೊಂಡು ದನವನ್ನು ಮುಂದೆ ಹೋಗುವಂತೆ ಮಾಡಲು ರೈತರು ಅದರ ಬಾಲ ಮುರಿದು 'ಎಲೆ ನಿನ್ನ ಹಿರಿದವಳ' ಎನ್ನುವರು. ಹೀಗಾಗಿ ಬೇಂದ್ರೆಯವರು 'ಭಾವವೇನೇ ಇರಲಿ, ನಮ್ಮ ಭಾಷೆ ಅಪರಂಪಾರ/ ಎಲ್ಲೆ ಮೀರಿದ್ದು' ಎಂದು ತಿಳಿಸಿದ್ದಾರೆ.

ಉತ್ತರ ಕರ್ನಾಟಕದಲ್ಲಿ ಜನಪದರು ಈ ಎರಡು ಪದಗಳನ್ನು ಸಲಿಗೆಯಿಂದ ಮಾತನಾಡುವಾಗ ಮತ್ತು ಜಗಳದ ಸಂದರ್ಭದಲ್ಲಿ ಬಳಸುತ್ತಾರೆ.

* * * * * *

**ಹಾನ, ಹಾಳ, ಮನೆಮೂಳ**

**ಅವ ಹಾನ, ಅವಳು ಹಾಳ, ಮನೆಮೂಳ ಎಲ್ಲೈತ್ಯೋ! (1–4)**

: ಇದ್ದಾನೆ.

: ಇದ್ದಾಳೆ.

: ಹೊರಗೆ ಓಡಾಡಲು ಶಕ್ತಿಯಿಲ್ಲದೆ ಇರಬೇಕಾದ ವ್ಯಕ್ತಿ; ಉಪಯೋಗವಿಲ್ಲದ ವ್ಯಕ್ತಿ ಎನ್ನುವ ಬಯ್ಗುಳು.

* * * * * *

**ಅನಾಡಿ, ಬೇಬರ್ಸಿ**

**'ಏ ಅನಾಡಿ, ಬೇಬರ್ಸಿ' ಎಂದು ಬಯಲಿಗೆ ಕೂಗು. (1–5)**

: ಕಾಡು ಗುಣದವ; ಅಸಭ್ಯ; ಜಂಗ್ಲಿ. ಒಂದು ಬಯ್ಗಳು.

: 1. ಬೇವರ್ಸಿ; ಯಾರೂ ದಿಕ್ಕಿಲ್ಲದ; ವಾರಸುದಾರರಿಲ್ಲದ; ಅನಾಥವಾದ.

2. ಕೆಟ್ಟುದು; ಕೆಟ್ಟವ್ಯಕ್ತಿ ಎಂಬ ಹೀನಾರ್ಥದಲ್ಲಿ ಪ್ರಯೋಗವಾಗುವ ಒಂದು ಬಯ್ಗುಳು.

---

## ಹೇತುಕವಲ್ಲವು

**ಹೇತುಕ**

**ಹೇತುಕವಲ್ಲವು ಈ ಮಾತು/ ಸೋತು ಬಂದವೋ ಈ ಮಾತು॥ಪ॥**

: ಚೋದನೆಗೆ ಕಾರಣವಾದ; ಉದ್ದೇಶಕ್ಕೆ ಸಂಬಂಧಿಸಿದ.

*ಕಾರಣ ನಿಮಿತ್ತವಾದುದು ಹೇತುಕ. ಬೇಂದ್ರೆಯವರ ಕಾವ್ಯದಲ್ಲಿ ಯಾವುದೇ ಉದ್ದೇಶಕ್ಕೆ ದೂಡುವ, ಪ್ರೇರೇಪಿಸುವ ಭಾವವಿಲ್ಲ. ಅದು 'ಅರ್ಥವಿಲ್ಲ ಸ್ವಾರ್ಥವಿಲ್ಲ, ಬರಿಯ ಭಾವಗೀತ.' ಅದು 'ಮಾತು ಮಾತು ಮಥಿಸಿ ಬಂದ ನಾದದ ನವನೀತ'. ಅದು ಜೀವನದ ನೋವು ಬಸಿದು ಹೊಮ್ಮಿ ಬಂದ ಕಾವ್ಯ. ಹಾಗಾಗಿ ಹೇಳಿದ್ದಾರೆ 'ಸೋತು ಬಂದವೋ ಈ ಮಾತು'. ಅದು ಸಹಜವಾಗಿ ಮೂಡಿ ಪ್ರೀತಿಯ ಹೊಲವಾಗಿರುವಂಥದು

ನೋಡಿದ್ದಲ್ಲ ಆಡಿದ್ದಲ್ಲ/ ಮೂಡಿದ್ದೇ ಕವಿಯಾಗಿತ್ತು./ ಇಂದಿನ ತೇಜ ನಾಳಿನ ಬೀಜ/ ಒಲವೇ ತಾ ಹೊಲವಾಗಿತ್ತು (ಸಾಲು: 3–1 ರಿಂದ 4)

---

# ಕಲ್ಲಾಗಿದ್ದೇನೋ?

**ಫಿಕ್ಕಾ**

**ಅದರ ಮುಂದ$_s$ ನನ್ನ ನೋವ$_s$ ನನಗ$_s$ ಫಿಕ್ಕಾ (ಸಾಲು: 11–4)**

: ಸಪ್ಪಗಿನ.

*ಕಾಲ ತಿಕ್ಕೊಂಬೋ ಹೆಣ್ಣು ಮಕ್ಕಳ/ ನಾಚಿಗಿಲ್ಲದ ಅಂಗಾಲು/ ಒದ್ದೂ, ಮುದ್ದಿಟ್ಟೂ, ಮಾಡಿತ್ತು/ ತಮ್ಮ ದುಃಖದ ಸ್ಪರ್ಶಾ (3–1 ರಿಂದ 4) ಆಂತರ್ಯದ ನೋವು ನರಳಾಟ, ದುಃಖ ದುಮ್ಮಾನಗಳನ್ನು ಕಲ್ಲಿಗೆ ಕಾಲು ತಿಕ್ಕಿ ಕೊಳ್ಳುತ್ತ ಹೆಣ್ಣುಜೀವಗಳು ಈ ಕವನ ಹೇಳಿವೆ. ಆ ಕಲ್ಲು ಒಮ್ಮೆ 'ಮೂರ್ತಿ'ಯಾಗಿ ಜೀವಚೈತನ್ಯಗಳನ್ನು ಜನಗಳಿಂದ ಪಡೆದಿತ್ತು. ಈಗ ಕಲ್ಲಾಗಿದೆ. ಆದರೆ, ತಾಯಂದಿರ ನೋವನ್ನು ಕೇಳುವ ತಾಳ್ಮೆ, ಸಹನೆ, ಮೌನವಿದೆ. ಇದು ದುಃಖಿತರಿಗೆ ಬೇಕು. ಅದರ ಮರ್ಮ ಅರಿತ ಕವಿ 'ಕಲ್ಲಾಗಿದ್ದೇನೋ' ಕವನ ಬರೆದು ಸಾಂತ್ವನದ ಕರುಣರಸವನ್ನು ಸಹೃದಯರಿಗೆ ಉಣಬಡಿಸಿದ್ದಾರೆ. ಜಗದ ಜನರ ನೋವಿನ ಮಧ್ಯೆ ತಾನು 'ಮೂರ್ತಿ'ಯಾಗಿದ್ದು ಈಗ ಕಲ್ಲಾಗಿರುವ ನೋವು ನೋವೇ ಅಲ್ಲ ಎಂದು ಕಲ್ಲು ಹೇಳಲು– ಕವಿಯು ಬೀದರ ಜನರ ಆಡುನುಡಿ 'ಫಿಕ್ಕಾ' ಬಳಸಿದ್ದಾರೆ. ನನ್ನ ನೋವ ನನಗ ಫಿಕ್ಕಾ–ಸಪ್ಪೆ. ('ಮೂರ್ತಿ' ಕವನ ಓದಿ)

* * * * * *

**ಕುನಸು**

**ಪಂಚಾಯಿತಿ ಮುಂದ ನ್ಯಾಯಿಲ್ಲಾ/ ತಗಲು ತಾಟೇದು/ ಖೂನಿಗೆ ಖೂನಿ ಮಾಡಿದಂಥಾ/ ಆ ಈ ಪ್ಯಾಟೇದು/ ಕುನಸಿಟ್ಟು ಕುದಿಯೋ ಅಂಥಾ/ ಹಾಳು ಕ್ವಾಟೇದು.(15–1ರಿಂದ6)**

: ಬದ್ಧ ದ್ವೇಷ; ಮತ್ಸರ; ಸೇಡು.

*ಆಳುವವರ ಪಾಳೆಗಾರಿಕೆ ಮನೋಧರ್ಮ ಹಾಳು ಕೋಟೆಯ ರೀತಿ ಸಂಕೀರ್ಣ ಮತ್ತು ನಾಶಮುಖವಾದುದು. ಅವರ ಬದ್ಧದ್ವೇಷ–ಕುನಸು. ಅವರು ಹೂಡುವ ಸಂಚು, ಕೊಲೆ, ಅನ್ಯಾಯ, ಅವರ ಪಂಚಾಯಿತಿಯ ಮುಖವಾಡದಲ್ಲಿಯ ಅಧರ್ಮದ ನಡೆಯನ್ನು ಕವಿ ಮೇಲಿನ ನುಡಿಯಲ್ಲಿ ತಿಳಿಸಿದ್ದಾರೆ.

## ವಿಶ್ವ ಮಾನವರಾ

### ನಿನಸೂರಾ

**ಓ! ನನ್ನ ಗೆಳೆಯಾ/ ಹೃದಯದ ಎಳೆಯಾ/ ಬಾಜಿಸುವೆ ನಿನಸೂರಾ (3–1, 2, 3)**

: ಸೂರು= ಶ್ರುತಿ; ಸಮಸ್ಪಂದನೆ; ಸಂವಾದಿಯಲ್ಲಿಯ ಒಂದು ಸ್ವರಸ್ಥಾನ. ಇಂಗಿತವನ್ನು ಅರಿತುಕೊಂಡು ಅವರ ಭಾವನೆಗಳಿಗೆ ಮಿಡಿಯುವುದು.

---

## ಓಂ ನಮೊ ಸತ್ಯಾ

### ಚೇಟಕ; ಮಾಟಕ

**ಸಂಗೀತ ನಾಟಕ ಚೇಟಕ ಮಾಟಕ ಅವತಾರಗಳ ತಳೆದೆ (4–3)**

: ಸೇವಕ; ಆಳು; ದಾಸ.

: ಕಣ್ಕಟ್ಟು ಮಾಡುವವನು; ಐಂದ್ರಜಾಲಿಕ.

*ಕವಿ ರವೀಂದ್ರರು ಸಂಗೀತ ನಾಟಕದಲ್ಲಿ ಮಾಡಿದ ಪ್ರಯೋಗವನ್ನು ಪ್ರತಿಮಾತ್ಮಕವಾಗಿ ಬಣ್ಣಿಸಿದ್ದಾರೆ.

* * * * * *

### ಒರೆ

**ಹೃದಯಸ್ಥ ಪುರುಷನ ಕಂಠಸ್ಥ ಗಾನವ ನೆಂಟಸ್ತನೆನೆ ಒರೆದೆ (6–2)**

: ನುಡಿ; ಮಾತು.

---

## ಕವಿ ತುಂಬಿ–ರವಿ ತುಂಬಿ

### ಛತ್ರ

**ದತ್ತಾ! ಗುರು ಪಾದಕ್ಕ ಛತ್ತರಿಸಿದಾ/ ನುಡಿಯ ಕೊಡಿಗೀ। (7–3)**

: ಗೌರವ ಸೂಚಕವಾಗಿ ದೇವರಿಗೆ ಹಾಗೂ ರಾಜರಿಗೆ ಹಿಡಿಯುವ ಬಿಳಿಯ ಕೊಡೆ.

*ಬೇಂದ್ರೆಯವರು ಕವಿ ರವೀಂದ್ರ, ಯೋಗಿ ಅರವಿಂದ, ಐರಿಷ್ ಕವಿ ಜಾರ್ಜ್ ರಸೆಲ್(ಏ.ಈ), ಖಲೀಲ್ ಜಿಬ್ರಾನ್‌ರನ್ನು ತನ್ನ ನಾಲ್ವರು ಗುರುಗಳೆಂದು ಕರೆದು ಕೊಂಡಿದ್ದಾರೆ.

ಅರಿವೆಂಬ ರವಿಯು ಮೂಡಲು/ ಗುರುವೆಂಬಾತ್ಮಾರವಿಂದವರಳಿತು ನನ್ನೊಳು. (ಸಾ.ವಿ.ಸ್ವ–ಪು 120)

ಎಂದು ಸುಖಿಸುವ ಬೇಂದ್ರೆ ಅವರು ರವೀಂದ್ರರ 'ಉಕ್ತಿಗಳನ್ನು ಗುಣು ಗುಣು ಹೇಳಿಕೊಳ್ಳುವದು ಕೆಲದಿನದ ಕ್ರೀಡೆಯಾಗಿತ್ತು ನನಗೆ... ಅವರ ಗೀತಗಳನ್ನು ಕುರಿತು ಪ್ರವಚನ ಮಾಡಿದೆ ಜನ ಸಮೂಹಕ್ಕೆ–ಇದೆಲ್ಲವೂ ರವೀಂದ್ರ ಕಾವ್ಯ ಪ್ರಕೃತಿಯ ಪೂಜೆಗಿಂತ ಅವರ ಸಾಧಕ ಪುರುಷನ ಧ್ಯಾನ–ಸಮಾಧಿಗಾಗಿ.'ಎಂದು ತಿಳಿಸಿದ್ದಾರೆ.

(ಸಾ.ವಿ.ಸ್ವ– ಪು: 119)

ರವೀಂದ್ರರನ್ನು ಕುರಿತು ರಚಿಸಿದ ಕವನದ ನುಡಿ ಸಮರ್ಪಣೆಯನ್ನು–ಭಕ್ತಿ ಗೌರವಗಳಿಂದ ಹಿಡಿದ ಬಿಳಿಕೊಡೆ(ಛತ್ತರಿಸು) ಎಂದು ಹಿಗ್ಗಿದ್ದಾರೆ.

* * * * * *

**ತುಂತುಣಿ**

**ತುಂತುಣಿಸಿದಂತೆ ತುಂಬಿ/ ಅಭಯ ತುಂಬಿ। ನಭವ ತುಂಬಿ/ ಭವ ಭವದ ಮಾಲೆ ತುಂಬೀ/ ಸಭೆಯ ತುಂಬೀ, ತುಂಬೀ. (10–1 ರಿಂದ 4)**

: ಒಂದು ಬಗೆಯ ತಂತೀ ವಾದ್ಯ. ಎಲ್ಲವ್ವ ದೇವತೆಯ ಭಕ್ತರು ತುಂತುಣಿ ಬಾರಿಸುತ್ತ ಹಾಡಿ ಕುಣಿಯುವರು.

* ಬೇಂದ್ರೆಯವರಿಗೆ ಜಾನಪದ ಹಾಡುಗಾರರು ಭಕ್ತಿಯಿಂದ ಜಾನಪದ ವಾದ್ಯಗಳೊಂದಿಗೆ ಹಾಡಿ ಕುಣಿಯುವುದು ಒಂದು ಸವಿಯ ಉಣಿಸು. ಅವರಿಗೆ ಅಂತಹದೇ ಸವಿ ಉಣಿಸು ರವೀಂದ್ರರ ಕಾವ್ಯ. ತುಂತುಣಿ ವಾದ್ಯವು ತನ್ನ ನಾದದ ಅಲೆಯಲ್ಲಿ ಎಲ್ಲರನ್ನು ಎಲ್ಲವನ್ನು ತಬ್ಬಿಕೊಂಡಂತೆ ರವೀಂದ್ರರ ಕಾವ್ಯ ಲೋಕವನ್ನು ತುಂಬಿ ಆವರಿಸಿತ್ತು. ಅದು ಮಧು ಭಾವದ ರಸಲಹರಿ ಎಂದು ವರ್ಣಿಸಿದ್ದಾರೆ.

---

## ನೂತನ

**ಅವಗುಂಠನ**

**ಬೆಳಕನೆರೆದು, ತಮವ ಹರಿದು ತೆರೆಯೋ ಅವಗುಂಠನಾ (2–1)**

: ಮುಖಪರದೆ; ಮೇಲುಮುಸುಕು.

---

## ನಡೆ ಸಖಿ

### ಜಡಧಿ

**ಜಡಧಿಯ ತಳದಲ್ಲೂ ಬಾಳುಂಟು ಬದುಕುಂಟು (2–1)**

: ಕಡಲು; ಸಾಗರ; ಸಮುದ್ರ.

---

## ನಕ್ಷತ್ರ

### ನೂಲು, ನುಲಿ

**ಹಳೆ ಹಾಡು ನುಡಿಸುತ/ ಹೊಸ ನೂಲು ನುಲುವ/ ನಾರಿಯು ನೆಲದಾಕೆ। (21–1, 2, 3)**

: ಎಳೆ; ಸೂತ್ರ; ತಂತು; ದಾರ.

: (ಹೊಸೆದು ಮಾಡಿದ) ಹುರಿ; ಹುರಿ ಹಾಕಿದ ನೂಲು.

*ಬೇಂದ್ರೆಯವರಿಗೆ ಭೂಮಿತಾಯಿ ಮೊದಲಗಿತ್ತಿ. ಅವಳು ಸದಾ 'ಹೊಸ ನೂಲು ನುಲುವ'ವಳು ಅರ್ಥಾತ್ ನೂಲುವವಳು. ಹೊಸ ನುಲಿಯಲ್ಲಿ ತಲ್ಲೀನಳಾಗಿರುವವಳು.

---

# ೧೮. ಯಕ್ಷಯಕ್ಷಿ (೧೯೬೨)

## ಯಕ್ಷಯಕ್ಷಿ

### ಮಖಾಳ

**ಶಂಖ ಪದ್ಮಾಂಕಿತ/ ಮಹಮನೆ ಒಂದಲ್ಲಿ/ ಆಗಿದೆ ತೀರ ಮಖಾಳಾ (ಸಾಲು: 191, 92, 93)**

: ಮಬ್ಬು; ಸ್ವಚ್ಛವಲ್ಲದ; ಕಳೆಗುಂದಿದ; ಬಾಡಿದ.

'ಹೇಮಮಾಲಿನಿ ಎಂಬ ಕುಬೇರ-ಸೇವಕ ಹೂ ಕೊಡುವ ಕೆಲಸದಲ್ಲಿ ತಪ್ಪಿದನಂತೆ. ಅಂತೆಯೇ ಅವನಿಗೆ ಕುಬೇರ ಶಾಪವಾಯಿತು'. ಎಂದು ಭಾವ ಸಂದರ್ಭವನ್ನು 'ಯಕ್ಷ-ಯಕ್ಷಿ ಗೀತ ರೂಪಕ' ಹೊಂದಿದೆ.

ವಿರಹ ತಾಪದಲ್ಲಿ ಯಕ್ಷನ ಮನೆ ಮಂಕಾಗಿ, ಕಾಂತಿ ಹೀನವಾಗಿರುವುದನ್ನು ಬೇಂದ್ರೆ 'ಮಖಾಳ' ಪದದಿಂದ ಚಿತ್ರಿಸಿದ್ದಾರೆ.

* * * * * *

### ಸ್ತನಿತ

**ಗದ್ದರಿಸಿದ ಮೋಡ, ಸ್ತನಿತ ಗಂಭೀರದಲಿ/ ತೆರಳಿತಗೊ ಯಕ್ಷ ಬಂದಾ ಹಾದಿ (ಸಾಲು: 218, 219)**

: ಗುಡುಗು; ಮೇಘ ಗರ್ಜನೆ.

* * * * * *

### ಬೆನ್ನೀರು

**ಕಣ್ಣೀರನೆರೆದವಗೆ। ಬೆನ್ನೀರು ಬಂತೋ। (ಸಾಲು: 237)**

: ಬಿಸಿನೀರು.

* * * * * *

### ನೀಲಕಂಠ

**ಓ ನೀಲಕಂಠ। ಕೇಕೆ ಏಕಿಲ್ಲವೋ। ಮಳೆಗಾಳಿ ಬಂದರೂನು। (ಸಾಲು: 238)**

: ನೀಲಬಣ್ಣದ ಕೊರಳುಳ್ಳುದು; ನವಿಲು; ಮಯೂರ.

* * * * * *

**ಸಾರಿಕೆ**

**ಹಾಡಿದಳು ಸಾರಿಕೆ (ಸಾಲು: 278)**

: ಹೆಣ್ಣುಗಿಳಿ; ಶಾರಿಕ.

---

## ನೀರಿಗಿಂತ ಅಳ್ಳಕೇನು?

**ಅಳ್ಳಕ**

**ನೀರಿಗಿಂತ ಅಳ್ಳಕೇನು?/ ಆದರೂನು ಅದರ ಏಟು/ ಕಲ್ಲಮಾಡಿ ನುಣ್ಣಗೆ/ ತಾನು ಇಹುದು ತಣ್ಣಗೆ. (1–1 ರಿಂದ 4)**

: 1. ಸಡಿಲ; ಬೇಕಾದ ಅಳತೆಗಿಂತ ಹೆಚ್ಚಾಗಿರುವುದು.

2. ನಿರ್ಬಂಧ ಹೆಚ್ಚಿಲ್ಲದಿರುವುದು; ಸಡಿಲವಾದ ಕಟ್ಟು.

*ಕಿಡಿಗೇಡಿತನದ ಕೆಟ್ಟ ಯೋಚನೆಯ ಘನತೆ ರಹಿತ ವ್ಯಕ್ತಿಯ ಜೊತೆ ಇರುವ ಕಲ್ಲಿನಂತಹ ಘನವ್ಯಕ್ತಿ ತನಗರಿವಿಲ್ಲದಂತೆ ಸವೆದು ಹೋಗಿರುತ್ತಾನೆ. ಘನವ್ಯಕ್ತಿಗೆ ತಾನು ಕರಗುತ್ತ ಹೋಗುವುದು ತಿಳಿಯದಂತೆ ಅವನ ಜೊತೆಗಿರುವ ಅಳ್ಳಕದ ವ್ಯಕ್ತಿ ತಣ್ಣಗಿರುತ್ತಾನೆ ಎಂಬುದನ್ನು ಈ ಮೇಲಿನ ಕಲ್ಲು ಮತ್ತು ನೀರಿನ ಸಾದೃಶ್ಯದಲ್ಲಿ ಬೇಂದ್ರೆ ಸಮರ್ಥವಾಗಿ ಅಭಿವ್ಯಕ್ತಿಸಿದ್ದಾರೆ.

*ಘನತೆ, ಆಳವ್ಯಕ್ತಿತ್ವವಿಲ್ಲದವನಿಗೆ 'ಅಳ್ಳಕ ಮನುಷ್ಯ' ಎಂದು ಗ್ರಾಮೀಣ ಜನ ಈಗಲೂ ಕರೆಯುತ್ತಾರೆ.

*ಚೆಡ್ಡಿ, ಲಾಡಿ ಅಳ್ಳಕವಾಯಿತುಯೆಂದರೆ ಸಡಿಲವಾಯಿತು ಎಂದರ್ಥ.

ಒಂದು ಗ್ರಂಥವನ್ನು ಮೇಲ್ನೋಟಕೆ ಓದಿ ವಾಚ್ಯಾರ್ಥವನ್ನಷ್ಟೆ ತಿಳಿದು, ಅದರ ಸಂಕೀರ್ಣತೆ ಗ್ರಹಿಸದವನದು. 'ಅಳ್ಳಕ ಗ್ರಹಿಕೆ'.

---

## ಚೈತ್ರ–ರಾಮ–ಧಾನ್ಯ–ಪ್ರಗಾಥ (೧)

**ಅಜಪಾಗಾಯತ್ರಿ**

**ಹೂ ಹೂವೇ ಉಸಿರಾಟವಾಡಿ ಅಜಪಾಗಾಯತ್ರಿಯಾದಂತೆವೊಲ್/ ಮಾವೂ ಹೂ°, ಮಮಕಾರ ಹೂ°, ಮನವು ಹೂ°, ಮೈ ಹೂ°,/ ಮನೋಲ್ಲಾಸ ಹೂ°. (ಸಾಲು: 4–1, 2)**

: ಅಜಪಾಮಂತ್ರ; 'ಸೋಹಂ'

*ಸ್ಪಷ್ಟವಾಗಿ ವರ್ಣೋಚ್ಚಾರಣೆ ಮಾಡದಿದ್ದರೂ ಉಚ್ಛ್ವಾಸ ನಿಃಶ್ವಾಸಗಳಿಂದಲೇ ಅಕ್ಷರ ರೂಪವಾಗಿ ಪರಿಣಮಿಸುವ 'ಹಂಸ' ಮಂತ್ರ.

ಅಜಪಾಮಂತ್ರವನ್ನು ಅನುಸಂಧಾನ ಮಾಡುವ ಯೋಗ–ಅಜಪಾಯೋಗ.

ಹಂಸಮಂತ್ರ: ಪರಮಾತ್ಮನನ್ನು ಕುರಿತು ಹೇಳುವ ಮಂತ್ರ. ಪ್ರಾಣಾಯಾಮ ಹಂಸ ಮಂತ್ರ.

* 'ವಸಂತದರ್ಶನ'ದಲ್ಲಿ ಕವಿಗೆ 'ಆಹಾಹಾ ಎನಿಸಿತ್ತು ಮಾಧವನ ಮೈ ತಾಗಿರ್ದ ತೆಂಗಾಳಿಯೂ' ಎಂಬ ಅನುಭಾವ. ಅದು ಅಜಪಾಗಾಯತ್ರಿ ಯೋಗದಲ್ಲಿ ಬ್ರಹ್ಮಾನುಭವ ಪಡೆವ ಅಲೌಕಿಕ ಆನಂದ.

ಇಡೀ ಪ್ರಕೃತಿ ಅಜಪಾಯೋಗದಲ್ಲಿರುವುದನ್ನು 'ಹೂ°' ಅಕ್ಷರದಲ್ಲಿ ಬೇಂದ್ರೆ ಸೂಚಿಸಿದ್ದಾರೆ ಎನಿಸುತ್ತದೆ.

* *

ಬೇಂದ್ರೆಯವರು ಅಜಪಾಯೋಗದಲ್ಲಿದ್ದು ರಚಿಸಿದ್ದು 'ಹಂಸದ ಹಾಡು'.

**'ಕೇಳಲೆ ಕೆಳದಿ ಹಂಸದ ಹಾಡು/ ಈ ಹಾಡಿಗೆ ಬೇರಾವುದು ಈಡು/ ಹಂಹಂ ಎನ್ನುತ ಹೊರಟಿತು ಉಸಿರು/ ಸಃ ಸಃ ಎನ್ನುತ ಹೊಕ್ಕಿತು ಉಸಿರು/ ಹಂಸೋ ಹಂಸಃ ಎನುತಿದೆ ಉಸಿರು'.**

* *

**'ಉಸಿರಲಿ ಹಾರುವ ಜೀವದ ಹಂಸ/ ಶ್ವಾಸೋಚ್ಛ್ವಾಸದ ರೆಕ್ಕೆಯ ಹಂಸ/ ಒಳಗೂ ಹೊರಗೂ ಒಂದೇ ಹಂಸ'.**

***

**'ಹಂಸವು ಕೇಳಿತು:ಎಲ್ಲಿಹೆ ಬ್ರಹ್ಮಾ?/ ಬ್ರಹ್ಮವು ಹೇಳಿತು: ಇಲ್ಲಿಹೆ ತಮ್ಮಾ,/ ಬಿಡುಗಡೆ ಇಲ್ಲವು ನಮ್ಮಾ ನಿಮ್ಮಾ'.(ಗಂಗಾವತರಣ: ಹಂಸದ ಹಾಡು)**

---

## ರಾಮಾಯಣ! (೩)

### ಬಾಡಿಸು

**ರಾಮನತ್ತರೂ ಸೀತೆಯತ್ತರೂ ಕರುಣರಸದ ಭೋಜನಾ/ ಉಳಿದವರತ್ತರೆ ಬಾಡಿಸಿಕೊಡ್ಸಕೊಳ್ಳರು ತಪ್ಪೀ ಜನಾ. (2–1, 2)**

: ಹಪ್ಪಳ, ಉಪ್ಪಿನಕಾಯಿ, ಚಕ್ಕಣ ಮೊದಲಾದ ಪದಾರ್ಥಗಳನ್ನು (ಆಹಾರ ಅಥವಾ ಕಳ್ಳಿನೊಂದಿಗೆ)ನಂಜಿಕೊಳ್ಳು.

*ರಾಮಾಯಣದಲ್ಲಿ ಊರ್ಮಿಳೆ, ಮಾಂಡವಿ, ಶ್ರುತಕೀರ್ತಿ ಮುಂತಾದವರ ದುಃಖವನ್ನು ಲೋಕದ ಜನ ಗಮನಿಸಲೇ ಇಲ್ಲ ಎಂಬುದನ್ನು 'ಬಾಡಿಸಿಕೊಡ್ಸಕೊಳ್ಳರು' ಎಂಬ ನುಡಿಯಲ್ಲಿ ಕವಿ ವ್ಯಂಗ್ಯಾತ್ಮಕವಾಗಿ ತಿಳಿಸಿದ್ದಾರೆ.

* * * * * *

### ಸ್ವಾಂತ ದುಃಖ

**ಸ್ವಾಂತ ದುಃಖವನು ಮಾನವ ಮರೆಯುವ ಕೇಳುತ ರಾಮಾಯಣಾ (6–3)**

*ರಾಮನ ದುಃಖ ಕೇಳಿ ಸ್ವಾಂತ ಸ್ವ+ಅಂತ (ತನ್ನಲ್ಲಿ ಕೊನೆಯಾಗುವ) ದುಃಖ ಮರೆಯುವನು. ಆದರೆ ಕವಿಯ ದುಃಖದ ವರ್ಣನೆಯಾಗಲಿ, ಸಹೃದಯನ ದುಃಖದ ಮರೆವಾಗಲಿ ರಾಮಾಯಣದ ಆಶಯವಲ್ಲ, ನಾರದ ಭಕ್ತಿಯೇ ರಾಮಾಯಣದ ಉದ್ದೇಶ.

---

## ಮನೆಗೆ ದೀಪ ಮಕ್ಕಳು

### ಆರತಿ, ನೇಹ, ಕಾಡಿಗೆ, ಕಾರು

**ಇದರಾರತಿ ಆರದು/ ಇಲ್ಲಿ ನೇಹ ತೀರದು/ ಇದು ಕಾಡಿಗೆ ಕಾರದು (2–1, 2, 3)**

: ಉತ್ಸವದ ವ್ಯಕ್ತಿಗಳಿಗೆ ಅರಿಸಿನ ಕುಂಕುಮ ಬೆರಸಿದ ನೀರಿನಿಂದ ಕೂಡಿದ ತಟ್ಟೆಯಿಂದ ಎತ್ತುವ ನೀರಾಂಜನ–ನೀಲಾಂಜನ–ದೀಪ.

: ಎಣ್ಣೆ; ತೈಲ.

: ದೀಪದ ಕುಡಿಯಿಂದ ಹೊರಡುವ ಹೊಗೆಯ ಕಪ್ಪು- ಮಸಿ.

: ಕಕ್ಕು.

*ಗೋಪಾಲಕರ ಮನೆಯಲ್ಲಿರುವ ಚಿಕ್ಕ ಹಣತೆ, ಮಿಣಿಮಿಣಿ ದೀಪವನ್ನು ಕುರಿತು ಬೇಂದ್ರೆ ಮೇಲಿನಂತೆ ಚಿತ್ರಿಸಿದ್ದಾರೆ. ಅದರ ನೇಹ/ ಎಣ್ಣೆ ತೀರುವುದಿಲ್ಲ. ಅದು ಕಾಡಿಗೆಯನ್ನು ಕಾರು/ಕಕ್ಕುವುದಿಲ್ಲ. ಅದರ ಬೆಳಕಿನಲ್ಲಿ ತೊಟ್ಟಿಲೊಳಗೆ ಹಸುಮಕ್ಕಳು ಮಲಗಿದ್ದಾರೆ.

---

## 'ಸೂಯಾ'

**ಸೂಯಾ, ಸಡ್ಡೆ.**

**'ಸೂಯಾ! ಸೂಯಾ! ಬಾ, ಸೂಯಾ'/ಕರೆದೇ ಕರೆವಳು ಅನಸೂಯಾ॥ಪಲ್ಲ॥**

***

ಸಡ್ಡೆಗೆ ನಾನು ಅಸಡ್ಡೆಯ ಮಾಡಿದೆ/ ಎಂದು ಹೋದೆಯಾ ಏ ಸೂಯಾ. (ಸಾಲು: 1–3, 4)

: ಹೊಟ್ಟೆ ಕಿಚ್ಚಿಲ್ಲದ ತಂಪಾದ ಮನಸ್ಥಿತಿಯ ನಿರ್ಮಲ, ನಿರಪೇಕ್ಷಾಭಾವದ ಶ್ರದ್ಧೆ.

: ಶ್ರದ್ಧೆ; ಆಸಕ್ತಿ; ಆದರ.

* ಅನಸೂಯೆ ಅತ್ರಿಮುನಿಯ ಪತ್ನಿ. ಈಕೆಯ ಪಾತಿವ್ರತ್ಯದ ಪರೀಕ್ಷೆಗೆ ಬಂದ ತ್ರಿಮೂರ್ತಿಗಳನ್ನು ಈಕೆ ಮೆಚ್ಚಿಸಿ ಅವರಿಂದಲೇ ದತ್ತಾತ್ರೇಯ, ಚಂದ್ರ ಮತ್ತು ದೂರ್ವಾಸರೆಂಬ ಮೂವರು ಮಕ್ಕಳನ್ನು ಪಡೆದಳು.

ಆ ಅನಸೂಯಾ ಕರೆಯುತ್ತಿರುವುದು 'ಸೂಯಾ'ಳನ್ನು ಹೊಟ್ಟೆ ಕಿಚ್ಚಿಲ್ಲದ ತಂಪಾದ ಮನಃಸ್ಥಿತಿಯ ನಿರ್ಮಲ ನಿರಪೇಕ್ಷಾ ಭಾವದ ಶ್ರದ್ಧೆಯನ್ನು. ಇದು ಬೇಂದ್ರೆ ಪದ ಸೃಷ್ಟಿ.

ಈ ಜಗತ್ತಿಗೆ ಸೂಯೆಯ ಮೈತ್ರಿ ಬೇಕಾಗಿದೆ. ಅವಳನ್ನು ತಾ ಎಂದು ಬೇಂದ್ರೆ ಸೂರ್ಯನನ್ನು ಪ್ರಾರ್ಥಿಸಿದ್ದಾರೆ.

'ಸೂಯೆಯ ಮೈತ್ರಿಗೆ ಆತುರಿಸಿದೆ ಜಗ/ ಜೀವಕ್ಕವಳನು ತಾ ಸೂರ್ಯಾ. (ಸಾಲು: 3–3, 4)

---

## ನಾಡ ಜಾಣರಿಗೆ ನಾಕು ಮಾತು

### ತಗಲ, ತಗಲೂ ತಾಟೀ

**ಊರೂರಿಗೆ ಪಂಚಾಯತಿಬೇಕು/ ತಗಲೂ ತಾಟೀ ಇನ್ನಸಾಕು/ ಕೂಡಿ ಬಾಳಲಿ ಜನರು ನಾಕು। ಕೇಳೋ ಜಾಣಾ (3–1, 2, 3)**

: ಮೋಸಗಾರ; ವಂಚಕ; ದ್ರೋಹಿ.

: ಮೋಸಗಾರನ, ಇಬ್ಬಂದಿತನದವನ ಗುಣ ಹೇಳುವ ಜಾನಪದ ಜೋಡಿಪದ.

* 'ಪಂಚಮುಖದಲ್ಲಿ ಪರಮೇಶ್ವರ' ಎಂಬ ನಾಣ್ನುಡಿಯ ಪಂಚಾಯಿತಿ ಹಳ್ಳಿ ಹಳ್ಳಿಯಲ್ಲಿ ನಡೆಯಬೇಕು. ಅಲ್ಲಿ ಪಂಚರಾಗಿರುವವರು ತಗಲು ತಾಟೀಯವರಾಗಿರದೆ ಉತ್ತಮರಾಗಿದ್ದರೆ ಊರಿಗೆ ಕ್ಷೇಮ ಎಂಬ ಚಿಂತನೆ ಈ ತ್ರಿಪದಿಯಲ್ಲಿದೆ.

* * * * * *

### ಮುದ್ದಲು

**ಗಳಿಕೆಯಲ್ಲೆ ಉಳಿಸಿರಬೇಕು/ ಇದ್ದ ಮುದ್ದಲು ಬೆಳೆಸಿರಬೇಕು. (7–1, 2)**

: ಆರಂಭ; ಆದಿ; ಪ್ರಥಮ.

* ಉಳಿಕೆ ಗುಣವನ್ನು ಮೊದಲಿನಿಂದ ಬೆಳೆಸಿಕೊಳ್ಳಬೇಕು.

* * * * * *

### ಮೂಳ

**ಯಂತ್ರಕ್ಕ ಆಳಾಗಬ್ಯಾಡಾ/ ಜಗಳಕ್ಕ ಮೂಳಾಗ ಬ್ಯಾಡಾ/ ನಡತೆಯಲ್ಲಿ ಕೀಳಾಗ ಬ್ಯಾಡಾ। ಕೇಳೋ ಜಾಣಾ. (10–1, 2, 3)**

: 1. ಬುದ್ಧಿಯಿಲ್ಲದವನು; ತಿಳಿಗೇಡಿ; ಮೂಢ.

2. ಅಲ್ಪನಾದವನು; ಕ್ಷುದ್ರ.

* ಜಾಣವ್ಯಕ್ತಿ ಜಗಳಕ್ಕಿಳಿದು ಅಲ್ಪನಾಗಬಾರದು ಎಂಬ ಎಚ್ಚರವನ್ನು ಜಾನಪದ ನುಡಿ 'ಮೂಳ'ದ ಮೂಲಕ ತಿಳಿಸಿದ್ದಾರೆ.

## ಅನ್ನ ಬಕಾಸುರ ರಾಜ್ಯದಲ್ಲಿ

**ಲಂಡ, ಲಂಡೋ ಭಂಡೋ**

**ಲಂಡೋ ಭಂಡೋ ರಾಜ್ಯದಲ್ಲಿ/ ಇದ್ದದ್ದೂ ಕೂಡಿರಲಿಲ್ಲ/ ಇದ್ದವ ಬಿದ್ದ ಸತ್ತವ ಗೆದ್ದ/ ಹೊತ್ತವರೂ ಸರಿ ಹೊರಲಿಲ್ಲ/ ಅವರಿಗು ಜೀವವೆ ಇರಲಿಲ್ಲ. (4–1 ರಿಂದ 5)**

: ನೀತಿ ನಿಯಮ ಇಲ್ಲದವನು; ದುಷ್ಟ; ನೀಚ.

: ಲಂಡ ಪದದ ಜೊತೆಗೆ ಯಾವುದಕ್ಕೂ ಹೇಸದ ಜಗಳಗಂಟ ಭಂಡತನವು ಸೇರಿರುವುದರಿಂದ ಜನಪದರು 'ಲಂಡೋ ಬಂಡೋ' ಜೋಡಿಪದವಾಗಿ ಬಳಸುತ್ತಾರೆ.

---

## ಅನ್ನಬೇಕು

**ಕಿಸುರು, ಕಿಸುರುಗಣ್ಣು**

**ಅನ್ನಬೇಕು ಅನ್ನ ನೀಡಬೇಕಣ್ಣಾ/ ಕಿಸುರುಗಣ್ಣಿಲಿ ನನ್ನ ನೋಡಬೇಡಣ್ಣಾ (1–1, 2)**

: 1. ಹೇಸಿಗೆ; ಅಸಹ್ಯತೆ.

2. ದ್ವೇಷ.; ಮತ್ಸರ; ಅಪ್ರಿಯತೆ.

: 1. ಕಣ್ಣಿಗೆ ಅಸಹ್ಯವಾಗಿರುವುದು, ಅಪ್ರಿಯವಾಗಿರುವುದು.

2. ಹೊಟ್ಟೆಕಿಚ್ಚು; ಕರುಬು; ಈರ್ಷ್ಯೆ.

* ಹಸಿದು ಅನ್ನಕ್ಕಾಗಿ ಬೇಡುವ ದೀನ ದರಿದ್ರರನ್ನು ಹೊಟ್ಟೆ ತುಂಬಿದ ಸಿರಿವಂತ ನೋಡುವ ಅಪ್ರಿಯ ದೃಷ್ಟಿಯನ್ನು ಕವಿ 'ಕಿಸುರುಗಣ್ಣು'ವಿನಲ್ಲಿ ಪ್ರತಿಮಾತ್ಮಕವಾಗಿ ಧ್ವನಿಸಿದ್ದಾರೆ.

---

## ಬಿಡುಗಡೆ

**ಅನ್ನಿಗ**

**ಅನ್ನಿಗರನ್ನು ಆಳಲು ಹೋಗಿ,/ ಆಳಿನ ಆಳಾಗುತ್ತಿದ್ದಾರೆ ಜನ ಜನಗಳು. (6–1, 2)**

: ಬೇರೆಯವನು; ಹೊರಗಿನವನು.

---

## ಜೀವಪುಷ್ಪ

**ಕರು, ಹರುವು**

**ಇರುವು– ಅರಿವಿನಾ ಹರವೆ ನಮ್ಮ ಕರು/ ವಾಗಿ ತಾಯಿಯಾಗಿ (1–1, 2)**

: ಗುರಿಯಿಡು, ಲಕ್ಷ್ಯವಿಡು.

: ಕ್ಷೇತ್ರ; ಪ್ರದೇಶ

* ಇರುವನ್ನು ಎರಡು ನೆಲೆಯಲ್ಲಿ ಪರಿಭಾವಿಸಬಹುದು

1. ಇರುವು: ಈ ಜಗದಲ್ಲಿ ಇರುವ ಭೌತಿಕ ವಸ್ತು ವಿಷಯಗಳನ್ನು ಅರಿಯುವುದು ಅರ್ಥಾತ್ ಪ್ರಕೃತಿಯ ಗೂಢವನ್ನು ವೈಜ್ಞಾನಿಕ ಶೋಧಗಳಿಂದ ತಿಳಿಯುವುದು ಅದರ ಫಲವಾಗಿ ಉತ್ತಮ ಬದುಕು ಸಾಗಿಸುವುದು.

2. ಇರುವು: ಈ ಜಗದಲ್ಲಿನ ಮನುಷ್ಯನ ಬಾಳು, ಮನುಷ್ಯರೆಲ್ಲರೂ ಪ್ರಾಣವಿದ್ದು ಬದುಕುತ್ತಿರುತ್ತಾರೆ ಆದರೆ, ಮಾನವರಾಗಿ ಬಾಳುವುದು ತುಂಬಾ ಮುಖ್ಯ. ಉತ್ತಮ ಬಾಳುವಿಕೆಯಿಂದ ಈ ನೆಲದ ಜನರ ಬದುಕು ಸುಖಮಯವಾಗಿ ಅರ್ಥಪೂರ್ಣವಾಗಿರುತ್ತದೆ. ಅಂತಹ ಅರಿವನ್ನು ಹೊಂದುವುದು ಮುಖ್ಯ. ಇರುವುದರ ಭಾವನಾಮ ಇರುವು.

ಈ ಎರಡು ಬಗೆಯ ಇರುವಿನ ಬಗ್ಗೆ ಅರಿಯುವ ಹರವು ಅರ್ಥಾತ್ ಕ್ಷೇತ್ರವೇ ನಮ್ಮ ಕರುವಾಗಬೇಕು.– ಗುರಿ, ಲಕ್ಷವಾಗಬೇಕು ಅದೇ ನಮ್ಮ ಪೋಷಕ ಚೈತನ್ಯದ ತಾಯಿಯಾಗಬೇಕು ಎಂದು ಬೇಂದ್ರೆ ತಿಳಿಸಿದ್ದಾರೆ.

* * * * * *

**ನುರಿಸು**

**ತೊಗಲು ಮೈಯೊಳೇ ಅರಿವು ನುರಿಯುವದು ಆಗಿ ಹೋಗಿ ನಾನು (3–3, 4)**

: ಮನನ ಮಾಡು.

---

## ಪಂಚಬಾಣ

**ಪಿಪಾಸೆ**

**ನೀರ ಕುಡಿದ ಹಾಗೆಲ್ಲ ಬೆಳೆವ ತೆರದಲ್ಲಿ ಆ ಪಿಪಾಸೆ (1–2)**

: ನೀರಡಿಕೆ; ಬಾಯಾರಿಕೆ; ತೃಷೆ.

*ಕಾಮದ ತೃಷೆಯನ್ನು ಕವಿ ಬಣ್ಣಿಸಿದ್ದಾರೆ.

* * * * * *

**ಹಸಿ, ಶುಂಭ, ಶುಂಠ**

**ಯಾವ ವಾದ ಸಂವಾದವಿಹುದು ಹಸಿ ಶುಂಭ ಶುಂಠನಲ್ಲಿ? (2–4)**

: ಅಸಂಸ್ಕೃತವಾಗಿರುವಿಕೆ; ಅಪಕ್ವತೆಯನ್ನು ಹೊಂದಿರುವಿಕೆ.

: ಮೈಗಳ್ಳ; ಆಲಸಿ; ಸೋಮಾರಿ.

: ಮೂರ್ಖ; ದಡ್ಡ.

---

## ಮನಃಸಾಕ್ಷಿ

**ತಳಕಾಟ**

**ತಳಕಾಟಕಾಗಿ ಬಳಕಾಟ ಎಷ್ಟು (4–1)**

: ಬಿಗಿ ಬಂಧನ,–ಅಪ್ಪುವ ಆಟ.

* ನಾಗನಾಗಿಣಿಯ ನಾಗಬಂಧವನ್ನು ಕವಿ ಮೇಲಿನಂತೆ ಬಣ್ಣಿಸಿದ್ದಾರೆ.

---

## ಇಹದ ಚಿಂತೆ

**ಉನ್ಮನ, ಚಿನ್ಮನ, ಸರಿ**

**ಮನದ ಕಡಲುಗಳಾಚೆ ಉನ್ಮನದ ನಭಗಳಿವೆ/ ಚಿನ್ಮನದ ಸರಿಗಳನು ಸುರಿಸುವವು ನಮಗೆ (1–3, 4)**

: ಮೇಲಕ್ಕೇರುವ ಮನಸ್ಸು.

: ಜ್ಞಾನಯುಕ್ತ ಮನಸ್ಸು.

: ಮಳೆ; ವೃಷ್ಟಿ.

* ಚಿಂತನಶೀಲ ವ್ಯಕ್ತಿಗಳ ಎತ್ತರಕ್ಕೇರುವ ಮನಸ್ಸು ಲೌಕಿಕದಿಂದ ಬಿಡುಗಡೆಗೊಂಡು ಏರಿಹೋಗಿ ಅಧ್ಯಾತ್ಮದ ಅರಿವಿನಲ್ಲಿ ಮೀಯುವವು. ಆ ಜ್ಞಾನಯುಕ್ತ ಮನದ ಆನಂದದ ಮಳೆಯನ್ನು ಸುರಿಸುವವು.

ವ್ಯಕ್ತಿ ತತ್ತ್ವವು ಸಮಷ್ಟಿ ತತ್ತ್ವದಲ್ಲಿ ಲೀನವಾಗುವ ಪ್ರಕ್ರಿಯೆಯನ್ನು ಉನ್ಮನ ಮತ್ತು ಚಿನ್ಮನದ ಪರಿಭಾಷೆಯ ಮೂಲಕ ಕವಿ ವ್ಯಕ್ತಪಡಿಸಿದ್ದಾರೆ.

---

## ಹಾಲಾಹಲವೆ ಶರಣು

**ಲಟುಕು, ಚಿಟುಕು**

**ಅತ್ತ ಗಿರಿಜೆ ಮುರಿವಳು ಲಟುಕು, ಚಿಟುಕಾಡಿಸುವಳು/ ತಲೆಯೇರಿ ಕುಳಿತ ಗಂಗೆಯ ಕಂಡು. (ಸಾಲು: 7, 8)**

: (ಬೆರಳುಗಳ) ಕೀಲನ್ನು ಮಡಿಸಿ ತೆಗೆಯುವ ಲಟಿಕೆ,–ನೆಟಿಗೆ.

ಮುರಿವಳು ಲಟುಕು: ಶಾಪಹಾಕು; ಕೆಡುಕನ್ನು ಬಯಸು.

: ಪ್ರಣಯ ಕೋಪ; ಶೃಂಗಾರ ಚೇಷ್ಟೆ.

ಚಿಟುಕು ಮುರಿ: 1. ನೆಟಿಗೆ ಮುರಿ.

2. (ಆಲಂ)ಕೆಟ್ಟದ್ದನ್ನು ಬಯಸು.

* 'ಮುರಿವಳು ಲಟುಕು' ಪದವು ಶಾಪಹಾಕಿದರೆ; ಅವಳ ಪ್ರಣಯ ಕೋಪ, ಶೃಂಗಾರ ಚೇಷ್ಟೆಯನ್ನು ಸಾಭಿನಯವಾಗಿ 'ಚಿಟುಕಾಡಿಸುವಳು' ಪದ ಅಭಿವ್ಯಕ್ತಿಸಿದೆ.

---

## ಶ್ರೀ ವಿಜಯ ಸಭೆಗೆ ಬಾ, ಓ ಸಭ್ಯತೇ!

**ವಿಟ ವಿದೂಷಕ, ಡಬಗಳ್ಳಿ**

**ವಿಟವಿದೂಷಕ ನಯದ ನಾಗರಿಕತೆ/ ಸುತ್ತ ಬೆಳೆದಿಹುದು ಡಬಗಳ್ಳಿಯಂತೆ. (2–1, 2)**

: ಶೃಂಗಾರ ಮತ್ತು ವಿನೋದದ ಕ್ರೀಡೆಗಳ ವಿಷಯಗಳಿಗಾಗಿ ನಾಯಕನಿಗೆ ಆಪ್ತ ಸಹಾಯಕರಾಗಿ ಇರುವ ನಾಲ್ಕು ಮಂದಿಯಲ್ಲಿ ಇಬ್ಬರು–ವಿಟ, ವಿದೂಷಕ.

: ಕಳ್ಳಿಜಾತಿಯ ಗಿಡಗಳಲ್ಲಿ ಒಂದು ಬಗೆ; ಪಾಪಸುಕಳ್ಳಿ; ಮುಳ್ಳುಗಳ್ಳಿ.

*ನಾಗರಿಕ ಸಮಾಜದಲ್ಲಿ ವಿಟ ವಿದೂಷಕರು ಮುಳ್ಳುಗಳ್ಳಿಯಂತೆ ಬೆಳೆದಿದ್ದಾರೆ.

---

# ೧೯. ನಾಕುತಂತಿ (೧೯೬೪)

## ಮತ್ತ ಶ್ರಾವಣಾ

**ಅಡುವ**

**ಯಾವಿವನ$_s$ ಕಾಮಾ ಬಂದಾ। ಶಿವ–ಶಕ್ತೀ ನಡುವ$_s$/ ಅಡುವ$_s$ ಇಡರವನ$_s$ (2–7, 8)**

*ಶಿವಶಕ್ತಿಯರಲ್ಲಿ ಪ್ರೇಮರಸಭಾವವನ್ನು ಉಂಟುಮಾಡಿ, ಆ ರಸಪಾಕದಲ್ಲಿ (ಅಡುವ) ಅವರು ಇಡರಿಕೊಂಡು ಒಂದಾಗಿ ಹೋಗುವಂತೆ ಮಾಡಿದವನು ಕಾಮ. ಅವನ ಸೃಷ್ಟಿಕ್ರಿಯೆಯ ವೈಭವ ಶ್ರಾವಣಮಾಸ. ಅದು 'ಮತ್ತ ಶ್ರಾವಣ'.

* * * * * *

**ಕಸರ**

**ಸುರ–ಅಸುರರ ಕಸರ$_s$ ಕಳೆದೂ/ ಮೈ ತಳೆದೂ ಬಾರಯ್ಯಾ (2–11, 12)**

: ಒಗರು; ಅಪಕ್ವತೆ; ಹೀಚು.

*ಬೇಂದ್ರೆ ಅವರು ಶ್ರಾವಣನನ್ನು ಕರೆಯುವುದು ರಾಜಸ ತಾಮಸಗಳ ಪ್ರತೀಕವಾದ ಸುರ–ಅಸುರರ ಕಸರು ಕಳೆಯಲು. ಅಪಕ್ವತೆಯೇ ಕಸರು. ಗೋಟಡಿಕೆ ಕಸರಾಗಿದ್ದರೆ ಬೆಲೆ ಕಡಿಮೆ. ಇಡೀ ಪ್ರಕೃತಿಯು ಚಿಗುರಿ ನಳನಳಿಸಲು, ಜೀವ ಸಂಕುಲಕ್ಕೆ ಜೀವಪೋಷಕ ದ್ರವ್ಯ ನೀಡಲು ಮಳೆ ಬೇಕೇ ಬೇಕು. ಅದು ಸಾತ್ವಿಕತೇಜ. ಅದರಲ್ಲಿ ಸುರ–ಅಸುರರು ಸಾತ್ವಿಕರಾಗುವ ಸಾಧ್ಯತೆ ಉಂಟು.

***

**ಕಸರು ಕಳೆದು ತಮ ಹಿಂಜಿ ಬಂತು ರವಿಕಿರಣ ನೂಲುವಂತೆ (ಸೂರ್ಯಪಾನ: ಮಾತು ಮೌನ)**

*ಬೇಂದ್ರೆ ಅವರ ಕಾವ್ಯದ ಸ್ಥಾಯಿಭಾವ –ಬೆಳಗು. ರವಿಕಿರಣ ಮೂಡುತ್ತಲೇ ಈ ನೆಲದ ಕ್ರಿಯೆಗೆ ಜೀವಂತಿಕೆ ಬರುತ್ತದೆ. ಅದು 'ನೂಲು' ಪ್ರತಿಮೆಯಲ್ಲಿದೆ. ಚಲನಶೀಲತೆ ಜಡವನ್ನು ಕಿತ್ತೊಗೆಯುವ ಶಕ್ತಿ– ಅದು ಬೆಳಕು, ಜ್ಞಾನ, ಕತ್ತಲೆಂಬ ಅಜ್ಞಾನದ ಕಸರು/ ಕಸ, ಕೊಳೆಯನ್ನು ತೆಗೆದು ಹಾಕಿ; ತಮವನ್ನು ಹಿಂಜಿ–ಬೇರೆಬೇರೆಯಾಗಿಸಿ, ವಿರಳವಾಗಿಸಿ, ಬಂತು ರವಿಕಿರಣ. ಸಾತ್ವಿಕ ಆನಂದ ಎಲ್ಲೆಡೆ ಹರಿದಾಡಿತು.

***

ಕಸರು ಎಂಬ ಪದ ಸಾಮರ್ಥ್ಯ, ಶಕ್ತಿ ಎಂಬ ಅರ್ಥವನ್ನೂ ಹೊಂದಿದೆ. ಅದು ಕನ್ನಡ ಸಂಸ್ಕೃತಿ ಸೃಷ್ಟಿಸಿರುವ ಪದಗಳ ರಂಗುರಂಗಿನ ಕಾಮನಬಿಲ್ಲು. ಭಾವಕ್ಕೆ ಬದುಕಿಗೆ ತೆರೆದು ಬಣ್ಣಗೊಂಡ ವಿಶಿಷ್ಟ ಜನಪದರ ಪ್ರತಿಭೆ.

'ಅದರಲ್ಲಿ ಹೊಸ ಕಸಿರು ಕಸವೂ ಕೂಡಿರಬಹುದು'. (ವಿಚಾರ ಮಂಜರಿ–72)

* * * * * *

## ಅಭಿಜಿದ್ಯೋಗ

**ಶ್ರಾವಣದಲಿ ಅಭಿಜಿದ್ಯೋಗ/ ಕಾವ್ಯೋದ್ಯೋಗ (3–10, 11)**

*ಬೇಂದ್ರೆ ಅವರ ಕಾವ್ಯಯಾತ್ರೆಯ ವಿಜಯೋತ್ಸವ ನಡೆದಿರುವುದು ಶ್ರಾವಣಮಾಸದಲ್ಲಿಯೇ. 'ಶ್ರಾವಣಾ ಬಂದಾ। ಕಿವಿ ತೆರಿ ಅಂದ' ಎಂಬುದು ಅವರ ಶ್ರವಣಪ್ರತಿಭೆಯ ದ್ಯೋತಕ. ಅವರಿಗೆ ಕಾವ್ಯ ಎಂಬುದು ಉತ್ ಯೋಗ. ಊರ್ಧ್ವಮುಖೀ ಚಿಂತನೆ. ಅದೇ, ಅಭಿಜಿತ್ ಯೋಗ/ಅಭಿಜಿದ್ಯೋಗ, ವಿಜಯಶೀಲ ನಡೆಯತ್ತ ಒಂದಾದ ಮನಸ್ಸು.

'ಅಭಿಜಿನ್ಮನ ಊರ್ಧ್ವಧ್ಯಾನ'ದ (ಮತ್ತೆ ಬಂತು ಶ್ರಾವಣ) ಅಭಿಜಿತ್–ಜಯಶಾಲಿಯಾಗುವ ವೀರಯೋಗಿಯ ಊರ್ಧ್ವಧ್ಯಾನಕ್ಕೆ ಪ್ರತಿಮೆ. ಅಭಿಜಿನ್ಮಹೂರ್ತ ಎಂಬ ಸಮಯಪಾಲನೆಯ ಪದ ರೂಪವೂ ಉಂಟು.

---

# ಹೆರಿಗೆ

## ಮೂರ್ಧನ್ಯ

**ಮೂರ್ಧನ್ಯದ ತೇಜಸ್ಸಿನ/ ಯಾವುದೊ ಕಿರಣ/ ತಳೆದಿದೆ ವರ್ಣ ವರ್ಣ/ ಶ್ರುತಿಗೋ ಆಭರಣ (1–1, 2, 3, 4)**

*ಕವನ 'ಹೆರಿಗೆ'ಯು ಕಾವ್ಯ ಸೃಷ್ಟಿಗೆ ಒಳಗಾದ ಕವಿಯ ಅನುಭವ. ಕಾವ್ಯ ಪ್ರತಿಭಾವಂತ ಕವಿಯ ಮೂರ್ಧನ್ಯ –ಉತ್ತಮಾಂಗ ತಲೆಯಿಂದ ಹೊಮ್ಮುವ ತೇಜಸ್ಸಿನ ಕಿರಣ. ಅವನ ಜೀವನಾನುಭವದ ಶಿಖರದಿಂದ ಹೊಮ್ಮಿದ ಬೆಳಕಿನ ಕದಿರು. ಅದು ಹಲವು ಬಣ್ಣ ಬಣ್ಣಗಳನ್ನು ತಳೆದು–ಪಂಚಭೂತಗಳ ಅರಿವಿನಲ್ಲಿ 'ಶ್ರಾವಣಾ ಬಂದಾ! ಕಿವಿ ತೆರಿ ಅಂದಾ' ಎಂಬ Auditory imaginationಗೆ ಒಳಗಾದ ಧ್ಯಾನ. ಆಗ ಕವಿಯಿಂದ ಹೊಮ್ಮುವ ಶಬ್ದದ ಶ್ರುತಿಗೆ –ಮೂರ್ಧನ್ಯದ ತೇಜಸ್ಸೇ ಆಭರಣವಾಗಿರುತ್ತದೆ.

* * * * * *

**ಕಾಕು**

**ಕಾಕು ಸ್ವರದಲ್ಲಿ ಸ್ಫುರಿಸುವ ಲೌಕಿಕ ಅಪವರ್ಗ (5–4)**

*ಪ್ರಾಪಂಚಿಕ, ಐಹಿಕವಾದ, ಲೋಕಭಾವಗಳು ಲೌಕಿಕ. ಅದು ಭಯ, ಕೋಪ, ತಾಪ ಮೊದಲಾದ ಭಾವೋದ್ರೇಕಗಳನ್ನು ಉಂಟುಮಾಡುತ್ತದೆ. ಆಗ ಹೊಮ್ಮುವ ವ್ಯಂಗ್ಯ, ಕೊಂಕುನುಡಿ –ಕಾಕು. ಅಂತಹ ಕೀಳ್ತರಗತಿಯ ಭಾವಗಳು ಕವಿಯ ನಿರ್ಲಿಪ್ತ ಭಾವಕ್ಕೆ ಒಳಗಾಗುತ್ತವೆ. ಅಲ್ಲಿ ಅವು ತಮ್ಮ ಲೌಕಿಕತ್ವದಿಂದ ಬಿಡುಗಡೆಗೊಂಡು–ಅಪವರ್ಗವಾಗಿ ರಸಸ್ಥಿತಿಗೆ ಏರುತ್ತವೆ

---

## ನಾಕುತಂತಿ

**ಆವು, ಆನು**

**ಆವು ಈವಿನ/ ನಾವು ನೀವಿಗೆ/ ಆನು ತಾನದ/ ತನನನಾ$_s$ (1–1, 2, 3, 4)**

* 'ನಾಕುತಂತಿ' ಕಾವ್ಯದ 'ಆವು' ಅರ್ಥವಾಗದಿದ್ದರೆ ಅನಂತಶಕ್ತನ ಸೃಷ್ಟಿಕ್ರಿಯೆಯ ಮೂಲಧ್ವನಿ ಹಿಡಿಯಲಾಗದು. ನಾಕುತಂತಿ ಕಾವ್ಯದ ಭಾಗ–1 ರಲ್ಲಿ ಐದು ನುಡಿಗಳಿವೆ. ಬೇಂದ್ರೆ ಅವರು ಮೊದಲ ನುಡಿಯಲ್ಲಿ ಕಾಮಧೇನುವಾದ ಈ ಜಗತ್ತು ಎಂಬ ಆವು (ಹಸು) ಈದದ್ದರಿಂದ 'ನಾವು– ನೀವು' ಆಗಿದ್ದೇವೆ. ಈ ನಾವು–ನೀವುಗಳಿಗೆ 'ಆನು'ವಾದ ಪರಮಾತ್ಮ ಗೋವಿನ ಮತ್ತು 'ತಾನು'ವಾದ ಜೀವಾತ್ಮಗಳ ಶ್ರುತಿ ಹಿಮ್ಮೇಳದಂತಿದೆ ಎಂದಿದ್ದಾರೆ.

ಆನು– ಪದವನ್ನು ಹಳ್ಳಿಗರು ಇಂದಿಗೂ ಬಳಸುತ್ತಾರೆ. ನಾನು ಕುಳಿತುಕೊಳ್ಳುವಾಗ ಸ್ವಲ್ಪ ಬಾಗಿದರೆ ನಮ್ಮಪ್ಪ "ಆನುಕೊಂಡು ಕುಳಿತುಕೋ. ನಿನ್ನ ನಿಲುವು ಸರಿಹೋಗುತ್ತೆ" ಎಂದು ಹೇಳುತ್ತಿದ್ದರು. ಆನುವು to support, as the head. ಜಗತ್ತಿನ ಆಶ್ರಯವಾದ ಅನಂತಶಕ್ತನನ್ನು ಬೇಂದ್ರೆ ಅವರು ಜನದನಿಯ 'ಆನು'ವಿನಲ್ಲಿ ಧ್ವನಿಸಿದ್ದಾರೆ.

* * * * * *

**ಜಾಣೆನಾ**

**ನಾನು ನೀನಿನಾ/ ಈ ನಿ ನಾನಿಗೆ/ ಬೇನೆ ಏನೋ?/ ಜಾಣೆನಾ$_s$ (1–5, 6, 7, 8)**

* 'ನಾನು' 'ನೀನು' ಎಂಬ ಈನಿನ ಅರ್ಥಾತ್ ಈಯುವುದರ, ಕರು ಹಾಕುವುದರ 'ಆನಿ'ಗೆ (ಹಸುವಿಗೆ) ಬೇನೆ/ ಹೆರಿಗೆ ಬೇನೆ ಏನೋ? 'ಜಾಣೆನಾ' ಎಂದಿದ್ದಾರೆ. ಈ

ಜಾಣಿನಾ ಎಂಬುದು ನನಗೆ ಹೊಳೆಯುತ್ತಿಲ್ಲ ಎಂಬ ಅರ್ಥವನ್ನು ಹೊಮ್ಮಿಸಿ ಈ 'ನಾನು, ನೀನು, ಆನು, ತಾನು' ವಿಗೆ ಕಾರಣವನ್ನು ಹುಡುಕಲು ತೊಡಗುತ್ತದೆ.

* * * * * *

**ಸಹಿತಸ್ತನಾ**

**ಬೆನ್ನಿನಾನಿಕೆ/ ಜನನ ಜಾನಿಕೆ/ ಮನನವೇ ಸಹಿ–/ ತಸ್ತನಾ (1–17 ರಿಂದ 20)**

*ಅನಾಹತ ನಾದಕ್ಕೆ 'ಬೆನ್ನಿನಾನಿಕೆ' ಇದೆ ಎಂದಿದ್ದಾರೆ. ಅದು ಭೂತದ ಅಥವಾ ಮೂಲ ವಸ್ತುವಾದ ಪರಬ್ರಹ್ಮವಾಗಿದ್ದು, ಅದರ ಒರಗುವಿಕೆಯಿಂದ ಎಂದರೆ ಅದನ್ನು ಆಧರಿಸಿ ಈ ಹುಟ್ಟಿನ ಬಗೆಗೆ ಜಾನ ಅರ್ಥಾತ್ ಧ್ಯಾನ ಮಾಡುವ ಮನಸ್ಸನ್ನು ಹೊಂದಿ, ಮನನ ಮಾಡುವುದೇ –ಅದರ ಬಗ್ಗೆ ಸದಾ ಚಿಂತಿಸುತ್ತಾ ಮೆಲುಕು ಹಾಕುವುದೇ ಹಿತದಿಂದ ಕೂಡಿದ್ದು. ಹೀಗೆ ಚಿಂತನಶೀಲವಾಗುತ್ತಾ ಆ ಪರವಸ್ತುವಿನೊಡನೆ (ಸ+ಹಿತ+ಅಸ್ತ) ಒಂದಾಗುವಿಕೆಯೇ ಅಸ್ತವಾಗುವ, ಮುಳುಗುವ, ಬ್ರಹ್ಮದ ಶೋಧ ಎಂದಿದ್ದಾರೆ.

ಜನಪದರ ಅಧ್ಯಾತ್ಮ ಭಾವವನ್ನು ಅಭ್ಯಾಸ ಮಾಡಿದಾಗ ಅವರು 'ದೀಪವನ್ನು ಆರಿಸು' ಎಂದು ಹೇಳದೆ 'ದೀಪವನ್ನು ತುಂಬು' ಎಂದು, 'ದೀಪವನ್ನು ದೊಡ್ಡದು ಮಾಡು' ಎಂದು ಹೇಳುವುದನ್ನು ಕಾಣುತ್ತೇವೆ. ಈ ನುಡಿಗಟ್ಟುಗಳು ಅಪಾರ ಅಧ್ಯಾತ್ಮದ, ಅನುಭಾವದ ಅರ್ಥವನ್ನು ಹೊಂದಿವೆ. ಈ ಎರಡು ನುಡಿಗಟ್ಟುಗಳಿಗೆ 'ಈ ಖಂಡ ಜ್ಯೋತಿಯನ್ನು ಆ ದೊಡ್ಡ ಜ್ಯೋತಿಯೊಡನೆ ಸೇರಿಸು' ಎಂದೂ 'ಈ ಸಣ್ಣ ಜ್ಯೋತಿಯನ್ನು ಆ ದೊಡ್ಡ ಜ್ಯೋತಿಯೊಡನೆ (ಪರಂಜ್ಯೋತಿಯೊಡನೆ) ಒಂದುಗೂಡಿಸು' ಎಂದೂ ಅರ್ಥವಾಗುತ್ತದೆ. ಅದೇ ರೀತಿ, ಬೇಂದ್ರೆ ಅವರ ಕೊನೆಯ ಚರಣದ ಆಶಯ 'ಈ ಖಂಡ ಜೀವಾತ್ಮ ಆ ಅಖಂಡ ಪರಮಾತ್ಮನೊಡನೆ ಮುಳುಗುವುದನ್ನು' ಸೂಚಿಸುವಂತಿದೆ.

ಅಧ್ಯಾತ್ಮ ಚಿಂತನೆಯಲ್ಲಿ ತೊಡಗಿದ ವ್ಯಕ್ತಿ ಆತ್ಮಚಿಂತನೆಯ ತನ್ನ ಒಳದನಿಗೆ ಕಿವಿಗೊಡುತ್ತಾ, ಕೇಳಿದ ಹೊರ ನುಡಿಯನ್ನು ಕುರಿತು ವಿಚಾರ ಮಾಡುತ್ತಾ ಅವುಗಳ ಸತ್ಯಶೋಧನೆಗೆ ತೊಡಗುತ್ತಾನೆ. ಅದು 'ಮನನವೇ ಸಹಿತಸ್ತನಾ'. ಅಲ್ಲಿ ಮಾತು ಕೊನೆಗೊಂಡು ಆತ್ಮ ಮನೋಮಯವಾಗಿ, ಜ್ಞಾನರಸಾಸ್ವಾದದತ್ತ ಸಾಗುತ್ತದೆ. ಮಾತಿನ ಹಂತವನ್ನು ದಾಟಿದ ಆತ್ಮದ ಚಿಂತನೆ ಮನೋಮಯವಾಗಿ ವಿಚಾರ, ಜ್ಞಾನ, ರಸ ಸಂಚಯದತ್ತ ಸಾಗುತ್ತದೆ. ಹಾಗೆ, ಅನುಭವವಾದ ಆತ್ಮರೂಪೀ ಜ್ಞಾನರಸವು ವಿಶ್ವವ್ಯಾಪಕವಾದ ಬ್ರಹ್ಮವನ್ನು ಹುಡುಕುತ್ತಾ ಸಾಗುತ್ತದೆ. ಅದು ವಿಶ್ವದ ಒಳಿತನ್ನು ಚಿಂತಿಸುತ್ತಾ ವಿಶ್ವವ್ಯಾಪಿಯಾಗಿ ವಿಕಾಸಶೀಲವಾದಾಗ ಆ 'ಆನು'ನಿಂದ ಇದೆಲ್ಲಾ ಸಾಧ್ಯವಾಗಿದೆ ಎಂಬ ಅರಿವಿಗೆ ಬರುತ್ತದೆ. ಇದು ಈ ಕಾವ್ಯಭಾಗದ ಧ್ವನಿ ಎಂದು ಹೇಳಬಹುದು.

* * * * * *

## ಹಡಗದ ಹುಡುಗಿ

**ಗೋವಿನ ಕೊಡುಗೆಯ/ ಹಡಗದ ಹುಡುಗಿ/ ಬೆಡಗಿಲೆ ಬಂದಳು/ ನಡುನಡುಗಿ (2–1, 2, 3, 4)**

*ಜನಪದರ ನುಡಿಗಟ್ಟಿನಲ್ಲಿ 'ಹಡಗದ ಹುಡುಗಿ' ಪದದ ಬಳಕೆ ಹೀಗಿದೆ: 'ಗಂಡ ಕೊಡವಿ ಹೋದ ರೆಂಬೆ ಅಂಗವ್ನೆ, ಹೆಂಡ್ತಿ ಹಡಗು ಇದ್ದಂಗವ್ಳೆ'.

ಬೇಂದ್ರೆ ಅವರ ಗೋವಿನ ಅಂದರೆ ಬ್ರಹ್ಮದ ಕೊಡುಗೆಯ ಈಯುವ ವಸ್ತು 'ಹಡಗದ ಹುಡುಗಿ' ಎಂದಿದ್ದಾರೆ. ಇಲ್ಲಿಯ ಹಡಗದ ಹುಡುಗಿ ಸುಭದ್ರವಾದ, ಕಟ್ಟುಮಸ್ತಾದ ಜ್ಞಾನಕನ್ಯೆ ಆಗಿದ್ದಾಳೆ.

* * * * * *

## ಸತ್ತ್ಯಯೋ ಮಗನ್ನ

**ಚಿತ್ತೀ ಮಳಿ, ತತ್ತೀ ಹಾಕತಿತ್ತು/ ಸ್ವಾತಿ ಮುತ್ತಿನೊಳಗ/ಸತ್ತ್ಯಯೋ ಮಗನ್ನ/ ಅಂತ ಕೂಗಿದರು/ ಸಾವೀ ಮಗಳು, ಭಾವೀ ಮಗಳು/ ಕೂಡಿ (3–1, 2, 3, 4, 5, 6)**

*ಕಾವ್ಯ ಸಂದರ್ಭದಲ್ಲಿ ಸೂಚಿಸಿರುವಂತೆ ಭಾಗ–3 ಸವಾಲು ಜವಾಬಿನ ರೀತಿಯಲ್ಲಿದೆ. ಇಲ್ಲಿ ಸ್ವಾಮಿ (ಸಾವೀ)ಯ ಮಗಳಾದ ಜ್ಞಾನಕನ್ಯೆ, ಭಾವೀ (ಮುಂದೆ ಆಗಲಿರುವ) ಮಗಳಾದ ಮೋಕ್ಷಕನ್ಯೆಯರ ದಿಗಿಲು ಹುಟ್ಟಿಸುವ ಎಚ್ಚರಿಕೆಯ ಮಾತಿಗೆ ಜೀವಿ (ಕವಿ) ಕೊಟ್ಟ ಉತ್ತರವಿದೆ.

ಸ್ವಾತಿಮಳೆಯ ಹನಿ ಚಿಪ್ಪನ್ನು ಸೇರಿ ಮುತ್ತಾಗುತ್ತದೆ ಎಂಬುವುದು ಪರಂಪಾರಗತವಾಗಿ ಬಂದಿರುವ ನಂಬಿಕೆ, ಕವಿ ಸಮಯ. ಆದರೆ, ಇಲ್ಲಿ ಚಿತ್ತೀಮಳೆ (ಚಿತ್ತೆ)ಯ ಪ್ರಸ್ತಾಪವಿದೆ. ಆದ್ದರಿಂದ, ಇಲ್ಲಿ ಚಿತ್ತೀಮಳೆ ಎಂಬುದನ್ನು ಚಿತ್ತಕ್ಕೆ ರೂಪಕವಾಗಿ ಬಳಸಿದ್ದಾರೆ. ವಾಲ್ಮೀಕಿಯ ಚಿತ್ತವು ಹುತ್ತ ಕಟ್ಟದಿದ್ದರೆ ರಾಮಾಯಣದಂತಹ ಮಹಾಕಾವ್ಯ ಮೂಡಿ ಬರುತ್ತಿರಲಿಲ್ಲ. ಆದ್ದರಿಂದ ಮರ್ತ್ಯಜೀವಿಯ ಚಿತ್ತವು ಸಾಧನಾ ಸೋಪಾನಗಳನ್ನೇರುತ್ತಾ ತತ್ತಿ ಹಾಕಲು ಸಜ್ಜಾದುದನ್ನು ಮೊದಲನೆ ಸಾಲು ಸೂಚಿಸುತ್ತದೆ. ಅಂತಹ ಸಿದ್ಧ ಸಮಯದಲ್ಲಿ ಸ್ವಾತಿಯ ಮಳೆಹನಿ ಚಿಪ್ಪನ್ನು ಸೇರಿ (ಹುತ್ತಗಟ್ಟದೆ ಚಿತ್ತ ಮಹತ್ತಾದುದನ್ನು ಸಾಧಿಸಲು ಸಾಧ್ಯವಿಲ್ಲ ಎಂಬ ಮಾತನ್ನು ಸ್ಮರಿಸಿ) ಮುತ್ತಾಗುತ್ತದೆ. ಆ ಮುತ್ತನ್ನು ಮತ್ತೆ ನೀರಿಗೆ ಹಾಕಿದರೆ–ಅದು ಪೂರ್ವಾಶ್ರಮದಲ್ಲಿ ನೀರೇ ಆಗಿದ್ದರೂ, ನೀರಿನೊಂದಿಗೆ ನೀರಾಗದೇ ಪ್ರತ್ಯೇಕ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತದೆ. ಹಾಗೆಯೇ, ಮಣ್ಣಿನಿಂದಲೇ ಮಾಡಿದ ಹಸಿಮಡಕೆ ಆವುಗೆಯಲ್ಲಿ ಬೆಂದಮೇಲೆ ಅದು ಮಣ್ಣಿನೊಂದಿಗೆ ಒಂದಾಗುವುದಿಲ್ಲ. ಅಂದರೆ, ಲೋಕದಲ್ಲಿದ್ದರೂ ಪೂರ್ವದ ಲೌಕಿಕಸ್ಥಿತಿಯಿಂದ, ವಾಸನೆಗಳಿಂದ ದೂರವಿರುತ್ತದೆ ಎಂಬ ಭಾವ. ಅದೇ ರೀತಿ ಆತ್ಮಸಾಕ್ಷಾತ್ಕಾರವಾದ

ಜೀವಿ ಲೋಕದಲ್ಲಿದ್ದರೂ ಲೌಕಿಕ ವಾಸನಾತ್ರಯಗಳಾದ ಹೆಣ್ಣು, ಹೊನ್ನು, ಮಣ್ಣುಗಳಿಂದ ದೂರವಿರುತ್ತಾನೆ ಒಂದಾಗುವುದಿಲ್ಲ. ಅರ್ಥಾತ್, ಪೂರ್ವಾಶ್ರಮದ ಸ್ಥಿತಿ ಸತ್ತಂತೆಯೇ ಲೆಕ್ಕ. ಆದ್ದರಿಂದಲೇ, ಸಾವೀ ಮಗಳಾದ ಜ್ಞಾನಕನ್ಯೆ, ಭಾವೀ ಮಗಳಾದ ಮೋಕ್ಷ ಕನ್ಯೆ 'ಸತ್ತ್ಯೋ ಮಗನ' ಎಂದು ಕೂಗಿ ಹೇಳುತ್ತಾರೆ. ಹೀಗೆ ಹೊಸರೂಪವನ್ನು ಪಡೆದ ಸತ್ "ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯಜ್ಯತೇ ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ಧಃ ಪಾರ್ಥ ಯುಜ್ಯತೇ" (ಗೀತೆ–17, 26) ಎಂಬ ಗೀತೆಯ ಸತ್ ಮಾತಿನ ಅರ್ಥ ಹೊಳೆಯುತ್ತದೆ. 'ಜನನ ಮತ್ತು ಸಾಧುತ್ವ' ಎಂಬರ್ಥಗಳಲ್ಲಿ 'ಸತ್' ಎಂಬ ಪದವು ಪ್ರಯೋಗಿಸಲ್ಪಡುತ್ತದೆ. ಹಾಗೆಯೇ, ಶುಭಕರ್ಮವನ್ನು ಹೇಳಲು ಸತ್ ಎಂಬ ಪದವು ಪ್ರಯೋಗಿಸಲ್ಪಡುವುದು.(ವಾಸುದೇವಾಚಾರ್ಯ: ಗೀತಾಭಾವ)

ವಿಮಮಯೋನಿರ್ಮ ಹದ್ ಬ್ರಹ್ಮ ತಸ್ಮಿನ್ ಗರ್ಭಂ ದದಾಮ್ಯಹಂ

ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ

ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ

ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ" (ಗೀತೆ 14, 3, 4)

"ಅರ್ಜುನ! ಚಿತ್‌ಪ್ರಕೃತಿ =ರಮಾದೇವಿಯು ನನ್ನ ಭಾರ್ಯೆಯು, ಆ ದೇವಿಯಲ್ಲಿ ನಾನು ಗರ್ಭವನ್ನಿಡುವೆನು. ಎಂದರೆ, ನನ್ನ ಉದರದಲ್ಲಿದ್ದ ಪ್ರಾಕೃತ ತತ್ತ್ವಾಂಶಯುತರಾದ ಚತುರ್ವಿಂಶತಿ ತತ್ತ್ವಾಭಿಮಾನಿ ದೇವತೆಗಳನ್ನೂ ರೇತಸ್ಸಿನ ರೂಪದಿಂದ ಹೊರಗೆಡವಿ ರಮಾದೇವಿಯ ಉದರದಲ್ಲಿ ಸ್ಥಾಪಿಸುವೆನೆಂದು ಅರ್ಥ. ಅಲ್ಲಿ ಸ್ಥಾಪಿಸುವುದರಿಂದ ಸಕಲ ಪ್ರಾಣಿಗಳಿಗೂ ದೇಹಯೋಗರೂಪವಾದ ಉತ್ಪತ್ತಿಯಾಗುತ್ತದೆ. ಪಾರ್ಥ, ಆದಿಸೃಷ್ಟಿಯಲ್ಲಿ ಮಾತ್ರವೇ ನಾವು ಹೀಗೆ ಉತ್ಪಾದಕರೆಂದು ತಿಳಿಯಬೇಡ; ಯಾವಾಗಲೂ ನಾವಿಬ್ಬರೂ ಕಾರಣರಾಗಿರುವೆವು. ಹೇಗೆಂದರೆ–ಕೌಂತೇಯ! ದೇವ ಮನುಷ್ಯ ಪಶು ಪಕ್ಷ್ಯಾದಿ ಸಕಲ ಯೋನಿಗಳಲ್ಲಿಯೂ ಯಾವ ದೇಹಗಳು ಹುಟ್ಟುತ್ತವೆಯೋ ಅವುಗಳಿಗೆಲ್ಲಾ ಮಹಾಲಕ್ಷ್ಮೀ ದೇವಿಯು ಕ್ಷೇತ್ರರೂಪ ಕಾರಣಳು= ತಾಯಿಯು, ನಾನು ಗರ್ಭದಾನ ಮಾಡುವ ತಂದೆಯು" ಎಂದು ಗೀತೆಯು ನುಡಿಯುತ್ತದೆ. (ವಾಸುದೇವಾಚಾರ್ಯ: ಗೀತಾಭಾವ)

ಈ ಸೃಷ್ಟಿತತ್ತ್ವವನ್ನು ಕವಿ 'ಈ ಜಗ (ಬ್ರಹ್ಮಾಂಡ) ಅಪ್ಪ ಅಮ್ಮನ (ಶಿವಶಕ್ತಿಯರ, ಪ್ರಕೃತಿ ಪುರುಷರ) ಮಗ', ಪ್ರಕೃತಿಯಲ್ಲಿ ಪುರುಷನ ಮುಖವಿದೆ. ಪುರುಷನ ಕುತ್ತಿಗೆಯ ಮೇಲೆ ಪ್ರಕೃತಿಯ ಹತೋಟಿ (ನೊಗ) ಇದೆ ಎಂಬುದನ್ನು 'ಅಮ್ಮನೊಳಗ ಅಪ್ಪನ ಮೊಗ, ಅಪ್ಪನ ಕತ್ತಿಗೆ ಅಮ್ಮನ ನೊಗ' ಎಂದಿದ್ದಾರೆ. ಇಹಲೋಕದ ಅಪ್ಪ–ಅಮ್ಮಂದಿರು ಮರ್ತ್ಯಜೀವಿಗಳಾಗಿದ್ದರೂ ಮತ್ತೊಂದು ಅರ್ಥದಲ್ಲಿ ಶಿವಶಕ್ತಿಯರು ಎಂಬ ಭಾವವಿದೆ. ಶ್ರೀಗುರು ಎಂಬುದರಲ್ಲಿ ಶಿವ, ಅಂಬಿಕಾ ಎಂಬುದರಲ್ಲಿ ಶಕ್ತಿ ಇರುವುದರಿಂದಲೇ 'ಶ್ರೀಗುರುದತ್ತ ಅಂದ' ಎಂದು ಹೇಳಿದ್ದಾರೆ. ('ಅಂದ' ಎಂಬುದು 'ಅಂಬಿಕಾತನಯದತ್ತ'

ಎಂಬ ಕಾವ್ಯನಾಮದ ಸಂಕ್ಷಿಪ್ತ ರೂಪ)

ಈ ಸವಾಲು-ಜವಾಬಿನ ಹಿನ್ನೆಲೆಯಲ್ಲಿ ಮೊದಲಿನ ದ್ರವರೂಪದಿಂದ ಮುತ್ತಾಗುವ, ಮಾನವನಾಗುವ 'ಸತ್' ಆಗುವ ಚಿಂತನೆ ಇದೆ. ಆ 'ಸತ್' ಸಾಧನೆಗೆ 'ಓಂ' ಉಪಾಸನೆಯೇ ದಿವ್ಯಮಾರ್ಗವೆಂದು ಭಾರತೀಯ ಚಿಂತನೆ ಸಾರುತ್ತಿದೆ.

---

## ಅಣು-ಮಹತ್

### ಸ್ಥಲ

**ಸ್ಥಲವೇ ಚಲವಾಗುತ್ತಲೆ/ ಜ್ವಲಿಸಿತ್ತಾಲೋಚನಾ /ಜಡವು ಜಲಿಸಿ, ನೀರು ನೆಲಿಸಿ, /ಕಂಡೆ ಭಕ್ತ ಮೋಚನಾ ('ಆ' 1-1, 2, 3, 4)**

*ವೀರಶೈವ ತತ್ತ್ವವನ್ನು ತಲಸ್ಪರ್ಶಿಯಾಗಿ ಅರಿತಿದ್ದ ಬೇಂದ್ರೆ ಅವರು ತಮ್ಮ ಷಟ್‌ಸ್ಥಲದ ಅನುಭವವನ್ನು ಕಾವ್ಯಾನುಭವವಾಗಿ ನೀಡಿದ್ದಾರೆ. ಷಟ್ಸ್ಥಲ ಮಾರ್ಗದ ಸಾಧಕನಿಗೆ "ಸ್ಥಲವೇ ಚಲವಾಗುತ್ತಲೇ ಜ್ವಲಿಸಿತ್ತಾಲೋಚನಾ". ಸಾಧನಾಪಥದಲ್ಲಿ ನೆಲೆಗೊಂಡಕೂಡಲೇ ಸಾಧಕನ ಶರೀರದ ಅಣು ಅಣುವು ಮಹತ್ತಿಗೆ ಮಿಡಿಯುತ್ತದೆ. ತನ್ನ ಆತ್ಮ ಶೋಧದ ವಾಯುಸೇವನೆಯಲ್ಲಿ ಚಲನಶೀಲಗೊಳ್ಳುತ್ತದೆ. ತನ್ನ ಅರಿವಿನ ಕಾವಿನಲ್ಲಿ ತನ್ನ ಆಲೋಚನೆಯನ್ನು ಪ್ರಕಾಶಗೊಳಿಸಿಕೊಳ್ಳುತ್ತದೆ.

ಮಂದಗತಿಯಲ್ಲಿದ್ದ ಶರೀರ ಮತ್ತು ಮನಸ್ಸು ಆತ್ಮದ ಕಾವಿನಲ್ಲಿ ಜ್ವಲಿಸುತ್ತದೆ. ಷಟ್ಸ್ಥಲ ಸಾಧನಾಪಥಗಳನ್ನು ಕ್ರಮಿಸಿ ಐಕ್ಯದ 'ನೀರು ನೆಲಿಸಿ' ಭಕ್ತಿ ನೀಡಿದ ಫಲವನ್ನು ಸಾಧಕನು ಸವಿಯುತ್ತಾನೆ. ಲೌಕಿಕ ಭಾವಗಳಿಂದ ಬಿಡುಗಡೆಗೊಂಡು ಮುಕ್ತನಾಗಿ ಸಿದ್ಧನಾಗುತ್ತಾನೆ.

* * * * * *

### ಹೊಲೆ ಹೊಂದು

**ನಂದು ನಿಂದೂ ಒಂದು/ ಎಡಬಲವು ಹೊಲೆಹೊಂದು/ ನೆತ್ತಿ ಬಿತ್ತಿಗು ಉದ್ದ ಶಿವನ ಧಾರಾ ('ಆ' 2-10, 11, 12)**

*ಬಸವಾದಿ ಶರಣರ ಚಿಂತನೆ ನಮ್ಮದು. ಈ ನೆಲದ ಕನ್ನಡನುಡಿಯಲ್ಲಿ ಅರಳಿದ ವಿಶ್ವಾತ್ಮಕ ಚಿಂತನೆಯೆ ವಚನ. ಅದನ್ನು ಬೇಂದ್ರೆ ಅವರು 'ಕನ್ನಡವೇ ಕಣ್ಣಾಗಿ। ಕಣ್ಣೆ ಕನ್ನಡಿಯಾಗಿ। ಕಂಡಿದ್ದು, ನೋಡಿದ್ದು ಒಂದಾಯಿತು' ಎಂದು ಕನ್ನಡಿಸಿದ್ದಾರೆ.

ಇರವು ಅರಿವನ್ನು ತಿಳಿದ ಬೇಂದ್ರೆ ಅವರು 'ಇರವು ಇರವಿನೊಳಿತ್ತು। ಅರಿವು ಅರಿವಿನೊಳಿತ್ತು। ಇರವು ಅರಿವೂ ಹರಿವು ನಂದಾಯಿತು' ಎಂದು ಹೇಳಿ ಹರಿಯುವ

ಚಿಂತನೆಯು ತನ್ನದಾಯಿತು ಎಂದು ಹೆಮ್ಮೆಪಟ್ಟಿದ್ದಾರೆ. ಇರವು ಮುಂದಾಗಿ ಅರಿವು ಹಿಂದಾದಾಗ, ಅವೆರಡನ್ನು ಜೋಡಿಸಿಕೊಂಡು ಹೊಂದಿಕೆಯಾದ ರೀತಿಯನ್ನು 'ನಡುವೆ ನಿಂದಾದಾಗ ಮಡುವಾಯಿತು' ಎಂದು ಪ್ರಕಟಪಡಿಸಿದ್ದಾರೆ.

ಲಿಂಗಾನುಭವದ ಅರಿವಿಗೆ ಒಳಗಾದಾಗ 'ನಂದು ನಿಂದೂ ಒಂದು'. ಅದಕ್ಕೆ ತಯಾರಾದ ತನ್ನ ವಿಕಾಸ 'ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ' (ಬಸವ 591) ಎಂಬ ರಜಸ್ವಲೆಯಾದ ಪುಷ್ಪವತಿಯಾದ ಅರಿವು. ಅದನ್ನು ಬೇಂದ್ರೆ ಅವರು ಷಟ್ಸ್ಥಲದ ಹಂತ ಹಂತ ಏರಿ, ಪಕ್ವವಾದ ಅನುಭವವನ್ನು 'ಎಡಬಲವು ಹೊಲೆಹೊಂದು' ಎಂಬ ನುಡಿಯ ಪ್ರತಿಮೆಯಲ್ಲಿ ಕಡೆದಿಟ್ಟಿದ್ದಾರೆ.

ಆಗ ಅರಿವಿಗೂ ಇರವಿಗೂ ನೆಲೆಯಾದ ಮನಸ್ಸು ಮತ್ತು ಕಾಯ 'ನೆತ್ತಿ ಬಿತ್ತಿಗು ಉದ್ದ ಶಿವನ ಧಾರಾ'.

'ತುಂಗಮುನ್ನತಮುಚ್ಚಮೆನಲುದ್ದಮಕ್ಕು'(ಅಭಿನವಮಂಗರಾಜ; ಅಭಿನವಾಭಿಧಾನಂ: 132, 23) ಎಂಬ ಆ ಎತ್ತರದ, ಉಚ್ಚ, ಶಿವಾನುಭವದ ಧಾರಾಕಾರ ವರ್ಷಧಾರೆ. ಶಿವನ ಧಾರಾದಲ್ಲಿ ಪುನೀತನಾಗಿ ಐಕ್ಯಸ್ಥಲ ಹೊಂದಿದ ಅನುಭಾವ.

---

## ಶ್ರೀ ವಿವೇಕಾನಂದ ಶಿಖರ–ಪ್ರಗಾಥಾ

### ಒಗಟು ರೆಂಡು

**ಒಗಟು ರೆಂಡಿನಲ್ಲಿ ಮೂಡುತ್ತಿದ್ದೆ, ನಾ ಮುಳುಗುತ್ತಿದ್ದೆ, ನಿದ್ದೆ/ ನಿದ್ದೆ–ಸ್ವಪ್ನ ಹಾರಿ/ ನಲಿವು ನನ್ನಿಯಲಿ, ಒಲಿವ ಸನ್ನಿಯಲಿ ರಂಗ ರಂಗ ಹೂಡಿ (3–1, 2, 3)**

*ಅಧ್ಯಾತ್ಮದ ಚಿಂತನೆಯಲ್ಲಿ ವಿಕಾಸಶೀಲವಾಗುವುದನ್ನು ತೆಲುಗು ಸಂಖ್ಯೆ 'ಒಗಟು ರೆಂಡಿನಲ್ಲಿ' ಬೇಂದ್ರೆ ಅವರು ಬಣ್ಣಿಸಿದ್ದಾರೆ. ಮೂಲದಲ್ಲಿ ಒಂದಾದ ಪರಬ್ರಹ್ಮವಸ್ತು ಜೀವಾತ್ಮ–ಪರಮಾತ್ಮನಾಗಿ ಎರಡಾದ ಬಗೆಯ ಆಲೋಚನೆಯಲ್ಲಿ ಮೂಡಿ ಮುಳುಗುತ್ತಿದ್ದುದನ್ನು; ದ್ವೈತ–ಅದ್ವೈತದ, ವಾದ–ವಿವಾದದ ಗುಂಗಿನಲ್ಲಿ ವಿವೇಕಾನಂದರಿದ್ದುದನ್ನು 'ನಿದ್ದೆ ನಿದ್ದೆ' ಎಂದು ವರ್ಣಿಸಿದ್ದಾರೆ. ಅಧ್ಯಾತ್ಮದ ಆಲೋಚನೆಯಲ್ಲಿಯೇ ಇರುವಾಗ ತನ್ನನ್ನು ಆವರಿಸಿದ ಭಾವವನ್ನು, ನಿದ್ದೆಗೆಡಿಸಿದ ರೀತಿಯನ್ನು 'ಸ್ವಪ್ನವಿಹಾರಿ' ಎಂಬ ರೂಪಕದಿಂದ ಚಿತ್ರಿಸಿದ್ದಾರೆ. ಬ್ರಹ್ಮನನ್ನು ನೆನೆಯುತ್ತಾ ಸಂತೋಷಪಡುತ್ತಾ ಅದನ್ನೇ ಪ್ರೀತಿಸುವ ಭ್ರಮಾವಸ್ಥೆಯನ್ನು, ಆ ಚಿಂತನೆಯ ವಿವಿಧ ಭಾವದ ರಂಗ ಪ್ರಯೋಗಾವಸ್ಥೆಯ ಸ್ಥಿತಿಯನ್ನು ಕವಿ 'ನಲಿವು ನನ್ನಿಯಲಿ, ಒಲಿವ ಸನ್ನಿಯಲಿ ರಂಗರಂಗ ಹೂಡಿ'ಎಂದಿದ್ದಾರೆ.

* * * * * *

## ಬಾಂಬೊಳೆ

**ಶೇಷ ಫಣಾ ಮಂಡಲ ಸಂಚಾರಿ। ಕೂರ್ಮದ ಬೆನ್ನಲಿ ಕುಣಿಯುವ ನಾರಿ/ ಯಾರೀಕೆ? ಯಾರೀಕೆ? ಹಂಸನ ಹಾರಿಕೆ! ಶುಕನ ಸಾರಿಕೆ/ ಬಾಂಬೊಳೆಯೊಳು ಹೊಳೆಯುವ ನೀಹಾರಿಕೆ. (5–8, 9, 10)**

*ಆಧ್ಯಾತ್ಮಿಕ ನಾಯಕತ್ವವನ್ನು ವಹಿಸಿಕೊಂಡ ವಿವೇಕಾನಂದರನ್ನು ಬೇಂದ್ರೆ ಅವರು 'ದಿಗ್ಗಜ', 'ಕೂರ್ಮ', 'ಆದಿಶೇಷ' ಮೊದಲಾದವರ ಮೂಲಕ ವರ್ಣಿಸಿದ್ದಾರೆ. ಅವರೆಲ್ಲರೂ ಭೂಭಾರವನ್ನು ಹೊತ್ತವರು. ಇಲ್ಲಿ ವಿವೇಕಾನಂದರಾದರೋ ಗುರುವಿನ ಅನುಗ್ರಹದಿಂದ ಲಭಿಸಿದ ಜ್ಞಾನಭಾರವನ್ನು ಹೊತ್ತು ಅದನ್ನು ವಿತರಿಸಲೆಂದೇ ಜ್ಞಾನಯಾತ್ರಿಕನಾಗಿ ತಮ್ಮ ಬಾಳನ್ನು ಸವೆಸಿದರು.

'ಶೇಷ ಫಣಾ ಮಂಡಲ ಸಂಚಾರಿ' –ಶೇಷನ ಹೆಡೆಯಲ್ಲಿ ಸಂಚಾರ ಮಾಡುವ ಕುಂಡಲಿನೀಸರ್ಪ ಸಹಸ್ರಾರಕ್ಕೆ ಬಂದಾಗ ಅದರ ಹೆಡೆಯಲ್ಲಿ ಸಂಚರಿಸುವವಳು ಜ್ಞಾನಕನ್ಯೆ. ಕೂರ್ಮದ ಬೆನ್ನಲಿ ಕುಣಿಯುವ ನಾರಿ–ಶಕ್ತಿ ಕನ್ಯೆ. ಇವರು ಯಾರು? ಯಾರು? ಎಂದು ಪ್ರಶ್ನಿಸುವಷ್ಟರಲ್ಲಿ ಅವರು ಹಂಸನ ಹಾರಿಕೆ, ಶುಕನ ಸಾರಿಕೆಯಂತೆ ಈ ದೇಹದ ಹಂಸ ತತ್ತ್ವದಲ್ಲಿ ಮೂಡಿ ಬಾಂಬೊಳೆಯೊಳು (ಬಾನಿನ ಹೊಳೆ; ಆಕಾಶಗಂಗೆ; ದುಗ್ಧಪಥ) ಹೊಳೆಯುವ ನೀಹಾರಿಕೆಯಂತಿರುವರು. ಅವರು ಆಕಾಶಗಂಗೆಯೊಳು ಹೊಳೆಯುವ ಬೆಳಕಿನಪುಂಜವಾದ ಜ್ಞಾನ. ಅದು ಭಕ್ತಿ ಹೃದಯವೆಂಬ ನೈದಿಲೆಯಲ್ಲಿ ವಿಹರಿಸುತ್ತಾ ರಾಸಲೀಲೆಯ ಭಂಗಿಯಲ್ಲಿದ್ದು, ತನ್ನದೇ ರೂಪಾಂತರದ ಆನಂದದಲ್ಲಿರುವುದು. ಅದು ಜ್ಞಾನತೇಜದ ಬೆಳಕು. ಆ ಬೆಳಕೇ ವಿವೇಕಾನಂದ.

'ಬಾಂಬೊಳೆಯೊಳು ನೀ ಹಾರಿ' ಮುಂತಾದ ಮಾತುಗಳು ವಿವೇಕಾನಂದರು ಅವತಾರ ಪುರುಷರೆಂಬುದನ್ನು ಸೂಚಿಸುತ್ತವೆ. ಅವರು ಜ್ಯೋತಿಸ್ವರೂಪರಾಗಿ ಬಾಂಬೊಳೆಯಿಂದ ಇಳಿದುಬಂದ ಚಿತ್ರ, ಅವರನ್ನು ಕುರಿತ ಜೀವನ ಚರಿತ್ರೆಗಳಲ್ಲಿ ಭವ್ಯವಾಗಿ ಚಿತ್ರಿತವಾಗಿದೆ.

* * * * * *

## ಪಂಚಾಗ್ನಿ, ಪಡಿಹಾರಿ

**ಮೊನ್ನೆ ಮೊನ್ನೆ ಇದ್ದ, ಪಂಚಾಗ್ನಿ ಸಿದ್ಧ, ಸಭ್ಯತೆಗೇ ಇವ ಬದ್ಧ/ 'ಓಂಭವತಿ' ಎಂದಾ ಸಾರಿ ಮ್ಯಾ/ ನವತೆಯ ಮೈಸೇರೀ/ ಪರಾಕು/ ದೈವದ ಪಡಿಹಾರೀ (6–1, 2, 3)**

*ಪಂಚಾಗ್ನಿಗಳ ಮಧ್ಯೆ ಭಕ್ತನಾದವನು ಭಕ್ತಿಯಿಂದ ತಪಸ್ಸು ಮಾಡುತ್ತಾನೆ. ದಕ್ಷಿಣ, ಗಾರ್ಹಪಥ್ಯ, ಆಹವನೀಯ, ಸಭ್ಯ, ಅವಸತ್ಯ ಎಂಬವು ಪಂಚಾಗ್ನಿಗಳು. ಅಂತಹ ತಪದಿಂದ ಸಿದ್ಧಿಯನ್ನು ಪಡೆದವನು 'ಪಂಚಾಗ್ನಿ ಸಿದ್ಧ'. ಈ ಪಂಚಾಗ್ನಿಯ ವಿಷಯವನ್ನು ವಿವೇಕಾನಂದರಿಗೆ ವಿಸ್ತರಿಸುವಾಗ ಮತ್ತಷ್ಟು ವಿವರಗಳನ್ನು ನೀಡಬೇಕು. ನಾಲ್ಕು ದಿಕ್ಕಿಗೆ

ಅಗ್ನಿಯನ್ನು ಒಟ್ಟಿಕೊಂಡು; ಉರಿಯುವ ಐದನೆಯ ಅಗ್ನಿಯಾದ ಸೂರ್ಯನ ತಾಪವನ್ನು ಲೆಕ್ಕಿಸದೆ ಮಾಡುವ ತಪನಕ್ಕೆ ಪಂಚಾಗ್ನಿ ತಪಸ್ಸು ಎಂದು ಹೆಸರು. ಶಿವನನ್ನು ಪಡೆಯಲು ಗಿರಿಜೆಯು ಈ ಬಗೆಯ ಪಂಚಾಗ್ನಿ ತಪಸ್ಸನ್ನು ಮಾಡಿದಳೆಂದು ಕಾವ್ಯಗಳಲ್ಲಿ ವರ್ಣನೆ ಇದೆ. ವಿವೇಕಾನಂದರು ಮಳೆ, ಗಾಳಿ, ಬಿಸಿಲುಗಳಿಗೆ ಜಗ್ಗದೆ ಅಧ್ಯಾತ್ಮ ಸಾಧನೆಯನ್ನು ಮಾಡಿದರೆಂಬುದು ಈ ಪಂಚಾಗ್ನಿ ಎಂಬ ಮಾತಿನ ಮೂಲಕ ಸೂಚಿತವಾಗಿದೆ.

ಸಭ್ಯತೆ ಎಂಬುದು ಪಂಚಾಗ್ನಿಗಳಲ್ಲಿ ಒಂದು. ಅದು ಸುಲಭವಾಗಿ ಸಿದ್ಧಿಸುವುದಿಲ್ಲ. ಸಾಧನೆಯಿಂದ ಅದನ್ನು ಪಡೆಯಬೇಕು. ಅಂತಹದನ್ನು ಸಾಧಿಸಿ 'ಪಂಚಾಗ್ನಿ ಸಿದ್ಧ, ಸಭ್ಯತೆಗೆ ಇವ ಬದ್ಧ' ಎಂಬಂತೆ ರೂಪುಗೊಂಡವರು ವಿವೇಕಾನಂದ.

ಅವರು–ನೀವು ದೊಡ್ಡವರು, ಉಳ್ಳವರು ನಮಗೆ ಸ್ವಲ್ಪ ನೀಡಿ ಎಂದು ಗೌರವಪೂರ್ವಕವಾಗಿ ಬೇಡುತ್ತ ಜ್ಞಾನಾರ್ಜನೆ ಮಾಡಿ ಎಂದು ಸಾರಿದರು. ಅವರು ಮಾನವತೆಯ ಮೈಸೇರಿ ಪರಾಕು ಹಾಡಿದಂತಹ ದೇವದೂತ ಎಂಬುದನ್ನು ಬೇಂದ್ರೆಯವರು 'ಪಡಿಹಾರೀ' ಎಂಬ ವ್ಯಂಗ್ಯಾರ್ಥದಲ್ಲಿ ಸೂಚಿಸಿದ್ದಾರೆ.

---

# ನಾದ ಮಯೂರ

## ಅರೆದಾಳ

**(ಅರೆದಾಳ ಹಚ್ಚಿದರು ವಚನ ಒಳಗಡಗಿರದೆ?) (1–3)**

: ಹರತಾಲವೆಂಬ ಒಂದು ಹಳದಿ ದ್ರವ್ಯ. ಬರೆದುದ್ದನ್ನು ಕಾಣಿಸದಂತೆ ಮಾಡುವುದಕ್ಕೆ ಇದನ್ನು ಉಪಯೋಗಿಸುತ್ತಾರೆ.

*ಕವಿಯ ಅಂತರಂಗದ ಮಿಂಚು ಭಾವಗೀತೆ. ಅದರ ಧ್ವನ್ಯರ್ಥ, ಸೂಚ್ಯಾರ್ಥ, ಅಂತರಾರ್ಥವನ್ನು ಸಹೃದಯ ತನ್ನ ಒಳಗಿವಿಯನ್ನು ತೆರೆದು ಆಲಿಸಬೇಕು. ಭಾವಕ್ಕೆ ತಕ್ಕ ಲಯದಲ್ಲಿ ಒಂದಾಗುವ ಸ್ವರ ವರ್ಣಗಳಲ್ಲಿ ನಾದ ಮಯೂರ ನರ್ತನವಿದೆ, ಕೇಕೆ ಇದೆ. ಅದು 'ಬೆಡಗು–ಒಳಗುಟ್ಟಿನ ಒಂದು ಮಾತಿನ ರೀತಿ–ಅದಕ್ಕೊಂದು ಅನುಭವ ಸಮಯವೇ ಆಹಾರ. ಇದು ಒಂದು ರೀತಿಯ ಅಲಂಕಾರ ಸರಣಿ' ಎಂದು ಸಾಹಿತ್ಯದ ವಿರಾಟ್ ಸ್ವರೂಪದಲ್ಲಿ ಹೇಳಿರುವ ಬೇಂದ್ರೆ ಅವರು 'ಬೆಡಗಿನಲಿ ಮಡಗಿರಿಸಿ ಮುಗಿಸದಿರು ಆತುರದೆ' ಎಂದು ಕಾವ್ಯದ ಆಂತರ್ಯವನ್ನು ತಿಳಿಯಲು ಬೇಕಾದ ಎಚ್ಚರವನ್ನು ಸೂಚಿಸಿದ್ದಾರೆ.

ಕಾವ್ಯದ ತಿರುಳು ಗೋಚರಿಸದಂತೆ 'ಅರೆದಾಳ' ಹಚ್ಚುವುದು ಕಾವ್ಯಕಲೆಯ ಒಂದು ರಚನಾತಂತ್ರ. ಆ ಮೇಲ್ಪದರ ಸರಿಸಬೇಕು. ಕಾವ್ಯದ ಒಳಹೊಕ್ಕು ಅದರ ಅರ್ಥ ತಿಳಿದು

ನಾವು ಆಸ್ವಾದಿಸಬೇಕು. ಅದು ಅರಿವಿಗೆ ಬಂದಾಗ ಸಹೃದಯನಿಗೆ 'ಪ್ರಜ್ಞೆ ಪ್ರತಿಭಾಪುಷ್ಪ, ಸಂಜ್ಞೆ ಕಾಂಚನಪತ್ರ!' ಎಂಬ ಅಚ್ಚರಿಯ ಕಂಪು ಹೊಳಪು.

---

# ಊಹೆ

## ಅವಲೀಢೆ

**ವಾಸನಾ ಸಂಜನಿತ ಸಂಸ್ಕಾರ ಅವಲೀಢೆ/ ಭಾಗೀರಥಿಯು ಆಗ ಇಳಿದಂಥ ಜಾಹ್ನವಿಯು. (2–3, 4)**

***

ನಾಡಿಯ ನಡಿಗೆಯ/ ನಲುವಿನ ನಾಲಿಗೆ/ ನೆನೆದಿರೆ ಸೋಲುವ/ ಸೊಲ್ಲಿನಲಿ;

ಮುಟ್ಟದ ಮಾಟದ/ ಹುಟ್ಟದ ಹುಟ್ಟಿಗೆ/ ಜೇನಿನ ಥಳಿಮಳಿ/ ಸನಿಹ ಹನಿ;

ಬೆಚ್ಚಿದ ವೆಚ್ಚವು/ ಬಸುರಿನ ಮೊಳಕೆ/ ಬಚ್ಚಿದ್ದಾವುದೊ/ ನಾ ತಿಳಿಯೆ. (ನಾಕುತಂತಿ)

* 'ನಾಡಿಯ ನಡಿಗೆಯ' ಎಂಬುವುದು ಉನ್ಮುಖಗೊಂಡ ಕುಂಡಲಿನೀಶಕ್ತಿ ಇಡಾ ಪಿಂಗಳಾ ನಾಡಿಗಳ ಮೂಲಕ ಸುಷುಮ್ನಾ ನಾಡಿಯನ್ನು ಸೇರಿ ಊರ್ಧ್ವಮುಖವಾಗುವುದರ ಸೂಚನೆ. ಅದು 'ನಲುವಿನ ನಾಲಗೆ' ಆಗಿದೆ. ಅರ್ಥಾತ್, ಇಲ್ಲಿ ನಾಲಗೆ ಕುಂಡಲಿನಿ (ಸರ್ಪ) ಶಕ್ತಿಯನ್ನು ಪ್ರತಿಮಿಸುತ್ತದೆ. 'ನೆನೆದಿರೆ ಸೋಲುವ' ಎಂಬುದು ಸಹಸ್ರಾರ ಸೇರಿದಾಗ ಸ್ರವಿಸುವ ಅಮೃತಪಾನದಿಂದ ತೊಯ್ದಿರಲು –ಅರ್ಥಾತ್ ಜೀವಾತ್ಮ ಮತ್ತು ಪರಮಾತ್ಮ ಒಂದಾದಾಗ ಮೌನ ಆವರಿಸುವ ಭಾವವನ್ನು ಪ್ರತಿಮಿಸುತ್ತದೆ. ಅದು ನಾಮಸ್ಮರಣೆಯ ಮಾತು (ಸೊಲ್ಲು) ಸೋಲುವುದರ (ನಿಲ್ಲುವುದರ) ಸೂಚನೆಯಾಗಿದೆ. ಪರಬ್ರಹ್ಮನಿಗೆ ಆದಿಯೂ ಇಲ್ಲ, ಅಂತ್ಯವೂ ಇಲ್ಲ. ಅಂದರೆ ಹುಟ್ಟೂ ಇಲ್ಲ, ಸಾವೂ ಇಲ್ಲ. ಅದನ್ನು ಬೇಂದ್ರೆ ಅವರು ಪ್ರತಿಮಾಪೂರ್ವಕವಾಗಿ 'ಮುಟ್ಟದ ಮಾಟದ, ಹುಟ್ಟದ ಹುಟ್ಟಿಗೆ' ಎಂದಿದ್ದಾರೆ. ಅದು ಜೇನು ಹುಟ್ಟಿನಂತಹ ಸೃಷ್ಟಿ. ಅಂತಹದರ ಫಲವೆಂದರೆ 'ಜೇನಿನ ಥಳಿಮಳಿ'. ಸಿಹಿ ಥಳಿಯ ಮಳೆ ಅರ್ಥಾತ್ ಅಮೃತವರ್ಷ. ಅದು ಹತ್ತಿರದಲ್ಲೇ 'ಸನಿಹ ಹನಿ' ಯಾಗಿ ಅಮೃತಧಾರೆಯ ಬಿಂದುಗಳನ್ನು ತೊಟ್ಟಿಕ್ಕುವ ಆನಂದವೃಷ್ಟಿ. ಅಂತಹ ಬ್ರಹ್ಮ ಸೃಷ್ಟಿಯಲ್ಲಿ ಬೆಸುಗೆಗೊಂಡ ಜೀವಾತ್ಮಗಳು (ಬೆಚ್ಚಿದ ವೆಚ್ಚವು) ಮುಕ್ತಿಯ ಅಥವಾ ಆತ್ಮಸಾಕ್ಷಾತ್ಕಾರಕ್ಕಾಗಿ ಅಂಕುರಗೊಂಡಿವೆ(ಬಸುರಿನ ಮೊಳಕೆ). ಅಂತಹ ಸಾಕ್ಷಾತ್ಕಾರದ ದಿವ್ಯಕ್ಷಣದಲ್ಲಿ ಬಚ್ಚಿಟ್ಟಿದ್ದೇನು? ಮುಚ್ಚಿಟ್ಟಿದ್ದೇನು? ಎಂಬ ಯಾವ ಪರಿವೆಯೂ ಜೀವಾತ್ಮನಿಗೆ ಇರುವುದಿಲ್ಲ. ಆಗ, ಅವನು ಆನಂದತುಂದಿಲನಾಗಿರುತ್ತಾನೆ, ಸಚ್ಚಿದಾನಂದ ಸ್ವರೂಪಿಯಾಗಿರುತ್ತಾನೆ.

ಕಾವ್ಯರಚನೆಯಲ್ಲಿ ಅಂತಹ ಅನುಭಾವಕ್ಕೆ ಒಳಗಾದ ಕವಿ ಬೇಂದ್ರೆ. ಕಾವ್ಯಸೃಷ್ಟಿ ಅವರಿಗೆ ಸಚ್ಚಿದಾನಂದ. ಅದು 'ಹುಟ್ಟದ ಹುಟ್ಟು'. ಆ ಅಮೂರ್ತ ಅನುಭವ ನುಡಿಯಲ್ಲಿ ರೂಪುಗೊಂಡದ್ದು ಕವಿ ಸವಿದ ಉಣಿಸು. ಅದು ಸಹೃದಯರ ರುಚಿಯಾಗಿರುವುದು- ಕನ್ನಡ ಕಾವ್ಯಸೃಷ್ಟಿಯ ಅನನ್ಯ ವಿಕಾಸ. ಅದು ಬೇಂದ್ರೆ ಕಾವ್ಯದ ಬೆಡಗು.

"ಹಾಲಿಲ್ಲ ಬಟ್ಟಲಿಲ್ಲದ ಗುಟುಕೆ ಸವಿಸವಿಯು/ ನಿರ್ವಿಷಯ ಸೃಷ್ಟಿಯಲ್ಲಿ ಭೋಗ ಆತ್ಮಕ್ರೀಡೆ"

ಬೇಂದ್ರೆ ಅವರಿಗೆ ಕಾವ್ಯಸೃಷ್ಟಿ ಆತ್ಮಕ್ರೀಡೆ. ವ್ಯಕ್ತಿಯು ಭೌತಿಕವಸ್ತುಗಳ ಆಕರ್ಷಣೆಯ ಸುಖದ ಬೆನ್ನುಹತ್ತಿದಾಗ ದುಃಖ ಉಂಟಾಗಿ, ಹೆಚ್ಚು ವಯಸ್ಸಾದಂತಾಗಿ, ಸಾವಿನ ಕಡೆಗೆ ಅತಿಬೇಗ ಸಾಗುತ್ತಾನೆ. ಅಪಾಯದ ಪ್ರಪಾತಕ್ಕೆ ತನಗರಿವಿಲ್ಲದಂತೆ ಅವನು ಬೀಳುತ್ತಾನೆ. ಸುಖದ ಬೆನ್ನು ಹತ್ತಿದವನಿಗೆ ಮನದ ಆನಂದ ಅಪ್ರಯೋಜಕವೆನಿಸುತ್ತದೆ. ಕೋಪ ಮತ್ತು ಆಸೆಗೆ ಒಳಗಾದಾಗ ಅವನು ಆಂತರಿಕ ಶತ್ರುಗಳನ್ನು ಸೃಷ್ಟಿಸಿಕೊಳ್ಳುತ್ತಾನೆ. ಹೊರಗಿನ ವೈರಿಗಳನ್ನು ಎದುರಿಸಿದಂತೆ, ಅವನ ಒಳಗಿನ ವೈರಿಗಳನ್ನು ಎದುರಿಸುವುದು ಸಾಧ್ಯವಾಗುವುದಿಲ್ಲ. ಅದನ್ನು ಅರಿತ ಕಾವ್ಯರ್ಷಿ ಬೇಂದ್ರೆ ನುಡಿದಿದ್ದಾರೆ:

ವಾಸನಾ ಸಂಜನಿತ ಸಂಸ್ಕಾರ ಅವಲೀಢೆ/ ಭಾಗೀರಥಿಯು ಆಗ ಇಳಿದಂತ ಜಾಹ್ನವಿಯುಹಿ

ವಾಸನಾ ಸಂಜನಿತ ಸಂಸ್ಕಾರವನ್ನು ಅವಲೀಢೆಯಾಗಿಸಬೇಕು/ ಅದನ್ನು ತಿರಸ್ಕರಿಸಿ ಕಡೆಗಣಿಸಬೇಕು. ಆಗ ತಪಸ್ವಿ ಭಗೀರಥನು ಸಾಧನಾ ಪಥದಲ್ಲಿ ಸಾಗಿ ಸಾಹಸದಿಂದ ಭಾಗೀರಥಿಯನ್ನು ಇಳೆಗೆ ತಂದಂತೆ ಕಾವ್ಯಗಂಗೆಯನ್ನು ತರಲು ಸಾಧ್ಯ. ಆ ಕಾವ್ಯಗಂಗೆ ಜೀವಪೋಷಕವಾಗಿ ಮನುಕುಲವನ್ನು ಉದ್ಧರಿಸುತ್ತದೆ.

* * * * * *

**ಈಹಾಮೃಗ**

**ಜೀವನದ ರಂಗದಲೆ ಭರತನಾಟಕ ಯುಗವು/ ಓಹೋ! ಆಹಾ! ಊಹೆ! ನವ್ಯ ಈಹಾಮೃಗವು. (4-1, 2)**

*ಕವನವನ್ನು ಅದರ ಎಲ್ಲ ಬೆಡಗು, ಬಿನ್ನಾಣ, ಬಣ್ಣ, ಹೊಳಪು ಜೀವಂತ ಲವಲವಿಕೆಯಲ್ಲಿ ಹಿಡಿಯುವುದು ಅಷ್ಟು ಸುಲಭವಲ್ಲ. ಅದು ಈಹಾಮೃಗ-ಜಿಂಕೆ. ಅದು ಅಲಭ್ಯ. ಆದರೆ, ಅದನ್ನು 'ಊಹೆ'ಯಲ್ಲಿ ಕಂಡರಿಸುವ ಪ್ರಯತ್ನವನ್ನು ತನ್ನ ಪ್ರತಿಭಾ ತೇಜಸ್ಸಿನಿಂದ ಕವಿ ಸಾಧಿಸಬೇಕು. 'ಜೀವನದ ರಂಗದಲೆ ಭರತನಾಟಕ ಯುಗವು'.

'ಈಹಾಮೃಗ' -(ನಾಟ್ಯ) ದೃಶ್ಯಕಾವ್ಯಗಳಲ್ಲಿ ಒಂದು ಬಗೆ; ಹತ್ತು ರೂಪಕಗಳಲ್ಲಿ ಒಂದು. ದಿವ್ಯಸ್ತ್ರೀಯನ್ನು ಅವಳ ಇಚ್ಛೆಗೆ ವಿರುದ್ಧವಾಗಿ ಹೊತ್ತುಕೊಂಡು ಹೋಗುವ ಕಥೆಯಿಂದ

ಕೂಡಿ, ಧೀರೋದ್ಧತ ನಾಯಕ ಪ್ರತಿನಾಯಕರನ್ನೊಳಗೊಂಡು, ನಾಲ್ಕು ಅಂಕಗಳು, ಮೂರು ಸಂಧಿಗಳುಳ್ಳದ್ದಾಗಿ, ಶೃಂಗಾರಾಭಾಸ, ರಸದಿಂದ ಕೂಡಿದ ಒಂದು ರೂಪಕ ಭೇದ.

ಆ 'ಈಹಾಮೃಗ'ವನ್ನೇ ಈ ಕವನದಲ್ಲಿ ಕಾವ್ಯಸೃಷ್ಟಿಯ, ಕಾವ್ಯಕೋಮಲ ದಿವ್ಯಸ್ಫೂರ್ತಿಯನ್ನು ಪಡೆಯುವ ರೂಪಕವಾಗಿ ಬೇಂದ್ರೆ ಬಳಸಿಕೊಂಡಿದ್ದಾರೆ.

***

'ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸಾ/ ಮಸೆದ ಗಾಳಿ ಪಕ್ಕ ಪಡೆಯುತಿತ್ತು ಸಹಜ ಪ್ರಾಸಾ/ ಮಿಂಚಿ ಮಾಯವಾಗುತ್ತಿತ್ತು ಒಂದು ಮಂದಹಾಸಾ' (ಭಾವಗೀತೆ)

ಭಾವಗೀತೆ 'ಈಹಾರೂಪ ತಾಳಿ ಭೃಂಗಪದದೊಳ್ ಮೈಗಾಣದಂತಿರ್ದು'ದಾಗಿದೆ. ಜಿಂಕೆಯು ಭೃಂಗದ ಪದ-ಪಾಡನ್ನು, ರೀತಿಯನ್ನು ತೀಕ್ಷ್ಣತೆಯನ್ನು ಆರ್ದ್ರ ಭಾವವನ್ನು ಹೊಂದಿದೆ. ಅದು ಕಂಡುಕಾಣದಂತೆ ಚಂಗನೆ ನೆಗೆದು, ನಾದ ಹೊಳಪನ್ನು ಉಳಿಸಿ ಹೋಗುತ್ತದೆ. ಅದು ಒಂದು ಮಂದಹಾಸ. ಆಹಾಹಾ ಎನಿಸುವ ತಂಗಾಳಿ. ಅದು ಈ ಜಗದ ಸೃಷ್ಟಿಯ ಕಣ್ಣಿಗೆ ಕಾಣದ ಅನಂತಶಕ್ತ 'ಮಾಧವನ ಮೈತಾಗಿರ್ದತಂಗಾಳಿ'. ಅದು ಪ್ರಕೃತಿಯ ದಯೆ, ಅನುಗ್ರಹ. ಕಾವ್ಯರಚನೆ ಅನುಭಾವವಾಗಿ ಕವಿಯಿಂದ ಹೊಮ್ಮಿ ಬಂದ ಪಕ್ವಫಲ. ಅದು;

1. 'ಬೆಳಕನ್ನೆ ಮಸಿಮಾಡಿ ಎರೆದ ಮಿಂಚಿನ ಚಿತ್ರ' (ನಾದ ಮಯೂರ)

2. ಈಹಾರೂಪವ ತಾಳಿ ಭೃಂಗಪದದೊಳ್ ಮೈಗಾಣದಂತಿರ್ದು ತಾ

ಆಹಾಹಾ ಎನಿಸುತ್ತಿತ್ತು ಮಾಧವನ ಮೈತಾಗಿರ್ದ ತೆಂಗಾಳಿಯು (ಯಕ್ಷಯಕ್ಷಿ; ಚೈತ್ರ-ರಾಮ-ಧ್ಯಾನ-ಪ್ರಗಾಥ)

---

## ಬ್ಯಾಬೆಲ್

### ಕಳಘ

**ಕಳಘಮೋ? ಕಾಳಗವೊ? ತ್ರಿಕುಳ ಸಂಘದ ಕೂಟ?(1-1)**

*ಬ್ಯಾಬೆಲ್ ಕಾವ್ಯದ ಮೊದಲ ಸಾಲಿನ "ಕಳಘಮೋ? ಕಾಳಗವೊ? ತ್ರಿಕುಳ ಸಂಘದ ಕೂಟ?" ಎಂಬ ನುಡಿಗಳು ಅರ್ಥವಾಗದ್ದರ, ಅತಿ ಪ್ರಶ್ನೆಗೆ ಒಳಗಾಗುವ, ಹಲವು ಅರ್ಥಗಳನ್ನು ಒಳಗೊಂಡದ್ದರ ಸೂಚನೆ. ಅದು ಈ ಕಾವ್ಯದ 'ಬ್ಯಾಬೆಲ್'ನ ಧ್ವನಿ. ಈಗ 'ಕಳಘ' ಪದಕ್ಕೆ ತಮಿಳಿನಲ್ಲಿ ಸಂಘ ಎಂಬ ಅರ್ಥವಿದ್ದರೂ, ತಿರುಕ್ಕುರಳ್ ಸಾಹಿತ್ಯದಲ್ಲಿ 'ಪುಂಡರು ಸೇರುವ ಸ್ಥಳ' ಎಂಬ ಅರ್ಥವನ್ನು ಹೊಂದಿತ್ತು. ತ್ರಿಕುಳ

ಸಂಘ ಮೂಲದಲ್ಲಿ 'ಮುಕುಲತ್ತಾರ್' ಎಂಬ ಮೂರು ಕುಲವಾದ ದೇವರ್, ಮರವರ್, ಕಳ್ಳರ್ ಎಂಬ ಕಾದಾಡುವವರ ಗುಂಪಾಗಿತ್ತು. ಆ ಬಗೆಯ ದ್ರಾವಿಡ ಸಂಘಟನೆಯೆ ಈ ಕಳಘ? ಎಂದು ಹಾಸ್ಯದ ಲಹರಿಯನ್ನು ಹರಿಸುತ್ತಾ- ಪದದ ಅರ್ಥದ ಮೂಲಕ್ಕೆ ಹೋಗಿ ನಕ್ಕು ತಮ್ಮ ಪದಗಳನ್ನು ಪರಸ್ಪರರು ತಿಳಿಯದೇ ಕಾದಾಡುವ ದ್ರಾವಿಡರನ್ನು ಬೇಂದ್ರೆ ಇಲ್ಲಿ ಚಿತ್ರಿಸಿದ್ದಾರೆ.

ಕನ್ನಡದಲ್ಲಿರುವ ಕ,ಖ,ಗ,ಘ ಈ ನಾಲ್ಕೂ ಅಕ್ಷರಗಳಿಗೆ ತಮಿಳಿನಲ್ಲಿ 'ಕ' ಎಂಬ ಒಂದೇ ಅಕ್ಷರ ಬರಹದಲ್ಲಿ ಬಳಕೆಯಾಗುತ್ತದೆ. ಎರಡು ಸ್ವರ ಧ್ವನಿಗಳ ನಡುವೆ ಬರುವ 'ಕ' ವನ್ನು 'ಗ'ವಾಗಿಯೂ, ಅಥವಾ 'ಹ' ವಾಗಿಯೂ ಉಪಯೋಗಿಸುತ್ತಾರೆ. ಇಲ್ಲಿಯ 'ಕಳಘ' ಪದವೇ ತನ್ನಲ್ಲಿ ಕಳ-ಯುದ್ಧಭೂಮಿಯನ್ನು ಕಾಳಗವನ್ನು ಹುದುಗಿಸಿಕೊಂಡು ಅದೇ ಗುಂಪುಗಳಾಗಿ ಕಾದಾಟಕ್ಕೆ ಕಾರಣವಾಗುವುದು-ಪ್ರಶ್ನೆಗಳನ್ನು ಹೊತ್ತ ಈ ಪದಗಳ ವ್ಯಂಗ್ಯಾರ್ಥ. ಅದೇ 'ಕಳಘ' ಪದ ಕನ್ನಡಿಗರ ಉಚ್ಚಾರಣೆಯಲ್ಲಿ 'ಕಳಗ'. ನಮ್ಮ ಜನಪದರಲ್ಲಿ 'ಕಳಗ ಕಿತ್ಕೊಂಡು ತಲೆಗ್ಹೊಡಿತೀನಿ' ಎಂಬ ನುಡಿಗಟ್ಟಿದೆ. ಎತ್ತಿನ ಗಾಡಿಯ ಎರಡು ಪಕ್ಕದಲ್ಲೂ ಇರುವ ಪಾರಿಗಳಿಗೆ ಮೊಳದ ಅಂತರದಲ್ಲಿ ಎಜ್ಜ(ರಂಧ್ರ) ಗಳನ್ನು ಮಾಡಿ, ಅದಕ್ಕೆ ತೋಳುದ್ದದ ಬಿದಿರು ಗೂಟಗಳನ್ನು ಹಾಕುತ್ತಾರೆ. ಅದರ ಆಧಾರಕ್ಕೆ ಎರಡೂ ಪಕ್ಕದಲ್ಲಿ ಹಲಗೆಗಳನ್ನು ಒರಗಿಸಿ ಕಟ್ಟುತ್ತಾರೆ. ಆಗ ಗೋಡು ಗೊಬ್ಬರ ಹೊರಚೆಲ್ಲುವುದಿಲ್ಲ. ಹೀಗೆ ಸಿಕ್ಕಿಸಿದ ಗೂಟವೇ –ಕಳಗ.

ಜನಪದ ಭಾಷೆಯ ಒಳ ಭಾವ ಮತ್ತು ಸತ್ತ್ವವನ್ನು ಅರಿತ ಬೇಂದ್ರೆ ಅವರು ಕಾಳಗಕ್ಕೆ ಪ್ರತಿಮೆಯಾಗಿ 'ಕಳಗ'ವನ್ನು ಸಮರ್ಥವಾಗಿ ಬಳಸಿದ್ದಾರೆ. 'ಕಳಗ'ವೇ 'ಕಾಳಗ'ಕ್ಕೆ ಮೂಲವಾಗಿರುವುದನ್ನು ಕಂಡಾಗ 'ಕಾಳಗ' ಪದದ ವ್ಯುತ್ಪತ್ತಿಯ ಬಗ್ಗೆ ಭಾಷಾಪಂಡಿತರು ಆಲೋಚನೆಗೆ ತೊಡಗಬೇಕಾಗುತ್ತದೆ.

* * * * * *

## ಕಮ್ಮೆ, ಎರುಮ್ಮೈ ನಾಡು

**ಕೇರಳಕು ಕುಂತಳಕು ದುಷ್ಟಬುದ್ಧಿಯ ಗಂಟು;/ ಕಮ್ಮೆ, ಅದಕೊಮ್ಮೆ, ಇದಕೊಮ್ಮೆ, ಎರುಮ್ಮೈ ನಾಡು/ ಶಬರ-ಆಂಧ್ರ-ಪುಳಿಂದ-ಪುಂಡ್ರ-ಪುಲ್ಕಸಜೋಡು/ ಆದಿ ಆ ಹಾದಿ ದ್ರಾವಿಡಕೆ ಎಲ್ಲೂ ಉಂಟು. (2-1, 2, 3, 4)**

*ಬೇಂದ್ರೆ ಅವರು 'ಬ್ಯಾಬೆಲ್' ಕವನದ ಎರಡನೇ ನುಡಿಯಲ್ಲಿ ದ್ರಾವಿಡರು ತಮ್ಮ ತಮ್ಮ ಪ್ರಾಂತ್ಯ ಮತ್ತು ಭಾಷೆಯನ್ನು ಪ್ರತ್ಯೇಕವೆಂದು ತಿಳಿದು, ವ್ಯರ್ಥವಾಗಿ ಬಡಿದಾಡುವ ರೀತಿಯನ್ನು ಹಲವು ಬಗೆಯಲ್ಲಿ ಹಾಸ್ಯಲೇಪದೊಡನೆ ವರ್ಣಿಸಿದ್ದಾರೆ. ಕಾಸರಗೋಡಿನ ಸಮಸ್ಯೆ ಕರ್ನಾಟಕ ಮತ್ತು ಕೇರಳ ರಾಜ್ಯಗಳ ನಡುವೆ ಇದೆ. ಅದನ್ನು ಅವರು "ಕೇರಳಕು ಕುಂತಳಕು ದುಷ್ಟಬುದ್ಧಿಯ ಗಂಟು" ಎಂದಿದ್ದಾರೆ.

ದ್ರಾವಿಡರ ಒಂದೊಂದು ಭಾಷೆಯಲ್ಲಿಯೂ ಕೆಲವು ಪದಗಳು ಹಲವು ಅರ್ಥಗಳನ್ನು ಒಳಗೊಂಡಿರುತ್ತವೆ. ಒಂದೇ ಪದ ಒಬ್ಬರನ್ನು ಪ್ರತಿಷ್ಠಿತರೆಂದು ಮತ್ತೊಬ್ಬರನ್ನು ಸಾಧಾರಣರೆಂದು ವರ್ಗೀಕರಿಸಿ, ತೊಡಕನ್ನುಂಟು ಮಾಡುವುದನ್ನು ಬೇಂದ್ರೆ ಅವರು ಹಾಸ್ಯಮಯವಾಗಿ ಬಣ್ಣಿಸಿ ಕಚಗುಳಿ ಇಡುತ್ತಾರೆ. ತೆಲುಗಿನಲ್ಲಿ 'ಕಮ್ಮೆ' ಪದ ಒಂದು ಅರ್ಥದಲ್ಲಿ ಬ್ರಾಹ್ಮಣರಲ್ಲಿರುವ ಎಂಟು ಕುಲದಲ್ಲಿ ಒಂದು ಎಂದೂ, ಇನ್ನೊಂದು ಅರ್ಥದಲ್ಲಿ ಬೇಸಾಯವನ್ನೇ ಅವಲಂಬಿಸಿದ ತೆಲುಗು ಶೂದ್ರರಾದ ರೈತಾಪಿ ಜನರನ್ನು ಉದ್ದೇಶಿಸಿ ಬಳಕೆಯಾಗುತ್ತಿದೆ. ಹೀಗಾಗಿ, ಆ ಪದ 'ಅದಕೊಮ್ಮೆ, ಇದಕೊಮ್ಮೆ' ತನ್ನ ಅರ್ಥವನ್ನು ಹೊಮ್ಮಿಸುತ್ತದೆ.

'ಎಮ್ಮೆ' ಪದವನ್ನು ಹೊಂದಿದ ಮೈಸೂರು ಮಹಿಷಮರ್ದಿನಿಯ ಊರೆಂದು ತನ್ನ ಹೆಸರನ್ನು ರೂಪಾಂತರಿಸಿಕೊಂಡು ಹೆಮ್ಮೆಪಟ್ಟರೂ- ತಮಿಳಿನವರು 'ಎರುಮೈನಾಡು' ಅರ್ಥಾತ್ ಎಮ್ಮೆಯನಾಡು ಎಂದು ಕರೆದರೆ ಜಗಳಕ್ಕೆ ಅಷ್ಟೇ ಸಾಕಾಗುತ್ತದೆ.

ಹೀಗೆ, ಪ್ರತ್ಯೇಕ ಪ್ರಾಂತ್ಯ ಮತ್ತು ಭಾಷೆಯ ಜನ ತಮ್ಮ ಮೂಲಭಾಷಾರೂಪದಲ್ಲಿ ಭಾವವನ್ನು ಅಭಿವ್ಯಕ್ತಿಸಿದರೂ, ಅದು ಇನ್ನೊಬ್ಬರಿಗೆ ಕೀಳೆನಿಸಿ ಅಪಾರ್ಥವಾಗುವ ಗೌಜು ಇದೆ. ಈ ಬಗೆಯ ಗಲಿಬಿಲಿಯನ್ನು ಹೊರತುಪಡಿಸಿ ನೋಡಿದರೆ ಮೂಲದಲ್ಲಿ ದ್ರಾವಿಡ ಭಾಷೆಯ ಜನಾಂಗ ಎಲ್ಲಾ ಒಂದೇ ಎಂಬುದು ಸ್ಪಷ್ಟ. ಆದಿಯಲ್ಲಿದ್ದ ಬೇಡ ಮತ್ತು ಪುಲ್ಕಸ (ಹೊಲೆಯ, ಚಂಡಾಲ) ಜನಾಂಗದಿಂದಲೇ ನಾಗರಿಕತೆಯ ಆಂಧ್ರ ಮತ್ತು ಪುಂಡ್ರ ರಾಜ್ಯವಾಗಿದೆ(ಒಂದು ದೇಶ. ಈ ದೇಶಕ್ಕೆ ಪೌಂಡ್ರಕ ವಾಸುದೇವನು ರಾಜನಾಗಿದ್ದನು). "ಆದಿ ಆ ಹಾದಿ ದ್ರಾವಿಡಕೆ ಎಲ್ಲೂ ಉಂಟು" ಎಂದು ಮೂಲದ ಶಬರ ಪುಲ್ಕಸರಾಗಿದ್ದವರೇ ಇಂದು ಪ್ರತ್ಯೇಕವೆಂದು ಹೇಳಿಕೊಳ್ಳುತ್ತಾ, ವೈಶಿಷ್ಟ್ಯತೆ ಮೆರೆಯುವುದನ್ನು ವ್ಯಂಗ್ಯಾತ್ಮಕವಾಗಿ ಖಂಡಿಸಿದ್ದಾರೆ. ದ್ವಂದ್ವ, ಒಡಕು ಹುಟ್ಟಿಸಿದರೆ, ಪಂಗಡ ಮಾಡುವ ಹಾದಿಯು ಜಗಳಕ್ಕೆ ಕಾರಣವಾಗುತ್ತದೆ. ಅದನ್ನು ತ್ಯಜಿಸಿ ಎಂದಿದ್ದಾರೆ.

* * * * * *

## ಬ್ಯಾಬೆಲ್

### ಬ್ಯಾಬೆಲ್ಲ ಗೋಪುರದ ಒಳಗೆ ಸದ್ದೋ ಸದ್ದು (4-1, 2)

*ಬ್ಯಾಬೆಲ್ ಒಂದು ವ್ಯಂಗ್ಯಾತ್ಮಕವಾದ, ಹಾಸ್ಯಪ್ರಜ್ಞೆಯಿಂದ ಕೂಡಿದ ಕಾವ್ಯ. ಬೈಬಲ್‌ನ ಪ್ರಕಾರ, ಬ್ಯಾಬೆಲ್ ಒಂದು ಪುರಾತನ ನಗರವಾಗಿದ್ದು, ಅದು ಈಗಿನ ಬ್ಯಾಬಿಲೋನ್ ಆಗಿದ್ದಿರಬಹುದು ಎಂಬ ಅಭಿಪ್ರಾಯವಿದೆ. ಬ್ಯಾಬೆಲ್ ನಗರದ ಜನ ಒಂದು ಗೋಪುರವನ್ನು ಕಟ್ಟಿ ಅದನ್ನು ಏರಿ ಸ್ವರ್ಗದ ದೇವರನ್ನು ಕಾಣುವ ಯೋಚನೆ ಹೊಂದಿದ್ದರು. ಅಂತಹ, ಕಲ್ಪನಾ ಭಾವವನ್ನು ಶಿಕ್ಷಿಸಲು ದೇವರು ಆ ಗೋಪುರದ ಕೆಲಸಗಾರರು ಒಬ್ಬರು ಇನ್ನೊಬ್ಬರನ್ನು ಅರ್ಥಮಾಡಿಕೊಳ್ಳದಂತೆ ಮಾಡಿದ. ಹಾಗಾಗಿ, ಅವರು ಅದನ್ನು ಪೂರ್ಣಗೊಳಿಸಲಾಗಲಿಲ್ಲ ಎಂಬ ನಂಬಿಕೆಯ ಕಥೆಯೂ ಇಲ್ಲುಂಟು.

## ಹೆಟರ– ಡೊಕ್ಸೀ

**ಶಬ್ದವೇಧ**

**ಶಬ್ದವೇಧವ ಮಾಡಿ, ಶ್ರಾವಣನ ಕೊಂದ/ ದಶರಥ ಪಡೆದ/ ದಶಮುಖಾಸುರನ ಕೊಲುವ ರಾಮನನು! (4–1, 2)**

*ಶಬ್ದವನ್ನು ಪ್ರತಿಭಾಪೂರ್ಣವಾಗಿ ಸದುಪಯೋಗಪಡಿಸಿಕೊಳ್ಳದೆ ಶಬ್ದವೇಧವ ಮಾಡಿ ದಶರಥನು ಶ್ರಾವಣನನ್ನು ಕೊಂದು ಪಡೆದದ್ದು, ದಶಮುಖಾಸುರನಾದ ರಾವಣನನ್ನು ಕೊಲ್ಲುವ ರಾಮನನ್ನು. ಹೀಗೆ ದಶರಥನಾದ ವ್ಯಕ್ತಿ ಶಬ್ದವೇಧವ ಮಾಡಿ, ತನ್ನ ಶ್ರಾವಣ ಪ್ರತಿಭಾ ಶಕ್ತಿಯನ್ನು ಕೊಂದರೆ ಅವನು ಪಡೆಯುವ ಫಲ ದಶಮುಖದ–ಶಬ್ದವೇ ಆಕಾರವೆತ್ತಿದಂತಹ ಅರ್ಥರಹಿತ ಗೊಂದಲದ ನಾಶಕ್ಕಾಗಿ ಪಡೆಯಬೇಕಾದ ರಾಮನನ್ನು. ಶಬ್ದವನ್ನು ಸೂಕ್ಷ್ಮವಾಗಿ ತನ್ನ ಶ್ರವಣ ಪ್ರತಿಭೆಯಿಂದ ತಿಳಿಯದುದರ ಫಲವೇ ಶ್ರಾವಣನ ಕೊಲ್ಲುವಿಕೆಗೆ ಕಾರಣವಾಯಿತು.

---

## ಇದು ಯುಗಾದಿ

**ಸಾದಿ**

**ಸಾದಿ ನಮ್ಮ ಹಾದಿ ತಮ್ಮಾ/ ಯಾಕೆ ಕೆಡುವೆ ಕಾದಿ? (2–4)**

*ಆದಿಯನ್ನುಳ್ಳದ್ದು ಸಾದಿ. ಅದು ಇತ್ತೀಚಿನ, ಹೊಸದಾದ ಅರ್ವಾಚೀನ. ಹೊಸಭಾವ, ಹೊಸಚಿಂತನೆ, ಹೊಸ ಸಾಹಿತ್ಯ, ನವ ನವೀನ ವಿಜ್ಞಾನಶೋಧ ಪ್ರಗತಿಯ ಬೆಳಕು.

ಹಾದಿಯನ್ನು ನಾವೇ ಪ್ರಾರಂಭಿಸಬೇಕು. ಹಾದಿಕ್ರಮಿಸುವಾಗ, ಹಿಡಿದ ಕೆಲಸವನ್ನು ಸಾಧಿಸುವಾಗ ಜೊತೆಯವರೊಡನೆ ಕಾದಾಟಕ್ಕೆ ಎಡೆಗೊಟ್ಟರೆ ಮುಂದುವರಿಯಲಾಗುವುದಿಲ್ಲ.

* * * * * *

**ಸಾಯಕ, ವಿಪಂಚಿ, ಮಾಯದ ಕಾಯ್**

**ಕವಿಯಾಗಿಯೆ ಹೇಳುತಿರೋ/ ಕಿವಿಯಾಗಿಯೆ ಕೇಳುತಿರೋ/ ಭವ ಭವ ಭವ ಮೋಚನವಿದೆ/ ಸವಿ ಸವಿ ಸವಿದೇಳುತಿರೋ/ ಸಾಯಕನೋ ಈ ಪ್ರಪಂಚಿ/ ಗಾಯಕನಿಗೊ ಇದೆ ವಿಪಂಚಿ/ ಮಾಯದ ಕಾಯ್ ಮಾಗುವದೋ (6–1 ರಿಂದ 7)**

* 'ಶ್ರಾವಣದಲಿ ಶ್ರವಣಸುಖ' ಎಂದು ಆ ಮಾಸದಲ್ಲಿ ಪ್ರಕೃತಿಯು ಮೋಡ, ಮಿಂಚು, ಮಳೆ, ಗಾಳಿಯಾಗಿ ಹೊಮ್ಮಿಸುವ ನಾದಮಾಧುರ್ಯದಲ್ಲಿ ನೆಲದ ಗಂಧದಲ್ಲಿ, ಕೀಟ-ಪ್ರಾಣಿ-ಪಕ್ಷಿಗಳ ಶಬ್ದವೈಭವದಲ್ಲಿ ಮಿಂದವರು ಬೇಂದ್ರೆ. ಅವರು ಈ ಕವನದಲ್ಲಿ ನೀಡಿರುವ ಚಿಂತನೆ ಹೀಗಿದೆ:

ಗಾಯಕನಿಗೆ ನಾದದೊಡನೆ ಅನುಸಂಧಾನಗೈದು ಪರಿಣತನಾಗಲು ವಿಪಂಚಿ- ಒಂದು ಬಗೆಯ ವೀಣೆ ಇದೆ. ಮನುಷ್ಯನ ಈ ದೇಹ ಕ್ಷಯಿಸುವ ಗುಣವುಳ್ಳ 'ಮಾಯದ ಕಾಯ್'. ಆದರೆ ಇದು 'ಮಾಗು'ವ ಶ್ರೇಷ್ಠ ಲಕ್ಷಣವನ್ನು ಹೊಂದಿದೆ. ಸಾಮಾಜಿಕ ಪ್ರಾಣಿಯಾದ ಮಾನವನಿಗೆ ಈ ನೆಲದಲ್ಲಿ ಬದುಕುಳಿಯಲು ಸಾಯಕನಾಗಿ/ ಒಬ್ಬ ಇನ್ನೊಬ್ಬನಿಗೆ ಆಸರೆಯಾಗಿ ನೆರವು ನೀಡುತ್ತಾನೆ. ಆದಕಾರಣ ನಾವು ಇರುವ ಈ ಜಗತ್ತಿನ ಪ್ರಾಪಂಚಿಕ ವ್ಯವಹಾರದಲ್ಲಿ ಇದ್ದೂ ಇಲ್ಲದಂತೆ 'ಭವ ಮೋಚನ'/ ಬಿಡುಗಡೆಗೊಂಡ ಭಾವದಲ್ಲಿರುವುದು ಸಾಧ್ಯವಿದೆ. ಹಾಗಾಗಿ ಈ ಭವದ ಬದುಕಿನ ಸವಿಯುಣ್ಣುತ್ತ 'ಸವಿ ಸವಿ ಸವಿದೇಳುತಿರೋ'.

ಬೇಂದ್ರೆಯವರು ತಾವು ಕವಿಯೆಂದು ತಿಳಿದಿದ್ದರೂ ಲೋಗರ ಅನುಭವಕ್ಕೆ ಸದಾ ಕಿವಿ ತೆರೆದಿದ್ದರು. ಅವರಲ್ಲಿ ಕೂಲಿ ಕಾರ್ಮಿಕ, ಭಿಕ್ಷುಕ ತನ್ನ ನೋವು ನಲಿವನ್ನು ಹಂಚಿಕೊಳ್ಳಬಹುದಾಗಿತ್ತು. ಆ ಗುಣದಿಂದ ಬೇಂದ್ರೆಕಾವ್ಯ ಜನರಿಗೆ ತಮ್ಮದೇ ದನಿಯಂತೆ ಆಪ್ತವಾಗಿದೆ. ಅದು ಈ ನೆಲದ ಕಂಪು.

---

# ಪಂಚಾರತಿ

## ಪಂಚಾರತಿ, ಕೋಡೊಲಿ, ಇಂಗಡಲು, ವಡವಾ

**ಒಲಿಯೋ ಒಲಿ ಅನ್ನದ ಗಡಗೀಯೊಳಗೂ/ ಕೋಡೊಲಿ ಕೆಳಗೂ/ ಹೊತ್ತೊತ್ತಿಗೆ ಭಕ್ತಿ/ ಯುಕ್ತಿ ಹೊಳಿಸೋ (4-1, 2, 3, 4)**

* *

**ಹಂಗಿನ ಅರಸನಿಗಿಂತ ಇಂಗಡಲಿನ/ ಒಡಲಿನ ಬಡವಾ/ ವಡವಾ ಬಡವಾ ತಂಗೀ/ ಅಡಗೀ ಮಾಡವ್ವಾ (5-1, 2, 3, 4)**

* ಬೇಂದ್ರೆಯವರು ಗರತಿ ಹಾಡುವ 'ಪಂಚಾರತಿ' ಕವನದಲ್ಲಿ ಆಕೆಯ ಕುಟುಂಬ ವಾತ್ಸಲ್ಯವನ್ನು ಚಿತ್ರಿಸಿದ್ದಾರೆ. ದೇವರ ಪೂಜೆ ಮೊದಲಾದ ಸಂದರ್ಭಗಳಲ್ಲಿ ಎತ್ತುವ ಐದು ಕುಡಿಗಳ ಆರತಿಯೇ 'ಪಂಚಾರತಿ'. ಆಕೆ ತನ್ನ ಗಂಡ-ಮಕ್ಕಳನ್ನು ಪೋಷಿಸಲು ಮಾಡುವ ಅಡುಗೆ ಪವಿತ್ರವಾದುದು ಆ ಭಾವದಲ್ಲಿ ನುಡಿಯುತ್ತಾಳೆ:

**ಒಲಿ ಹೊತ್ತಿಸಬೇಕಮ್ಮಾ$_{s}$/ ಅಡಗಿ$_{ss}$ ಮನೆಯೊಳಗ$_{s}$ / ಅನ್ನಾ$_{s}$ ಎಡಿಮ್ಯಾ$_{s}$ಡ$_{s}$ ಬೇಕ$_{s}$/ ಅನ್ನ$_{s}$ದಾನೀಶ್ವರಗ$_{s}$ (1–2, 3, 4)**

ಆಕೆ ಕಂಡಿರುವ ದೈವ ಅನ್ನದಾನೇಶ್ವರ. ಅವಳಿಗೆ ದೇವರು ಒಲಿಯುವುದು: 'ಅನ್ನದ ಗಡಿಗಿಯೊಳಗೂ/ ಕೋಡೊಲಿ ಕೆಳಗು'.

ನಡೋಲೆಯಲ್ಲಿ ಅನ್ನ ಬೇಯಿಸಿದ ನಂತರ ಅದು ಅರಳಿ ಹುಡಿ ಹುಡಿಯಾಗಿ ಹದದಿಂದ ಘಂಗುಟ್ಟಲು ಗರತಿಯರು ಕೋಡೊಲಿಯ ಮೇಲಿಡುವರು. ನಿಧಾನವಾಗಿ ಉರಿ ಆ ಕಡೆ ಹರಿಸುವರು. ಇದು ಅಡುಗೆಯ ಕಲೆ.

ಹಳ್ಳಿಗಳಲ್ಲಿ ಸೌದೆ ಉರಿಸಿ ಅಡಿಗೆಮಾಡಲು ಮಣ್ಣಿನ ಒಲೆ ಮಾಡಿರುತ್ತಾರೆ. ಸೌದೆ ಉರಿಸುವಾಗ 'ನೋಡೊಲೆ' ಕಾಣುವುದಾದರೆ, ಅದಕ್ಕೆ ಕೆಲವೊಮ್ಮೆ ಎರಡು ಕಡೆಗೆ ಉರಿ ಹರಿದು ಹೋಗಲು 'ಕೋಡೊಲೆ'ಗಳನ್ನು ಮಾಡಿರುತ್ತಾರೆ. ಕೆಲವೊಮ್ಮೆ ಎಡಗಡೆ ಮಾತ್ರ ಒಂದು 'ಕೋಡೊಲೆ' ಇರುತ್ತದೆ. ಉರಿಯು ವ್ಯರ್ಥವಾಗದೆ ಅಡುಗೆ ಮಾಡುವ ಒಲೆಯ ರಚನೆ ಇದಾಗಿದೆ. ಈಗಲೂ ಗ್ರಾಮೀಣ ಮಹಿಳೆಯರು ಸಗಣಿಯಿಂದ ಒಲೆಯನ್ನು ಸಾರಿಸಿ ರಂಗೋಲಿಯಿಂದ ಶೃಂಗರಿಸಿ ಒಲೆ ಹೊತ್ತಿಸುವರು. ಅದು ಅನ್ನದಾನೇಶ್ವರನನ್ನು ಆರಾಧಿಸುವ ಮುಗ್ಧ ಗ್ರಾಮೀಣ ಸಂಸ್ಕೃತಿ.

ಉರಿನಾಲಿಗಿ 'ಕೋಡೊಲಿ ಕೆಳಗೂ' ಹರಿದು, ಕಾಳನ್ನು ಅನ್ನವಾಗಿಸುವ ಉರಿಯನ್ನು ಒಲಿ ಎಂದು ಪ್ರಾರ್ಥಿಸಿ ಒಲಿಸಿಕೊಳ್ಳುವ ರೀತಿ ಗ್ರಾಮೀಣ ಗರತಿಯರು ಪಂಚಭೂತಗಳಲ್ಲಿ ಒಂದಾದ ಅಗ್ನಿಯನ್ನು ಆರಾಧಿಸುವ ವಿಶಿಷ್ಟ ಬಗೆ. ಪಂಚಾರತಿಯ ಹೆಣ್ಣು ಭಕ್ತಿ ಮತ್ತು ಯುಕ್ತಿಯನ್ನು ನನಗೆ ಹೊಳಿಸು ಎಂದು ಬೇಡಿಕೊಳ್ಳುವುದರಲ್ಲಿ ಜೀವನದಲ್ಲಿ ಬದುಕಲು ಬೇಕಾದ ಭಕ್ತಿ–ಯುಕ್ತಿಗಳ ಎಚ್ಚರವಿದೆ.

ಬೆಳಗ್ಗೆ ಒಲಿ ಹೊತ್ತಿಸುವ ಗೃಹಿಣಿ 'ಒಲಿಯೊ ಒಲಿ' ಎಂದು ಪ್ರಾರ್ಥಿಸಿರುವಲ್ಲಿ ಆಕೆ ಒಲಿದು, ಒಲಿಯುವ, ಒಲಿಸುವ, ಒಲ್ಮೆಯನ್ನು ಪಡೆಯುವ ದರ್ಶನವಿದೆ.

ಆಕೆ ಬಡವಿ ಅವಳ ಗಂಡ 'ಇಂಗಡಲಿನ/ ಒಡಲಿನ ಬಡವಾ/ ವಡವಾ ಬಡವಾ'. ಅವಳಿಗೆ ಪತಿಯ ಒಡಲು– ಇಂಗಡಲು. ಇನಿದಾದ ಕಡಲು; ಪ್ರೀತಿಯ ಸಮುದ್ರ. ಅವಳಿಗೆ ಅವನು 'ವಡವಾ' ಅರ್ಥಾತ್ ಅವಳು ನಲಿದಾಡುವ ತೋಟ.

ಅವಳು ತುಂಬು ನಂಬಿಕೆಯಿಂದ 'ಅನ್ನದಾನೇಶ್ವರ' ತನಗೆ ಸೂಕ್ತವಾದುದನ್ನೇ ಕರುಣಿಸುವನು ಎಂದು ನುಡಿಯುತ್ತಾಳೆ: 'ಕೊಡುವಾ ಎದಿ ಹಾಲಿನ ಕೊಡವಾ'.

ಕುಟುಂಬ ವತ್ಸಲೆಯಾದ ಹೆಣ್ಣು ತನ್ನಲ್ಲಿ ಮಗುವನ್ನು ಅರಳಿಸುತ್ತಾನೆ, ಎದೆಯರಳಿಸುತ್ತಾನೆ ಎಂಬ ಭರವಸೆ ಹೊಂದಿದ್ದಾಳೆ. ಅದು ಅವಳ ಆರೋಗ್ಯ ಭಾಗ್ಯ, ಜೀವನ ಸಮೃದ್ಧಿ, ಸಂಪತ್ತಿನ ನಿರಂತರತೆಯ ಸೂಚನೆ.

# ಎದೆಯ ಒಕ್ಕಲಿಗನ ಹಾಡು

## ತತ್, ಬಿತ್ತ್, ಸತ್

**ತತ್ ಎನ್ನು ತತ್ತಿಗೆ/ ಬಿತ್ತೆನ್ನು ಬಿತ್ತಿಗೆ/ ಸತ್ ಎನ್ನು ಕುತ್ತಿಗೆ– ಮುತ್ತಿಗೆ/ ಮಿಂಚಾದ ಚಿತ್ತಿಗೆ/ ಸ್ವಾತಿ ತುಟಿ ಮುತ್ತಿಗೆ. (1–1, 2, 3)**

*ಬೇಂದ್ರೆ ಅವರು ಈ ಕವನದಲ್ಲಿ ಅಂತರಾತ್ಮವನ್ನು ಶುದ್ಧಗೊಳಿಸುವ ಒಕ್ಕಲುತನವನ್ನು ಧ್ಯಾನಿಸಿದ್ದಾರೆ. ಈ ಮನುಷ್ಯ ಜೀವಿ ಪಿಂಡ ಒಂದು ಮೊಟ್ಟೆ; ತತ್ತಿ. ಅದು ಬೆಳೆದು ದೋಷರಹಿತ ಮಗುವಾಗಿ ರೂಪುಗೊಳ್ಳಲು ಕಾರಣವಾದದ್ದು ಅಗೋಚರವಾದ ತತ್– ಅದು; ಪರಮಾತ್ಮ. ಆ ಅರಿವೆ ತತ್ತ್ವಮಸಿ–ನೀನೇ ಪರಮಾತ್ಮ ಎಂಬ ಜ್ಞಾನ; ಆತ್ಮ ಮತ್ತು ಬ್ರಹ್ಮರ ಐಕ್ಯಜ್ಞಾನ.

ತತ್ತಿ ಒಂದು ರೂಪ ತಳೆದು ಪ್ರಾಣಿ ಪಕ್ಷಿಗಳಾಗುವಂತೆ, ಬಿತ್ತಿದ ಬಿತ್ತ(ಕಾಳು) ಮೊಳೆತು ಪೈರು, ಗಿಡ, ಮರವಾಗುತ್ತದೆ. ಅದು ತತ್ತಿಯಿಂದ ಹೊರಟ ಜೀವಿಗಳಿಗೆ ಜೀವ ಪೋಷಕವಾಗಿದೆ.

ಈ ನೆಲದ ಬದುಕಿನಲ್ಲಿ ತೊಂದರೆ, ಅಪಾಯ, ವಿಪತ್ತು ಸಹಜ. ಅದು ಆವರಿಸಿ, ಧಾಳಿ ಮಾಡುವಾಗ – 'ಸತ್' ಎನ್ನು. ಸತ್ ಎಂಬ ನಿಜದ ಕಡೆಗೆ, ಶಾಶ್ವತವಾದುದರ ಕಡೆ ಮುಖಮಾಡು. ಒಳ್ಳೆಯದನ್ನು ಅಪ್ಪಿಕೊ, ಉತ್ತಮ ನಡೆ ನುಡಿಯಿಂದ ಕುತ್ತು ಆಗುವುದನ್ನು ನಿವಾರಿಸಿಕೊ. ಆಗ ನಿನ್ನ ಮನಸ್ಸು/ಚಿತ್ತು ಮಿಂಚಾಗುತ್ತದೆ. ನೀನು ಮನುಷ್ಯನಾಗಿ ತಾಳಿ ಬಾಳುವ ಕಲೆ ಕಲಿತಾಗ ನಿನ್ನ ತುಟಿ ಮುತ್ತಿಗೆ ಸ್ವಾತಿ ಮಳೆಹನಿ ಬೀಳುತ್ತದೆ. ಆ ಸ್ವಾತಿ ಮಳೆಹನಿಗೆ ನೀನು ಮುತ್ತಾಗಿ– ನೀರಿನ ರೂಪದ ಮಾನವ ಶ್ರೇಷ್ಠಮುತ್ತಾಗಿ ಹೊಳೆಯುವೆ ಎಂದು ಪ್ರತಿಮಾತ್ಮಕವಾಗಿ ತಿಳಿಸಿದ್ದಾರೆ.

ಪಂಚಭೂತಗಳ ಸೃಷ್ಟಿಯಿಂದಾದ ಈ ಪೃಥ್ವಿಯಲ್ಲಿ ಎಲ್ಲ ಮಾನವರೂ ಒಂದೇ. ಆ ಅರಿವಿನಲ್ಲಿ ಈ ನೆಲದ ಶಾಂತಿ ಅಡಗಿದೆ. ಅದು ಸಿದ್ಧಿಸಲಿ ಎಂಬ ಆಶಯದಲ್ಲಿ ಬಾಳು ಎಂಬ ಚಿಂತನೆ ನೀಡಿದ್ದಾರೆ:

**"ರವಿಚಂದ್ರ ಮನಿ ದೀಪ/ ನೆಲಕೆ ನೀರು ಸಮೀಪ/ ಮನುಷ್ಯಾರ ಕುಲ ಮೂಲ ಒಂದಾಗಿ/ ಸತ್ಯವಂತರಾಗಿ ನಿತ್ಯವಂತರಾಗಿ/ ಬಾಳುವೆ ಮಾಡಲಿ ಚೆಂದಾಗಿ/ ದೇವರ ಬೆಳಕಾಗಿ ಮುಂದಾಗಿ" (4–1, 2, 3, 4)**

---

# ಕಣ್ಣರಳು

## ಕಣ್ಣರಳು

**ಗರ್ಭಗುಡಿಯ ದೈವ । ದೀಪಕ್ಕ ಕಣ್ಣರಳಿ/ ಹೊರಳಿ ನೋಡ್ಯಾವ ಒಳಗರಳಿ, ಕತ್ತಲೆಗು/ ಹೌದೇನೋ, ಕಲ್ಲಿಗು ಕಣ್ಣು ಇರತಾವ॥ (8–1, 2, 3)**

: 1. ಕಣ್ಣು ಅರಳು,– ಹಿಗ್ಗು.

2. ಆಲಂಕಾರಿಕವಾಗಿ ಆನಂದವಾಗು.

*ಶಾಂತ ದೇವಾಲಯದ ಗರ್ಭಗುಡಿಯ ದೈವವು ದೀಪಕ್ಕೆ ಹಿಗ್ಗಿ, ಆನಂದಗೊಂಡು ಒಳಗರಳಿ ಪ್ರಕಾಶಬೀರುತ್ತಿದ್ದಾನೆ! ಭಕ್ತನ ಧ್ಯಾನ ಪುಳಕ 'ಕಣ್ಣರಳು'ವಿನಲ್ಲಿ ಪ್ರತಿಮಾತ್ಮಕವಾಗಿ ದೈವದ ಬೆಳಕನ್ನು ಪ್ರಕಾಶಿಸುತ್ತಿದೆ.

---

## ೨೦. ಮರ್ಯಾದೆ (೧೯೬೬)

## ಮರ್ಯಾದೆ

**ಈಕ್ಷಾ**

**ಇದ್ದೆ ಅಂದರೆ ಇದ್ದೆ, ಇಲ್ಲಾ ಇಲ್ಲಾ/ ಅಂತಾ ಈಕ್ಷಾ ಮಾತ್ರ ಬಾಳಿದ್ದೆ (1–5, 6)**

* 'ಈಕ್ಷಾ' ಅಂದರೆ ಯಾವುದೇ ಕರ್ಮದಲ್ಲಿ ತೊಡಗಿಕೊಳ್ಳದೆ ಸಾಕ್ಷಿಮಾತ್ರನಾಗಿ ಬಾಳುವುದು.

---

## ನೂಲು

**ಸಾರಸ್ವತ, ಆನತ**

**ಸರಸ್ವತಿಯ ಸಾರಸ್ವತವು/ ಆನತವಾದರು ಉನ್ನತವು (3–1, 2)**

: ವಿದ್ವತ್ತಿನಿಂದ ಕೂಡಿದುದು; ಪಾಂಡಿತ್ಯಪೂರ್ಣವಾದುದು. ಸರಸ್ವತಿಯ ಮಗ 'ಸಾರಸ್ವತ'ನೆಂದು ರಾಜಶೇಖರ ಎಂಬ ಅಲಂಕಾರಿಕನು ತನ್ನ 'ಕಾವ್ಯಮೀಮಾಂಸೆ' ಎಂಬ ಗ್ರಂಥದ ಮೊದಲ ಅಧ್ಯಾಯದಲ್ಲಿ ಪ್ರಸ್ತಾಪಿಸಿದ್ದಾನೆ.

: ಬಗ್ಗಿದ; ಬಾಗಿದ; ನಮಸ್ಕರಿಸಿದ; ವಿಧೇಯವಾದ.

---

## ಕೇಳಿನುಡಿ ಕಂಡು ನಡೆ ಓ ಕನ್ನಡ ಕಂದಾ

**ತಮ, ವಿಷಮ, ತಿಮರು, ಡಾಮರ, ಡಮರು**

**'ತಮ ವಿಷಮ ತಿತ್ತಿಮರು/ ಕೈಲಿ ಡಾಮರ ಡಮರು'/ ಬರಲಿ–ಬೆದರುವದೇನು/ ಈ ಕನ್ನಡ? (1–29, 30, 31, 32)**

: 1. ಮೂರು ಮೂಲ ಗುಣಗಳಲ್ಲಿ ಒಂದು; ತಮೋಗುಣ.

2. ಅಜ್ಞಾನ.

: 1. ಸಮವಲ್ಲದ; ಒರಟಾದ.

2. ಕೆಟ್ಟ; ದುಷ್ಟ.

: ಸೊಕ್ಕು; ಪೊಗರು; ಗರ್ವ; ಅಹಂಕಾರ.

: ಭಯಂಕರವಾದ; ಆಶ್ಚರ್ಯಕರವಾದ.

: ಒಂದು ಬಗೆಯ ಚರ್ಮವಾದ್ಯ; ಬುಡಬುಡಿಕೆಯಾಕಾರದ ಚರ್ಮವಾದ್ಯ.

---

## ಜಯವಾಗತ್ರೈತಿ

**ನಾಡಾಡಿ, ಬುಡಬುಡಿಕೆ, ಒಡಂಬಡಿಕೆ, ವಿಗಡ**

**ನಾಡಾಡಿ ಬುಡಬುಡಿಕೆಯಲ್ಲ/ ಇದು ದೇವವಾಣಿಯ ಒಡಂಬಡಿಕೆ/ ವಿಗಡ ಬೇಡ. (5–1, 2, 3)**

: ಸಾಮಾನ್ಯವಾದುದು; ಸಾಧಾರಣವಾದುದು; ಅಪ್ರಸಿದ್ಧವಾದುದು; ವಿಶೇಷವಲ್ಲದುದು.

: 1. ಡಮರುಗದಂತಹ ಒಂದು ಬಗೆಯ ಚಿಕ್ಕವಾದ್ಯ.

2. (ಆಲಂ) ಸತ್ತ್ವವಿಲ್ಲದುದು; ಚೈತನ್ಯ ರಹಿತವಾದುದು; ಹುರುಳಿಲ್ಲದುದು.

: ಕ್ರೈಸ್ತರ ಪವಿತ್ರ ಗ್ರಂಥವಾದ ಬೈಬಲ್ಲಿನಲ್ಲಿರುವ ವಿಧಾಯಕ ವಾಕ್ಯ.

: ವ್ಯತಿರಿಕ್ತತೆ; ವಿರೋಧ.

* * * * * *

**ದೇಹಲೀ**

**ದೇಹದಲಿ ಅಡಗಿರುವ ದೆವ್ವವನು ಮೆಟ್ಟಿ/ ದೇಹಲೀ ದೀಪದಲಿ ದೇವನನೆ ಮುಟ್ಟಿ (6–1,2)**

: ಹೊಸತಿಲು; ಹೊಸ್ತಿಲು.

*ದೇಹಲೀ ದೀಪನ್ಯಾಯ: ಒಂದು ಬಗೆಯ ಲೋಕನ್ಯಾಯ; ಹೊಸ್ತಿಲಿನ ಮೇಲೆ ದೀಪವನ್ನಿಟ್ಟರೆ, ಹೊಸ್ತಿಲಿನ ಎರಡು ಕಡೆಗೂ ಬೆಳಕು ಹಬ್ಬುತ್ತದೆ. ಹೀಗೆ ಒಂದು ಕಾರ್ಯದಿಂದ ಬೇಕಾದ ಎರಡು ಫಲಗಳು ಲಭಿಸಿದಂತಾಗುತ್ತದೆ. ಇದನ್ನು 'ದೇಹಲೀ ದೀಪ' ನ್ಯಾಯವೆಂದು ವ್ಯವಹರಿಸುತ್ತಾರೆ. ಭಾರತದ ರಾಜಧಾನಿ 'ದೆಹಲಿ'ಯು 'ದೇಹಲಿ' ಎಂಬ ಪದದ ಅಪಭ್ರಂಶರೂಪವಾಗಿದೆ.

* * * * * *

## ವಾಗಂಭೃಣೀ

**ಓ ದೇವಿ ವಾಗಂಭೃಣೀ (12–6)**

*ಋಗ್ವೇದದಲ್ಲಿ 'ವಾಗಂಭೃಣೀ' ಎಂಬ ಸೂಕ್ತವಿದೆ. ದೇವಿಯನ್ನು ಕುರಿತಾದ ಈ ಸೂಕ್ತದ ಋಷಿಕೆ 'ವಾಗಂಭೃಣಿ'. ಋಗ್ವೇದ ಕಾಲದಲ್ಲಿ ಪುರುಷರಷ್ಟೇ ಅಲ್ಲದೆ ಅಪಾಲಾ, ಆತ್ರೇಯೀ ದಾಕ್ಷಾಯಿಣೀ ಮುಂತಾದ ಋಷಿಕೆಯರೂ ಇದ್ದರು. ಇಲ್ಲಿ ಬೇಂದ್ರೆ ಭಾರತಮಾತೆಯನ್ನು ವಾಗಂಭೃಣೀ ಎಂಬ ಆ ಋಷಿಕೆಗೆ ಹೋಲಿಸುತ್ತಿರುವರು. ಅಂಭೃಣ ಎಂಬ ಪದಕ್ಕೆ ಸಂಸ್ಕೃತದಲ್ಲಿ 'ಹಿರಿದಾದುದು', 'ಶಕ್ತಿಶಾಲಿಯಾದುದು' ಎಂಬ ಅರ್ಥಗಳೂ ಉಂಟು. ಭಾರತಮಾತೆ ಶಕ್ತಿಶಾಲಿಯಾದ ನುಡಿಯುಳ್ಳವಳು.

* * * * * *

## ತಿರುಗುಪ್ಪು

**ತಿರುಗುಪ್ಪ ತಂದ/ ಲಾವಣ್ಯಮಯ ಬುದ್ಧ ಭಾರತಕೆ ಬಂದ. (16–9, 10)**

*ಸರಮನಿ, ಸರಗೆರೆ, ತಿಳ್ಳಿ, ಉಪ್ಪಿನಾಟವನ್ನು 'ಅಟ್ಯಾಪಟ್ಯಾ' ಎಂದು ಕರೆಯುವರು. ಇದು ಅತಿ ಪ್ರಾಚೀನ ಗ್ರಾಮೀಣ ಕ್ರೀಡೆ. 1981ರಲ್ಲಿ ಮಹಾರಾಷ್ಟ್ರದ ನಾಗಪೂರದಲ್ಲಿ ರಾಷ್ಟ್ರಮಟ್ಟದ ಫೆಡರೇಶನ್ ಆರಂಭಿಸಲಾಯಿತು. 1982ರಲ್ಲಿ ದೆಹಲಿ ಏಶಿಯನ್ ಕ್ರೀಡಾಕೂಟದಲ್ಲಿ ಇದನ್ನು ಪ್ರದರ್ಶನ ಪಂದ್ಯವನ್ನಾಗಿ ಏರ್ಪಡಿಸಲಾಗಿತ್ತು. ಅದೇ ವರ್ಷ ಮೊದಲ ರಾಷ್ಟ್ರೀಯ ಪ್ರಶಸ್ತಿ ಪಂದ್ಯಾವಳಿ ಪುರುಷರ ವಿಭಾಗದಲ್ಲಿ ಆರಂಭಿಸಲಾಯಿತು. 1985ರಲ್ಲಿ ಮಹಿಳೆಯರಿಗೆ ರಾಷ್ಟ್ರೀಯ ಚಾಂಪಿಯನ್‌ಶಿಪ್‌ಅನ್ನು ಆರಂಭಿಸಲಾಯಿತು. ಅದೇ ವರ್ಷ ಆಟದ ನಿಯಮಗಳನ್ನು ತಿದ್ದುಪಡಿ ಮಾಡಲಾಯಿತು. 1987ರಲ್ಲಿ ರಷ್ಯಾದೇಶದ ಮಾಸ್ಕೋ, ಮಿನಿಸ್ಕ, ಹಾಗೂ ಯುಕ್ರೇನ್‌ಗಳಲ್ಲಿ ನಡೆದ ಭಾರತ ಉತ್ಸವದಲ್ಲಿ ಇದನ್ನು ಪ್ರದರ್ಶನ ಪದ್ಯವನ್ನಾಗಿ ಏರ್ಪಡಿಸಲಾಗಿತ್ತು.

* * *

ಈ ಆಟದಲ್ಲಿ ಆಕ್ರಮಣಕಾರನು ಅಡ್ಡಪಟ್ಟಿಯನ್ನು ದಾಟಿದ ಮೇಲೆ ಅಲ್ಲಿನ ಕಾವಲುಗಾರನ ಹಿಂದೆ ನಿಂತು 'ತೊಂಡ್' (ಉಪ್ಪು) ಎಂದು ಕೂಗಬೇಕು ಈ ಶಬ್ದ ಕೇಳಿದ ತಕ್ಷಣ ಅಡ್ಡಪಟ್ಟಿಯ ಕಾವಲುಗಾರ ತಿರುಗಿನಿಲ್ಲಬೇಕು. ಈ ಒಂದು ಚಟುವಟಿಕೆಗೆ 'ಉಪ್ಪು ಕೊಡುವುದು' ಎನ್ನಲಾಗಿದೆ.

ಆಕ್ರಮಣಕಾರನು ತೊಂಡನ್ನು ಪಡೆದು ಅದನ್ನು ತನ್ನ ದಾರಿಯಲ್ಲಿ ಸಿಗಬಲ್ಲ ತನ್ನೆಲ್ಲ ಆಟಗಾರರಿಗೂ ತಲುಪಿಸಿ, ಎಲ್ಲಕ್ಕೂ ಮುಂದಿನ ಮನೆಯನ್ನು ದಾಟಿದರೆ ಆಗ ಆಟ ಮುಗಿದು ಅವರಿಗೆ ಒಂದು ಲೋನಾ ಸಿಗುತ್ತದೆ. ಲೋನಾ ಮಾಡಿದ ಆಕ್ರಮಣ ತಂಡವೊಂದಕ್ಕೆ 18 ಗುಣ ಸಿಗುತ್ತವೆ.

'ಅಟ್ಯಾ-ಪಟ್ಯಾ' ಆಟದಲ್ಲಿ ಜಯಶಾಲಿಯಾದವನು ಉಪ್ಪನ್ನು ತಂದು ತನ್ನೆಲ್ಲಾ ಆಟಗಾರರಿಗೆ ಹಂಚಿದಂತೆ ಬುದ್ಧ ತನ್ನ ಚಿಂತನೆಯನ್ನು ನಾಡಿನ ಜನಗಳಿಗೆ ಹಂಚಿದ ಎಂದು ಬೇಂದ್ರೆಯವರು ಪ್ರತಿಮಾತ್ಮಕವಾಗಿ ಬಣ್ಣಿಸಿದ್ದಾರೆ.

ವಿವರಗಳಿಗೆ ನೋಡಿ: ವಿ.ಡಿ ಪಾಟೀಲ, 'ಅಟ್ಯಾ-ಪಟ್ಯಾ'(ಆಟದ ನಿಯಮಗಳು, ನಿಪುಣತೆಗಳು ಹಾಗೂ ಸ್ಪಷ್ಟೀಕರಣ), ಚಿಲಿಪಿಲಿ ಪ್ರಕಾಶನ, ಧಾರವಾಡ,2010.

---

## ಮೂಡಿತ್ತು 'ದೇವರಗುಲಾಬಿ'

### ನಜರಾಣಿ

**ಮಾನವ್ಯ ಹೃದಯಗಳ ನಜರಾಣಿ/ ದೇವ ಹೃದಯದ ದೇವರಾಣಿ! (6-4, 5)**

: ಕಾಣಿಕೆ; ಉಪಾಯನ; ಉಡುಗೊರೆ.

* * * * * *

### ಅಲಾಬಿ

**ದೇವದೇವನಿಗೆ ರವಿಯೇ ಅಲಾಬಿ/ ರವಿಗೊ ಚಂದ್ರನೆ ಗುಲಾಬಿ (7-2, 3)**

: ಮೊಹರಂ ಹಬ್ಬ; ಬಾಬಯ್ಯನ ಹಬ್ಬ.

---

## ಸಹಸ್ರ ವಂದನ

### ಶ್ರವಾ

**ಶ್ರಮಾ ಮಾಡಿ ಶ್ರವಾ ಮಾಡಬೇಕು ಈ/ ಭವಾ; ಯಾಕ? ಶಿವಶಿವಾ (1-3, 4)**

: ಶ್ರವಣ, ತಿಳಿಯುವುದು

*ಸಾಧನೆ ಮಾಡಿ ಬಳಿಕ ಅರಿಯಬೇಕು.

---

## ಕತ್ತೆಯ ಸತ್ವರೂಪ

**ಉಲುಕು**

**ಉಲುಕದಿಹುದೋ ಹಲ್ಲು? (2–2)**

: ಅಲುಗು; ನಡುಗು; ಅಲ್ಲಾಡು; ಮಿಸುಕು.

---

## ಮಂಕಿಗೆ ವಂಕಿ

**ಮಘವ, ಭಡವ**

**ಯುವಕ ನಾಯಿ ಆ ಮಘವ ಭಡವ/ ಇವಗೇಕೆ ಬೇರೆ ಸೂತ್ರ? (4–1, 2)**

: ದೇವತೆಗಳ ಒಡೆಯ; ದೇವೇಂದ್ರ.

: 1. ವ್ಯಭಿಚಾರಕ್ಕಾಗಿ ಗಂಡು ಹೆಣ್ಣುಗಳನ್ನು ಹೊಂದಿಸುವವನು; ತಲೆಹಿಡುಕ; ಕುಂಟಣಿಗ.
2. ಒಂದು ಬೈಗುಳ.

* * * * * *

**ವಂಕಿ**

**ಯಮನ ಪಾಶ 'ವಂಕಿ' (7–4)**

: ಸಂತಾನ ನಿಯಂತ್ರಣದ ಒಂದು ಸಾಧನ.

---

## ಒಲವಿನ ನಿಲವು

**ರಜತ ಶುಕ್ತಿ**

**ಭ್ರಾಂತಿಗೀಂತಿ ಹೊರಹೊಳಪು ತರದು ಇದು ಅಲ್ಲ ರಜತಶುಕ್ತಿ/ ಇದು ನೇತಿಯಲ್ಲ ಇತಿ ಪ್ರೀತಿ ಸ್ವಾತಿ ಮೌಕ್ತಿಕದ ದೈವ-ಭುಕ್ತಿ. (4–1, 2)**

: ರಜತ= ಬೆಳ್ಳಿಯಿಂದ ಮಾಡಿದ.

ಶುಕ್ತಿ= ಮುತ್ತಿನ ಅಥವಾ ಕಪ್ಪೆಯ ಚಿಪ್ಪು.

*ಒಲವು ಎಂಬುದು ಗಂಡು ಹೆಣ್ಣಿನ 'ಬಾಳ ಚೆಲುವು'. ಅದು ಹೊರ ಹೊಳಪಿನ ಬೆಳ್ಳಿಯಿಂದ ಮಾಡಿದ ಮುತ್ತಿನ ಚಿಪ್ಪು ಅಲ್ಲ. ಅದು ಪ್ರೀತಿ, ನೇಹ. ಸ್ವಾತಿಮಳೆಗಾಗಿ ಬಾಯಿತೆರೆದ ಚಿಪ್ಪಿನಲ್ಲಿ ಹನಿ ಮುತ್ತಾಗುವ ಜೀವದಪ್ಪುಗೆ. 'ಹುಂಜ ಹೇಂಟೆಗಳ ಕಾವಿನಲ್ಲಿ ರೂಪಾಯ್ತು ನೀರ ತತ್ತಿ'-ಎಂಬ ನಿಸರ್ಗದ ಸೃಷ್ಟಿಯ ಬೆಡಗು. ಅದು 'ನಲುಮೆ-ನಲಿವು.'

---

## ತುಂಬಿತ್ತು ಹಾಲಗೇರಿ

### ಸಾಮುದ್ರ, ಧುನೀ

**ಹನೀ ಅಂದ್ರ ಹನೀ, ಇಲ್ಲಾ ಸಾಮುದ್ರ ಧುನೀ (4–6)**

: ಸಮುದ್ರಕ್ಕೆ ಸಂಬಂಧಿಸಿದ; ಕಡಲಿನ.

: ನದಿ; ಹೊಳೆ.

* 'ತುಂಬಿತ್ತು ಹಾಲಗೇರಿ' ಕವನದಲ್ಲಿ ಕವಿಯು ಧಾರವಾಡದ ದತ್ತಾತ್ರೇಯ ಗುಡಿಯ ಎದುರಿಗಿದ್ದ ವಿಶಾಲ 'ಹಾಲಗೇರಿ' ಕೆರೆಯನ್ನು ವರ್ಣಿಸಿದ್ದಾರೆ. ಅದು ಸಮುದ್ರಕ್ಕೆ ಸಂಬಂಧಿಸಿದ ತೊರೆ, ಹೊಳೆ ಆಗಿರಲಿಲ್ಲ. ಅದು ಕೆರೆ ಮಾತ್ರವಾಗಿತ್ತು ಎಂದು ಮೇಲಿನ ಸಾಲಿನಲ್ಲಿ ತಿಳಿಸಿದ್ದಾರೆ.

---

## ಕ್ಷಣಾ–ಕಣಾ–ಗಣಾ

### ಗಳ್ಳಾಗಂಟಿ, ಆರ್ದ್ರತೆ

**ಕ್ಷಣ್ಣ-ಕಣ್ಣ-ಗಣ್ಣ ಎಲ್ಲಾ ಗಳ್ಳಾಗಂಟಿ/ ಆರ್ದ್ರತೆಯೆ ಆರಿ ಸೋರಿದ ವಿರಸ ಅರಸನಿಗೆ (1–1, 2)**

: ಗಳಗಂಟಿ; ಗಳಗಂಟೆ.

: 1. ಒದ್ದೆ, ತೇವ. 2. ಮೃದುತ್ವ, ಕೋಮಲತೆ.

*ಜನಪದರಲ್ಲಿ ಉತ್ತರ ಕರ್ನಾಟಕದ ಕಡೆ 'ಕೊಡ್ತೀನಿ ಬಾ ಗಳಗಂಟಿ' ಎನ್ನುವ ಪ್ರಯೋಗವಿದ್ದರೆ, ಮೈಸೂರಿನ ಕಡೆ 'ನನ್ನತ್ರ ಏನ್ ಕಿತ್ಕೊಳ್ತಿಯ ಗಲಗಂಟೆ' ಎಂಬ ಪ್ರಯೋಗವಿದೆ. ಅದು ಸೂಚ್ಯವಾಗಿ ಶಿಶ್ನವನ್ನುದ್ದೇಶಿಸಿದ್ದಾಗಿದೆ. ಅದು ತನ್ನಲ್ಲಿ ಏನೂ

ಇಲ್ಲ ಎಂಬ ಅರ್ಥವನ್ನು ವ್ಯಂಜಿಸುತ್ತದೆ. ಏನೂ ಸಿಗದ, ನಿರರ್ಥಕ, ಇಲ್ಲವಾದ, ಬರಿದಾದ ಎನ್ನುವುದಕ್ಕೆ ಜನರೂಢಿಯಲ್ಲಿರುವ ದೇಸಿ ಪ್ರಯೋಗ.

'ಆರ್ದ್ರತೆಯೆ ಆರಿ ಸೋರಿದ ವಿರಸ'ನಲ್ಲಿ ಏನೂ ಉಳಿದಿಲ್ಲ ಎಂಬುದನ್ನು ರೂಪಕಾತ್ಮಕವಾಗಿ 'ಗಳ್ಳಾಗಂಟಿ' ಪದ ಚಿತ್ರಿಸಿದೆ.

---

## ಪ್ರಜಾಪತಿಗಳಿಗೆ

### ದೊಂಬೆ

**ಹುಟ್ಟು ಸಾವಿನ ನಡುವೆ ಬದುಕು, ಬಾಳುವೆ, ದೊಂಬೆ (1–2)**

: ಗದ್ದಲ; ಗೊಂದಲ.

* * * * * *

### ಗೊಂಗಡಿ

**ಅಂಥ ಗೊಂಗಡಿಯವರೆ ಆ ಪಕ್ಕ ಈ ಪಕ್ಕ (3–3)**

: ಕಂಬಳಿ ಮೊದಲಾದುಗಳಿಂದ ಮಾಡಿದ ತಲೆ, ಬೆನ್ನುಗಳನ್ನು ಮುಚ್ಚುವಂತೆ (ಮಳೆಗಾಲದಲ್ಲಿ) ಧರಿಸಿಕೊಳ್ಳುವ ಕೊಪ್ಪೆ.

---

## ಅರ್ಥದ ಬದಲು ಶಬ್ದ

### ನಿಧಾನ

**ಸಧನರಾದವರ ನಿಧನದ ಮೇಲೆ ನೆನೆಯುವರು/ ಅವರ ಹುಗಿದ ನಿಧಾನ ಇವರ ಕೈಗಂಟಾಗಿ. (1–1, 2)**

: ಹುದುಗಿಟ್ಟ ಧನ, ದ್ರವ್ಯ; ನಿಕ್ಷೇಪ.

*ಪ್ರಜಾಪ್ರಭುತ್ವದ ರಾಜಕೀಯ ವ್ಯವಸ್ಥೆಯಲ್ಲಿ ಹಣವಂತರಾದವರು ನಿಧನರಾದ ಮೇಲೆ, ಅವರು ಹುಗಿದಿಟ್ಟ ಧನ–ದ್ರವ್ಯವು ಇರುವವರ ಕೈಗಂಟಾಗುವುದನ್ನು ಕವಿ ವಿಡಂಬನಾತ್ಮಕವಾಗಿ ಚಿತ್ರಿಸಿದ್ದಾರೆ.

* * * * * *

**ಕಾಷ್ಟ, ಲೋಷ್ಟ**

**ಕೈ ತೊಳೆದುಕೊಳ್ಳುವರು ಮಣ್ಣು ಕೊಟ್ಟಾಯ್ತೆಂದು;/ ಇದು ಲೋಕವ್ಯವಹಾರ: ಕಾಷ್ಟ ಲೋಷ್ಟ ಸಮಾನ. (1–3, 4)**

: ಮರದ ತುಂಡು; ಕಟ್ಟಿಗೆ; ಸೌದೆ.

: ಮಣ್ಣಿನ ಮುದ್ದೆ; ಹೆಂಟೆ.

*ತೀರಿಹೋದ ಮೇಲೆ ಆ ಶವವನ್ನು ಸೌದೆಯ ಚಿತೆಗೆ ಏರಿಸಲಿ ಅಥವಾ ಮಣ್ಣು ಮಾಡಲಿ ಎರಡೂ ಒಂದೇ–'ಕಾಷ್ಟ ಲೋಷ್ಟ ಸಮಾನ'.

---

## ಓ ಕವಿಯೇ!

**ಅಪವರ್ಗ**

**ವಾರ್ಷಿಕ ಚುನಾವಣೆಯು ಮತಗಳಪವರ್ಗ (1–7)**

: ದಾನ; ಕೊಡುಗೆ.

---

## ನೆನೆವುದೆನ್ನ ಮನಂ ಬನವಾಸಿ ದೇಶಮಂ

**ಹರಿಕಾರ**

**ಮೋಡವನೆ ಹರಿಕಾರ ಮಾಡಲಿಲ್ಲವೆ ಯಕ್ಷ? (1–1)**

: ಓಡುತ್ತ ಹೋಗಿ ಸುದ್ದಿಯನ್ನು ಮುಟ್ಟಿಸುವವನು; ಸಂದೇಶವಾಹಕ; ಚಾರ; ದೂತ.

* * * * * *

**ಅಗ್ಗಲಿಸು, ಒಲವರ**

**ನೀ ನಲಿಯೋ ನೀ ನಲಿಸೋ ಒಲುಮೆಯನಗ್ಗಲಿಸೊ ನನ್ನ ಒಲವರಿಕೆಯ ಸಲಿಸೋ. (1–6)**

: ಹೆಚ್ಚಿಸು; ದೊಡ್ಡದು ಮಾಡು; ಅತಿಶಯಪಡಿಸು.

: ಬಯಕೆ; ಪ್ರೀತಿ; ಮೋಹ.

---

# ದುಡ್ಡಿನ ಕಥಿ

**ಭಟ್ಟಿ**

**ಚೆಟ್ಟೀ ಮನದ ಭಟ್ಟೀ ಕೆಟ್ಟು. (13–1)**

: (ಆಲಂ) ಹದ; ರೀತಿ; ರಚನಾಕ್ರಮ.

---

## ೨೧. ಶ್ರೀಮಾತಾ (೧೯೬೭)

## ಭಾರತ ನವಶಕ್ತಿ

**ಹೃಜ್ಜಾತೆ, ಚಿನ್ಮಾತೆ, ಹೃನ್ಮಾತೆ, ಚಿಜ್ಜಾತೆ**

**ಹೃಜ್ಜಾತೇ! ಚಿನ್ಮಾತೇ!/ ಹೃನ್ಮಾತೇ, ಚಿಜ್ಜಾತೇ! ಭಾರತ ನವಶಕ್ತಿ!/ ನಮ್ಮಾತ್ಮವೆ, ಪರಮಾತ್ಮವೆ, ಕರುಣಿಸು ತವ ಭಕ್ತಿ ॥ಪಲ್ಲ॥**

: ಪಿಂಡಾಂಡದಲ್ಲಿ ಜನಿಸಿದವಳು. (ಮಾನವ ಹೃದಯದಲ್ಲಿ ಜನಿಸಿದವಳು)

: ಬ್ರಹ್ಮಾಂಡಕ್ಕೆ ಜನನಿಯಾದವಳು.

: ಪಿಂಡಾಂಡದ ಜನನಿಯಾದವಳು. (ಮಾನವ ಹೃದಯದ ಮಾತೆಯಾಗಿರುವಳು)

: ಬ್ರಹ್ಮಾಂಡದಲ್ಲಿ ಜನಿಸಿದವಳು.

*ಭಾರತ ನವಶಕ್ತಿಯು ಪಿಂಡಾಂಡ-ಬ್ರಹ್ಮಾಂಡಗಳಿಗೆ ಜನನಿಯೂ ಹೌದು, ಅದರೊಳಗೆ ಜನಿಸಿದವಳೂ ಹೌದು. ಸೃಷ್ಟಿ ಮತ್ತು ಸೃಷ್ಟಿಕರ್ತರ ನಡುವಿನ ಭೇದ ಇಲ್ಲವಾಗಿದೆ. ಇದನ್ನು ನರ್ತಕ ನೃತ್ಯವೂ ಹೌದು, ನೃತ್ಯವೇ ನರ್ತಕನೂ ಹೌದು ಎಂಬ ಮಾತಿಗೆ ಹೋಲಿಸಬಹುದು.

---

## ಯುಗಾದಿ

**ನೆಲಬುರುಕಿ**

**ನಾವು ಲಕ್ಷ್ಯಾನ್ಸ ಅಲಕ್ಷ ಮಾಡತೇವಿ/ ಪಕ್ಷಿ ಪಕ್ಷಾ ಕಿತ್ತಿ ಹಾರೋ ಬದುಕು/ ನೆಲಬುರುಕಿ ಉರಳಸ್ತೇವಿ. (2-1, 2, 3)**

: ನೆಲದ ಮೇಲೆ ತೆವಳುವಂತಹುದು.

* 'ಜಗಕ್ಕ್ಸ ಆದಿ ಇಲ್ಲಾ, ಮುಗಿಲಿಗ್ಸ ಅಂತ ಇಲ್ಲಾ.' ಇಂತಹ ವಿಶಾಲ ವಿಶ್ವದಲ್ಲಿ ನಾವಿದ್ದೇವೆ. ನಾವು ಪ್ರಕೃತಿಯ ಶೋಧವನ್ನು ಮಾಡುವತ್ತ ಮನಸ್ಸು ಮಾಡಿ ಆ ಗುರಿಯತ್ತ ಸಾಗಬೇಕು. ಹಾರುವ ಪಕ್ಷಿಯಂತೆ ಮುಗಿಲಿಗೆ ಹಾರಿ ವಿಶಾಲ ಬದುಕನ್ನು ನಮ್ಮದಾಗಿಸಿಕೊಳ್ಳಬೇಕು. ಅದಕ್ಕೆ ವ್ಯತಿರಿಕ್ತವಾಗಿ ನಡೆದರೆ ನಮ್ಮ ಸ್ಥಿತಿ-ರೆಕ್ಕೆ ಕಿತ್ತ ನೆಲದ ಮೇಲೆ ತೆವಳುವ- ನೆಲಬುರುಕಿಯಂತಾಗುತ್ತದೆ.

* * * * * *

## ಬಡ್ಡಿ

**ಬಡ್ಡಿ ಒಡಿದರ ಬೇರು ಇಳೀತಾವ; ಬೇರು ಕುಡಿದರ್‌ₛ ಬಡ್ಡಿ ಬೆಳೀತಾವ. (2–9)**

: ಕಬ್ಬು, ಜೋಳ, ಬಿದಿರು, ಕಣಗಲೆ, ಗುಲಾಬಿ ಮೊದಲಾದವುಗಳ ಕಣ್ಣು; ಗೆಣ್ಣು; ಬೊಡ್ಡೆ.

*ಕಣಗಲೆ, ಗುಲಾಬಿ ಮುಂತಾದ ಗಿಡಗಳ ಬಲಿತ ಕಾಂಡವನ್ನು ಕತ್ತರಿಸಿ ಭೂಮಿಯಲ್ಲಿ ನೆಟ್ಟಾಗ ಆ ಬಡ್ಡಿ ಒಡೆದು ಬೇರು ಬಿಡುತ್ತದೆ.

ಕಬ್ಬನ್ನು ತುಂಡು ತುಂಡಾಗಿ ಕತ್ತರಿಸಿ ನಾಟಿ ಮಾಡಿ ವೃದ್ಧಿಸಲಾಗುತ್ತದೆ. ಕಬ್ಬನ್ನು ನಾಟಿ ಮಾಡುವಾಗ ಅದರ ಜಲ್ಲೆಯಲ್ಲಿ ಮೂರು ಕಣ್ಣುಗಳು ಇರುತ್ತವೆ. ಆ ಕಣ್ಣುಗಳು ಮೊಳಕೆ ಒಡೆದು ಬೆಳೆಯುತ್ತವೆ.

* * * * * *

## ಶಹಜೋಗ

**ಬೀಜಾನ್‌ₛ ಬಿತ್ತದ್‌ₛ ಬೆವರು ಸುರಿಸಿದರ್‌ₛ ಹೊಲಾ ಕಮರಿಕೊಂಡಿರ್ತ್ಯದ/ ಇಂಥಾ ಶಹ ಜೋಗ ಶಹಪಸಂತ ಮಂದಿ ಯುಗಾದಿಗೆ ತಗಾದೀ ಅಂತ ಕುಂತಾರ. (2–13, 14, 15)**

: ಸಂಭಾವಿತನಂತೆ ಕಾಣುವವ, ಹಾಗೆ ತೋರುವ ಚಹರೆವುಳ್ಳವ. 'ಸಾಜೋಗ' ಎಂಬುದು ದೇಸಿ ನುಡಿಗಟ್ಟು. 'ಬಹಳ ಸಾಜೋಗ ಮನುಷಾ' ಎಂದು ವ್ಯಂಗ್ಯ ಬೆರಸಿ ಮಾತಾಡುವುದು ಉತ್ತರ ಕರ್ನಾಟಕದ ಜನರೂಢಿ ಭಾಷೆಯಲ್ಲಿದೆ.

*ಉತ್ತರ ಕರ್ನಾಟಕದಲ್ಲಿ ಸುಮ್ಮನೆ ದೊಡ್ಡಸ್ತಿಕೆ, ಹೆಚ್ಚುಗಾರಿಕೆ ತೋರಿಸುವ ಶೋಕಿಲಾಲನಂತಹವರಿಗೆ ವ್ಯಂಗ್ಯವಾಗಿ ಪ್ರಶ್ನಿಸುವ ರೀತಿ: 'ಅವನೇನು ಶಹಜೋಗ ಏನು? gentleman ತರಹ ತೋರಿಸಿಕೊಳ್ತಾನೆ. ಅವನೇನು ಸಾಚಾನಾ?'

ಅಂತಹವರು ಯುಗಾದಿಯಂತಹ ಸಂಭ್ರಮದ ಹಬ್ಬದಲ್ಲಿ ತಂಟೆ ತಕಾರಾರು ಎತ್ತುವರು.

* * * * * *

## ಬಿರ್ತರೆ

**ಚಳೀಗೆ ಬಿರ್ತರಲ್ಲₛ ಬೆಳೀಗೆ ಹಾದಿ/ ಇಲ್ಲದಿದ್ದರ ಎಲ್ಲ್ಯದ್‌ₛ ಯುಗಾದಿ? (4–18, 19)**

*ಬಿರಿತುಕೊಂಡರೆ ಎಂದರ್ಥ. ಸೀಳು ಸೀಳಾಗುವುದು, ಅರಳುವುದು, ಮೊಗ್ಗು ಬಿರಿಯೋದು, ತುಟಿ ಬಿರಿಯೋದು, ಬಿರುಕು ಬಿಡೋದು ಎನ್ನುವ ರೂಢಿಗತ ಪ್ರಯೋಗಗಳಿವೆ. ಚಳಿಯ ಹೊಡೆತಕ್ಕೆ ಸಿಕ್ಕ ಭೂಮಿಯೂ ಬಿರಿಯುತ್ತದೆ; ಇದನ್ನು

ಎರಕಲಬೀಡು ಬಿಡೋದು ಎನ್ನುತ್ತಾರೆ. ಅದರ ನಂತರ ಭೂಮಿ ಮಿದುವಾಗುತ್ತದೆ. ರೈತರು ಬಿತ್ತನೆಗೆ ಹದಗೊಳಿಸುತ್ತಾರೆ.

---

## ಕವಿಗಳ ಕಾಣಿಕೆ

### ಆನಿಕಿ

**ಬಾಳೋ ಹೆಸರಿಗೆ ಒಂದೇ ಹೆಸರು/ ಅದು ಕವೀ ಕಾಣಿಕೀ/ ಅದಕ್ಕ ಬೇಕಿಲ್ಲ ಬ್ಯಾರೆ ಆನಿಕಿ (1–4, 5, 6)**

: ಆಧಾರ; ಆಸರೆ; ಊರೆ.

* * * * * *

### ಅರ್ತ

**ಶಬ್ದದ ಚಲಾವಣೀವಳಗ್ಸ/ ಹೃದಯದ ಲಾವಣೀ ಧನೀ ಇರ್ತ್ಸದ/ ಅದು ಒಲವು ಇದ್ದಲ್ಲೆ ಬರ್ತ್ಸದ/ ಎಚ್ಚರ ಇದ್ದಾವ್ರನ್ನ ಅರ್ತ್ಸದ/ ನಿದ್ದೀ ಮಾಡಾವ್ರನ್ನ ಮರ್ತ್ಸದ (16–1 ರಿಂದ 5)**

: ಸಮಾಧಾನಗೊಳ್ಳು; ತಣಿ; ತೃಪ್ತಿಹೊಂದು.

*ಕಾವ್ಯವು ಎಚ್ಚರ ಇದ್ದವರನ್ನು ತಣಿಸುತ್ತದೆ.

---

## ವೇದ–ದೇವ?

### ವಡವ

**ಕಡಲ ಒಡಲು ಗೊಂಡ್ಯಾರಣ್ಯದಲಿ ವಡವ ಹೊತ್ತಿಸಿತ್ತು ಉರಿ. (16–1)**

: ಸಮುದ್ರದಲ್ಲಿರುವ ಬೆಂಕಿ; ಬಡಬಾಗ್ನಿ.

---

# ಅಬೋಧ್ಯಗ್ನಿಃ

**ಅಬೋಧ್ಯಗ್ನಿ**

: ತಿಳಿವಳಿಕೆಗೆ ನಿಲುಕದ ಅಗ್ನಿ

* * * * * *

**ಅಗ್ಗಿ**

**ಅಗ್ಗಿ ತೆರೆದ ಕಣ್ಣು (1–2)**

: ಅಗ್ನಿ; ಬೆಂಕಿ; ಉರಿ; ಕಿಚ್ಚು. ಇದು ಅಗ್ನಿ ಎಂಬ ಸಂಸ್ಕೃತ ಪದದ ತದ್ಭವರೂಪ.

* * * * * *

**ಭೂಃ ಭುವಃ ಸ್ವಃ**

**ಭೂಃ ಭುವಃ ಸ್ವಃ ಎಂದು/ ಪಯಣ ಬೆಳೆಸಿ ಬಂದೆ/ ಮಹರ್ ಮತ್ತು ಎತ್ತು ಪಾದ/ ನಂದಿಯಾಗುವಂತೆ (3–1 ರಿಂದ 4)**

*'ಭೂರ್ಭುವಸ್ವಃ' ಎಂಬ ಸಾಲಿನಿಂದ ಗಾಯಿತ್ರೀ ಮಂತ್ರ ಪ್ರಾರಂಭವಾಗುತ್ತದೆ. ಇದನ್ನು ವ್ಯಾಹೃತಿತ್ರಯಗಳೆಂದು ಕರೆಯುತ್ತಾರೆ. ಭೂರ್ಭುವಸ್ವಃ ಎಂಬುದು ನಂತರ 'ಸಪ್ತವ್ಯಾಹೃತಿ'ಗಳು ಆದುವು. ಮೇಲಿನ ಏಳು ಲೋಕಗಳನ್ನು ಸೂಚಿಸುವ ಪದಗುಚ್ಛವಾಗಿದೆ. ಆ ಲೋಕಗಳನ್ನು ಮನುಷ್ಯನೊಳಗಿನ ಯೋಗಚಕ್ರಗಳೊಂದಿಗೆ ಸಮೀಕರಿಸುವುದುಂಟು:

ಭೂಃ = ಮೂಲಾಧಾರ

ಭುವಃ = ಮಣಿಪೂರ

ಸ್ವಃ = ಸ್ವಾಧಿಷ್ಠಾನ

ಮಹಃ = ಅನಾಹತ

ಜನಃ = ವಿಶುದ್ಧ

ತಪಃ = ಆಜ್ಞಾ

ಸತ್ಯಂ = ಸಹಸ್ರಾರ

ಭೂಲೋಕ, ಭುವರ್ಲೋಕ ಮುಂತಾದ ಏಳು ಗಡಿ(ಲೋಕ)ಗಳನ್ನು ಕುಂಡಲಿನೀಸರ್ಪದ ಶಕ್ತಿಯಾದ ನಾನು ಈ ಏಳು ಹೆಡೆಗಳ(ಚಕ್ರಗಳ) ಮೂಲಕ 'ಪಯಣ ಬೆಳೆಸಿ ಬಂದೆ'.

ಆಜ್ಞಾಚಕ್ರ ಸಕ್ರಿಯವಾಗುವಿಕೆ (third eye) ತೆರೆದ ಕಣ್ಣು ತಲುಪಬೇಕೆಂಬ ತಾಪವೇ ನನ್ನ ಕಣ್ಣುಗಳನ್ನು ತೆರೆಸಿದೆ. ಸುಮ್ಮನೆ ವ್ಯಾಯಾಮದಂತೆ ಸಾಧನೆ ಮಾಡಿ ಬಂದವನಲ್ಲ.

'ನೈವೇದ್ಯವ ಮಾಡು ಎಡೀ ಹೂವು ಕಾಯಿ ಹಣ್ಣು'– ಹೂವು ಪಕ್ವಗೊಂಡು ಕಾಯಾಗುತ್ತದೆ, ಕಾಯಿ ಪಕ್ವಗೊಂಡು ಹಣ್ಣಾಗುತ್ತದೆ. ಹೀಗೆ, ಪಕ್ವಗೊಂಡಿರುವ ನನ್ನ ಅಂತರಂಗವನ್ನು ನಿನಗೆ ನೈವೇದ್ಯ ಮಾಡುತ್ತಿರುವೆನು.

ಕುಂಡಲಿನೀ ಶಕ್ತಿಯು ಇಷ್ಟು ಕಾಲ ನಿದ್ರಿಸುತ್ತಿತ್ತು ಎಂಬ ಸಾಲುಗಳು ಎರಡನೆಯ ಭಾಗದಲ್ಲಿದೆ. ಹೀಗೆ ನಿದ್ರಿಸುತ್ತಿದ್ದವನು ಎಚ್ಚೆತ್ತು ಮೂರು ಹೆಜ್ಜೆ ಇಡಬೇಕು. ದಾಟಲು ಒಟ್ಟು ಏಳು ಗಡಿಗಳಿರುವಾಗ ಮೂರನ್ನೇ ಏಕೆ ಪ್ರಸ್ತಾಪಿಸುತ್ತಿರುವರು ಎಂಬ ಪ್ರಶ್ನೆ ಹುಟ್ಟುವುದು ಸಹಜ. ಭೂಲೋಕದ ಸಾಧಕ ಮೂರು ಹೆಜ್ಜೆ ಇಟ್ಟರೆ ಮೇಲಿರುವ ಭಗವಂತ ತಾನೂ ಮೂರು ಹೆಜ್ಜೆ ಇರಿಸಿ ಅವನ ಬಳಿಗೆ ಬರುವನು. ಸಾಧನೆ ಏಕಮುಖವಾದುದಲ್ಲ, ಭಕ್ತನು ಭಗವಂತನಿಗಾಗಿ ಕಾತರಿಸುವಂತೆ ಭಗವಂತನೂ ಭಕ್ತನಿಗಾಗಿ ಕಾತರಿಸುತ್ತಿರುವನು.

ಮಹರ್ ಲೋಕದಿಂದ ಶಿವನೂ ಪಾದವನ್ನು ಎತ್ತಲಿ ಎಂದು ಕವಿ ಆದೇಶಿಸುತ್ತಿರುವರು.

ಕೊನೆಯ, ನಾಲ್ಕನೆಯ ಭಾಗದಲ್ಲಿ ಭಗವಂತನ ಸ್ವರೂಪದ ವಿವರಣೆ ಇದೆ. ಅವನು ತ್ರಿಗುಣನಲ್ಲ (ಅತ್ರಿಗುಣ) ಆದರೆ ಮೈತ್ರಿಗುಣದವನು. ಮೈತ್ರಿ ಎಂಬುದು ಸತ್ವ, ರಜ, ತಮೋ ಗುಣಗಳನ್ನು ಮೀರಿದ ಭಾವಸ್ಥಿತಿಯಾಗಿದೆ. 'ಅಧಿಕ ಉಣಾ' ಉಣ್ ಎಂದರೆ ಆನಂದ(ಕಿಟೆಲ್). ಭಗವಂತ ಅಧಿಕವಾದ(ಅಧಿಕ ಎಂದರೆ ಶ್ರೇಷ್ಠ, ಬೆಲೆಕಟ್ಟಲಾಗದುದು) ಆನಂದಮಯಿ. 'ಮೇಲು ಒಳಗು ಒಂದೆ ಬೆಳಗು' ಎಂಬ ಸಾಲಿನಲ್ಲಿ ಅವನಿಗೂ ನನಗೂ ಭೇದವಿಲ್ಲ ಎಂಬ ಇಂಗಿತವಿದೆ.

---

## ಯೌಗಿಕ ವಚನಗಳು

**ಉಪರಿ**

**ಮಾನಸಿಕ ನಿಯಾಮಕತ್ವ ಬಿಟ್ಟು ಊರ್ಧ್ವದ ಉಪರಿನಿಯಾಮಕತ್ವ ಸ್ವೀಕರಿಸಬೇಕು (1–10)**

: ಮೇಲಿನ; ಮೇಲುಭಾಗದ. (ಉಪರಿಲೋಕ: ಮೇಲಿನ ಲೋಕ; ಸ್ವರ್ಗ)

---

## ನೋಡು ನೋಡು

**ಪ್ರಣವ, ಪ್ರಪತ್ತಿ**

**ಪ್ರಣಾಮ ಮಾಡು/ ಪ್ರಣವ$_s$ ಕೇಳು/ ಪ್ರಪತ್ತಿಗೆ ಸಾಗು। ನೋಡ್ಯು$_s$ ನೋಡು (1–6, 7, 8)**

: ವೇದಮಂತ್ರಗಳ ಪ್ರಾರಂಭದಲ್ಲಿ ಸೇರಿಸುವ ಪವಿತ್ರವಾದ ಬೀಜಾಕ್ಷರ; ಓಂಕಾರ; ಓಂಕಾರಕ್ಕೆ ಪ್ರಣವ ಅಥವಾ ಏಕಾಕ್ಷರ ಎಂಬ ಹೆಸರೂ ಇದೆ. ಓಂಕಾರದಲ್ಲಿ 'ಅ', 'ಉ' ಮತ್ತು 'ಮ್' ಎಂಬ ಮೂರು ಅಕ್ಷರಗಳ ಸಮ್ಮಿಲನವಿದೆ. 'ಅ' ಎನ್ನುವುದು ವೈಶ್ವಾನರ, 'ಉ' ಎನ್ನುವುದು ತೈಜಸ, 'ಮ್' ಎಂಬುದು ಪ್ರಜ್ಞ–ಇವುಗಳ ಸಮ್ಮಿಲನದಿಂದ ಓಂಕಾರ ಉಂಟಾಗುತ್ತದೆ ಎಂದು ನಂಬಲಾಗಿದೆ. ಬರಬರುತ್ತ ಇದು ಬ್ರಹ್ಮ, ವಿಷ್ಣು, ಮಹೇಶ್ವರರ ಕೂಟವನ್ನು ತಿಳಿಸುತ್ತದೆ. ವೇದಗಳು 'ಓಂ' ಎಂಬುದರ ಸಂಕ್ಷಿಪ್ತೀಕರಣವೆಂದು ಯಾಸ್ಕರು ನಿರುಕ್ತದಲ್ಲಿ ತಿಳಿಸಿದ್ದಾರೆ.

: 1. ಮರೆ ಹೋಗುವಿಕೆ; ಆಶ್ರಯಿಸುವುದು.

2. (ವಿಶಿಷ್ಟಾ) ಮೋಕ್ಷ ಸಾಧನೆಯ ಮಾರ್ಗಗಳಲ್ಲಿ ಒಂದು ಬಗೆ; ಶರಣಾಗತಿ; ಆಳ್ವಾರರ ಕಾಲದಲ್ಲಿ ಆರಂಭವಾದ ಈ ಸಂಪ್ರದಾಯಕ್ಕೆ ಶ್ರೀವೈಷ್ಣವರಲ್ಲಿ ಒಂದು ವಿಶಿಷ್ಟ ಸ್ಥಾನವಿದೆ.

---

## ಇರತಾನೋ ದೇವರಿರತಾನೋ

**ತಿಳಲು**

**ಕರುಳಿನ ತಿಳಲಾತ (3–1)**

: ಹಣ್ಣು, ಕಾಯಿ ಮುಂತಾದವುಗಳ ಒಳಭಾಗ.

* * * * * *

**ಇಲ್ಲಣ**

**ಇಲ್ಲದಿಲ್ಲಣ ಕಳಿ/ ಬಂದೆ ನಾ ಘನ ಮಳಿ (4–1, 2)**

: ಹೊಗೆ (ಮಸಿ) ಹಿಡಿದ ಜೇಡರ ಹುಳುವಿನ ನೂಲಿನ ಗುದಿ; ಗೃಹಧೂಮ.

*ಘನವು ಮೋಡವಾಗಬೇಕಾದರೆ ಸಮುದ್ರದ ಹಾವಿಯು ಬೇಕು. ಮನುಷ್ಯನಾದವನು ತನ್ನ ಸೃಷ್ಟಿಯ ಗೃಹಧೂಮದಲ್ಲಿದ್ದರೆ ಶುದ್ಧಮೋಡದ ವೃಷ್ಟಿಯನ್ನು ಕಾಣಲಾರ. ಅದರಿಂದ ಮುಕ್ತನಾದಾಗ ಮಾತ್ರ ಭಗವಂತನ ಕರುಣಾವರ್ಷ ಸುರಿಯುತ್ತದೆ.

*    *    *    *    *    *

## ಉದುಂಬರ, ಝುಂಬರ

**ಹೋ! ಹೋ! ಉದುಂಬರ ಮಾಗಿ/ ಹೋ! ಚಿದಂಬರ ಝುಂಬರವಾಗಿ (11–2)**

*ಅತ್ತಿಯ ಮರವೇ ಉದುಂಬರ. ಉದುಂಬರ ಮರದಿಂದ ಜನಿಸಿದ್ದು ಔದುಂಬರ. ಈ ವೃಕ್ಷ ದತ್ತಾತ್ರೇಯನಿಗೆ ಪ್ರಿಯವಾದುದು. ಇದರಡಿ ಅವನ ವಾಸ ಎಂಬ ನಂಬಿಕೆ ಇದೆ. ರಾಜರು ತಮ್ಮ ಸಿಂಹಾಸನಗಳನ್ನು ಮಾಡುವಾಗ ಈ ಮರವನ್ನು ಬಳಸುತ್ತಿದ್ದರು. ಈ ಮರವಿರುವೆಡೆ ನೀರಿನ ಸೆಲೆ ಇದೆ ಎಂದು ಹೇಳುವರು. ಯಜ್ಞಯಾಗಾದಿಗಳಲ್ಲಿ ಈ ಮರದ ತುಂಡನ್ನು ಬಳಸುತ್ತಾರೆ. ಇದನ್ನು ದೇವಾಲಯಗಳಲ್ಲಿಯೂ ಬೆಳೆಸುತ್ತಾರೆ.

ಪುರಾಣ ಪ್ರಸಿದ್ಧ ದತ್ತಾತ್ರೇಯನು ಅತ್ರಿಮುನಿ ಮತ್ತು ಅನಸೂಯ ಅವರ ಮಗ. ಜನರ ಮನಸ್ಸಿನಲ್ಲಿರುವ ದತ್ತಾತ್ರೇಯ ಮೂರ್ತಿಗೆ ಮೂರುಮುಖ, ಆರುಕೈ. ಹಿಂದೆ ಹಸು ಮುಂದೆ ನಾಲ್ಕು ನಾಯಿ. ಹಸು ಭೂಮಿಯ ಸಂಕೇತ. ನಾಲ್ಕು ನಾಯಿಗಳು ನಾಲ್ಕು ವೇದಗಳ ಸಂಕೇತ.

'ವನಸ್ಪತಿಶಾಸ್ತ್ರದ ಪ್ರಕಾರ ಔದುಂಬರ ವೃಕ್ಷದ ಹಣ್ಣನ್ನು composite fruit ಎಂಬ ವಿಭಾಗದಲ್ಲಿ ಸೇರ್ಪಡೆ ಮಾಡಿದ್ದಾರೆ. Multiple fruit ಎಂದೂ ಸಂಬೋಧಿಸಿದ್ದಾರೆ. ಈ ಹಣ್ಣುಗಳ ಹೂಗಳೆಲ್ಲ ಹಣ್ಣಿನ ಅಂತರ್ಗತವಾಗಿ ಒಳಗೇ ಇರುವುದು ಸೃಷ್ಟಿಯ ವೈಶಿಷ್ಟ್ಯ. ಔದುಂಬರ ಹಣ್ಣಿನಲ್ಲಿ hypanthodium ಹಾಗೂ female ಅಂದರೆ ಗಂಡು ಮತ್ತು ಹೆಣ್ಣು ಹೂ ಪರಾಗ ಕೂಡಿಕೊಂಡೇ ಇರುತ್ತವೆ. ಸಾಮಾನ್ಯವಾಗಿ ಪುಷ್ಪ ಸಂಭಾರ –inflorence ಅವಸ್ಥೆಯ ಅನಂತರದ ಅವಸ್ಥೆ ಫಲ. ಹೂವಿನ ಮುಂದಿನ ಅವಸ್ಥೆ ಹಣ್ಣು. ಈ ಕ್ರಮ ಔದುಂಬರ ಫಲದಲ್ಲಿ ಇಲ್ಲ. ಇಲ್ಲಿ ಪುಷ್ಪ ಸಂಭಾರ ಅದೃಶ್ಯ. ಹಣ್ಣಿನ ಹೊಟ್ಟೆಯಲ್ಲಿಯೆ ಹೂ ಪರಾಗ ಇರುತ್ತದೆ. ಆದುದರಿಂದ ಬೇಂದ್ರೆ ಅವರು ಔದುಂಬರ ಫಲವನ್ನು ಹುಟ್ಟಾ ಹಣ್ಣು ಎಂದಿದ್ದಾರೆ. ಹುಟ್ಟಾಕವಿ ಎಂಬಂತೆ ಹುಟ್ಟಾಹಣ್ಣು ಎಂಬುದೂ ಒಂದು ಪ್ರತೀತಿ, ಅನುಭೂತಿ, ಸಂಕೇತ. ಬೇಂದ್ರೆ ಅವರ ಕವಿತ್ವವು ಔದುಂಬರ ಹಣ್ಣಿನಂತೆ ಅವರಿಗೆ ಲಭಿಸಿತ್ತು ಎಂಬುದು 'ನಾನು ಔದುಂಬರದತ್ತ' ಎಂಬ ಸಾಲು ಸೂಚಿಸುತ್ತದೆ. ಈ ಅನುಭಾವ ಅವರ ಉತ್ತರ ಆಯುಷ್ಯದಲ್ಲಿ ದೃಢವಾಯಿತು. ಅವರ ಜೀವನ ಅವರಿಗೆ ಅಗಾಧವಾಗಿ ಕಂಡಿತು. ಬೇಂದ್ರೆಯವರ ಕವಿತ್ವದಲ್ಲಿ ಕ್ರಮ ವಿಕಾಸವಿಲ್ಲ. ಫಲಸ್ಥಿತಿ ಇದೆ. ಕವಿ ಸಂಕೇತ–ಅಂಬಿಕಾತನಯದತ್ತ ಮತ್ತು ಕಾವ್ಯಸಂಕೇತ– ಔದುಂಬರ. ಈ ಅನುಭಾವದ ಹಾಡು=ಗಾಥೆ. ಔದುಂಬರ

ಗಾಥೆ ಎಂಬುದು ಬೇಂದ್ರೆಯವರ ಸಮಗ್ರಕಾವ್ಯ.(ವಾಮನಬೇಂದ್ರೆ, ಔದುಂಬರ ಗಾಥೆ ಸಂಪುಟ 1, ಪು: 24, 25)

* * * * * *

**ಔದುಂಬರ**

**ಔದುಂಬರವು/ ಹೂವಾಗಿ ಹಣ್ಣಾಗುವುದಿಲ್ಲ/ ಹಣ್ಣಿನಲ್ಲಿಯೆ ಹೂವು/ ಮಕರಂದ ಇರುತ್ತದೆ.**

**ನಾನು ಅತ್ತೀಹಣ್ಣು/ ಹೂವು ತೋರದೆ ರಸೋದರ ಉಳ್ಳವ/ ಅತ್ತೀಹಣ್ಣು ಕೆಂಪು, ಅದು ಅದರ ಪೆಂಪು!/ ಗೆಲವದರಲ್ಲಿ ರಸ–ಮಕರಂದ! (ಶತಮಾನ: ಔದುಂಬರ)**

ಝುಂಬರ=ಜುಬರ, ಜುಬುರು; the stringiness of certain mangoes.

*ನಾರಿನಿಂದ ಕೂಡಿದ ರಸಫಲ ಮಾವು ಆಗಿ ಚಿದಂಬರರಿದ್ದರು ಎಂದು ಬೇಂದ್ರೆ ಕಾವ್ಯಾತ್ಮಕವಾಗಿ ಬಣ್ಣಿಸಿದ್ದಾರೆ.

---

## ಕನಕ

**ಅಣಿ**

**ಜೀವನ ಸುತ್ತೂ ಮುತ್ತೂ ಅಣಿ ಮುತ್ತು/ ಇದಕೆಲ್ಲಿದೆ ಆವರಣಾ? (7–4, 5)**

: ಅಚ್ಚುಕಟ್ಟು; ಸೊಗಸು; ಮನೋಹರತೆ; ಅಲಂಕಾರ.

*ಕನಕದಾಸನ ಜೀವನದ ಸುತ್ತೂ ಮುತ್ತೂ ಅಣಿ/ಸೊಗಸು, ಮನೋಹರತೆಯ ಮುತ್ತು ಸುತ್ತುವರೆದಿದೆ. ಅದಕ್ಕೆ ಆವರಣ ಎಲ್ಲಿ? ಮುಚ್ಚು ಮುಸುಕು ಎಲ್ಲಿ ಎಂದು ಕವಿ ಪ್ರಶ್ನಿಸಿದ್ದಾರೆ.

* * * * * *

**ಕವಡುಗಂಟು**

**'ಇಲ್ಲಿಹನು ಅಲ್ಲಿಲ್ಲವೆಂಬೀ ಸೊಲ್ಲು ಸಲ್ಲದು'/ ಇದ್ದವರಿಗೆ ಎಲ್ಲೆಲ್ಲೂ ಉಂಟು/ ಇಲ್ಲೇ, ಅಲ್ಲೇ, ದೇವನ ಬಂಧಿಸಲಹುದೇ/ ಅದು ಕವಡುಗಂಟು. (16–1 ರಿಂದ 6)**

*ಸರ್ವವ್ಯಾಪಿಯಾದ ದೈವರನ್ನು ನಮ್ಮ ಇತಿಮಿತಿಗಳಲ್ಲಿ ಬಂಧಿಸಲಾಗದು. ಹಾಗೆ ಯೋಚಿಸುವುದು 'ಕವಡುಗಂಟು'–ಮೋಸ ವಂಚನೆಯ ಮುಚ್ಚಿಟ್ಟ ನಡೆ ಎಂದು ತಿಳಿಸಿದ್ದಾರೆ.

***

ವಿಚಾರವು ಗುಹಾ ಧ್ವನಿಯಾದರೆ ಮಂದಿಯ ಸ್ವತ್ತು; ಗೂಢಾರ್ಥದ ಕವಡುಗಂಟಕವಾದರೆ ಮನದೊಳಗೆ ಮುಚ್ಚಿಟ್ಟ ಗಂಟು (ವಿಚಾರ ಮಂಜರಿ–62)

***

ಕವಡುಗಂಟಿನಿಂದ ವ್ಯಕ್ತಿ ಬಿಡುಗಡೆ ಹೊಂದಿ ಜೀವಜೀವದ ಸತ್ಯ ನಡೆಯಲ್ಲಿ ಬಾಳಿನ ನಂಟು ಅನುಭವಿಸಬೇಕು ಎಂದು ಬೇಂದ್ರೆ ಆಶಿಸಿದ್ದಾರೆ.

**ಹುಚ್ಚಲಾ!/ ಬಿಚ್ಚಲಾ/ ಎದೆ ಕವಡುಗಂಟು/ ಜೀವ ಜೀವಕ್ಕುಂಟು/ ಬಾಳ–ನಂಟು. (ಉತ್ತರಾಯಣ:ವಿತರ್ಕಿ)**

---

## ಓಂ ಭವತಿ ಭಿಕ್ಷಾಂ ದೇಹಿ

### ಅಸದಾಖ್ಯಾತಿ

**ಬರಿ ಹೆಸರಿನ ಪ್ರಖ್ಯಾತಿ। ಅದು ಅಸದಾಖ್ಯಾತಿ॥ 2. ಅ.ಪಲ್ಲ॥**

* (ಕಾವ್ಯಮೀ)(ವರ್ಣನಾ ಕ್ರಮದಲ್ಲಿ) ಲೋಕದಲ್ಲಿ ವಸ್ತುತಃ ಇಲ್ಲದಿರುವ ಕೆಲವು ವಿಷಯಗಳನ್ನು ಉಂಟು ಎಂದು ವರ್ಣಿಸುವ ಒಂದು ಕವಿಸಮಯ; ಇಲ್ಲದಿದ್ದರೂ ಉಂಟೆನ್ನುವುದು.

'ಅಸದಾಖ್ಯಾತಿ ಎಂದರೆ ಇಲ್ಲದೆ ಇರುವುದನ್ನು ಇರುವಂತೆ ವರ್ಣಿಸುವುದು' (ಕನ್ನಡ ಕೈಪಿಡಿ 243)

---

## ಅಂಬಿಕಾತನಯದತ್ತ ಪದ್ಮಶ್ರೀ ಪಡೆದಾಗ

### ಅಂತರಕೀಲೆ

**ಗುರುವಿನ ಗುರು, ಜಗದ್ಗುರು, ನಿನ್ನ ಸಾವಿರದ ತಲೀಮ್ಯಾಲೆ/ ಅಂತರ ಕೀಲೇ ಏರಿ ಕೂತಾನ/ ಲಕ್ಷದಾಗ ಆಸನಾ ಹಾಕಿ, ಕೋಟಿಯೊಳಗ ಎದೀ ಇರಿಸಿ/ ಅಬ್ಜದಾಗ ಅರವಿಂದಾನ ಅರಳಸತಿದ್ದಾನ.(ಸಾಲು: 6 ರಿಂದ 9)**

ಬೇಂದ್ರೆ ಅವರ ಗುರುಭಕ್ತಿ ಅಮೂಲ್ಯವಾದುದು. ಅವರು ತಾವು ದಂಪತಿಗಳು ಗುರುವಿನ ಸೇವೆಯಲ್ಲಿ ಮುಡುಪಾಗಲು ತನ್ನ ಪತ್ನಿಯನ್ನು ಹೀಗೆ ಕರೆದಿದ್ದಾರೆ:

ಗುರುವಿನಂಗಳದ ಗಿಡಾಬಳ್ಳಿಯಾಗಿ/ ಹೊಸ ಹೂವು ನಾವು ಸುರಿಸೋಣ ಬಾ (ಗಂಗಾವತರಣ: ಫಜಾರಗಟ್ಟಿ ಮುಟ್ಟೋಣು ಬಾ)

ಅವರಿಗೆ ಗುರು ತನ್ನನ್ನು ಪಾವನಗೊಳಿಸುವ ಚೇತನ. ಹಾಗಾಗಿ ಆ ಗುರು 'ಅಂತರಕೀಲೇ' ಅಂದರೆ ಆತ್ಮೀಯವಾಗಿ, ಪ್ರೀತಿಯಿಂದ ತನ್ನ ಸಾವು ಇರದ ತಲೆಯ ಮೇಲೆ ಏರಿ ಕುಂತಿದ್ದಾನೆ. ತನ್ನ ಹೃದಯ ಕಮಲವನ್ನು ಅರಳಿಸುತ್ತಿದ್ದಾನೆ ಎಂದು ತಿಳಿಸಿದ್ದಾರೆ.

***

**ಅಂತರಗಂಗೀಮ್ಯಾಗ ಕುಂತ ಹಕ್ಕಿ ಜೋಡ/ ಅಂತಃಕರಣವ ನೋಡೇನ। ಅಗಲು ತಲೆ/ ಅಂತರಕೀಲೇನ ಕೂಗ್ಯಾವ. (ಕಾಮಕಸ್ತೂರಿ:ಅಕ್ಕರತಿ)**

ಅಂತರಗಂಗೀ ಎನ್ನುವುದು ಒಂದು ವಿಶಿಷ್ಟವಾದ ಬಂಗಾರ ಬಣ್ಣದ ಬಳ್ಳಿ. ಅದು ಒಂದು ಮರವನ್ನು ತಬ್ಬಿ ನಿಂತು ಅದರ ಸಮೃದ್ಧ ಎಲೆಯ ಸೊಬಗಿನಲ್ಲಿ ಪಕ್ಷಿಗಳು ತೊನೆದಾಡುವುದನ್ನು ನೋಡುವುದೇ ಒಂದು ಸಂಭ್ರಮ. ಅಂತಹ ಅಂತರಗಂಗೀ ಬಳ್ಳಿಯ ಮ್ಯಾಲೆ ಕುಂತ ಜೋಡಿಹಕ್ಕಿಯ ಮಧುರ ತೇಲಾಟ ಅವುಗಳ ಒಳ ನಲಿವಿನ ಕುಲುಕಾಟ. ಆ ಹಕ್ಕಿಗಳ 'ಅಕ್ಕರತಿ'–ಅಕ್ಕರೆ, ಪ್ರೀತಿ ಅವುಗಳ ಅಂತಃಕರಣದ ಭಾವ್ಯಾಭಿವ್ಯಕ್ತಿಯಾಗಿ ಕೊಕ್ಕು ಕೂಡಿಸಿ ನಲಿದು, ಮೈ ಮೈ ಉಜ್ಜಿ ಪುಲಕಗೊಳ್ಳುವ ರೀತಿ ನೋಡುಗರ ಒಂದು ದಿವ್ಯಾನಂದ. ಆ ಪುಟ್ಟಹಕ್ಕಿಗಳ ಆಂತರ್ಯದ ಮನ–ಅಂತಃಕರಣ. ಅವುಗಳು ಪರಸ್ಪರ ಅಗಲುತ್ತಲೇ ಪರಸ್ಪರ ನೋಡುತ್ತ ಕನಿಕರದ ದನಿ ಆತ್ಮೀಯವಾಗಿ, ಪ್ರೀತಿಯಿಂದ ಹೊರಹೊಮ್ಮುತ್ತದೆ. ಅದನ್ನು ಬೇಂದ್ರೆಯವರು 'ಅಗಲು ತಲೆ ಅಂತರಕೀಲೇನ ಕೂಗ್ಯಾವ' ಎಂದು ಶಬ್ದದಲ್ಲಿ ಅವುಗಳ ಮನದ ಭಾವಯಾನವನ್ನು ಹಿಡಿದು ಸುಖಿಸಿದ್ದಾರೆ. ಅವುಗಳ 'ಅಂತಃಕರಣ ನೋಡೇನ' ಎಂದು ಆಹ್ಲಾದದಲ್ಲಿ ಮಿಂದಿದ್ದಾರೆ.

---

## ಲೋಕಾರೂಢಿ

### ಮೊಳಾ, ಗೂದಿ

**ಬಳಕೊಂಡವ್ರಿಗೆ ಮೊಳಾ ಗೂದಿ ಐತಿ/ ಅಲ್ಲs ಮತ್ತ! (2–19, 20)**

: ಮೊಳಕೈಯಿಂದ ಹಸ್ತದ ತುದಿಯವರೆಗಿನ ಅಳತೆ; ಎರಡು ಗೇಣು; ಅರತ್ನಿ.

: 1. ಗೂದೆ; ಮಲದ್ವಾರದಲ್ಲಿ ಕಾಣಿಸಿಕೊಳ್ಳುವ ದೊಡ್ಡಕರುಳಿನ ಕೊನೆಯ ಭಾಗ; ಗುದದ್ವಾರದ ಮುಖ.

2. ಕರುಳು ಹೊರಗೆ ಕಾಣಿಸಿಕೊಳ್ಳುವ ಒಂದು ಬಗೆಯ ರೋಗ.

ಗೂದೆ ಹರುಕ: ಗೂದೆ ಹೊರಕ್ಕೆ ಬಂದವನು.

ವಾದಿಯ ಕೂಡ ವಾದಿಸಲಾಸಲ್ಲ, ಗೂದೆಹರುಕನ ಕೂಡ ನಡೆಯಲಾಸಲ್ಲ (ಗಾದೆ)

*ಈ ನಾಡಿನ ರಾಜಕಾರಣಿಗಳು, ಬಂಡವಾಳಶಾಹಿಗಳು, ಆಸೆಬುರುಕ ಸಿರಿವಂತರನ್ನು ಜನಪದರು ಲೋಕಾರೂಢಿಯಲ್ಲಿ 'ಬಳಕೊಂಡವ್ರು' ಎಂದು ಕರೆಯುತ್ತಾರೆ. ಅಂಥವರು ಹೊರಗೆ ಜೋರಾಗಿ ಮೆರೆದರು, ಒಳಗೆ ಹಲವು ರೋಗಗಳ ಗಣಿ ಎಂಬುದನ್ನು ಕವಿಯು 'ಮೊಳಾ ಗೂದಿ ಐತಿ' ಎಂದು ಪ್ರತಿಮಾತ್ಮಕವಾಗಿ ಚಿತ್ರಿಸಿದ್ದಾರೆ.

---

## ೨೨. ಇದು ನಭೋವಾಣಿ (೧೯೭೦)

### ಇದು ನಭೋವಾಣಿ

**ಅರ್ಚೆ**

**ಯಾಕೋ ಬಿಗುವಿನ ಮೂರ್ಛೆ?/ ಆ ಚರ್ಚೆ, ಈ ಚರ್ಚೆ ಎಲ್ಲಾ ಹೃದಯ ದೇವನ ಅರ್ಚೆ. (8–1, 2)**

: ಪೂಜೆ; ಆರಾಧನೆ.

* * * * * *

**ಹವಿ**

**ದೈವಕ್ಕೆ ಹವಿಯಾಗು/ ಎದೆ ಎದೆಗೂ ಸವಿಯಾಗು (13–5, 6)**

: ಹೋಮದಲ್ಲಿ ದೇವತೆಗಳಿಗೆ ಆಹುತಿಯಾಗಿ ಕೊಡುವ ತುಪ್ಪ, ಅನ್ನ, ಕಾಳು, ಹಿಟ್ಟು ಮೊದಲಾದ ಪದಾರ್ಥ.

---

### ಪಾಂಡು–ರಂಗ–ಸ್ಥಲ

**ಉತ್–ತಮ**

**ಉತ್ತಮ ತಾ ಗೆದ್ದಾ/ ಉತ್ ತಮ ಆಗೆದ್ದಾ! (7–8, 9)**

*ಈ ಸಾಲಿನಲ್ಲಿ ಉತ್ತಮನು ಗೆಲ್ಲುವನಾದರೂ ಆ ಗೆಲುವು ಮತ್ತೊಂದು ಹಿರಿದಾದ(ಉತ್) ತಮಸ್ಸಿಗೇ ಕಾರಣವಾಗುತ್ತದೆ ಎಂಬ ಸಂಕೀರ್ಣಮಯ ಯೋಚನೆ ಇದೆ. ಲೋಕವು ಚಕ್ರಗತಿಯ ಹಾಗೆ ಮತ್ತೆ ಮತ್ತೆ ತಮಸ್ಸಿನೊಳಗೆ ತಿರುಗುತ್ತದೆ.

---

### 'ವಿಳುಕ್' ಐತಿ: ಬೆಳಕು ಇದೆ: ಇದೇ ಬೆಳಕು

**'ವಿಳುಕ್'**

**ಮಿಂಚಿನ ಗೊಂಚಲ ದಾಟಿ/ 'ವಿಳುಕ್' ಐತಿ. (1–4, 5)**

: ಬೆಳಕು.

* * * * * *

**ಹಿಳುಕು, ಹೀಲಿ**

ಹಿಳುಕ್ ಹೀಲಿಯೊಳಗ ಬಣ್ಣೈತಿ (2–3)

ನವಿಲಿನ ಮ್ಯಾಲೇರಿ/ ನವಿರಾಗಿ ಬರ್ತಾಳ/ ಸರಸೋತಿ–ಸರಸೋತಿ ರಸ ಐತಿ (3–1, 2, 3)

: ಗರಿಗಳಿಂದ ಮಾಡಿದ ಬಾಣದ ಭಾಗ; ಪುಂಖ.

: 1. ನವಿಲುಗರಿ.

2. ನವಿಲುಗರಿಯಲ್ಲಿರುವ ಕಣ್ಣಿನಂತಿರುವ ನಡುವಿನ ಭಾಗ; ಚಂದ್ರಕ.

* ಗರಿಗಳಿಂದ ಕೂಡಿದ ಬಾಣದ ಭಾಗ ಹಿಳುಕು. ಅದು ನವಿಲುಗರಿ. ಅದರಲ್ಲಿ ಕಣ್ಣಿನಂತಿರುವ ನಡುಭಾಗ ಚಂದ್ರಕ. ಗರಿ ಮತ್ತು ಚಂದ್ರಕನ ನಡುವಿನ ಭಾಗದಲ್ಲಿ ಹಲವು ಬಣ್ಣ ಮೇಳೈಸಿದೆ. ನವಿಲಿನ ನವಿರು, ಬಣ್ಣದ ಬೆಡಗು ಜ್ಞಾನದ ಆಕರ್ಷಣೆಯ ಸಂಕೇತ. ಅದು ಜ್ಞಾನ ರಸಭಾವದ ಸವಿ. ಅಂಥ ನವಿಲನ್ನು ಏರಿ ಸರಸ್ವತಿ ಬರುತ್ತಿದ್ದಾಳೆ.

* * * * * *

**ಸವ**

**ಸವನಾಗಿ ನೋಡಬೇಕು/ ಚಂ ಚಂ ಚಮತ್ತು/ ಚಮತ್ಕಾರದಾಗ ಬೇರೈತಿ. (11–1, 2, 3)**

: ಎಣೆ; ಸಮ; ಸಮಾನ.

*ಚಮತ್ಕಾರದಲ್ಲಿ ಹೊಮ್ಮುವ ಪದಗಳಿಗೆ ಎಣೆಯಾಗಿಸಿ ಬೇರೆಬೇರೆ ಅರ್ಥಗಳು ಹೊಮ್ಮುವುದನ್ನು ಪರಿಶೀಲಿಸಬೇಕು. ಆ ಪದಗಳ ಅರ್ಥಗಳ ಬೇರನ್ನು ತಿಳಿಯಬೇಕು ಎಂದು 'ಬೇರೈತಿ' ಪದ ಶ್ಲೇಷಾರ್ಥದಲ್ಲಿ ಪ್ರಯೋಗವಾಗಿದೆ.

---

## ಅಭಂಗ–ವಿಟ್ಠಲ

**ಅಭಂಗ**

**ಡೊಂಕ ಇಲ್ಲಾ ಬಿಂಕಾ ಇಲ್ಲಾ/ ಅಭಂಗ ಪದದವನ್ನ॥ (1–3, 4)**

ತಲೀಲೆ ಹೊತ್ತು ಸೀಮಾಲಿಂಗ/ ಅಭಂಗನಸ್ತಾನ್ನ॥ (2–3, 4)

: 1. ಮರಾಠಿಯಲ್ಲಿ ಒಂದು ಪದ್ಯಜಾತಿ.

2. ಸೊಂಟದ ಎಡಬಲಗಳ ಮೇಲೆ ಅಂಗೈಗಳನ್ನೂರಿ ಮೊಣಕೈಗಳನ್ನು ಪಕ್ಕಕ್ಕೆ ಚಾಚಿ ನಿಲ್ಲುವ ಒಂದು ಭಂಗಿ.(ಅಭಂಗದ ನಿಲುವಿನಲ್ಲಿರುವ ವಿಟ್ಠಲಮೂರ್ತಿ)

---

## ಆತ್ರೇಯ-ದತ್ತ

### ಅತ್ರಿ

**ಅತ್ರಿಯ್ಯ ಕಂದಾ (2-4)**

*ಬ್ರಹ್ಮರ್ಷಿ; ಬ್ರಹ್ಮನ ಮಾನಸಪುತ್ರ. ಈತನು ಕೆಲಕಾಲ ಬ್ರಹ್ಮನ ಅಧಿಕಾರದಲ್ಲಿದ್ದ. ಈತನೇ ಚಂದ್ರನಾಗಿ ಕೆಲವು ಕಾಲ ಇದ್ದನು. ಇವನಿಗೆ ಅನೇಕ ಮಹರ್ಷಿಗಳು ಮಕ್ಕಳಾಗಿದ್ದರು. ಇವನ ಪತ್ನಿ ಕರ್ದಮನ ಪುತ್ರಿಯಾದ ಅನಸೂಯೆ; ಮಕ್ಕಳು ದುರ್ವಾಸ, ದತ್ತಾತ್ರೇಯ, ಚಂದ್ರರೆಂಬ ಮೂವರು. (ಪುರಾಣಭಾರತ ಕೋಶ: ಪು 13)

---

## ಸಂಕಷ್ಟ ಹರಣಾಷ್ಟಕ ಮುಕ್ತಾವಲಿ

### ಏರಿ, ಝಾರಿ

**ನೀನಾಗು ಅವತಾರಿ, ನಾನು ಗುಡ್ಡದ ಏರಿ/ ಮಲೆ ಮಲೆಗೆ ಅಭಿಷೇಕ ನಿನ್ನ ಝಾರಿ/ ಮುತ್ತುರುಳಿದಂತೆ ನಾ ಮುತ್ತುರಳಿ, ಚಿತ್ತರಳಿ/ ಶರಣು ಶರಣೆನ್ನುವೆನು ಲಕ್ಷ ಬಾರಿ. (8-1 ರಿಂದ 4)**

: ಕೆರೆ.

: ಜಾಲರಿ.

*ಇದು 'ಸಂಕಷ್ಟ ಹರಣಾಷ್ಟಕ ಮುಕ್ತಾವಲಿ'. ಭಕ್ತಕವಿ ಬೇಂದ್ರೆಯವರು ಶರಣಭಾವದಲ್ಲಿ ಶ್ರೀಕೃಷ್ಣನಿಗೆ ತಾನು ಗುಡ್ಡದ ಕೆರೆ ಎಂದು ಹೇಳಿಕೊಂಡಿದ್ದಾರೆ. ತಾನು ಜಾಲರಿಯಂತೆ ನಿನ್ನ ರೂಪವಾದ ಮಲೆಮಲೆಗೆ ಅಭಿಷೇಕ ಮಾಡುತ್ತೇನೆ. ನಾನು ನಿನ್ನ ಮೇಲೆ ಮುತ್ತುರುಳಿದಂತೆ ಉರುಳುವೆ. ನನ್ನ ಚಿತ್ತ ಅರಳಿದಾಗ ಲಕ್ಷ ಬಾರಿ ಶರಣೆನ್ನುವೆ ಎಂದು ಪ್ರಾರ್ಥಿಸಿದ್ದಾರೆ.

---

## ಅ–ಉ–ಮ ಸಂವಾದ

### ಅಧ್ವಾನ

**'ಅಧ್ವ' ಅಂದರೂ/ ಮಧ್ವ– ಅಂದರೂ/ ಊರ್ಧ್ವ– ಅಂದರೂ/ ಬರೀ ಧ್ವನಿ ಭೇಧಾ ಅಧ್ವಾನವಲ್ಲ (1–1, 2, 3, 4)**

ಅಧ್ವ, ಮಧ್ವ, ಊರ್ಧ್ವ ಎಂಬ ಪದಗಳು ಕ್ರಮವಾಗಿ ಮಾರ್ಗ, ರಸ, ಅಧ್ಯಾತ್ಮ ಎಂಬ ಅರ್ಥವನ್ನು ನೀಡುತ್ತದೆ. ಆಧ್ಯಾತ್ಮಿಕಮಾರ್ಗ, ಆಧ್ಯಾತ್ಮಿಕ ಪ್ರಾಪ್ತಿಗಳು ಬರೀ ಶಬ್ದದ ಗದ್ದಲವಷ್ಟೇ ಆಗಿದೆ(ಬರೀ ಧ್ವನಿಭೇದ). ಅದು ಅಧ್ವಾನವಲ್ಲ, ಮೌನದಲ್ಲಿ ಪಡೆಮೂಡುವ ಅರಿವಲ್ಲ ಎಂದು ಕವಿ ಇಲ್ಲಿ ನುಡಿಯುತ್ತಿರುವರು (ಅಧ್ವಾನ ಎಂದರೆ ನಿಶ್ಶಬ್ದ ಎಂಬ ಅರ್ಥವೂ ಉಂಟು).

---

## ಮಂಗಲಮೂರ್ತಿ

### ಕಂತಿ

**ಅರಳೊಳಗೇ ಕಾಳುಂಟು/ ಕಾಳೂ ಅರಳುವದುಂಟು/ ಬರಿ ಗೊಬ್ಬರಕೆಳೆಯಲು ಬೇಡಾ/ ಹಬ್ಬದ ರಸದೂಟಾ/ ಕಾಂತಿಯ ಕಂತಿಯ ಹಾರಿಸಿ/ ಹೊರಬರಲಾ ನೋಟಾ. (2–1 ರಿಂದ 6)**

*ಕರು ಹಾಕಿದ ಹಸುವನ್ನು 'ಕಂತಿ' ಎಂದು ಕರೆಯುವರು. ಅದು ಎಳಗಂತಿ. ಅತಿ ಪ್ರೀತಿ, ಹೆಚ್ಚಿನ ವಾತ್ಸಲ್ಯವು ಕಡುಗಂದಿತನ.

ತಾಯಿಯ ಪ್ರೀತಿ, ವಾತ್ಸಲ್ಯದ ಫಲ ಶಿಶು, ಕರು, ಮೊಳಕೆ. ಜನಪದರು 'ಇದು ಎಷ್ಟನೇ ಕಂತು? ಮೊದಲನೆ ಕರುನ? ಎರಡನೆ ಕರುನ?' ಎಂದು ಕೇಳುತ್ತಾರೆ. ಕಾಳು ಮೊಳಕೆಯೊಡೆದು ಕಂಗೊಳಿಸುವುದನ್ನು 'ಕಾಂತಿಯ ಕಂತಿಯ ಹಾರಿಸಿ' ಎಂದು ಬೇಂದ್ರೆ ವರ್ಣಿಸಿದ್ದಾರೆ. ಇದು ಸಸ್ಯರಾಶಿಯ ಕಂತಿಯ ಸೊಬಗನ್ನು ಬೇಂದ್ರೆಯವರು ಕನ್ನಡಕಾವ್ಯದಲ್ಲಿ ಹೊಸ ಬಗೆಯಾಗಿ ದರ್ಶಿಸಿದ ರೀತಿ. ಇದನ್ನು ಸವಿಯುವುದೇ ಹಬ್ಬದ ರಸದೂಟ.

---

# ನೂರು ವರ್ಷಾತು (ಶಕಪುರುಷನ ಶತಮಾನ)

**ಅಗಸೀ ಬಾಗಿಲ**

**ಅದು ನವಯುಗ ಧರ್ಮ/ ಅದರ ಅಗಸೀ ಬಾಗಿಲ ತೆರೆದ/ ಜೀವ ನೀನು (1–3, 4, 5)**

: ಅಗಸೆ ಬಾಗಿಲು; ಹೆಬ್ಬಾಗಿಲು.

*ಭಾರತಕ್ಕೆ ಸ್ವಾತಂತ್ರ್ಯ ತಂದು ನವಯುಗ ಧರ್ಮದ ಹೆಬ್ಬಾಗಿಲು ತೆರೆದು ಭಾರತೀಯರಿಗೆ ಜೀವವಾದವನು ಮಹಾತ್ಮಾ ಗಾಂಧಿ.

* * * * * *

**ಶಕ**

**ಮನಮೋಹನ ದಾಸ! ಶಕಪುರುಷ ನೀನು. (2–10)**

: ನಿರ್ದಿಷ್ಟವಾದ ಕಾಲದಿಂದ ಆರಂಭಿಸುವ ಕಾಲಗಣನೆ; ಯುಗ, ಪರಿವರ್ತನೆಯ ಕಾಲ; ಸಂಕ್ರಮಣ ಕಾಲ.

* ಜಗತ್ತಿನಲ್ಲಿ ಹಿಂಸೆ ತಾಂಡವವಾಡುವಾಗ, ಭಾರತದ ಸ್ವಾತಂತ್ರ್ಯಕ್ಕಾಗಿ ಶಾಂತಿ, ಸತ್ಯ, ಅಹಿಂಸೆಯನ್ನು ಆಯುಧವಾಗಿ ಬಳಸಿ ಸ್ವಾತಂತ್ರ್ಯ ಪಡೆದವರು ಮನಮೋಹನದಾಸ ಮಹಾತ್ಮಾಗಾಂಧಿ. ಅವರು ಆ ಸಂಕ್ರಮಣ ಕಾಲದ ಶಾಂತಿದೂತರು. ಅದು ವಿಶ್ವದಲ್ಲಿ ಒಂದು ಶಕವನ್ನೇ ಮೊದಲು ಮಾಡಿತು. ಹಾಗಾಗಿ ಅವರನ್ನು ಬೇಂದ್ರೆ 'ಶಕಪುರುಷ' ಎಂದು ಕರೆದಿದ್ದಾರೆ. ಅದು ಗಾಂಧಿಯುಗ.

* * * * * *

**ಬಿತ್ತರಿಸು, ಚಿತ್ತರಿಸು**

**ನಿನ್ನ ಹೆಸರು ಬಾನುಲಿ ಬಿತ್ತರಸತ್ಸ ಇರತ್ಸದ/ ಅದನ್ನ ಕೇಳಿದವರ ಕಣ್ಣ ಮುಂದ ಚಿತ್ತರಸತ್ಸ ಇರತ್ಸದ (9–1, 2)**

: 1. ವಿಸ್ತರಿಸು; ಹರಡು.

2. ಕೊಂಡಾಡು; ಕೀರ್ತಿಸು.

: ಚಿತ್ರ ಗೋಚರಿಸು. (ಚಿತ್ತರ=ಚಿತ್ರ)

## ಪೂತಾತ್ಮ–ಹೂತಾತ್ಮ–ಹುತಾತ್ಮ–ಮಹಾತ್ಮ

### ಪೂ, ತನು

**ಮೋಹನದಾಸ ಹೂತನು, ಪರಮ ಪೂತನು (4–3)**

: 1. ಹೂ; ಅರಳು; ಮಲರು; ಕುಸುಮ; ಪುಷ್ಪ.

2. ಕೋಮಲವಾದುದು; ಮೃದು.

: 1. ತೆಳುವಾದ; ಕೃಶವಾದ.

2. ಮೈ; ದೇಹ.

*ಮಹಾತ್ಮಾಗಾಂಧಿ ಮೋಹನದಾಸರ ದೇಹ ತೆಳುವಾಗಿ ಕೋಮಲವಾಗಿರುವ ಹೂ ಎಂದು ಕವಿ ಇಲ್ಲಿ ವರ್ಣಿಸಿದ್ದಾರೆ. ಮಹಾತ್ಮನದು ಹೂತಾತ್ಮ. 'ಹೂತದ' ಪದ 'ಹೂಬಿಟ್ಟ' ಎಂಬುದರ ಸುಂದರರೂಪ. ಹೂಬಿಟ್ಟು ಕಂಪುಸೂಸಿದ ಆತ್ಮ ಎಂದು ಕವಿ ವರ್ಣಿಸಿದ್ದಾರೆ. 'ಓಹೋ ಹೂತಾತ್ಮ!'. ಅದು ಪೂತಾತ್ಮ/ ಪವಿತ್ರ ಆತ್ಮ.

---

## ಗಾಂಧಿ–ಸತ್ಯ

### ತೊಂಡು, ಜಲ್ಪ, ಕಲ್ಪ

**ಕಾಮಾರ್ಥ ದಿನದ, ತೊಂಡು ವಾದದ ಜಲ್ಪ/ ಹೃದಯಾರ್ಥ ಲೀಲೆಗೋ ಬೇಕು ಕಲ್ಪ. (9–1, 2)**

: ಉದ್ಧಟತನ; ದುಷ್ಟತನ; ಸ್ವೇಚ್ಛಾವೃತ್ತಿ; ಪುಂಡಾಟ.

: ಅಸಂಬದ್ಧವಾದ ಮಾತು; ವ್ಯರ್ಥವಾದ ಮಾತು; ಹರಟೆ.

: ಕಟ್ಟಳೆ; ನಿಯಮ; ವಿಧಿ.

*ಲೋಕ ವ್ಯವಹಾರದಲ್ಲಿಯ ಸ್ವಾರ್ಥಪೂರ್ಣ ದಿನದ ದೂಡಿಕೆಗೆ ಉದ್ಧಟತನ, ಪುಂಡಾಟದ ವ್ಯರ್ಥ ಮಾತು ಸಾಕು. ನಿಸ್ವಾರ್ಥ ಹೃದಯಾರ್ಥ ಅಂತಃಕರಣದ ಪ್ರೀತಿ, ವಿಶ್ವಾಸ, ಆನಂದದ ಲೀಲೆಗೆ ಒಂದು ಕಟ್ಟಳೆಯ ವ್ರತ ಬೇಕು.

---

## ಹುಂಜ–ಹೂ

### ಪುಂಜ, ಹೂಜೆ, ಕೆನ್ನೀರು

**ಓಹೋ! ಹುಂಜದ ಪುಂಜ ಪೂಜೆ ಬಾನ್ ಹೂಜೆಯಲಿ/ ನೀಡುವದು ಕೆನ್ನೀರ ಹೂವ ಮಾಡಿ. (3–1, 2)**

: 1.ಹುಂಜ; ಗಂಡುಕೋಳಿ.

2. (ಆಲಂ) ಸಮರ್ಥ, ಗಟ್ಟಿಗ.

: ಮಣ್ಣು ಅಥವಾ ಲೋಹದಿಂದ ಮಾಡಿದ ಉದ್ದವಾದ ಕಂಠವಿರುವ ಒಂದು ಬಗೆಯ ನೀರಿನ ಪಾತ್ರೆ.

: ಕೆಂಪು ಬಣ್ಣದ ಕಾಂತಿ–ಪ್ರಭೆ.

*ರೈತಮಕ್ಕಳ ಒಡನಾಟದಲ್ಲಿ ಬಾಲ್ಯದ ಬೆಳಕು ಕಂಡ ಬೇಂದ್ರೆ ಅವರಿಗೆ ಹುಂಜ ವಿಶಿಷ್ಟ ಆಕರ್ಷಣೆಯಾಗಿತ್ತು. ಅದನ್ನು ಸೂಕ್ಷ್ಮವಾಗಿ ನೋಡಿ ಅದರ ಬಣ್ಣ, ಬೆಡಗು, ತಲೆಯ ತುರಾಯಿ/ ಕೊಟ್ಟು, ಕುಲುಕು ಕೂಗು, ಸದಾ ಲವಲವಿಕೆಯನ್ನು ಗಮನಿಸಿ ರಚಿಸಿರುವ ಕವನ 'ಹುಂಜ–ಹೂ'. ಆಸ್ತಿಕ ಭಾವದ ಕವಿ ಹುಂಜದಲ್ಲಿ ಕಂಡ ಪೂಜಾಭಾವ ಮೇಲಿನ ನುಡಿ. ಬಾನಿನಲ್ಲಿರುವ ವಿಶ್ವ ಸತ್ತ್ವಕ್ಕೆ ಹುಂಜವು ಸಮರ್ಥವಾಗಿ ಸಲ್ಲಿಸುವ ಪೂಜೆಯನ್ನು–ಅದರ ಒಡಲನ್ನೇ ರೂಪಕವಾಗಿ ಬೇಂದ್ರೆ ಚಿತ್ರಿಸಿದ್ದಾರೆ. ಅದು ತನ್ನ ಉದ್ದವಾದ ಕಂಠವನ್ನು (ಹೂಜೆ) ಮುಗಿಲಿಗೆ ಏರಿಸಿ ತನ್ನ ಕೆಂಪುಬಣ್ಣದ ಕಾಂತಿಯ ಮೈಯನ್ನು ಹೂವುಮಾಡಿ ಬಾನದೇವನಿಗೆ ಅರ್ಪಿಸುತ್ತಿದೆ! ಹುಂಜವು ಗಂಡು. ಇದು ಕತ್ತೆತ್ತಿ ಕೂಗುವ ಪರಿ ಸ್ಮರಣೀಯ.

---

## ಜೇಡನ ಹೂ

### ಆಕೂತಿ

**ಎಳೆ ಸೆಳೆ ಹೂವಿನ ತಿಳಿ ಬಿಳಿ ಬಣ್ಣ/ ಇದು ಯಾ ಲೋಕದ ನವ ಪುಷ್ಪ?/ ಆಕೂತಿಗೆ ಕೇಸರಿಸಿದ ಕಣ್ಣ/ ಆನಂದದ ಸುಂದರ ಬಾಷ್ಪ. (1–1 ರಿಂದ 4)**

: ಅಭಿಪ್ರಾಯ; ಆಶಯ; ಇಂಗಿತ.

*ಬೇಂದ್ರೆ ಅವರು ಜೇಡನ ಬಲೆಯನ್ನು 'ಜೇಡನ ಹೂ' ಎಂದು ಬಣ್ಣಿಸಿದ್ದಾರೆ. ಜೇಡರ ಹುಳು ತನ್ನ ಒಳ ಆಶಯಕ್ಕೆ ತುಡಿಯುತ್ತ (ಆಕೂತಿ) ಕಣ್ಣನ್ನು ಕೆಂಪಗೆ ಮಾಡಿಕೊಂಡು

ಆನಂದದ ಸುಂದರ ಭಾಷ್ಪವನ್ನು ಸುರಿಸುತ್ತ ತನ್ನ ಬಲೆಯನ್ನು ಹೆಣೆದಿದೆ ಎಂದು ಕಲ್ಪನೆಯ ಜಾಲವನ್ನು ಬೀಸಿದ್ದಾರೆ.

* * * * * *

**ತವಕ, ಶರ್ಮ**

**ತವಕದ ಮರ್ಮದ ಶರ್ಮದ ದಳವೇ/ ದಳದಳ ವಿಕಸಿತ ಅವಿರತವು. (2–1, 2)**

: (ಅತಿಯಾದ) ಬಯಕೆ; ಆತುರ; ಉತ್ಸುಕತೆ.

: ಸಂತೋಷ; ಆನಂದ.

*ಶರ್ಮ–ಕೆಲವು ಬ್ರಾಹ್ಮಣರ ಹೆಸರಿನ ಮುಂದೆ ಸೇರುವ ಒಂದು ಪದವಾಗಿರುವಂತೆ ಸಂತೋಷದ ಅರ್ಥವನ್ನು ಇದು ಹೊಂದಿದೆ.

ಬೇಂದ್ರೆ ಅವರು 'ಭಾವಗೀತೆ'ಯ ಸೃಷ್ಟಿಯನ್ನು 'ಒಡಲ ನೂಲಿನಿಂದ ನೇಯುವಂತೆ ಜೇಡಜಾಲಾ' ಎಂದು ಬಣ್ಣಿಸಿದ್ದಾರಷ್ಟೆ. ಜೇಡರ ಹುಳುವು ತನ್ನ ರಕ್ಷಣೆಗಾಗಿ ಬಲೆ ನೇಯುವ ಆನಂದವೇ ಶರ್ಮ. ಅವು ಅತಿಯಾದ ಉತ್ಸುಕತೆ/ತವಕದಿಂದ ಅವಸರ ಅವಸರವಾಗಿ ತಮ್ಮ ಅಂತರಂಗವನ್ನು ಅದಕ್ಕೆ ಮುಡುಪಾಗಿಸಿ ಒಂದು ತಂಡದ ಕೆಲಸವೆಂಬಂತೆ ಶಿಸ್ತಿನಿಂದ ದುಡಿಯುತ್ತವೆ. ಅವುಗಳು ರಚಿಸಿದ ಆ ಬಲೆ ಬೇಂದ್ರೆಯವರಿಗೆ ಹೂವಿನ ದಳದಳವಾಗಿ ಕಂಡಿದೆ. ಅವುಗಳ ಅವಿರತ ಶ್ರಮ ಅಲ್ಲಿ ದಳದಳಿತವಾಗಿ ಅರಳಿರುವುದು ಕಂಡಿದೆ.

---

## ಬನ್ನಿ ಭಂಗಾರ

### ಸ್ವರ್ಣಕಾರ, ಅರಕ್ತ

**ಸ್ವರ್ಣಕಾರನ ಮನೆಗೆ ಬಂದ ತಿರುಕ (1–2)**

***

**ಬಂದವನು ಅರಕ್ತ–ವಿರಕ್ತ/ ಎಲ್ಲೊ ಅನುರಕ್ತ (2–2, 3)**

: ಚಿನ್ನದ ಕೆಲಸ ಮಾಡುವವನು; ಅಕ್ಕಸಾಲಿಗ.

: ವಿರಕ್ತ; ಆಸಕ್ತಿಯಿಲ್ಲದವನು .

*ಓರ್ವ ಅರಕ್ತನಾದ ತಿರುಕ ಸ್ವರ್ಣಕಾರನ ಮನೆಗೆ ಬಂದು ಸೊಸೆಯನ್ನು ಭಿಕ್ಷೆಯಾಗಿ ಕೇಳಿದ್ದು ಘಂಡರಪುರದ ವಾರಕರಿಯ ವಿಕೃತ ಕಥೆ. ಅದನ್ನು ಬೇಂದ್ರೆ 'ಬನ್ನಿ ಭಂಗಾರ'

ಕಥನ ಕವನದಲ್ಲಿ ಪತಿವ್ರತೆಯಾದ ಸೊಸೆ 'ಪಾಪ! ಸಾವನಿಗೆ ಯಾವ ಕಾವ?' ಎಂದು ಹೇಳಿ ಪ್ರಣಾಮ ಮಾಡಲು ತಿರುಕ ಸಾಯುವನು ಎಂದು ಕಥೆಗೆ ತಿರುವು ನೀಡಿದ್ದಾರೆ.

ಆ ವಾರಕರಿಗೆ 'ವಿಕೃತ ಕಥೆಯನು ಪ್ರಚಾರ ಮಾಡಿ ಮನೆ ಮನೆ ಒಡೆಯಬಾರದು ಎಂಬ ಸೂಚನೆ ಕೊಟ್ಟು 'ವಿಕೃತ ಹಾಡನ್ನು ಹಾಡುವುದಿಲ್ಲ' ಎಂಬ ವಚನವನ್ನು ಬೇಂದ್ರೆ ಅವನಿಂದ ಪಡೆದರು' ಎಂಬ ಭಾವ ಸಂದರ್ಭ ಈ ಕವನ ಹೊಂದಿದೆ.

ವಾರಕಾರಿ=(ಪ್ರತಿ ವರ್ಷವೂ) ನಿಶ್ಚಿತವಾದ ದಿನದಂದು ತೀರ್ಥಕ್ಷೇತ್ರಕ್ಕೆ ಹೋಗುವ ಭಕ್ತ; ಪ್ರತಿ ದ್ವಾದಶಿಗೆ ಪಂಢರಪುರಕ್ಕೆ ಹೋಗುವವರು (ಮರಾ: ವಾರಕರೀ)

---

## ಬಂಗಾರದ ಹೊದಿಕೆ

### ಅಂಗಾರ, ಕಂಗಾಲ

**ಆಹಾರ ಅಂಗಾರ ಕಂಗಾಲ ಜನಕೆ;/ ಜೀವನ ತಲೆ ತಗ್ಗಿ ಬೆಲೆ ಬಂತು ಧನಕೆ (2–1, 2)**

: ಕೆಂಡ.

: ದರಿದ್ರ ಮನುಷ್ಯ; ಬಡವ.

*ಬೇಂದ್ರೆ ಅವರು ದರಿದ್ರ ಮನುಷ್ಯನಿಗೆ ಶ್ರೀಮಂತರು ನೀಡುವ ಆಹಾರ ಹಸಿವನ್ನು ತಣಿಸುವುದಾದರೂ ಅದು ಬಂಗಾರ ಹೊದಿಕೆಯ 'ಕೆಂಡ' ಎಂದು ರೂಪಕಾತ್ಮಕವಾಗಿ ಬಣ್ಣಿಸಿದ್ದಾರೆ. ಅದು ಬಡವರ ಜೀವನ ತಲೆ ತಗ್ಗಿಸಿರುವುದರಿಂದ ಧನಕ್ಕೆ ಬಂದಿರುವ ಬೆಲೆ ಎಂದು ವ್ಯಂಗ್ಯಾತ್ಮಕವಾಗಿ ತಿಳಿಸಿದ್ದಾರೆ.

---

## ನಾನು ಕಂಡಂತೆ

### ಕಂಡರಿಸು, ದೃಷ್ಟಿ, ಅದೃಷ್ಟ

**ಕಂಡರಿಸುತಿದೆ ದೃಷ್ಟ ತನ್ನದೃಷ್ಟದ ಮೂರ್ತಿ (2–4)**

: ಕೆತ್ತನೆ ಕೆಲಸಮಾಡು; ಕಡೆ; ಕೊರೆದು ಮೂಡಿಸು.

: 1. ನೋಡಿದ; ಈಕ್ಷಿಸಿದ; ಕಂಡ.

2. ತಿಳಿದುಕೊಂಡ; ಗ್ರಹಿಸಿದ.

: ಭಾಗ್ಯವಿಶೇಷ; ಸುದೈವ.

*ವಿ.ಕೃ ಗೋಕಾಕರು 1925ರಲ್ಲಿ ಕರ್ನಾಟಕ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ ಬೇಂದ್ರೆಯವರನ್ನು ಕಂಡರು, ಗುರುಗಳೆಂದು ಗೌರವಿಸುತ್ತಿದ್ದರು. ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದ ಅವರು ಉತ್ತಮ ಪ್ರಾಧ್ಯಾಪಕರಾದರು. ಆದರ್ಶದ ಬಾಳಿನಲ್ಲಿ ತಮ್ಮ ಅದೃಷ್ಟವನ್ನು ತಾವೇ ರೂಪಿಸಿಕೊಂಡರು. ಅವರ ಆ ಪ್ರಗತಿಯ ಹಂತ ಹಂತವನ್ನು ತಿಳಿದ ಬೇಂದ್ರೆಯವರು ಅದನ್ನು ಮೇಲಿನ ಸಾಲಿನಲ್ಲಿ ಕಾವ್ಯಾತ್ಮಕವಾಗಿ ಅಭಿವ್ಯಕ್ತಿಸಿದ್ದಾರೆ.

---

## ವಾಸನಿ

**ವಾಸನೆ, ಉಸಿಲು, ಸುಯಿಲು, ಆರ್**

**ಹೂವಿನೊಳಗ ಇರೋ ವಾಸನಿ/ ನೋವಿನೊಳಗೂ ಒಮ್ಮೊಮ್ಮೆ ತೋರತ್ಸದ/ ಹಿಡಿತಕ್ಕ ಸಿಗದ್ಸ ಹಾರತ್ಸದ/ ಯಾವುದೋ ಬಯಲಾಗ (2–1, 2, 3, 4)**

**ಬೆನ್ನ ಹತ್ತಿ ಹಾರಬೇಕೋ/ ಹೆಜ್ಜಿ ಸುಳವು ಹತ್ತೋದಿಲ್ಲಾ/ ಉಸಿಲಿನ ಸುಯಿಲಾಗ/ ನೆನೆಸಿಕೊಂಡರ್ಸ ಆರತ್ಸದ. (3–1, 2, 3, 4)**

: 1. ಕಂಪು; ಗಂಧ.

2. (ಆಲಂ) ಜಾಡು; ಸುಳಿವು.

: ಒಳ ಅಳತೆ; ವಿಸ್ತೀರ್ಣ

: ಉಸಿರು; ಶ್ವಾಸ.

: ತೃಪ್ತಿಪಡು, ತಣಿ.

*ಹೂ ಕಂಪನ್ನು ಹಿಡಿದು ಸಾಗುವುದು ಅಷ್ಟು ಸುಲಭವಲ್ಲ. ಅದರ 'ಹೆಜ್ಜಿ ಸುಳವು ಹತ್ತೋದಿಲ್ಲಾ.' ಅದನ್ನು ಹಿಂಬಾಲಿಸಿ ಸಾಗಲು ಅದರ ಗಂಧಕ್ಕೆ ತಕ್ಕಂತೆ ನಮ್ಮ ಉಸಿರಿನ ವಿಸ್ತೀರ್ಣವನ್ನು ಮಾರ್ಪಡಿಸಿ ನೆನೆಸಿಕೊಳ್ಳಬೇಕು. ಆಗ ಅದು ತೃಪ್ತಿಯನ್ನುಂಟು ಮಾಡುತ್ತದೆ. ಇದು ಅದ್ವೈತಾನುಭವದ ರೂಪಕ.

ಈ ಕವನದ ಭಾವ ಸಂದರ್ಭ: ತನ್ನ ತಾನು ಅರಿಯುವ ವಾಸನೆ–ಇಚ್ಛೆ ಪ್ರಬಲವಾದಾಗ, ಸಾಕ್ಷಾತ್ಕಾರ ತಾನೇ ಸಂಭವಿಸುತ್ತದೆ. ಅದು ಅದ್ವೈತಭಾವ.

* * * * * *

### ಬಟಾಬಯಲು, ಅಂತರಾಳ

**ಎಲ್ಲೆಲ್ಲೂ ಬಟಾಬಯಲು/ ನಮಗ ನಾವ್ಕ ಇರೋದಿಲ್ಲಾ/ ಇದ್ದದ್ದಿರತ್ಕದ ಅಂತರಾಳಿ/ ಗಾಳಿ ಒಳಗ ಹಾರತಿರೋ/ ಜೇಡನ ಬಲಿಹಾಂಗ (5–1 ರಿಂದ 5)**

: 1. ಏನೂ ಇಲ್ಲದಿರುವ ಸ್ಥಳ; ಬರಿದಾದ ಜಾಗ; ಶೂನ್ಯ.

2. (ವೀ ಶೈ.) ಆಕಾರವಿಲ್ಲದುದು; ನಿರಾಕಾರವಾದುದು.

: ಒಳಭಾಗ; ಮಧ್ಯಭಾಗ.

*ಮೋಳಿಗೆ ಮಾರಯ್ಯ ಹೇಳಿದಂತೆ 'ಸಚ್ಚಿದಾನಂದ ಸಂಗ ಬಟ್ಟ ಬಯಲು'. ಪರವಸ್ತು–ಸಚ್ಚಿದಾನಂದವನ್ನು ನಿರ್ದೇಶಿಸುವ ಅಚ್ಚಗನ್ನಡ ಶಬ್ದ 'ಬಯಲು'. ಅದರ ಅಂತರಾಳಿ/ ಒಳಭಾಗದಲ್ಲಿ ಅವನಿರುತ್ತಾನೆ. ಅವನು ಜೀವ(ಜೇಡ) ಜಾಲವನ್ನು ಪೋಷಿಸುವ ಗಾಳಿಯ ರೂಪದಲ್ಲಿ ಗೋಚರಿಸುತ್ತಾನೆ ಎಂದು ಬೇಂದ್ರೆ ಅವರು ಉಪಮಾನಾತ್ಮಕವಾಗಿ ಹೀಗೆ ತಿಳಿಸಿದ್ದಾರೆ: 'ಗಾಳೀ ಒಳಗ ಹಾರತಿರೋ ಜೇಡನ ಬಲಿಹಾಂಗ'.

---

## ಚತುರವಾಣಿ

### ಚತ್ವಾರಿ ಶೃಂಗಾ

**ಚತ್ವಾರಿ ಶೃಂಗಾಃ। ನಾಕು ಕೋಡು/ ಇದು ನಮ್ಮ ಧನ (1–1, 2)**

*ಸಂವಹನವು ಪರಾ ಪಶ್ಯಂತಿ ಮಧ್ಯಮಾ ಮತ್ತು ವೈಖರೀ ಎಂಬ ನಾಲ್ಕು ಸ್ತರಗಳಲ್ಲಿ ಸಂಭವಿಸುತ್ತದೆ. ಮೊದಲ ಮೂರು ಅಂತರಂಗದ ಸಂವಹನವಾದರೆ ವೈಖರೀ ಎಂಬುದು ಶಬ್ದಮೂಲದ ಸಂವಹನವಾಗಿದೆ.

ಋಗ್ವೇದದಲ್ಲಿ ಎರಡು ಮಂತ್ರಗಳಿವೆ:

ಮೊದಲನೆಯದು: ಚತ್ವಾರಿ ವಾಕ್ಪರಿಮಿತಾ ಪದಾನಿ ತಾನಿ ವಿದುರ್ಬ್ರಾಹ್ಮಣಾ ಯೇ ಮನೀಷಿಣಃ। ಗುಹಾ ತ್ರೀಣಿ ನಿಹಿತಾ ನೇಂಗಯಂತಿ ತುರೀಯಂ ವಾಚೋ ಮನುಷ್ಯಾ ವದಂತಿ॥

(ಸ್ಥೂಲವಾಗಿ ಇದರ ಅರ್ಥ: ಒಟ್ಟು ನಾಲ್ಕು ಬಗೆಯ ಸಂವಹನಗಳು(ಚತ್ವಾರಿ) ವಾಕ್ ಅಥವಾ ವೈಖರಿ ಪರಿಮಿತವಾದುದು ಎಂದು ಋಷಿಗಳು ತಿಳಿದಿರುವರು. ಉಳಿದ ಮೂರು ಅಮೂರ್ತವಾದುದು ನಾಲ್ಕನೆಯದಾದ ವಾಕ್ ಎಂಬುದು ಮನುಷ್ಯನಿಗೆ ಸಂಬಂಧಿಸಿದ್ದು)

ಎರಡನೆಯದು: ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತ ಹಸ್ತಾಸೋ ಅಸ್ಯ। ತ್ರಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾನ್ ಆವಿವೇಷ॥

(ಸ್ಥೂಲಾರ್ಥ: ನಾಲ್ಕು ಕೊಂಬುಗಳು, ಮೂರು ಪಾದಗಳು, ಎರಡು ತಲೆಗಳು ಮತ್ತು ಏಳು ಹಸ್ತಗಳಿರುವ ಹಾಗೆಯೇ ಮೂರು ಮೂಗುದಾರಗಳಿಂದ ಕಟ್ಟಲ್ಪಟ್ಟು ಘೋರವಾಗಿ ಗರ್ಜಿಸುತ್ತಿರುವ ನಂದಿಯನ್ನು ಏರಿದ ಮಹಾದೇವನು ಮನುಷ್ಯರನ್ನು ಆವರಿಸುತ್ತ ಸವಾರಿ ಹೋಗುತ್ತಿರುವನು).

ಈ ಎರಡು ಮಂತ್ರಗಳ ಹಿನ್ನೆಲೆಯಲ್ಲಿ ಬೇಂದ್ರೆ ಶಬ್ದ ಸಂವಹನದ ಮಿತಿಯನ್ನು ತಿಳಿಸುತ್ತಿರುವರು.

---

# ೨೩. ಮತ್ತೆ ಶ್ರಾವಣಾ ಬಂತು (೧೯೭೩)

## ಭಾಗ :೧

## ಶ್ರಾವಣಾ ಬಂತು : ಬಾಲ್ಯಕಾಂಡ

### ಮುದ್ದೆ ಮೂರ್ತತೆಗೊಂಡು ಕೂಸಾಗಿದೆ

**ಸಖಿ, ನನ್ನ ಬಾಲ್ಯದಾ$_{ss}$ ಕಥೆ ನಿನಗ ಹೇಳುವೆನು/ ವ್ಯಥೆಯಿಲ್ಲ, ಈಗೆಲ್ಲ ಹೂವಾಗಿದೆ/ ಬಸಿರು ಬೇನೆಯ ಕಳೆದು, ಬೇರೆ ರೂಪವ ತಳೆದು,/ ಮುದ್ದೆ ಮೂರ್ತತೆಗೊಂಡು ಕೂಸಾಗಿದೆ. (1–1 ರಿಂದ 4)**

* ಬೇಂದ್ರೆಯವರಿಗೆ ತಾನು ಏನೇ ರಚಿಸಿದರೂ ಅದನ್ನು ತನ್ನ ಪತ್ನಿಗೆ ಓದಿ ಹೇಳಿ ಒಪ್ಪಿಗೆ ಪಡೆಯುವ ಮನಸ್ಸು. ಈ ಕಾವ್ಯ ಪ್ರಕಟಗೊಳ್ಳುವ ವೇಳೆಗೆ ಆಕೆ ಮರಣ ಹೊಂದಿದ್ದಳು. ಆದರೂ ಕವಿಗೆ ಆಕೆ ಜೀವಂತವಾಗಿರುವಳು, ತನ್ನ ಕಾವ್ಯದ ಸಹೃದಯ ಕೇಳುಗಳಾಗಿ ತನ್ನ ಜೊತೆ ಸಂವಾದಿಸುವಳು ಎಂಬ ಭಾವ. ಹಾಗಾಗಿ ಅದು ಅವರ ಅಮರಪ್ರೇಮದ ಸಂಕೇತ. ಸಖಿಗೆ ತನ್ನ ಬಾಲ್ಯದ ಕಥೆಯನ್ನು ಹೇಳುವ ಮನಸ್ಸಿನಲ್ಲಿಯೇ ಅವರ ಆಂತರಿಕ ನೋವು ನಲಿವನ್ನು ಆಲಿಸಿ ಕೇಳುವ ಸಹೃದಯರನ್ನು ಹುಡುಕುವ ಭಾವವಿದೆ. ತುಂಬುಜೀವನ ಅವರಿಗೆ ಶಾಂತಿ ನೆಮ್ಮದಿಯನ್ನು ತಂದಿದೆ. ಬಡತನದ ನೋವಿನ ಅಸಹಾಯಕತೆಯ ಬದುಕು ವ್ಯಥೆಯಿಂದ ಸಾಗಿ ಬಂದಿದ್ದರೂ, ನೆಲದ ನೀರು ಕುಡಿದು ಬಿಸಿಲುಗಾಳಿಗೆ ಬೆಳೆದ ತರುವಿನಂತೆ ಹೂವು ರೂಪುಗೊಂಡ ಹಾಗೆ ಕವಿಗೆ ಬಾಳು ಹೂವಾಗಿದೆ, ಕಂಪಿನ ನೆಲೆಯಾಗಿದೆ.

'ಮುದ್ದೆ ಮೂರ್ತತೆಗೊಂಡು ಕೂಸಾಗಿದೆ' ಎಂಬ ನುಡಿಯಲ್ಲಿ ಮುದ್ದುತನವೇ, ಮುದ್ದು ಭಾವವೇ, ಅಮೂರ್ತ ಚಿಂತನೆಯೆ ಮೂರ್ತರೂಪ ಪಡೆದು ಕೂಸಾಗಿದೆ ಎಂದು ಕಲಾತ್ಮಕವಾಗಿ ಬೇಂದ್ರೆ ಬಣ್ಣಿಸಿದ್ದಾರೆ. ಅದು ಅಮೂರ್ತ ಭಾವಕ್ಕೆ ರೂಪ ಕೊಡುವ ಕಲೆಯ ಸಂಕೇತವಾಗಿದೆ. ಅವರು ತಮ್ಮ ಬಾಲ್ಯದ ಘಟನೆಗಳನ್ನು ಕಾವ್ಯಮಾಧ್ಯಮದಲ್ಲಿ ಶೋಧಿಸುತ್ತ, ಸಖಿಯೊಂದಿಗೆ ತಾತ್ವಿಕ ಸಂವಾದ ಹೂಡಿದ್ದಾರೆ. ಆ ಸಖಿ 'ಹ್ಞೂ' ಗುಟ್ಟುವವಳಾಗಿ, ಜೀವಂತವಾಗಿಲ್ಲದ್ದು ತಾತ್ವಿಕ ಚಿಂತನೆಯ ನಿರಂತರ ಸತ್ಯದ ಪ್ರತಿಪಾದನೆಗೆ ಸಾಕ್ಷಿಭೂತವಾದ ಮನಸ್ಸಿನೊಡನೆ ನಡೆಸಿದ ಸಂವಾದದಂತಿದೆ. ಅದು ಅವರ ಶಾಶ್ವತ ಚಿಂತನಾ ನೆಲೆಯ ದರ್ಶನವಾಗಿದೆ.

* * * * * *

### ತತ್ತಿಯನ್ನಿಟ್ಟಿತ್ತು ನವಮೇಘವು

**ರಾಣಿಯ ರಾಜ್ಯದ ಕನಸದೆ ಹರಿದಿತ್ತು/ ಬೀಜ–ಸ್ವರಾಜ್ಯಕೆ, ಮೊಳೆ ಬಂದಿತ್ತು/ ಅಂಬಿಕೆ ಎಂಬವಳ ಹೃದಯಾಂಬರದಲ್ಲಿ/ ತತ್ತಿಯನಿಟ್ಟಿತ್ತು ನವಮೇಘವು. (4–1 ರಿಂದ 4)**

* ಆಗ ಸ್ವಾತಂತ್ರ್ಯ ತತ್ತ್ವ ಜನಮನದಲ್ಲಿ ಮೂಡಿತ್ತು. ಆ ಚಳುವಳಿಯಿಂದಾಗಿ ಬ್ರಿಟೀಷ್ ಆಡಳಿತದ ಕನಸು ಒಡೆಯಲು ಆರಂಭವಾಗಿತ್ತು. ವಿಕ್ಟೋರಿಯಾ ಮಹಾರಾಣಿ ರಾಜ್ಯವಾಳುವ ಕನಸು ಹರಿದು ಹೋಗುವುದರಲ್ಲಿತ್ತು. ಸ್ವರಾಜ್ಯ ಕಲ್ಪನೆಯ ಬೀಜಕ್ಕೆ ಮೊಳಕೆಯೊಡೆದಿತ್ತು. ಅಂತಹ ಪರ್ವಕಾಲದಲ್ಲಿ ಅಂಬಿಕೆಯ ಹೃದಯಾಂಬರದಲ್ಲಿ ನನ್ನ ಜನನಕೆ ಸಿದ್ಧತೆಗಳಾದವು. ಆಕೆಯ ಹೃದಯಾಕಾಶದಲ್ಲಿ ನವಮೇಘವು ಶಿಶುವಿನ ರೂಪದ ಪೂರ್ವರೂಪವಾಗಿ ಒಂದು ತತ್ತಿಯನ್ನಿಟ್ಟಿತ್ತು.

ಉಪನಿಷತ್ತುಗಳಲ್ಲಿ ಮಾನವನ ಪೂರ್ವಜನ್ಮ ಮತ್ತು ಪುನರ್ಜನ್ಮಗಳ ಅತ್ಯಂತ ಸೂಕ್ಷ್ಮವಾದ ವಿವರಗಳಿವೆ. ಸ್ವರ್ಗದಲ್ಲಿರುವ ಚೇತನದ ಪುಣ್ಯವು ಮುಗಿಯುತ್ತಿದ್ದಂತೆಯೆ ಅಲ್ಲಿನ ದೇವತೆಗಳು ಆ ಚೇತನವನ್ನು ಭೂಮಿಗೆ ತಳ್ಳಿಬಿಡುತ್ತಾರೆ. 'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ' ಎಂದು ಭಗವದ್ಗೀತೆಯಲ್ಲಿಯೂ ಹೇಳಿದೆ. ಹಾಗೆ ತಳ್ಳಲ್ಪಟ್ಟ ಚೇತನವು ಮೇಘಗಳೊಡನೆ ಸೇರಿಕೊಂಡು ಭೂಮಿಗೆ ಬಿದ್ದು ದವಸ ಧಾನ್ಯಗಳೊಡನೆ ಬೆರೆತುಕೊಂಡು ತಾನು ಪುನರ್ಜನ್ಮ ಪಡೆಯಲು ಯಾವುದು ತಾಣವೊ ಆ ಪುರುಷನಿಂದ ತಿನ್ನಲ್ಪಡುತ್ತದೆ. ಅಲ್ಲಿಂದ ಮುಂದೆ ರೇತಸ್ಸಾಗಿ ಸ್ತ್ರೀಯ ಗರ್ಭಕೋಶವನ್ನು ಸೇರಿಕೊಳ್ಳುತ್ತದೆ. ರೇತಸ್ಸಿನ ರೂಪವಾಗಿ ಸೇರಿಕೊಳ್ಳುವಿಕೆಯನ್ನೇ ಇಲ್ಲಿ ಕವಿವರ್ಯರು 'ತತ್ತಿ' ಎಂದಿದ್ದಾರೆ.

* * * * * *

## ಆ ಬಸಿರೆ ಬ್ರಹ್ಮಾಂಡ

**ಹೆಣ್ಣು ಎನ್ನುವ ಮಾತು ತಾಯಿ ಎನ್ನುವ ಮಾತು/ ಎರಡಲ್ಲ ಒಂದೆಂದು ತಿಳಿಸಿದಳು/ ಆ ಬಸಿರೆ ಬ್ರಹ್ಮಾಂಡ ಹೆಸರಿಗೆ ಪಿಂಡಾಂಡ/ ಕುಸುರೀಗೆ ಬೆಲೆ ಎಂದು ಕಲಿಸಿದಳು.(6–1 ರಿಂದ 4)**

*ಆ ತಾಯಿ ಸಾಮಾನ್ಯಳಲ್ಲ, ದೈವಸ್ವರೂಪಿಣಿಯಾದ ಮಹಾತಾಯಿಯಾಗಿದ್ದಳು, ಶಕ್ತಿ ಸ್ವರೂಪಿಣಿಯಾಗಿದ್ದಳು. ಅವಳನ್ನು ಕೊಂಡಾಡುವುದಕ್ಕಾಗಲೀ, ಅವಳ ಮಹಿಮಾತಿಶಯವನ್ನು ವರ್ಣಿಸುವುದಕ್ಕಾಗಲಿ ನನಗೆ ಧೈರ್ಯ ಸಾಕಾಗುವುದಿಲ್ಲ. ಅವಳು ನನ್ನ ವರ್ಣನೆಯ ಬಾಯಿಗೆ ತುತ್ತಾಗಲಾರಳು. ಹಾಗೆಂದು ಮೌನತಾಳಿಬಿಡುವುದು ಲೋಕಧರ್ಮಕ್ಕೆ, ಕಾವ್ಯಧರ್ಮಕ್ಕೆ ಹೊರತಾಗುತ್ತದೆ. ಈ ಕಾರಣದಿಂದಾಗಿ ಅವಳನ್ನು ಕುರಿತು ನನ್ನ ಅಂತರಾಳದಲ್ಲಿರುವ ಮಾತುಗಳನ್ನು ನಾಲ್ಕಾರು ಪಾದಗಳನ್ನಾಗಿ ಮಾಡಿ ಅವಳ ಪಾದಗಳಿಗೆ ಸಮರ್ಪಿಸುತ್ತಿದ್ದೇನೆ.

ಹೆಣ್ಣು ಎಂದರೆ ಅವಳು ಮಾತೃಸ್ವರೂಪಿಣಿಯಾದವಳು. ಹೆಣ್ಣೆಂದರೂ ಅವಳೆ; ತಾಯಿಯೆಂದರೂ ಅವಳೆ; ಅದೊಂದು ಅಭೇದ ಕಲ್ಪನೆ. ಇದು ನನಗೆ ನನ್ನ ತಾಯಿ ಬಾಲ್ಯದಲ್ಲೇ ಬೋಧಿಸಿದ ಮಂತ್ರ. ಪುರುಷರೆಲ್ಲರು ಇದನ್ನು ಸರಿಯಾಗಿ ಅರಿತರಾದರೆ ಇಡೀ ವಿಶ್ವವೇ ವಿಶ್ವಮಾತೆಯ ದೇಗುಲವಾಗುತ್ತದೆ. ಅಮ್ಮನ ಬಸಿರೆ ಬ್ರಹ್ಮಾಂಡ, ಅವಳೇ

ಈ ವಿಶ್ವದ ಬೃಹತ್‌ಚೇತನ. ಮನುಷ್ಯರೂಪಿ ಈ ದೇಹ ಪಿಂಡಾಂಡ ಸೀಮಿತವಾದ ಮಿತಿಗಳಿಂದ ಕೂಡಿದ್ದು. ಅವಳು ಪಿಂಡಾಂಡರೂಪಿಯಾಗಿದ್ದರೂ ನಿಜದಲ್ಲಿ ಬ್ರಹ್ಮಾಂಡರೂಪಿ. ಎಲ್ಲ ಮಾನವರ ಜನ್ಮದಾತೆಯಾದ ತಾಯಿಯೇ ವಿಶ್ವವ್ಯಾಪಿಯಾದ ಮಹತ್ತು ಹಾಗೂ ಬೃಹತ್ತು. ಗಿಡದಿಂದ ತೆನೆ ಅಥವಾ ಕಾಯಿ ಹೊಮ್ಮುವ ಎಳೆಯ ಅಂಕುರವೇ ಕುಸುರು. ಅದೇ ರೀತಿ ತಾಯಿ ಎಂಬ ಬ್ರಹ್ಮಾಂಡದಿಂದ ಹುಟ್ಟಿದ ಮಗು ಕುಸುರು. ಅದಕ್ಕೆ ಬೆಲೆಯಿದೆ. ತಾಯಿ ತನ್ನ ಕುಡಿಯಾದ ಶಿಶುವಿಗೆ ಅದರ ಮೌಲ್ಯವನ್ನು ಸದಾ ಕಲಿಸುವಳು. ಈ ಬಗೆಯ ನನ್ನ ಚಿಂತನೆಯಲ್ಲಿ ತಾಯಿ ಮತ್ತು ಮಗುವಿನ ವಿಶ್ವವ್ಯಾಪಕ ಘನತೆಯಿದೆ, ಮಾತೃವಾತ್ಸಲ್ಯವಿದೆ. ಅದನ್ನು ಆತ್ಮಗತ ಮಾಡಿಕೊಂಡು ನಾನು ಸಾಗುತ್ತಿದ್ದೇನೆ.

***

ಬ್ರಹ್ಮಾಂಡವೆಂಬುದು ಆಕಾಶ, ವಾಯು, ಅಗ್ನಿ, ಜಲ ಮತ್ತು ಪೃಥ್ವಿ ಎಂಬ ಪಂಚಮಹಾಭೂತಗಳ ಸಂಯೋಗದಿಂದ ನಿರ್ಮಾಣವಾಗಿದೆ. ಆ ಪಂಚಮಹಾಭೂತಗಳಿಂದಲೆ ಮಾನವ ಶರೀರವೂ ರೂಪು ತಳೆಯುತ್ತದೆ. ಬ್ರಹ್ಮಾಂಡದ ಪಂಚಭೂತಗಳು ಭೂಮರೂಪದಲ್ಲಿದ್ದರೆ ಅವೇ ಅಣುರೂಪಿಯಾಗಿ ಈ ದೇಹದಲ್ಲಿ ಸೇರಿಕೊಳ್ಳುತ್ತವೆ. ಬ್ರಹ್ಮಾಂಡದ ಒಂದು ಅಣುರೂಪವೇ ಈ ದೇಹ, ಇದೇ ಪಿಂಡಾಂಡ.

* * * * * *

## ಪುರುಷಾರ್ಥಕೆತ್ತಿದ ಮೂರ್ತಿಯದು

**ಆಕೆಯ ತಾಯಿಯು ಸ್ತ್ರೀ ಮಾತ್ರ ಛಾಯೆಯು/ ಪುರುಷಾರ್ಥ ಕೆತ್ತಿದ ಮೂರ್ತಿಯದು. (7–1,2)**

*ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬಿವು ಚತುರ್ವಿಧ ಪುರುಷಾರ್ಥಗಳು. ಆಕೆ ಅವುಗಳನ್ನು ಒಂದಕ್ಕೊಂದಕ್ಕೆ ವಿರೋಧವಾಗದಂತೆ ಬದುಕಿನಲ್ಲಿ ಸಾಧಿಸುವ ಮೂರ್ತಿಯಾಗಿದ್ದಳು.

ನನ್ನ ತಾಯಿಯ ತಾಯಿ ಗೋದುಬಾಯಿಯೇ ನಮ್ಮ ಕುಟುಂಬದ ಆಧಾರಸ್ತಂಭ. ಅವಳಿಂದಲೇ ನನ್ನವ್ವ, ನಾನು, ನನ್ನ ತಮ್ಮಂದಿರು ಉಳಿದು ಬೆಳೆದೆವು. ಅವಳು ಸ್ತ್ರೀ ರೂಪದಲ್ಲಿದ್ದರೂ ಪುರುಷನ ಪೌರುಷವನ್ನು ಪಡೆದಿದ್ದಳು. ಅವಳ ತುದಿಮೂಗು ಧೈರ್ಯವನ್ನು ಸಂಕೇತಿಸುವಂತೆ ನೀಳವಾಗಿದ್ದು, ನೋಟವಾದರೋ ಯಾರಿಗೂ ಹೆದರದ ನೇರ ದಿಟ್ಟಿಯಾಗಿತ್ತು. ಹೆಣ್ಣಾಗಿ ಹುಟ್ಟಿದರೂ ಅವಳು ಗಂಡಿನಂತೆ ಬಾಳಿದಳು. ಅವಳ ಮಾತುಗಳಲ್ಲಿ ಉತ್ಸಾಹ, ವೀರ ರಸಗಳು ಅನುಪಮವಾಗಿ ತುಳುಕುತ್ತಿದ್ದವು.

* * * * * *

## ತಂತಿಯಲಿ ನಡೆಸಿದಳು

**ಹುಲಿಹಾಲ ಕುಡಿಸಿದಳು ತಂತಿಯಲಿ ನಡೆಸಿದಳು/ ಸೂಜಿಯ ಮೊನೆಯಲ್ಲಿ ನಿಲಿಸಿದಳು. (8–3, 4)**

* 'ತಂತಿಯಲ್ಲಿ ನಡೆಸಿದಳು', ಎಂಬ ಮಾತು ಸರ್ಕಸ್ಸಿನ ಚಿತ್ರವನ್ನು ನಮ್ಮ ಹೃದಯಕ್ಕೆ ತುಂಬುತ್ತದೆ. ತಂತಿಯ ಮೇಲೆ ನಡೆಯುವಾಗ ಆ ಕಲಾವಿದರು ಏಕಾಗ್ರಮನಸ್ಕರಾಗಿ ತಮ್ಮ ಮನಸ್ಸಿನ ಮತ್ತು ದೇಹದ ಸಮತೋಲನವನ್ನು ಕಾಪಾಡಿಕೊಳ್ಳಬೇಕು. 'ತಂತಿಯಲ್ಲಿ ನಡೆಸುವುದು' ಎಂಬುದು ಒಂದು ನುಡಿಗಟ್ಟೂ ಹೌದು. ಸಂಕೀರ್ಣದಲ್ಲಿ ಮುನ್ನಡೆಸಿಕೊಂಡು ಹೋಗುವುದು ಎಂಬುದೇ ಅದಕ್ಕಿರುವ ಅರ್ಥ.

ನನ್ನ ಅಜ್ಜಿ ಹದಿನೇಳು ಮಕ್ಕಳನ್ನು ಹಡೆದಳು, ಆ ಪೈಕಿ ಒಂದು ಹೆಣ್ಣು ಮಗು ಮಾತ್ರ ಉಳಿಯಿತು. ಅಷ್ಟಾದರೂ ನನ್ನ ಅಜ್ಜಿ ಜಗ್ಗಲಿಲ್ಲ, ಕುಗ್ಗಲಿಲ್ಲ, ಎದೆಗುಂದಲಿಲ್ಲ. ಹಾಗೆ ಉಳಿದುಕೊಂಡ ಒಂದು ಹೆಣ್ಣು ಮಗುವೆ ನನ್ನ ತಾಯಿ ಅಂಬವ್ವ. ಅಂತಹ ಧೀರೆ ನನಗೆ 'ಹುಲಿಹಾಲು ಕುಡಿಸಿದಳು' ಹುಲಿಯಂತಹ ಧೈರ್ಯ ನನ್ನ ರಕ್ತವನ್ನು ಹೊಗುವಂತೆ ಮಾಡಿದಳು. ಅವಳು ನನ್ನನ್ನು 'ತಂತಿಯಲ್ಲಿ ನಡೆಸಿದಳು', ಜೀವನದ ಹೋರಾಟದಲ್ಲಿ ಸಾಹಸ ಪ್ರವೃತ್ತಿಯನ್ನು; ದೇಹ ಮತ್ತು ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡ ಸಮತೋಲನ ತಪ್ಪದ ಜೀವನ ವಿಧಾನವನ್ನು ಕಲಿಸಿದಳು. 'ಸೂಜಿಯ ಮೊನೆಯಲ್ಲಿ ನಿಲಿಸಿದಳು' ಕಷ್ಟದಲ್ಲಿ, ನೋವಿನಲ್ಲಿ ಯಾತನೆಯಲ್ಲಿ ಹೇಗೆ ಬದುಕಬೇಕೆಂಬ ಶಿಸ್ತನ್ನು ಕಲಿಸಿದಳು. ನಾನು ನನ್ನ ಅಜ್ಜಿಯನ್ನು ನೆನೆಯುತ್ತಿದ್ದಂತೆ ಪ್ರತಿಮೆಗಳು ಭಾವಸಂಜೀವಿನಿಯಂತೆ ಮುನ್ನುಗ್ಗಿ ಬರುತ್ತವೆ.

## ಸದ್ಗುರುನಾಥ, ಆರ್ತಾರ್ತಿಪ್ರೀತ

**ಸದ್ಗುರುನಾಥನ, ಶ್ರದ್ಧಾರ್ಥಜಾತನ/ ಆರ್ತಾರ್ತಿಪ್ರೀತನ ನೆನೆಸಿದಳು./ ಗಾಳಿಯಲಿ ನಡೆದಾಡಿ ಮೇಲು ಚಿಕ್ಕೆಯ ನೋಡಿ/ ಕೊನೆಗಳಿಗೆ ಗೆದ್ದಳು ಎನಿಸಿದಳು. (10–1 ರಿಂದ 4)**

: ಶ್ರೀ ಚಿದಂಬರ ಸ್ವಾಮಿ.

: ಗುರು ಗೋಂದಾವಲೇಕರ ಮಹಾರಾಜರು.

*ನನ್ನ ತಾಯಿ ಮತ್ತು ಅಜ್ಜಿಗೆ ಸದ್ಗುರುನಾಥ ಶ್ರೀ ಚಿದಂಬರಸ್ವಾಮಿಗಳ ಬಗ್ಗೆ ಅಪಾರವಾದ ಭಕ್ತಿ, ಶ್ರದ್ಧೆ. ಶ್ರದ್ಧೆ ಇದ್ದವರ ಅಂತರಂಗದಲ್ಲಿ ಗುರು ಹುಟ್ಟುತ್ತಾನೆ ಎಂಬಂತೆ ಅವರ ಮನದಲ್ಲಿ ಆ ಗುರು ಸದಾ ವಾಸಿಸುತ್ತಿದ್ದನು. ಯಾವ ಭಕ್ತರು ಹಂಬಲಿಸುತ್ತ ಪ್ರೀತಿಯಿಂದ ನೋಡುತ್ತಾರೊ ಅಂತಹವರನ್ನು ಗುರು ಪ್ರೀತಿಸುತ್ತಾನೆ. ಹಾಗಾಗಿ 'ಆರ್ತಾರ್ತಿಪ್ರೀತ' ಗುರು ಗೊಂದಾವಲೇಕರ ಮಹಾರಾಜರನ್ನು ನನ್ನ ಅಜ್ಜಿ ಸದಾ ನೆನೆಯುತ್ತಿದ್ದಳು. ಅನನ್ಯ

ಗುರುಭಕ್ತಳಾದ ಆಕೆ ನನ್ನ ಪ್ರಕಾರ 'ಗಾಳಿಯಲ್ಲಿ ನಡೆದಾಡಿ ಮೇಲು ಚಿಕ್ಕೆಯ ನೋಡಿ/ ಕೊನೆಗಳಿಗೆ ಗೆದ್ದಳು ಎನಿಸಿದಳು.'

ನೆಲದಲ್ಲಿ ಹೆಜ್ಜೆಯೂರದೆ, ಬದುಕಿನ ಭಾವಗಳಿಗೆ ಅಂಟಿಕೊಳ್ಳದೆ, ಆಗಸದ ನಕ್ಷತ್ರಗಳನ್ನೇ ನೋಡುತ್ತ; ಪರಮಾರ್ಥವನ್ನು ಹಂಬಲಿಸುತ್ತ ತನ್ನ ಬದುಕನ್ನು ಸಾರ್ಥಕ ಪಡಿಸಿಕೊಂಡಳು. ಅವಳು ಶಾಂತಿಪೂರ್ಣವಾದ ಮರಣವನ್ನು ತನ್ನದಾಗಿಸಿಕೊಂಡು ಗೆದ್ದಳು. 'ಶರಣರ ಗುಣವನ್ನು ಮರಣದಲ್ಲಿ ನೋಡು' ಎಂಬಂತಿತ್ತು ಅವಳ ಅಂತ್ಯಕಾಲ.

***

## ಗಾಳಿಯಲಿ ನಡೆದಾಡಿ ಮೇಲು ಚಿಕ್ಕೆಯ ನೋಡಿ

*ಇದೊಂದು ಬೇಂದ್ರೆಯವರ ಅಧ್ಯಾತ್ಮ ಸಾಧನಾಫಲವಾದ ಪ್ರತಿಮಾ ಸೃಷ್ಟಿ. ಈ ಪಾರ್ಥಿವ ಲೋಕದ ನೂರೆಂಟು ನೋವು ಯಾತನೆಯ ಸ್ತರವನ್ನು ಬಿಟ್ಟು ಅಲೌಕಿಕದ ಪರಮಾರ್ಥ ಸ್ತರಕ್ಕೆ ಏರುತ್ತ ಆದರ್ಶದ ಚಿಕ್ಕೆಯನ್ನು ನೋಡಿ ಉನ್ಮುಖವಾಗಿ ಹಿರಿದಾದುದಕ್ಕೆ ಹಂಬಲಿಸಿ ಗೆದ್ದೆ ಎಂಬುದು. ಅದು ಗೋದೂಬಾಯಿಯ ಬಗೆಗಿನ ಆಧ್ಯಾತ್ಮ ದರ್ಶನ. ಅದು ನಮ್ಮ ಭಾರತೀಯ ಸಂಸ್ಕೃತಿಯಲ್ಲಿಯ ವೃದ್ಧೆಯಾದವರ ಜೀವನ ರೀತಿ.

* * * * * *

## ಸಥಿ

**ರಾಮನ ತಾರಕ ಮಂತ್ರವ ಸತಿಯಲ್ಲಿ/ ಸಥಿಯಿಂದ ಎದೆಯಲ್ಲಿ ನಾಟಿದರು.(15–3, 4)**

: ಸಲಿಗೆ; ಆತ್ಮೀಯತೆ; ಅಧಿಕಾರ.

*ನನ್ನ ತಂದೆಯವರು ನನ್ನ ತಾಯಿಗೆ ಸಥಿಯಿಂದ ಅಂದರೆ ಮಮತೆ, ಆತ್ಮೀಯತೆಯಿಂದ ಅಧಿಕಾರಯುತವಾಗಿ 'ಶ್ರೀರಾಮ ಜಯರಾಮ ಜಯಜಯರಾಮ' ಎಂಬ ತಾರಕಮಂತ್ರವನ್ನು ಬೋಧಿಸಿದರು. ಅವರು ತರುಣರಾಗಿದ್ದಾಗಲೆ ಅತ್ಯಂತ ಕರುಣಾಜನಕವೆಂಬಂತೆ ಈ ಜೀವನಾರಣ್ಯವನ್ನು ದಾಟಿ ತೀರಿ ಹೊರಟುಹೋದರು. ಸಾವು ಅವರನ್ನು ನುಂಗಿ ಬಿಟ್ಟಿತು.

'ಕೃಷ್ಣ ದೀಕ್ಷಿತರ ಮದುವೆಗಾಗಿಯೇ ನಮ್ಮ ಅಜ್ಜಿ ನನ್ನ ತಾಯಿ ತಂದೆಗಳೊಡನೆ ಬಾಲಕನಾದ ನನ್ನನ್ನು ಕರೆದುಕೊಂಡು ನರಗುಂದಕ್ಕೆ ಮೊಟ್ಟ ಮೊದಲನೆಯಸಲ 1902–1903 ರಲ್ಲಿ ಹೋದಳು. ಆಗ ಅಲ್ಲಿ ಗೋಂದಾವಲೇಕರ ಮಹಾರಾಜರು ಬಂದಿದ್ದರು. ಆಗ ನಮ್ಮ ತಂದೆ ತಮ್ಮ ತಂದೆಯ ಹೇಳಿಕೆಯಂತೆ ಮಹಾರಾಜರಿಂದ ಜಪದೀಕ್ಷೆಯ ಅನುಗ್ರಹ ಪಡೆದು, ನಮ್ಮ ತಾಯಿಗೆ ಗುರುಗಳಾಗಿ ಅತ್ಯಂತ ಮಮತೆಯಿಂದ ಜಪಕೊಟ್ಟರು' (ಆತ್ಮಕಥನದಿಂದ)

ಮಂತ್ರೋಪದೇಶವನ್ನು ಪತಿಯಿಂದಲೇ ಸತಿಯಾದವಳು ಪಡೆದುಕೊಳ್ಳಬೇಕೆಂಬ ನಿಯಮವಿದೆ. ಅದಕ್ಕಾಗಿ ಗೋಂದಾವಲೇಕರ ಮಹಾರಾಜರಿಂದ ಮೊದಲು ಬೇಂದ್ರೆಯವರ ತಂದೆಯವರು ಆ ರಾಮತಾರಕ ಮಂತ್ರವನ್ನು ಪಡೆದುಕೊಂಡು ಅದನ್ನು ಅವರ ಮಡದಿಗೆ ಬೋಧಿಸಿದರು.

* * * * * *

**ಸಹಾನುಭೂತಿ**

**ಭವದ ಬೆನ್ನಲಿ ಅನುಭವ ಬಂತು, ಅನುಭಾವ/ ಭಾವದ ತಳಿಯಲ್ಲಿ ಮೈದೋರಿತು/ ಸಹಾನುಭೂತಿಗೆ ಸ್ವಾನುಭೂತಿಯು ಕೂಡಿ/ ಉದ್ಭವ ವಿಭೂತಿಯು ಒಡಮೂಡಿತು.(20-1 ರಿಂದ 4)**

*ಸಹ+ಅನುಭೂತಿ ಎಂಬಂತೆ ಇಲ್ಲಿ ಪದ ವಿಭಾಗ ಮಾಡಬೇಕು. ಸಹಚರ ಎಂಬ ಶಬ್ದದಂತೆ ಇಲ್ಲಿ ಸಹಾನುಭೂತಿ. ಜೀವನ ಪಥದಲ್ಲಿ ನಮ್ಮೊಡನೆ ಉದ್ದಕ್ಕೂ ನಡೆದು ಬರುವ ಅನುಭೂತಿಯೆ ಸಹಾನುಭೂತಿ. ಕವಿಯಾದವನು ಅವುಗಳನ್ನು ಅಲ್ಲಿಂದಲ್ಲಿಗೆ ಬಿಟ್ಟು ಬಿಡದೆ ಒಳಕ್ಕೆ ತೆಗೆದುಕೊಂಡು ಕಾವ್ಯಮಾರ್ಗಕ್ಕೆ ಒಗ್ಗುವಂತೆ ತನ್ನದೇ ಅನುಭೂತಿಯನ್ನಾಗಿ ಮಾಡಿಕೊಳ್ಳುತ್ತಾನೆ. ಆಗ ಲೋಕಾನುಭೂತಿಯು ಕಾವ್ಯಾನುಭೂತಿಯಾಗುತ್ತದೆ.

ಬದುಕಿನ ಮಾರ್ಗದಲ್ಲಿ ಮುನ್ನಡೆಯುತ್ತಿದ್ದಂತೆಲ್ಲ, ಆ ಬದುಕಿನ ಬೆನ್ನ ಹಿಂದೆಯೇ, ಸಮೃದ್ಧವಾದ ಅನುಭವಗಳು ನನ್ನ ಕೈವಶವಾದವು. ನಾನು ಆ ಅನುಭವಗಳನ್ನೆಲ್ಲ ಅನುಭಾವವಾಗಿಸಿಕೊಂಡೆ. ಭಾವದ ತಳಿಯಿಂದಲೇ ಆ ಅನುಭವ ತಾನೇ ತಾನಾಗಿ ರೂಪುಗೊಂಡಿತು. ಲೋಕಾನುಭೂತಿಯು ಸ್ವಾನುಭೂತಿಯಾಯಿತು. ನಾನು ಲೋಕದಲ್ಲಿ ನಡೆಯುವಾಗ ನನ್ನೊಡನೆ ನಡೆದುಬಂದ ಅನುಭೂತಿಯೆಲ್ಲ ಹೃದಯದ ಆಳಕ್ಕೆ ಇಳಿದು ಸ್ವ ಅನುಭೂತಿಯಾಯಿತು. ಅವುಗಳನ್ನೆಲ್ಲ ನಾನು ಜೀರ್ಣಿಸಿಕೊಂಡು ನನ್ನದಾಗಿಸಿಕೊಂಡೆ. ಆಗಲೇ ಅದು ಕಾವ್ಯವಾಗಿ ತನ್ನಷ್ಟಕ್ಕೆ ತಾನೆ ರೂಪುತಾಳಿತು. ಹೆಚ್ಚೇನು ಹೇಳಲಿ ಅದು ಉದ್ಭವ ವಿಭೂತಿಯಾಗಿ ಅನಾಯಾಸವಾಗಿ ನನ್ನ ಒಡಲಿಂದ ಹುಟ್ಟಿಬಂದಿತು.

That if poertry comes not as naturally as the leaves to a tree it had better not come at all. – John Keats.

* * * * * *

## ಹುಣಸಿಯ ಪಕ್ಕ, ಭಿಂಗರಿ, ಬೊಗರಿ

**ಹುಣಸಿಯ ಪಕ್ಕದ ಭಿಂಗರಿಗಿಂತಲು/ ಸಿಂಗಾರಿ ಅಹುದಹುದೀ ಬೊಗರಿಯು/ ಕೈ ಇಲ್ಲಾ, ಕಾಲೊಂದೆ, ಗೋಣೆಲ್ಲಾ, ತಲೆಯಷ್ಟೇ/ ಟೊಂಕದ ಬಿಂಕವೆ, ಮೈ ದುಂಡಗೆ! (27–1 ರಿಂದ 4).**

: ಹುಣಸಿಯ ಬೀಜ

: ಒಡೆದ ಮಣ್ಣಿನ ಕೊಡ ಅಥವಾ ಮಡಕೆಯ ಅಂಚಿಗೆ ಒಂದು ತೂತು ಹಾಕಿ ಅದರೊಳಕ್ಕೆ ಒಂದು ಗಣಿಕೆ (ಗಟ್ಟಿಯಾದ ಕಡ್ಡಿ) ಸಿಕ್ಕಿಸಿ ಮೇಲ್ಭಾಗವನ್ನು ಎರಡು ಅಂಗೈಗಳ ಮಧ್ಯೆ ಸಿಕ್ಕಿಸಿಕೊಂಡು ತಿರುಗಿಸಿ ಬಿಟ್ಟರೆ ಅದರ ತಿರುಗಣಿಯಲ್ಲೇ ಒಂದು ಸೊಗಸಿದೆ. ಅಂತಹ ಆಟಿಕೆ ಭಿಂಗರಿ. ಅದೇ ತರಹದ್ದು ಹುಣಸಿಯ ಪಕ್ಕದ ಭಿಂಗರಿ.

: ಬೆಳವಲದ ಬುಗುರಿಗಳು: ಅ) ಹರಿಹರ – ಹುಬ್ಬಳ್ಳಿ ಪ್ರಾಂತದ ನಾಡಿನಲ್ಲಿ ಮಕ್ಕಳಿಗೆ ಆಕರ್ಷಣೀಯವಾಗುವಂತೆ ಮರದಿಂದ ತಯಾರಿಸಿ, ಬಣ್ಣ ಬಳಿದು ಮಾರಾಟ ಮಾಡುವ ಬುಗುರಿಗಳು. ಆ) ಬೆಳವಲಕಾಯಿಯಿಂದ ಮಾಡಿದ ಬುಗುರಿಯನ್ನೂ ಆ ಕಾಲದಲ್ಲಿ ಆಡುತ್ತಿದ್ದರು. ಬೆಳವಲಕಾಯಿಯೆಂದರೆ ಬೇಲದ ಕಾಯಿ ಎಂದರ್ಥ. ಅದಕ್ಕೆ ಮಧ್ಯದಲ್ಲಿ ರಂಧ್ರ ಕೊರೆದು ಅಲ್ಲಿಂದ ಬುಡದ ವರೆಗೂ ಬರುವಂತೆ ಸೂಕ್ತವಾದ, ಗಟ್ಟಿಯಾದ ಬಿದಿರಕಡ್ಡಿಯನ್ನು ಪೋಣಿಸಬೇಕು. ತಲೆಯ ಭಾಗದಲ್ಲಿ ಎದ್ದುಕೊಂಡಿರುವ ಬಿದಿರು ಕಡ್ಡಿಯ ಭಾಗಕ್ಕೆ ದಾರವನ್ನು ಸುತ್ತಿ ವಿಶಿಷ್ಟವಾದ ಬಗೆಯಲ್ಲಿ ಎಳೆದು ಬಿಟ್ಟರೆ ಅದು ತನ್ನಿಂದ ತಾನೆ ತಿರುಗುತ್ತದೆ.

*ನಾವು ಹುಣಸೆಯ ಬೀಜವನ್ನು ಸಂಗ್ರಹಿಸಿಕೊಂಡು ಅವುಗಳಲ್ಲಿ ಉತ್ತಮವಾಗಿರುವಂತಹವನ್ನು ಒಡೆದು ದಳಗಳಾಗಿ ಮಾಡಿಕೊಳ್ಳುತ್ತಿದ್ದೆವು. ಆ ದಳಗಳಿಗೆ ಗೊಬ್ಬಳಿಮುಳ್ಳು, ನೇಗಿಲು ಮುಳ್ಳುಗಳನ್ನು ಭೇದಿಸಿ ಹೊರಬರುವಂತೆ ಚುಚ್ಚಿ ಭಿಂಗರಿಗಳಾಗಿಸುತ್ತಿದ್ದೆವು. ತರುವಾಯ ಹೆಬ್ಬೆರಳು ಮತ್ತು ತೋರುಬೆರೆಳುಗಳಿಂದ ಅವುಗಳನ್ನು ತಿರುಗುಸಿ ನೆಲದ ಮೇಲೆ ಬಿಡುತ್ತಿದ್ದೆವು. ಅವು ತಿರುಗುವುದನ್ನು ನೋಡಿ ಸಂತೋಷಪಡುತ್ತಿದ್ದೆವು. ಆದರೆ, ಬೆಳವಲದ ಬುಗುರಿಗಳು ನಮ್ಮ ಕೈಗೆ ಸಿಕ್ಕಿದ ಮೇಲೆ ಹುಣಸಿಯ ಪಕ್ಕದ ಭಿಂಗರಿಗಿಂತಲೂ ಬಣ್ಣಬಣ್ಣದ ಈ ಬುಗುರಿಗಳು ನಮಗೆ ತುಂಬಾ ಆಕರ್ಷಣೆಯನ್ನೊಡ್ಡಿದವು. ಈ ಬುಗುರಿಗಳಾದರೊ ದುಂಡಾದ ಮೈ, ತಲೆಯ ಭಾಗ ಎಷ್ಟೊ ಅಷ್ಟೆ, ಕೈಯಿಲ್ಲ, ಕಂಠವಿಲ್ಲ, ಮೊಳೆಯ ರೂಪದಲ್ಲಿ ಇವುಗಳಿಗೆ ಒಂಟಿ ಕಾಲು. ಅವು ತಿರುತಿರುಗಿ ಇನ್ನೇನು ನೆಲಕ್ಕೆ ಉರುಳುತ್ತಿವೆ ಎನ್ನುವಾಗ ಒನೆದಾಡುತ್ತ ತಮ್ಮ ಸೊಂಟದ ಬಿಂಕವನ್ನು ತೋರಿಸುತ್ತಿದ್ದ ಪರಿ ಎಷ್ಟು ವರ್ಣಿಸಿದರೂ ಕಡಿಮೆಯೆ.

* * * * * *

## ರವದಿ

**ಪೊಳ್ಳಿನ ಸುಳ್ಳಿನ ಸುಳಿವ ಗಾಳಿಯ ನಾದ/ ಕಿವಿಮಂತ್ರ, ಸವಿಮಂತ್ರ ಓದುವುದು/ ರವದೀಗು ಭವದೀಕ್ಷೆ, ಕನಸು ಕಡ್ಡಿಗು ಇದೆ/ ಆವೇದ ಸಂವೇದ ಊದುವುದು (28–1 ರಿಂದ 4)**

: ಜೋಳದ ದಂಟು.

*ನಾನು ಬಾಲ್ಯದಲ್ಲಿ ಪೊಳ್ಳಾದ ರವದಿಗಳನ್ನೆ ಕೊಳಲಾಗಿ ಮಾಡಿಕೊಂಡು ಊದುತ್ತಿದ್ದೆ. ಶೂನ್ಯದ ಪೊಳ್ಳಿನ ಮೂಲಕ ಸುಳಿದು ಬರುತ್ತಿದ್ದ ಗಾಳಿ ಹೊಮ್ಮಿಸುತ್ತಿದ್ದ ನಾದ ನನ್ನ ಕಿವಿಗೆ ಯಾವುದೋ ಸವಿಯಾದ ಮಂತ್ರವನ್ನು ಓದಿದಂತೆ ಆಗುತ್ತಿತ್ತು. ಅದು ವೇದಮಂತ್ರವೊ ಎಂಬಂತೆ ನಾನು ಪುಳಕಗೊಳ್ಳುತ್ತಿದ್ದೆ. ಆ ನಾದದಲ್ಲಿ ಅಂತಹ ಸಂವೇದನೆ ಇರುತ್ತಿತ್ತು. ಜಡವೂ ಚೈತನ್ಯವಾಗಿ ರವದಿಗೂ ಭವದೀಕ್ಷೆ ಲಭ್ಯವಾಗುತ್ತಿತ್ತು. 'ಭೌತದ್ರವ್ಯವೂ ಪರಬ್ರಹ್ಮ ಸ್ವರೂಪವನ್ನು ಪ್ರಕಟಿಸುವುದು'– ಶ್ರೀ ಅರವಿಂದರು. ಬುಗುರಿಯು ಕನಸು ಕಾಣುತ್ತಿದ್ದಂತೆ ಈ ರವದಿಯೂ ಕನಸು ಕಾಣುತ್ತಿದೆ ಎಂದು ತಿಳಿದುಕೊಳ್ಳುತ್ತಿದ್ದೆ.

* * * * * *

## ಗ್ರಹಮಾಲಾ ಸಂಗೀತ

**ಗ್ರಹಮಾಲಾ ಸಂಗೀತ ಅದರೆಲ್ಲಾ ಇಂಗೀತ/ ಭವದಲಭಂಗೀತ ಬಿನ್ನಾಣವು/ ಆಟವು ನಡೆದಿದೆ ಪಾಠವಿದ್ದಂತೆಯೆ/ ಉದ್ಭವದ ಅಕ್ಷರಗಳು ಕಾಣವು (29–1 ರಿಂದ 4)**

: 'ಗ್ರಹಮಾಲಾ ಸಂಗೀತ' (music of the spheres)ವು ಸೂಕ್ಷ್ಮಸಂವೇದನೆ ಇದ್ದವರಿಗೆ ಮಾತ್ರವೇ ಕೇಳಿಸುತ್ತದೆ ಎಂಬ ಭಾವನೆ ಇದೆ. ನಿಶ್ಯಬ್ದ ಪ್ರಕೃತಿಯಲ್ಲಿ ಮೌನಸಂಗೀತವಿರುತ್ತದೆ. ಅಂತಹ ಗ್ರಹಮಾಲ ಸಂಗೀತದ ಇಂಗಿತವು ಈ ಬುಗುರಿಯಲ್ಲಿದೆ.

*ರವದಿಯಿಂದ ಹೊಮ್ಮುತ್ತಿದ್ದ ವೇದಸಂಗೀತವು ಇಡೀ ಬ್ರಹ್ಮಾಂಡವನ್ನೇ, ಗ್ರಹಮಾಲೆಗಳನ್ನೇ ವ್ಯಾಪಿಸಿಕೊಂಡ ಸಂಗೀತ ಎಂಬ ಇಂಗಿತವನ್ನು ನಾನು ಅರಿಯುತ್ತಿದ್ದೆ. ಆ ಸಂಗೀತದ ಬಿನ್ನಾಣವು ಅಭಂಗಿತವಾದುದು, ಸಾರೋದ್ಧಾರವಾದುದು, ಕಡಿವಡೆಯದಿರುವಂತದು ಎಂದೆಲ್ಲಾ ತೋರುತ್ತಿತ್ತು. ಬುಗುರಿಯಾಟದ ಜೊತೆಗೆ, ರವದಿಯೂದುವ ಆಟದ ಜೊತೆಗೆ ನನಗೆ ಕಾವ್ಯಪಾಠದ ಬೋಧನೆಯೂ ಆಗುತ್ತಿತ್ತು. ಅಕ್ಷರ ರೂಪಕ್ಕೆ ತರುವುದು ಮಾತ್ರವೇ ಬಾಕಿಯಿತ್ತು. ಕಾವ್ಯವು ತನ್ನ ಅಭಿವ್ಯಕ್ತಿಗಾಗಿ ಶಬ್ದ ಮಾಧ್ಯಮವನ್ನು ಆಗಲೇ ಕಂಡುಕೊಳ್ಳತೊಡಗಿತ್ತು.

* * * * * *

**ಮಾವಿನ ಪೀಪಿ**

**ತೆಯ್ದದ್ದೆ ತೆಯ್ದದ್ದು ತುಟಿಗೆರೆ ಬಿಚ್ಚಿರಲು/ ಉಸಿರೆ ಆಗುವದಣ್ಣ ಸಾಕಾರವು!/ ಯಾವ ತಿಪ್ಪೆಯ ಬಸಿರ ಬಿರಕಿಗೆ ಮೂಡಿತ್ತೊ/ ಮಾವಿನ ಪೀಪಿಯ ಆಕಾರವು? (30-1 ರಿಂದ 4)**

*ರವದಿಯನ್ನು ಸಂಗೀತವನ್ನು ಹೊಮ್ಮಿಸುವ ವಾದ್ಯವಾಗಿ ರೂಪಿಸಿಕೊಳ್ಳುತ್ತಿದ್ದಂತೆಯೆ ಮೊಳಕೆ ಒಡೆದ ಮಾವಿನ ಓಟೆಗಳಿಂದಲೂ ಪೀಪಿಗಳನ್ನು ಮಾಡಿಕೊಳ್ಳುತ್ತಿದ್ದೆವು. ಮಾವಿನ ಓಟೆಗಳು ತಿಪ್ಪೆಯಲ್ಲಿ ಬಿದ್ದಾಗ ಅವು ಮೊಳಕೆಯೊಡೆಯುತ್ತಿದ್ದವು. ಆಗ ನಾವು ಅವುಗಳನ್ನೆತ್ತಿಕೊಂಡು ಅವುಗಳ ಮೇಲಿನ ಗೊರಟೆಯನ್ನು ಕಿತ್ತೆಸೆದು ಒಳಗಿನ ಮೊಳಕೆಯೊಡೆದ ಬೀಜವನ್ನು ತೆಗೆದುಕೊಳ್ಳುತ್ತಿದ್ದೆವು. ಮೊಳಕೆಯೊಡೆದ ತುದಿಯನ್ನು ಬಿಟ್ಟು ಇನ್ನೊಂದು ತುದಿಯ ಮೃದುಭಾಗವನ್ನು ಸ್ವಲ್ಪ ಓರೆಯಾಗಿ ಕಲ್ಲಿಗೆ ತಿಕ್ಕುತ್ತಿದ್ದೆವು. ಹಾಗೆ ತಿಕ್ಕಿದಾಗ ಆ ಬೀಜವು ತುಟಿಗಳನ್ನು ತೆರೆದುಕೊಂಡಂತೆ ಬಿರುಕು ಬಿಡುತ್ತಿದ್ದವು.

ತುಟಿ ತೆರೆದುಕೊಂಡ ಭಾಗವನ್ನು ನಾವು ಬಾಯಿಗಿಟ್ಟುಕೊಂಡು ಪೀಪಿಯಂತೆ ಊದಿ ವಿಲಕ್ಷಣವಾದ ನಾದವನ್ನು ಹೊಮ್ಮಿಸಿ ಆನಂದರಸದಲ್ಲಿ ಮುಳುಗುತ್ತಿದ್ದೆವು. ನಮ್ಮ ಉಸಿರಿಗೆ ನಾದದ ಸಾಕಾರರೂಪವನ್ನು ಕೊಡುತ್ತಿದ್ದೆವು.

***

ಹಳತಾದುದರ ಸಾರಸರ್ವಸ್ವವೇ ಗೊಬ್ಬರ. ಅದರಲ್ಲಿ ಹೊಮ್ಮುವುದೇ ನವನವೀನ ಮೊಳಕೆ. ಹಳತರ ಸಾರವಿಲ್ಲದೆ ಹೊಸತರ ಸೃಷ್ಟಿಯಿಲ್ಲ. ಹಳೆಯ ಪರಂಪರೆ ಅರಿತು ಅದರ ಸತ್ತ್ವದ ಸಾರದಲ್ಲಿ ನವನವೀನವಾಗುವುದೇ ಹೊಸ ದೃಷ್ಟಿ, ಹೊಸ ಹೊಳಹು. ಹಳತರಿಂದ ಹೊಮ್ಮಿದ್ದೆ ಹೊಸ ಮುಖ, ಹೊಸ ಹಾಡು, ಹೊಸ ಜೀವನೋತ್ಸಾಹ. ಕಾವ್ಯದ ಅಂತಸ್ಸತ್ವವಾದ ರಸತತ್ತ್ವ ಹೊರಹೊಮ್ಮಿ ರಸಾನಂದಕ್ಕೆ ಕೊಂಡೊಯ್ಯುವುದು ನಾದಮಾಧುರ್ಯ. ಆ ನಾದದ ಅನುಭವ ಬಾಲ್ಯದಲ್ಲಿ ಬೇಂದ್ರೆಯವರಿಗೆ ದೊರೆತುದು ತಿಪ್ಪೆಯ ಮಾವಿನಲ್ಲಿ. ತಿಪ್ಪೆಯ ಸಾರಸರ್ವಸ್ವ ಹೀರಿಕೊಂಡು ಚಿಗುರೊಡೆದ ಮಾವು ತನ್ನೊಡಲಿನಲ್ಲಿ ನಾದಮಾಧುರ್ಯವನ್ನು ಹೊಂದಿರುತ್ತದೆ. ಅದು ರಸಿಕರ ಮೃದುಭಾವದ ನಲ್ಮೆಯ ಸ್ಪರ್ಶಕ್ಕೆ, ತೇಯ್ದ ಭಾವಕ್ಕೆ ತುಟಿಯೊಡೆದು ರಸಿಕರ ಉಸಿರಿಗೆ ನಾದವಾಗುತ್ತದೆ. ಹಿರಿದಾದ ಸಂಸ್ಕೃತಿಯ ನಾದ ಸಂಗೀತದ ಮೂಲ ಸೆಲೆ ರವದಿ, ತಿಪ್ಪೆಯ ಮಾವು. ತ್ಯಾಜ್ಯವೆನಿಸಿಕೊಂಡರೂ ಅವು ಅಪ್ರಯೋಜಕವಾದವುಗಳಲ್ಲ. ಅವುಗಳಲ್ಲೂ ಜೀವಸ್ಪಂದನವಿದೆ. ಆದರೆ, ಅವುಗಳನ್ನು ಸ್ಪರ್ಶಿಸಿ ಮುದ್ದಿಸುವ ರಸಿಕನಷ್ಟೇ ಬೇಕು ಎಂಬ ಅನ್ಯಾದೃಶ ಚಿಂತನೆ ಬೇಂದ್ರೆಯವರ ಈ ಕಾವ್ಯ ರೂಪಕಗಳಲ್ಲಿದೆ.

ರವದಿ, ಕಡ್ಡಿ ಮತ್ತು ತಿಪ್ಪೆಯ ಬಸುರಿನ ಮಾವುಗಳು ಬೇಂದ್ರೆಯವರ ಕೈಯಲ್ಲಿ ಸಾಧಾರಣದಿಂದ ಅಸಾಧಾರಣ ಅಂತಸ್ತಿಗೆ ಏರುತ್ತಿದ್ದವು. ಇದು ಬಡತನದ ಮುಕ್ತಬಾಲ್ಯದ ಬೇಂದ್ರೆ ಮನಸ್ಸು ಶುದ್ಧ ಅಶುದ್ಧ, ನೀಚ ಉಚ್ಚ. ಬಡತನ ಸಿರಿತನ, ವೇಶ್ಯೆ ಗೃಹಿಣಿ, ಶೂದ್ರ

ಬ್ರಾಹ್ಮಣಗಳ ಸೋಂಕಿಗೆ ಒಳಗಾಗದೆ ಎಲ್ಲವನ್ನು ಗ್ರಹಿಸುತ್ತ ಅದರ ಗುಣಗೌರವವನ್ನು ತನ್ನದಾಗಿಸಿಕೊಂಡದ್ದರ ಪ್ರತೀಕವಾಗಿದೆ.

* * * * * *

## ಡೀಕಾಟ, ಗೇಣು

**ತಾಕುವ ತೇಕುವ ನೂಕಾಟ ಡೀಕಾಟ/ ತಪ್ಪುಂಟೆ ಎಲ್ಲಾರೆ ಗೇಣಾಗಿಯೇ/ ಗುಂಡಿನಾಟಗಳಲ್ಲಿ ಗುರಿಯಿಟ್ಟು ಹೊಡೆವಾಗ/ ವೇಧದ ಪಾಠವು ತಾನಾಗಿಯೆ. (37– 1 ರಿಂದ 4)**

: ಡೀಕಾಟ:– ಗೋಲಿಗುಂಡನ್ನು ಆಡುವಾಗ ಸೋತವನು ಕೈಯನ್ನು ಮುಷ್ಟಿಮಾಡಿ ನೆಲದ ಮೇಲಿದ್ದ ಗುಂಡನ್ನು ಮಡಿಚಿದ ಬೆರಳುಗಳಿಂದ ನೂಕಿಸುವ ಕ್ರಿಯೆಗೆ 'ಡೀಕುವುದು' ಎಂದರ್ಥ. ಈ ಕ್ರಿಯೆ ತೊಂದರೆದಾಯಕ. ಡೀಕುವಾಗ ನೆಲಕ್ಕೆ ಬೆರಳು ಹಚ್ಚಿ ಚರ್ಮ ಕಿತ್ತು ನೋವಾಗುವುದುಂಟು. 'ನಾನು ಬಿಡ್ತೇನೇನು ಕೊನೆತನಕ ಡೀಕಿಸ್ತೇನೆ' ಎಂದು ಗೆದ್ದವರು ಹಮ್ಮಿನಿಂದ ನುಡಿಯುತ್ತಾರೆ.

: ಗೇಣು:– ಚಾಚಿದ ಅಂಗೈಯ ಹೆಬ್ಬೆರಳು ಕಿರುಬೆರಳುಗಳ ನಡುವಿನ ಅಂತರ.

*ನಮ್ಮ ಬಾಲ್ಯದ ಆಟಗಳಲ್ಲಿ ಬುಗುರಿಯಾಟ ಗಾಳಿಪಟದಾಟಗಳಂತೆಯೇ ಗೋಲಿಯಾಟವೂ ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು. ಗೋಲಿಯಾಟವೆಂದ ಮೇಲೆ ಪರಸ್ಪರ ಗೋಲಿಗಳನ್ನು ಹೊಡೆದು ತಾಕಿಸಬೇಕಾಗಿತ್ತು. ಅಲ್ಲಿಯೂ ಸೋಲು ಗೆಲುವುಗಳಿದ್ದವು. ಆ ಸೋಲು ಗೆಲುವುಗಳ ಫಲವಾಗಿ ತೇಕುವ, ನೂಕುವ, ಡೀಕುವ ಶ್ರಮಗಳಿಗೆ ಗುರಿಯಾಗಬೇಕಾಗುತ್ತಿತ್ತು. ಗೋಲಿಗಳ ನಡುವಣ ದೂರವನ್ನು ನಾವು ನಾವೇ ಅಳೆಯಬೇಕಾಗುತ್ತಿತ್ತು. ನಾವೇ ಗೇಣುಹಾಕಿ ಅಳತೆ ಮಾಡುವವರೆಂದ ಮೇಲೆ ಅದರಲ್ಲಿ ಹೆಚ್ಚು ಕಡಿಮೆಯಾಗುವುದು ಹೇಗೆ ಸಾಧ್ಯ? ಈ ಗೋಲಿ ಗುಂಡುಗಳ ಆಟದಲ್ಲಿ ಗುರಿಗಾರಿಕೆಗೆ ತುಂಬಾ ಪ್ರಾಶಸ್ತ್ಯವಿತ್ತು. ಹಾಗೆ ಗುರಿಯಿಟ್ಟು ಹೊಡೆಯುವುದನ್ನು ಬಾಲ್ಯದಲ್ಲಿಯೇ ಪರಿಷ್ಕಾರವಾಗಿ ಕಲಿತುದೇ ಕಾರಣವಾಗಿ ಮುಂದೆ ಯಾವುದೇ ಸಮಸ್ಯೆಯನ್ನಾಗಲೀ, ಯಾವುದೇ ರಹಸ್ಯವನ್ನಾಗಲೀ ಭೇದಿಸಿ ಒಳನುಗ್ಗುವ ಅದ್ವಿತೀಯವಾದ ಪಾಠವನ್ನು ನಿರಾಯಾಸವಾಗಿ ಕಲಿತುದಾಯಿತು.

* * * * * *

## ಕವಡುಗಂಟು

**ಕಣ್ಣು ಮುಚ್ಚಣಿಕೆಗೂ ತುಡುಗ ಅಡಗುವಿಕೆಗು/ ಎಂದಿನಿಂದಲು ಕವಡುಗಂಟು ಇದೆ./ ಬೆರಕಿ ಮಂದಿಗು ಮತ್ತೆ ಚದುರ ಚಮ್ಮಾರರಿಗು/ ಹೊಲೆ–ನೆಲೆಗಾಣದ ನಂಟು ಇದೆ. (41– 1 ರಿಂದ 4)**

: ಮೋಸ; ವಂಚನೆ

*ಕಣ್ಣುಮುಚ್ಚಾಲೆ ಆಟವಾಡುತ್ತಾ ಬಚ್ಚಿಟ್ಟುಕೊಳ್ಳುವ ರೀತಿ ಈ ಜಗತ್ತಿನಲ್ಲಿದೆ. ಕಣ್ಣುಮುಚ್ಚಾಲೆ ಮತ್ತು ಕಳ್ಳತನ ಮಾಡಿ ಅಡಗಿಕೊಳ್ಳುವುದು ಜೊತೆಯಲ್ಲಿಯೇ ಸಾಗಿರುವ ಮೋಸ ಎಂದು, ಜಗದ ವೈಚಿತ್ರ್ಯವನ್ನು ಬೇಂದ್ರೆ ಚಿತ್ರಿಸಿದ್ದಾರೆ.

ಬೆರಕಿ ಎನಿಸಿಕೊಂಡ ಬುದ್ಧಿವಂತ ಮೇಲ್ವರ್ಗದವರಿಗೂ, ಚತುರರೆನಿಸಿಕೊಂಡ ಕೆಳವರ್ಗದವರಿಗೂ ಮೂಲ ಒಂದೆ. ಎಲ್ಲರೂ ಹುಟ್ಟಿರುವುದು ಹೊಲೆಯ ಸ್ಥಾನದಲ್ಲಿಯೇ. ಹಾಗಾಗಿ, ಜಗದ ಎಲ್ಲ ವರ್ಗದ ಜನರಲ್ಲಿ 'ಹೊಲೆ ನೆಲೆಗಾಣದ ನಂಟು ಇದೆ,'

* * * * * *

## ಹಾರಿಮದ್ದು

**ಹಾರೀಮದ್ದಿನ ಸದ್ದು ಕೇಳಿದ್ದೆ ಅದುರಿದ್ದು/ ತಲೆ ಹಾಕಿತ್ತಾಗೀಗ ಸತ್ತಹೆಣಾ/ 'ಸತ್ತರೆ ಸತ್ತಿನೀ' ಇದ್ದವರ ಮೆರವಣಿಗೆ/ ಹಲಿಗೆ ಸೊಲ್ಲಿಸುತಿತ್ತು ಕೊನೆಯರಿಣಾ. (50–1 ರಿಂದ 4)**

*ಅವರ ಬಾಲ್ಯಕಾಲದಲ್ಲಿ ಹೆಣದ ಮೆರವಣಿಗೆಯಲ್ಲಿ ಒಂದು ಉದ್ದ ಕೊಳವೆಯಲ್ಲಿ ಮದ್ದು ಇಟ್ಟು, ಅದರಲ್ಲಿ ಗಟ್ಟಿಗಡಾರಿಯನ್ನು ತುರುಕಿ, ಜೋರಾಗಿ ನೆಲಕ್ಕೆ ಬಡಿದು ಪಟಾಕಿ ಹಾರಿಸುತ್ತಿದ್ದರು. ಶವವನ್ನು ಕುಳ್ಳಿರಿಸಿ ಮೆರವಣಿಗೆ ಮಾಡುವ ವೀರಶೈವ ಜನಾಂಗದ ಹೆಣ ಹೊತ್ತವರು ಆ ಪಟಾಕಿ ಸದ್ದಿಗೆ ಅದುರಿದಾಗ ಅವರು ಹೊತ್ತಿದ್ದ ಹೆಣವು 'ತಲೆಹಾಕಿತ್ತಾಗೀಗ!'. ಅದು ಸೂಕ್ಷ್ಮಗ್ರಾಹಿಯಾದ ಸಮುದಾಯದ ಬಾಲಕ ಬೇಂದ್ರೆ ಹೆಣದ ಮೆರವಣಿಗೆಯಲ್ಲಿ ಕುಣಿಯುತ್ತ ನಲಿದ ಅನುಭವ.

ಹಲಗೆ ನಮ್ಮ ಗುಂಗಿಗೆ ತಕ್ಕಂತೆ ನಾದ ಹೊಮ್ಮಿಸುವ ಗ್ರಾಮ್ಯದ ಗಮ್ಮತ್ತಿನ ಚರ್ಮವಾದ್ಯ. ಶವದ ಮೆರವಣಿಗೆಯಲ್ಲಿ ಸಾಗುವ ಜನರ ಉತ್ಸಾಹ ಕಂಡು 'ಸತ್ತರೆ ಸತ್ತಿನೀ, ಸತ್ತರೆ ಸತ್ತಿನೀ' ಎಂದು ಹಲಗೆ ನುಡಿಯುತ್ತಿದೆಯೆಂಬ ಬೇಂದ್ರೆ ಮನಸ್ಸಿನ ವಾಸ್ತವಿಕ ಅತಿ ಸೂಕ್ಷ್ಮದ್ದಾಗಿದೆ. ಇದು ಇದ್ದವರ ಮೆರವಣಿಗೆ ಎಂಬುದು ಜೀವಿಸಿರುವವರ ಎಂಬ ಅರ್ಥದ ಜೊತೆಗೆ ಹಣವುಳ್ಳವರ ಎಂಬ ಅರ್ಥವನ್ನು ಇದು ವ್ಯಂಜಿಸುತ್ತದೆ. ಅಂತಹವರ ಮೆರವಣಿಗೆಗೆ ಹಲಗೆ–ತಮಟೆ ಕೊನೆಯ ಋಣವನ್ನು ಸೊಲ್ಲಿಸುತ್ತಿತ್ತು. (ಸೊಲ್ಲಿಸು ಎಂಬ ಪದವು ಸಲ್ಲಿಸು ಎಂಬ ಅರ್ಥದ ಜೊತೆಗೆ ಸೊಲ್ಲು = ಮಾತು ಆಗಿತ್ತು ಎಂಬ ಅರ್ಥವನ್ನು ಹೊಂದಿದೆ.)

* * * * * *

**ಕಲ್ಮಾ, ಪೆಂಡಾರಿ ಸಾಬ**

**ಊದುಬತ್ತಿಯ ಕಂಪು ಕಲ್ಮಾದ ದನಿ ಇಂಪು/ ಕಳಿಸಲು ಬರುತ್ತಿತ್ತು ಹತ್ತು ಜನ/ ಹ್ಯಾಂಗಾರೆ ಸತ್ತರು ಶೃಂಗಾರವಾಗಿದ್ದ/ ಪೆಂಡಾರಿ ಸಾಬನು ಕೊನೆಯ ದಿನ. (52–1 ರಿಂದ 4)**

*ಬೇಂದ್ರೆಯವರಿಗೆ ಮುಸಲ್ಮಾನರ ಹೆಣದ ಮೆರವಣಿಗೆ ಬಗ್ಗೆ ತುಂಬಾ ಗೌರವ. ತಡೆರಹಿತ ಬಾಲ್ಯದಲ್ಲಿ ಕಂಪಿಗೆ, ಸತ್ಯಕ್ಕೆ, ಆನಂದಕ್ಕೆ ಮನಸ್ಸು ತೆರೆದುಕೊಂಡಿರುತ್ತದೆ. ಅಲ್ಲಿ ಜಾತಿ, ಮತ, ಪಂಥದ ಕೆಸರು ಅಂಟಿರುವುದಿಲ್ಲ. ಅಂತಹ ಬಾಲ್ಯದ ಅನುಭವವನ್ನು ಬೇಂದ್ರೆಯವರು ಇಳಿವಯಸ್ಸಿನಲ್ಲಿ ಮೆಲುಕು ಹಾಕುವಾಗ ಚಿತ್ರಿಸಿರುವುದು ಮುಸಲ್ಮಾನರಲ್ಲಿ ತುಂಬಾ ಹಿಂದುಳಿದ ಪಂಗಡದವರೆಂದು ಕರೆಯುವ ಪೆಂಡಾರಿ ಸಾಬನ ಮೆರವಣಿಗೆ. ಅದು ಬೇಂದ್ರೆಯವರು ಸಾಧಾರಣರಲ್ಲಿ ಸಾಧಾರಣರನ್ನು ಪ್ರೀತಿಸುತ್ತಿದ್ದುದರ ದ್ಯೋತಕ. ಅವನ ಘೋರ ಬಡತನ, ಅಸಹಾಯಕ ಸ್ಥಿತಿಯ ಜೀವನರೀತಿ ಸಾವಿಗೆ ಕಾರಣವಾಗಿರುವುದನ್ನು ಬೇಂದ್ರೆಯವರು 'ಹ್ಯಾಂಗಾರೆ ಸತ್ತರು ಶೃಂಗಾರವಾಗಿದ್ದ ಪೆಂಡಾರಿ ಸಾಬನು ಕೊನೆಯ ದಿನ' ಎಂದಿದ್ದಾರೆ. 'ಹ್ಯಾಂಗಾರೆ ಸತ್ತರು' ಎಂಬ ನುಡಿಯಲ್ಲಿ ಅವನ ಜೀವನದ ಎಲ್ಲಾ ದೈನ್ಯತಾಭಾವವು ಮಡುಗಟ್ಟಿದೆ. ಮುಸಲ್ಮಾನ ಜನಾಂಗದಲ್ಲಿ ಸಾವಿಗೆ ಹೆಗಲು ಕೊಡುವ ಜನಾಂಗಪ್ರೀತಿಯು ಶವಶೃಂಗಾರ ಮೆರವಣಿಗೆಯನ್ನು ಗೌರವದಿಂದ ಕಂಡಿದೆ. ಬೇಂದ್ರೆ ಬಾಲಮನಸ್ಸು ಊದುಬತ್ತಿ ಮತ್ತು ಅತ್ತರಿನ ಕಂಪಿಗೆ, ಕಲ್ಮಾದ ಇಂಪಿಗೆ ಸೋತಿದೆ. ಕಲ್ಮಾ ಅಲ್ಲಾನ ಕುರಿತ ಪ್ರಾರ್ಥನೆ. ಅಳುವ ಅಬ್ಬರವಿಲ್ಲದೆ ಅಂತ್ಯಯಾತ್ರೆಯನ್ನು ಶಾಂತವಾಗಿ ನಡೆಸುವ ಆ ಜನಾಂಗದಲ್ಲಿ ಕುರಾನ್‌ನ ಕಲ್ಮಾ ಪಠಿಸುತ್ತಾ ಸಾಗುತ್ತಾರೆ.

* * * * * *

**ಕಾರಹುಣ್ಣಿಮೆ**

**ಕರಿಯಿತ್ತು, ಮೆರಿಯಿತ್ತು ಕಾರಹುಣ್ಣಿವಿ ಇತ್ತು/ ಯಾರ ಹಂಗೂ ಇಲ್ಲ ಎರಡು ದಿನಾ/ ಎತ್ತಿನ, ಕುದುರಿಯ ಕೊರಳಿಗೂ ಹೂ ಹಾರ/ ಯಾರು ಅಂದಾರಣ್ಣಾ ಇವಕೆ ದನಾ?. (55–1 ರಿಂದ 4)**

: ಕಾರಹುಣ್ಣಿಮೆ:– ಜ್ಯೇಷ್ಠಮಾಸದಲ್ಲಿ ಬರುವ ಹುಣ್ಣಿಮೆ, ಮಳೆಗಾಲದಲ್ಲಿ ಬರುವ ಪೂರ್ಣಿಮೆ; ಉತ್ತರ ಕರ್ನಾಟಕದಲ್ಲಿ ಕಾರಹುಣ್ಣಿಮೆಯು ದನಗಳ ಹಬ್ಬ. ಕಾರಹುಣ್ಣಿಮೆ ಕರಕೊಂಡು ಬಂತು. ಉಗಾದಿ ಉಡುಗಿಕೊಂಡು ಹೋಯಿತು (ಗಾದೆ); ಕಾರಹುಣ್ಣಿಮೆ ಕರಿಹರಿದು, ಮಣ್ಣೆತ್ತು ನೀರನ್ನು ಕುಡಿದವು; ಮನೆಯಲ್ಲಿರುವ ಹಸು... ಇವನ್ನೆಲ್ಲಾ ಶಾಸ್ತ್ರೀಯವಾಗಿ ಪೂಜಿಸುವುದು ಕಾರಹುಣ್ಣಿಮೆಯ ದಿನ.

ಜ್ಯೇಷ್ಠಮಾಸದ ಹುಣ್ಣಿಮೆಯನ್ನು ಕಾರಹುಣ್ಣಿಮೆ ಎಂದು ಆಚರಿಸುತ್ತಾರೆ. ಕೃಷಿಕರು ಇದನ್ನು ಮಳೆಗಾಲದ ಆರಂಭವೆಂದು ತಮ್ಮ ಊರುಗಳನ್ನು ಸಿಂಗರಿಸುತ್ತಾರೆ.

ಎತ್ತುಗಳನ್ನು ಅಲಂಕರಿಸಿ ಮೆರವಣಿಗೆ ಹೊರಡಿಸಿ ಕರಿ ಹಾಯಲು ಓಡಿಸುತ್ತಾರೆ. ಈ ದಿನದಿಂದೇ ವೈದಿಕರಲ್ಲಿ ಮುತ್ತೈದೆಯರು ತಮ್ಮ ಪತಿಗೆ ದೀರ್ಘ ಆಯುಸ್ಸನ್ನು ಕೋರಿ ವಟಸಾವಿತ್ರಿ ವ್ರತವನ್ನು ಆಚರಿಸುವರು. ಜ್ಯೇಷ್ಠಮಾಸದ ಅಮಾವಾಸ್ಯೆಯ ದಿನ ಮಣ್ಣೆತ್ತಿನ ಅಮಾವಾಸ್ಯೆ ಎಂದು ಆಚರಿಸುವರು. ಸಂಪ್ರದಾಯ ಇದ್ದವರು ಈ ದಿನ ಮಣ್ಣಿನ ಒಂದು ಜೊತೆ ಎತ್ತುಗಳನ್ನು ಇಟ್ಟು ಪೂಜಿಸುವರು. (ಭಾರತದ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ, ಗುಲಬರ್ಗಾ ಜಿಲ್ಲೆ, ಕರ್ನಾಟಕ ರಾಜ್ಯ ಪ್ರಕಟಣೆ, ಬೆಂಗಳೂರು. 1997. ಪು. 170)

*ಜೇಷ್ಠ ಮಾಸದ ಹುಣ್ಣಿಮೆಯನ್ನು ನಮ್ಮ ಗ್ರಾಮದ ಜನ ಕಾರ ಹುಣ್ಣಿಮೆ ಎಂದು ಸಂಭ್ರಮಪೂರ್ಣ ಹಬ್ಬವಾಗಿ ಆಚರಿಸುತ್ತಿದ್ದರು. ಆ ಹೊತ್ತಿನಲ್ಲಿ ಎರಡು ದಿನಗಳ ಕಾಲ ಅದೇನು ಕೋಲಾಹಲವೋ! ಅದೇನು ಸಂಭ್ರಮವೋ! ಆಗ ಯಾರನ್ನೂ ಹಿಡಿದು ನಿಲ್ಲಿಸುವುದು ಸಾಧ್ಯವೇ ಇರಲಿಲ್ಲ. ಯಾರ ಹಂಗೂ ಇಲ್ಲದೆ ತಮತಮಗೆ ಪ್ರತಿಯೊಬ್ಬರೂ ಅತಿಶಯವಾದ ಮನೋಲ್ಲಾಸವನ್ನು ಅನುಭವಿಸುತ್ತಿದ್ದರು. ಎತ್ತುಗಳನ್ನು ತೊಳೆದು ಅವುಗಳನ್ನು ಸಿಂಗರಿಸಿ ಹೂ ಹಾರಗಳನ್ನು ಕೊರಳಿಗೆ ಹಾಕಿ ಅವುಗಳನ್ನು ಕರಿಹಾಯಲು ಓಡಿಸುತ್ತಿದ್ದರು. ಆ ಹೊತ್ತಿನ ದನಗಳ ಮೆರೆದಾಟ ಅಪೂರ್ವವಾಗಿರುತ್ತಿತ್ತು. ಎತ್ತೆನ್ನದೆ, ಕುದುರೆ ಎನ್ನದೆ ಮಿಕ್ಕ ಪಶುಗಳನ್ನೆಲ್ಲ ನೋಡುವವರ ಮನಸ್ಸು ಈ ಜೀವಗಳನ್ನು ದನ, ಪಶು ಎಂದು ಎಲ್ಲಿಯಾದರೂ ಹೇಳುವುದುಂಟೆ; ಅವು ಮನುಷ್ಯರಿಗೇನು ಕಡಿಮೆಯಾಗಿವೆ ಎಂಬ ಭಾವನೆ ಉಕ್ಕಿ ಬರುತ್ತಿತ್ತು.

'ಆತ್ಮವತ್ ಸರ್ವಭೂತಾನಿ'– ಸಮಸ್ತ ಭೂತ ಕೋಟಿಗಳನ್ನು ತನ್ನಂತೆ ನೋಡಬೇಕು ಎಂಬುದು ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ಹೇಳುವ ಮಾತು. ಅದನ್ನು ಹೃತ್ಪೂರ್ವಕವಾಗಿ ಸ್ವೀಕರಿಸಿದ ವ್ಯಕ್ತಿಗೆ ಎತ್ತು, ಕುದುರೆ ಮೊದಲಾದ ಪ್ರಾಣಿಗಳಲ್ಲೂ ತನ್ನ ಸ್ವರೂಪವೇ ಪ್ರತಿಬಿಂಬಿಸುತ್ತದೆ.

* * * * * *

## ಒಂಬತ್ತು ಗೆರಿ ದೇವರು

**'ಹಿಲ್ಲಾಲ ಬೆಳಕಿನಲಿ ಹೊಳಿಗೆ ಹೊರಟರು ಚೆಂದ/ ನಮ್ಮೋಣಿ ಒಂಬತ್ತು ಗೆರಿ ದೇವರು,/ ಬಾಜಾರದಲಿ ಹಾಯ್ಸಿ ಪಾಜಾರಗಟ್ಟಿಗೆ/ ಹೊಯ್ದಾಡಿ ಕಳಸದ ರಥ ಹೊರಟರು' (58– 1 ರಿಂದ 4)**

*ಬೇಂದ್ರೆಯವರು ತಮ್ಮ 'ಆತ್ಮಕಥನ'ದಲ್ಲಿ ಹೇಳಿರುವ 'ಒಂಭತ್ತು–ಗೆರೆ ದೇವರು ನಮ್ಮ ಕೂಟಿನಲ್ಲಿ ನಿಂತೇ ಎಲ್ಲರ ನಮಸ್ಕಾರ ಪಡೆಯುತ್ತಿತ್ತು.' ಎಂಬುದು ಬಾಬಯ್ಯನನ್ನು ಕುರಿತದ್ದು. ಧಾರವಾಡದ ಲಕ್ಷ್ಮೀನಾರಾಯಣ ಗುಡಿಯ ಹತ್ತಿರ ಕರ್ನಾಟಕ ಹೈಸ್ಕೂಲಿನ ಸಮೀಪದ ಮಸೀದಿ ಅತ್ಯಂತ ದೊಡ್ಡದು. ಅಲ್ಲಿ ಒಂಬತ್ತು ಗೆರೆಗಳ ಪಂಜಾ ಇತ್ತು.

ಹಾಗೆಯೇ ಅಲ್ಲಿ ರಥದಂತೆ ಕಾಣುವ ಕಳಸ ಸಹ ಇರುವ ಡೋಲಿ ಇತ್ತು. ಅದನ್ನು ಹೊಯ್ಯುವಾಗ 'ಏ ಹುಸೇನಿ ಬಲೀದಲಿಯೋ ಯಾರೆ ಸುಲ್ತಾನ ಅಲ್ಬಿದಾ' ಎಂದು ಹಾಡುತ್ತಿದ್ದರು. ಮುಸಲ್ಮಾನರು ಸಾಮಾನ್ಯವಾಗಿ ಬಾಬಯ್ಯನ ಮೆರವಣಿಗೆಯಲ್ಲಿ ಒಯ್ಯುವ ದೇವರ ಪ್ರತೀಕವು ಒಂದು ಹಸ್ತ. ಅಂದರೆ ಐದು ಗೆರೆಗಳ ದೇವರು. ಆದರೆ ಧಾರವಾಡದ ಆ ಮಸೀದಿಯ ಮೆರವಣಿಗೆ ದೇವರ ಪ್ರತೀಕಕ್ಕೆ ಒಂಭತ್ತು ಗೆರೆ ಇತ್ತು.

ಕಾಮನಕಟ್ಟೆಯ ಓಣಿಯಲ್ಲಿ ಒಂಭತ್ತು ಗೆರಿಯ ದೇವರು ಹಿಲಾಲು ಬೆಳಕಿನಲ್ಲಿ ಹೊಳೆಗೆ ಹೊರಟರೆ ಆ ವೈಭವ ನೋಡುವುದೇ ಒಂದು ಆನಂದ. ಆ ಚಂದದ ಮೊಹರಂ ಮೆರವಣಿಗೆ ಕೊನೆಯ ದಿನ ಬಾಜಾರ ಬೀದಿ ಹಾಯ್ದು ಹೊಳೆಗೆ ಹೋಗಲೆಂದು ಪಾಜಾಗಟ್ಟಿಯಾಗಿದ್ದ ನುಚ್ಚಂಬಲಿ ಬಾವಿಗೆ ಹೋಗಿ, ದೇವರನ್ನು ತೊಳೆದು 'ಅಲ್ಬಿದಾಹೋ, ಅಲ್ಬಿದಾ ಹಸನ ಹುಸೇನಿ, ಎಂದು ಹಾಡುತ್ತಾ ಬರುತ್ತಿದ್ದುದನ್ನು ಬೇಂದ್ರೆ ನೆನೆದಿದ್ದಾರೆ. ಹಿಂದೂ ಮುಸ್ಲಿಮ್ ಭೇದವಿಲ್ಲದ ಬಾಲ್ಯದ ದೈವಾರಾಧನೆಯಲ್ಲಿ ತೋಯ್ದು, ಆನಂದ ಆಹ್ಲಾದದ ಬೆಳಕನ್ನು ಉಂಡಿದ್ದಾರೆ.

* * * * * *

## ಗೋಪು, ಅನು

**ಕರುಳಿನ ಹೆಳಲಿಗೆ ಕಾಲಾಗಿ ನಿಂತಾರ/ ಹೆಣಿಗೆ ಗೋಪಿಗೆ ಇಲ್ಲಾ ತುದಿಯ ಅನು/ ಕಣ್ಮುಚ್ಚಿಕೊಂಡೇನೆ; ಗುರಿ ಕಾಣಬೇಕಣ್ಣಾ!/ ಈ ಮತ್ಸ್ಯ ಭೇದಕೆ ಮೈತ್ರಿ ಧನು. (62–1 ರಿಂದ 4)**

: ಹಲವು ಎಳೆಗಳನ್ನು ಕೂಡಿಸಿ ಹೆಣೆದ ದಾರ.

: ಸೊಗಸು, ಹದ, ಮನೋಹರತೆ.

*ಈ ಸ್ನೇಹದ ಕರುಳಿನ ಹೆಳಲಿಗೆ ಮೂರು ಕಾಲಾಗಿ ಶ್ರೀಧರ, ರಾಮ ಮತ್ತು ನರಸಿಂಹರು ನಿಂತರು. 'ಹೆಣಿಗೆ ಗೋಪಿಗೇ ಇಲ್ಲಾ ತುದಿಯ ಅನು'–ಗೋಪಿನ ಹೆಣಿಗೆಯ, ಸ್ನೇಹದ ಈ ನೇಯ್ಗೆಯ ಸೌಂದರ್ಯಕ್ಕೆ ತುದಿಮೊದಲೆಂಬುದೇ ಇಲ್ಲ. ಸ್ನೇಹದ ಈ ಮತ್ಸ್ಯಯಂತ್ರವನ್ನು ಭೇದಿಸುವುದಾದರೂ ಹೇಗೆ? ಅರ್ಜುನನು ಎಣ್ಣೆಯಲ್ಲಿ ಪ್ರತಿಬಿಂಬವನ್ನು ಕಂಡು ಅದನ್ನು ಭೇದಿಸಿದನು. ಆಗ ಸಿಕ್ಕಿದ್ದು ಅವನಿಗೆ ಹೆಣ್ಣು. ಗೆಳೆತನವೆಂಬುದು ದಕ್ಕುವುದು ಹಾಗಲ್ಲ. ಈ ಸ್ನೇಹ ಮತ್ಸ್ಯಯಂತ್ರವನ್ನು ಕಣ್ಮುಚ್ಚಿಕೊಂಡೇ ಭೇದಿಸಬೇಕು. ಕಣ್ಮುಚ್ಚಿಕೊಂಡೇ ಗುರಿ ಕಾಣಬೇಕು. ಅದಕ್ಕಾಗಿ ಮೈತ್ರಿಯ ಧನುವನ್ನು ಸದಾಕಾಲ ಹೆದೆ ಏರಿಸಿಕೊಂಡೇ ಇರಬೇಕು. ಗೆಳೆತನವೆಂಬುದು ಬಹಿರಂಗ ವ್ಯಾಪಾರವಲ್ಲ; ಹೃದಯದ ವ್ಯಾಪಾರ, ಅಂತರಂಗದ ವ್ಯಾಪಾರ.

* * * * * *

## ಪತಿ–ತತ್ತ್ವ, ಪತಿತ–ತ್ವ

**'ಪತಿ–ತತ್ತ್ವ ಇರುವಾಗ ಪತಿತ–ತ್ವ ಎಲ್ಲುಂಟು?/ ಎದ್ದದ್ದು ಬಿದ್ದದ್ದು ಎರಡೂ ಸಮ/ ಭೂಮಿಯ ಮೈ ತುಂಬ ವೈಷಮ್ಯ ದರ್ಶನ/ ಬುದ್ಧಿ ಯೋಗದಲುಂಟು ಸಾಮ್ಯ ಕ್ರಮ'/ (87–1 ರಿಂದ 4)**

* ಪತಿಯೇ ದೇವರು ಎಂಬ ತತ್ತ್ವ ಇರುವಾಗ ಯಾರೇ ಆಗಲಿ ಪತಿತರಾಗುವುದು ಸಾಧ್ಯವಿಲ್ಲ. ಅಂದರೆ ನಮ್ಮಲ್ಲಿ ಸೈದ್ಧಾಂತಿಕ ನಿಲುವು ಇದ್ದಾಗ, ತರತಮ ಭಾವವಿಲ್ಲದಾಗ ಕೆಳಕ್ಕೆ ಬೀಳುವುದು, ಪತಿತರಾಗುವುದು ಸಾಧ್ಯವಿಲ್ಲ. 'ಎದ್ದದ್ದು ಬಿದ್ದದ್ದು ಎರಡೂ ಸಮ'. ಜೀವನದಲ್ಲಿ ಊರ್ಧ್ವಗಾಮಿಯಾದದ್ದು, ಅಧೋಗಾಮಿಯಾದದ್ದು ಅಂದರೆ ಜಯಿಸಿದ್ದು, ಸೋತಿದ್ದು ಎರಡೂ ಸಹ ಸಮವಾಗಿರುತ್ತವೆ. ಸೋಲಿನಲ್ಲಿಯೂ, ಗೆಲುವಿನಲ್ಲಿಯೂ ಅನುಭವ ಎಂಬುದು ಸಮ. ಭೂಮಿಯ ಮೈತುಂಬ ವೈಷಮ್ಯ ದರ್ಶನವಿದೆ. ಅದನ್ನು ದ್ವೇಷದಿಂದ ಕಾಣದೆ ಪ್ರೀತಿಯಿಂದ, ಸಮಾಧಾನದಿಂದ ಕಾಣುವ ಬುದ್ಧಿಯೋಗವನ್ನು ಅಭ್ಯಾಸ ಮಾಡಬೇಕು. ಆಗ ಅದರಲ್ಲಿಯ ಸಾಮ್ಯಕ್ರಮ ಅಂದರೆ ಸಮಾನತೆಯಿಂದ ಹಾಗೂ ಸಾಮರಸ್ಯದಿಂದ ಸ್ಥಿತಪ್ರಜ್ಞನ ನೆಲೆಗೆ ಏರಬೇಕು. ಅದು ಪರಿಪಕ್ವತೆಯಿಂದ ಸಾಧ್ಯ. ವೈಷಮ್ಯವನ್ನು ಕಂಡರೂ–ಬುದ್ಧಿಯೋಗವನ್ನು ರೂಢಿಸಿಕೊಂಡರೆ ಸಮಭಾವದಿಂದ, ಸಮಾಧಾನದಿಂದ ಇರುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳಲು ಸಾಧ್ಯ.

ಪತಿಗೆ ಜಗತ್ಪತಿ ಎಂಬ ಅರ್ಥವಿದ್ದು; ಆ ದೈವದ ಬಗ್ಗೆ ಅಚಲ ನಂಬಿಕೆಯಿದ್ದರೆ ಯಾರೂ ಪತಿತರಾಗಲು ಸಾಧ್ಯವಿಲ್ಲ ಎಂಬ ಚಿಂತನೆಯನ್ನು ಬೇಂದ್ರೆ ನೀಡಿದ್ದಾರೆ.

* * * * * *

## ಪಾಥೇಯ

**'ಸತಿಗುಂಟು ಸಥಿಯೊಂದು, ಪಥಿಕಗೆ ಪಾಥೇಯ/ ಪಾಂಚಭೌತಿಕ ಅನ್ನ ಪರಸಾದವು/ ಬಿಂದು ಚಲಿಸಲು ನಾದ ಕರೆಗಟ್ಟಿ ಕಳೆಗಳು/ ಮೂರ್ತಿಸೆ ಬೇರೇಕೆ ಸಂವಾದವು'. (88– 1 ರಿಂದ 4)**

* ಸತಿಗೆ ತನ್ನ ಜೀವನದ ಜೊತೆಗಾರನಾದ ಪತಿಯ ಮೇಲೆ ಆತ್ಮೀಯವಾದ ಸಲಿಗೆ, ಅಧಿಕಾರವಿದೆ. ಪಥಿಕ ಅಂದರೆ ದಾರಿಹೋಕನಿಗೆ ಪಾಥೇಯ– ಬುತ್ತಿಯ ಜೋಡಿ ಇದೆ. ಈ ಪಂಚಭೂತಗಳಿಂದಾದ ಶರೀರಕ್ಕೆ ಅನ್ನವೆ ದೇವರ ಕೃಪೆಯಿಂದ ಪ್ರಸಾದವಾಗಿ ಜೊತೆಗೂಡಿದೆ. ಪರಮಾತ್ಮನು ನಾದ ಬಿಂದು ಕಲಾತೀತನಾಗಿದ್ದಾನೆ. ನಾದ, ಬಿಂದು, ಕಲೆ ಈ ಮೂರು ಕೂಡಿಕೊಂಡು ಮೂರ್ತಿರೂಪ ತಾಳಿದಾಗ ಬೇರೆ ಸಂವಾದ ಏಕೆ ಬೇಕು? ಅಂದರೆ ಸಂವಾದದ ಅವಶ್ಯಕತೆಯಿಲ್ಲ. ಅದು ಪರಿಪಾಕಕ್ಕೆ ಬಂದ ಸ್ಥಿತಿ ಅನುಭಾವಕ್ಕೆ ಏರಿದ ನೆಲೆ ಎಂದು ಬೇಂದ್ರೆ ಆನುಭಾವಿಕ ಸ್ತರವನ್ನು ಕಾವ್ಯವಾಗಿಸಿದ್ದಾರೆ.

* * * * * *

## ಬೈಚಣ್ಣ

**ದ್ವೈಭಾಷಿಕತನ ಜನತೆಗೆ ಭೂಷಣ/ ದ್ವಿ ಜಿಹ್ವರಾಗುವದಾವ ಗುಣ?/ ಸೀಮಾ ಪ್ರದೇಶವು ಶಿವಲಿಂಗ ಕ್ಷೇತ್ರವು/ ಮರ್ಯಾದೆ ಬಿಟ್ಟರೆ ಭೂತಗಣ. (101–1 ರಿಂದ 4)**

ಕುಣಿವವು ನಡುಹಗಲು, ಅವಕೆ ಹೇಳುವರಾರು?/ ರುದ್ರಭೂಮಿಯ ಒಕ್ಕಲದರ ಜನ/ ಬೈಚಣ್ಣ ನಾಡಿದ ರಾಜಕಾರಣದಲ್ಲಿ/ ಬೇಲಗಾಮಿ ಮನದ ಜಾಣತನ.(102– 1 ರಿಂದ4)

: ಮುಚ್ಚಿದ ಭಾವನೆಗಳ ಅಣ್ಣ (ಬೈಚು=ಮುಚ್ಚಿದ)

* ಮಹಾರಾಷ್ಟ್ರ–ಕರ್ನಾಟಕ ಗಡಿ ಪ್ರದೇಶದಲ್ಲಿರುವ ಜನರು ಎರಡೆರಡು ಭಾಷೆಗಳನ್ನಾಡುವುದೊಂದು ಭೂಷಣವೇ ಸರಿ. ಆದರೆ ವಂಚನೆಯ, ಸುಳ್ಳು ಮಾತಿನ ಎರಡು ನಾಲಗೆಯವರಾಗುವುದರಿಂದ ಆಗುವುದು ಹಾನಿ. ಅದು ಮನುಷ್ಯ ಲಕ್ಷಣ ಅಲ್ಲ. ಗಡಿ ವಿವಾದದ ಈ ಹಿನ್ನೆಲೆಯಲ್ಲಿ ಹಿರಿಯ ನಾಯಕರೆನಿಸಿಕೊಂಡ ಕೆಲವರು ದ್ವಿ ಜಿಹ್ವರಾಗಿಬಿಟ್ಟರು. ಶಿವಲಿಂಗ ಕ್ಷೇತ್ರವೆನಿಸಿದ ಸೊಲ್ಲಾಪುರದವರೆಗೆ ಕನ್ನಡನಾಡೇ ಹಬ್ಬಿಕೊಂಡಿತ್ತು. ಪ್ರೀತಿಯಿಂದ ವಿವಾದವನ್ನು ಬಗೆ ಹರಿಸಿಕೊಳ್ಳುವ ಸಾಧ್ಯತೆಗಳಿದ್ದುವು. ಆದರೆ, ಹಿರಿಯ ನಾಯಕರು ಮೇರೆಮೀರಿ ವರ್ತಿಸಿದ್ದರಿಂದ ಭೂತಗಣಗಳು ಹುಟ್ಟಿಕೊಂಡುಬಿಟ್ಟವು.

ಹೀಗೆ ಭೂತಗಣಗಳನ್ನು ಎಬ್ಬಿಸಿದವರು ರುದ್ರಭೂಮಿಯ ಒಕ್ಕಲಿನ ಜನರೇ ಸರಿ. ಅವರು ಶಾಂತಿಗೆ ಬದಲಾಗಿ ವಿಕಟ ಅಟ್ಟಹಾಸವನ್ನೇ ಹಬ್ಬಿಸಿ ಬಿಟ್ಟರು. ಆ ಭೂತಗಣಗಳಾದರೊ ನಡುಹಗಲಿನಲ್ಲಿ ಕುಣಿಯತೊಡಗಿದವು. ಅವುಗಳಿಗೆ ಯಾರೂ ತಿಳಿವಳಿಕೆ ಹೇಳುವುದು ಸಾಧ್ಯವಾಗಲಿಲ್ಲ. 'ಬೈಚಣ್ಣ ನಾಡಿದ ರಾಜಕಾರಣದಲ್ಲಿ ಬೇಲಗಾಮಿ ಮನದ ಜಾಣತನ'– ರಾಜಕಾರಣದಲ್ಲಿದ್ದವರು ತೆರೆದ ಮನಸ್ಸಿನವರಾಗದೆ, ಮುಚ್ಚಿದ ಭಾವನೆಗಳ ಅಣ್ಣರಾಗಿ ಒಳಗೊಂದು ಹೊರಗೊಂದು ಆಡುತ್ತ ತಾವೇ ಜಾಣರೆಂದು ಭಾವಿಸಿಕೊಂಡಿದ್ದರು, ಅವರ ಮನಸ್ಸಿನ ಜಾಣತನಕ್ಕೆ ಕಡಿವಾಣವೇ ಇಲ್ಲದಂತಾಯಿತು.

---

# ಭಾಗ : ೨ ಮತ್ತೆ ಬಂತು ಶ್ರಾವಣಾ

## ನಾವೂ ನೀವೂ ಇರುವಲ್ಲಿ

### ಪರಾ, ಪರಾತ್‌ಪರಾ, ಮಣಿತ, ವರ

**ಶಿಷ್ಯ ಚರಾ, ಗುರು ಸ್ಥಿರಾ/ ಇಬ್ಬರ ತೂಕಾ ಹಿಡಿಯುವಾಕಿ ಪರಾ/ ನಮ್ಮ ಜೀವನರಂಗಾ ಅಪರಾ/ ಶರಣು ಬಂದೆವೋ ಪರಾತ್‌ಪರಾ/ ತಮ್ಮ ಕುಣಿತಕ್ಕ/ ನಮ್ಮ ಮಣಿತ./ ಕೊಡೋ ವರಾ। ಶ್ರೀ ಗುರುವರಾ. (2–1 ರಿಂದ 7)**

: ಪರಾಶಕ್ತಿ; ಮೂಲಶಕ್ತಿ.

: ಅತ್ಯಂತ ಶ್ರೇಷ್ಠವಾದ; ಪರಮ.

: ಬಾಗುವುದು; ಬಗ್ಗುವುದು.

: (ದೇವರು, ಹಿರಿಯರುಗಳಿಂದ ದೊರಕುವ)ಇಷ್ಟಾರ್ಥದ ಪೂರೈಕೆ; ಅನುಗ್ರಹ.

* 'ಮತ್ತೆ ಶ್ರಾವಣಾ ಬಂತು' ಕವನ ಸಂಕಲನದ ಭಾಗ –2ನ್ನು ಕವಿಯು 'ಮತ್ತೆ ಬಂತು ಶ್ರಾವಣಾ' ಎಂದು ಕರೆದಿದ್ದಾರೆ. ಇದರಲ್ಲಿ ಅದರ ರೌದ್ರಮುಖದ ಧ್ವನಿಯಿದೆ. ಈ ಕವನಗಳನ್ನು ಕುರಿತು ಔದುಂಬರ ಗಾಥಾ ಸಂಪುಟ–3 (ಪುಟ.131) ರಲ್ಲಿ ವಾಮನ ಬೇಂದ್ರೆ ಅವರು ಹೀಗೆ ಹೇಳಿದ್ದಾರೆ: ವಿಶೇಷ – 19–7–1966 ರಿಂದ 16–8–1966 ರವರೆಗೆ ಲಕ್ಷ್ಮೀಬಾಯಿ ಆಸ್ಪತ್ರೆಯಲ್ಲಿ ಅನಾರೋಗ್ಯದಿಂದ ಬಳಲಿ, ಮರಣ ಹೊಂದುವವರೆಗೆ ರಚಿಸಲ್ಪಟ್ಟ ಕವನಗಳನ್ನು 'ಉತ್ತರ ಸಖೀಗೀತ' ಎಂದು ಹೆಸರಿಸಲಾಗಿದೆ.

ಕವನ ರಚನೆ 19–7–1966. ಶಿಷ್ಯ ಗುರು ಇಬ್ಬರ ಬೆಲೆಕಟ್ಟುವವಳು ಪರಾ–ಆದಿಶಕ್ತಿ ದುರ್ಗೆ. 'ನಮ್ಮ ಜೀವನರಂಗಾ ಅಪಾರ'. ನಾವು ಪರಾತ್‌ಪರಕ್ಕೆ ಶರಣು. ಶ್ರೀಗುರುವೆ ನಮ್ಮನ್ನು ಅನುಗ್ರಹಿಸು ಎಂದು ಪ್ರಾರ್ಥಿಸಿದ್ದಾರೆ.

---

## ಕುಡೀಲಿಕ್ಕೆ ಹತ್ತೀದ್ಯಣ್ಣಾ

**ಬೇಬಾಕಿ**

**ಇಲ್ಲಿ ಇಲ್ಲಾ ಬೇಬಾಕೀ/ ಶ್ರೀಗುರೂ ಮಾಡತಾನ ಜ್ವಾಕೀ/ ಏನ ಮಾಡೋದೈತಿ ವಾದಾ ಹಾಕೀ? (5–1, 2, 3)**

: ಬಾಕಿ ಇಲ್ಲದಿರುವಿಕೆ; ಚುಕ್ತಾ.

* ಈ ಬದುಕಿನಲ್ಲಿ ಎಲ್ಲಾ ಚುಕ್ತ ಮಾಡಲು ಸಾಧ್ಯವಿಲ್ಲ. ಬಾಕಿ ಉಳಿದಿರುತ್ತೆ. ವಾದದಿಂದ ಏನೂ ಪ್ರಯೋಜನವಿಲ್ಲ. ಶ್ರೀಗುರು ಕಾಪಾಡುತ್ತಾನೆ.

---

# ದಿನಾ ಒಂದು ಹಾಡು

## ಜಲ್ಪ, ಕಲ್ಪ, ಹಂತಿ

**ನಾನಲ್ಲಾ। ಮಾಡುತಿರುವೆನೋ ಜಲ್ಪಾ। ಕಲ್ಪಾನುಕಲ್ಪಾ/ ನೀನು ಮೀಟಿದ್ಸ ತಂತೀ/ ಅಂತ್ಸದ ಏನಂತೀ, ಏನಂತೀ, ಏನಂತೀ?/ ಬಾಯ್ಬಿಡೋದು ಹ್ಯಾಂಗ್ಸ ನಿಮ್ಮ ಹಂತೀ ॥ಗುರುವೇ॥ (1–1 ರಿಂದ 4)**

: ಅಸ್ಪಷ್ಟವಾದ ಮಾತು, –ನುಡಿ.

: ಬ್ರಹ್ಮನ ಒಂದು ದಿವಸ ಅಥವಾ ಸಹಸ್ರ ಯುಗಗಳ ಕಾಲಾವಧಿ.

: ಹಂತ್ಯ; ಹತ್ತಿರ; ಸಮೀಪ.

ಪತ್ನಿ ಲಕ್ಷ್ಮೀಬಾಯಿ ಆಸ್ಪತ್ರೆಯಲ್ಲಿ ನಿತ್ರಾಣಳಾಗಿರುವಾಗ ಬೇಂದ್ರೆಯವರು ಬರೆದ ಭಜನೆ 'ದಿನಾ ಒಂದು ಹಾಡು' (21–7–1966). ಅವರ ಮನಸ್ಸಿನ ವ್ಯಥೆ, ಅಸಹಾಯಕತೆ ಮತ್ತು ಗುರುವಿಗೆ ಸಮರ್ಪಿಸಿಕೊಂಡು ಧ್ಯಾನಿಸುವ ಭಾವ ಇಲ್ಲಿ ಕಾವ್ಯವಾಗಿ ಹರಿದಿದೆ.

ಗುರುವೇ, ನಾನು ಅಸ್ಪಷ್ಟವಾದ ಮಾತು ಆಡುತ್ತಿಲ್ಲ. ನೀನು ಕಲ್ಪಾನುಕಲ್ಪದಿಂದ ನುಡಿಸುತ್ತಿರುವ ದೇಹವೆಂಬ ಈ ತಂತಿ ಕಷ್ಟಕಾಲದಲ್ಲಿ ಸಾಂತ್ವನದ, ಪೋಷಕ ನುಡಿಗಾಗಿ ಆಶಿಸುತ್ತಿದೆ. ಆದರೆ, ನಿಮ್ಮ ಹತ್ತಿರ ಬಾಯಿಬಿಡುವುದು ಹೇಗೆ?

* * * * * *

## ಕಂತೀ, ಸುಷುಮ್ನ

**ಗಗನದಾಗೆ ನೀ ಕುಂತೀ/ ಬಿಚ್ಚೋದ್ಯಾಂಗ ಇಲ್ಲೀಕಂತೀ/ ಸುಮ್ಮನ್ಸ ಸುಷುಮ್ನನ್ಸ ನಿಂತೀ ॥ಗುರುವೇ॥ (3–1 ರಿಂದ 3)**

: (ಆಲಂ) ಗೊಡ್ಡು ಕಥೆ; ವ್ಯರ್ಥವಾದುದು.

: ಇಡಾ, ಪಿಂಗಳಾ, ಸುಷುಮ್ನಾ ಎಂಬ ದೇಹದ ಪ್ರಮುಖ ನಾಡಿಗಳಲ್ಲಿ ಒಂದು; ಬೆನ್ನುಹುರಿಯಲ್ಲಿರುವ ನಾಡಿ.

*ಗುರುವೇ, ನೀನು ಗಗನದಲ್ಲಿ ಸುಷುಮ್ನಾ ನಾಡಿಯ ಮಿಡಿತದಲ್ಲಿ ಒಂದಾಗಿ ಸಮಾಧಿಸ್ಥನಾಗಿರುವೆ. ನಿನ್ನ ಬಳಿ ನನ್ನ ನೋವಿನ ಕಂತೀ ಬಿಚ್ಚುವುದು ಹೇಗೆ?

---

# ಬರಿ ಕೈ ತಾಳನೋ

**ಅಥ**

**ಜತೆ ಜತೆ ಇರಲಿ ಸೀತಾರಾಮ/ ಉಸಿರಲಿ ನುಡಿಸೋ ಅಥ ಓಂ ನಾಮ/ ರಾಮನಾಮಾಧಾರವು ಪ್ರೇಮ. (3–1, 2, 3)**

: ಪ್ರಾರಂಭ.

ಸೀತಾರಾಮ ಪ್ರೇಮದ ಸಂಕೇತ. ಅವರನ್ನು ಅಥ/ಪ್ರಾರಂಭದ ಓಂ ನಾಮದಂತೆ ಉಸಿರಾಗಿಸಿಕೊಂಡು ಧ್ಯಾನಿಸೋಣ.

---

# ಸಖೀ ನಮ್ಮ ಸಖ್ಯದ ಆಖ್ಯಾನ

**ಆಧಾರ, ಝುರಣಿ, ಸ್ವಾಧಿಷ್ಠಾನ, ಅಜಪಾ ಮಂತ್ರ**

**ನಿರ್ಮಲದ ಆಧಾರ, ಝುರಣೀಯ ಕಣಹಾರ/ ಮಣಿಯ ಸ್ವಾಧಿಷ್ಠಾನದಾ$_s$ ದ್ವಾರಾ/ ಹೃದಯದ ಮಾರುತನ ಅಜಪಾ$_s$ ಜಪಸಾರಾ/ ಬಾರವ್ವ ನೀನೆ ವಾರಂವಾರಾ. (2–1 ರಿಂದ 4)**

: (ಯೋಗಶಾ.) ಪ್ರಸಿದ್ಧವಾದ ನಾಡೀಚಕ್ರ.

: ಬೆಟ್ಟದಲ್ಲಿ ಹರಿದು ಬರುವ ಪ್ರವಾಹ; ಝುರಿ; ಗಿರಿನದಿ.

: (ಯೋಗಶಾ.) ಶರೀರದಲ್ಲಿರುವ ಷಟ್ಚಕ್ರಗಳಲ್ಲಿ ಎರಡನೆಯದು.

: ಸ್ಪಷ್ಟವಾಗಿ ವರ್ಣೋಚ್ಚಾರಣೆ ಮಾಡದಿದ್ದರೂ ಉಚ್ಛ್ವಾಸ ನಿಃಶ್ವಾಸಗಳಿಂದಲೇ ಅಕ್ಷರರೂಪವಾಗಿ ಪರಿಣಮಿಸುವ 'ಹಂಸ' ಮಂತ್ರ.

* ಬೇಂದ್ರೆ ಅವರು ಆದಿಶಕ್ತಿಯನ್ನು ಧ್ಯಾನಯೋಗದಲ್ಲಿ ಆಹ್ವಾನಿಸುವುದು ಇಲ್ಲಿ ಕಾವ್ಯವಾಗಿ ಅಭಿವ್ಯಕ್ತಿಗೊಂಡಿದೆ. ಧ್ಯಾನಯೋಗದ ಸ್ಥಾನಗಳಾದ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹುತ, ವಿಶುದ್ಧಿ, ಆಜ್ಞೇಯದ ಉನ್ಮಿಲನೆಗೆ ಒಳಗಾಗಲು 'ಅಜಪಾಯೋಗ' ಅನುಸಂಧಾನಗೊಂಡಿದೆ.

---

# ಶ್ರೀ ಗುರುವರೇಣ್ಯ

## ಕಾಮದೊಳಗೆ ಹೂತಿದೇ ಪ್ರೇಮಾ

**ಕಾಮದೊಳಗೆ ಹೂತಿದೇ ಪ್ರೇಮಾ/ ಅದಕ್ಕಾವ ನೇಮಾ-ಗೀಮಾ/ ಅದು ಬಾಳೋ ಸೀಮಾ ನಿತ್ಯಾನಂದ ಧಾಮಾ (1-1 ರಿಂದ 3)**

* ಈ ಜಗತ್ತಿನ ಜೀವಜಾಲದಲ್ಲಿ ಕಾಮವಿದೆ. ಕಾಮದಲ್ಲಿಯೇ ಪ್ರೇಮ ಹುದುಗಿ, ಮೊಳಕೆಯೊಡೆದು ಹೂಬಿಟ್ಟಿದೆ. ಅದಕ್ಕೆ ನಿಯಮವೆಂಬುದು ಯಾವುದೂ ಇಲ್ಲ. ಕಾಮ ಎಂಬುವುದು ಆಸೆಯ, ಲೈಂಗಿಕತೆಯ ಮಿತಿಯಲ್ಲಿದ್ದರೂ ಪ್ರೇಮ ಅದನ್ನೆಲ್ಲಾ ಉಲ್ಲಂಘಿಸುತ್ತದೆ. ಅದು ಬಾಳುವ ಪ್ರದೇಶಕ್ಕೆ ಸಂಬಂಧಿಸಿದುದಾಗಿ ಅದೇ ನಿತ್ಯ ಸಂತೋಷದ, ಸದಾ ಆನಂದ ತರುವ ನೆಲೆಯಾಗುತ್ತದೆ. ಅದೇ 'ನಿತ್ಯಾನಂದ ಧಾಮ' ಎಂದು ಬೇಂದ್ರೆ ನುಡಿದಿದ್ದಾರೆ. ಅವರು ನಿಯಮ ಗಿಯಮ ಎಂಬ ಪದಕ್ಕೆ 'ನೇಮ ಗೀಮ' ಎಂಬ ಆಡುನುಡಿಯನ್ನು ಬಳಸಿ ಅದು ಪ್ರೇಮದಲ್ಲಿ ಜಾಡಿಸಿ ಹೋಗುವುದನ್ನು ಧ್ವನಿಸಿದ್ದಾರೆ.

'ಕಾಮದೊಳಗೆ ಹೂತಿದೇ ಪ್ರೇಮಾ/ ಅದಕ್ಕಾವ ನೇಮಾ-ಗೀಮಾ/ ಅದು ಬಾಳೋ ಸೀಮಾ ನಿತ್ಯಾನಂದ ಧಾಮಾ'.

ಬೇಂದ್ರೆಯವರು ಕನ್ನಡ ಕಾವ್ಯದಲ್ಲಿ ನೀಡಿರುವ ಪ್ರೇಮತತ್ತ್ವವು ಜೀವ ಪೋಷಕವಾದ, ಆಹ್ಲಾದಮಯವಾದ 'ಬೆಳಕಿಗಿಂತ ಬೆಳ್ಳಗೆ ಇತ್ತ! ಗಾಳಿಗಿಂತ ತೆಳ್ಳಗೆ ಇತ್ತ' ಎಂಬ ಸತ್ಯಸ್ಪರ್ಶದ ಬೆಳಕು ಗಾಳಿಯಂತಹ ಸಾರ್ವಕಾಲಿಕ ಮೌಲಿಕ ತತ್ತ್ವವಾಗಿದೆ. ಅದು ಪ್ರಕೃತಿಯಲ್ಲಿ ಅತಿ ಸಹಜವಾಗಿದ್ದು ವಿಶೇಷವಾಗಿ ಹೆಣ್ಣು ಗಂಡನ್ನು ಸೆಳೆಯುತ್ತಿದೆ.ಆದರೆ ಅದರ ಪೂರ್ಣ ಪ್ರಯೋಜನಕ್ಕೆ ಭಾರತೀಯ ಕೌಂಟುಬಿಕ ಮಿತಿಯ ಪತಿ ಪತ್ನಿ ಭಾವದ ಎಲ್ಲೆ ಬೇಕು ಎಂಬುದು ಬೇಂದ್ರೆಯವರ ಸ್ಪಷ್ಟ ನಿಲುವಾಗಿದೆ. ಆದ್ದರಿಂದ ವ್ಯಷ್ಟಿಯ ಪ್ರಗತಿ, ಆರೋಗ್ಯ, ವಿಲಾಸ, ವಿಕಾಸವಿದೆ. ಮುಕ್ತ ಕಾಮದ ಫಲ ಏಡ್ಸ್‌ನಲ್ಲಿ ಪರ್ಯವಸಾನವಾಗಿ ಮಾನವನ ಸರ್ವನಾಶವಾಗುತ್ತದೆ. ಅದನ್ನು ಅರಿತ ಬೇಂದ್ರೆಯಂತಹ ಕಾವ್ಯರ್ಷಿಗಳು ತಮ್ಮ ಪತ್ನಿಯನ್ನು ಸಖಿ, ಗೆಳತಿಯೆಂದು ಸಂಬೋಧಿಸಿದ್ದಾರೆ. ದಾಂಪತ್ಯದಲ್ಲಿ ಪಲ್ಲವಿಸಿದ 'ಸಖೀಗೀತ' ಕಾವ್ಯವನ್ನು ನೀಡಿದ್ದಾರೆ. ವಿವಾಹೋತ್ತರ ಪ್ರೇಮ ಸುರಕ್ಷಿತ ಎಂಬುದನ್ನು ಸಮರ್ಥವಾಗಿ ತಿಳಿಸಿದ್ದಾರೆ. ಅವರು ಪ್ರತಿ ಗಂಡಿಗೆ ಹೆಣ್ಣಿನ, ಪ್ರಿಯೆಯ ಆಕಾಂಕ್ಷೆ ತುಂಬಾ ಸಹಜವಾಗಿದೆ ಎಂದು ಹೇಳುತ್ತ, ಅದರ ಅನುಭವವನ್ನು ಅದರ ಔನ್ನತ್ಯದ ನೆಲೆ ಅರಿತು ಆನಂದಿಸಬೇಕು ಎಂದಿದ್ದಾರೆ. ಸಖ ಸಖಿಯರು ಸ್ಫೂರ್ತಿಯ ಸೆಲೆಯಾಗಿ ಸಮಭಾವದಲ್ಲಿ ಬಾಳಬೇಕು ಎಂಬ ಬೇಂದ್ರೆಯವರ ನುಡಿಯಲ್ಲಿ ಸ್ತ್ರೀ ಪುರುಷ ಸಮಾನತೆಯ ತತ್ತ್ವವಿದೆ.

'ಎಂದಿನಿಂದಲೋ ಏನೋ ಒಳಗೊಂದು ಸಖಜೀವ

**ಸಖಿ! ಬ್ಯಾರೆ ಬಾ!' ಎಂದು ಕೂಗುತಿದೆ.**

* *

**ಅನ್ನಕೆ ಬಾಳಾಗಿ ಕಾಮಕೆ ಹೋಳಾಗಿ/ ಮಾನಕೆ ಆಳಾಗಿ ಉಸಿರೆಳೆದುದು/ ಬಾಳಲ್ಲ ಬದುಕಲ್ಲ; ಜೀವ ಜೀವಕೆ ಉ-/ ದ್ದೀಪನವಾದುದೆ ಜೀವನವು.**

**ಅದು ಇದೆ ಎದೆಯಲ್ಲಿ, ಬೆಳಕಿನ ಬದಿಯಲ್ಲಿ/ ರಸಗಂಗಾ ನದಿಯಲ್ಲಿ ಅದರುಗಮ/ ಹೆಸರದಕೆ ಪ್ರೀತಿಯು, ಹಿಗ್ಗಿನ ರೀತಿಯು/ ಆತ್ಮದ ನೀತಿಯು ಮಧು ಸಂಗಮ.(ಸಖೀಗೀತ)**

ಪತಿಪತ್ನಿಯರ ಪ್ರೇಮದಾನಂದದಲ್ಲಿ ಸೌಂದರ್ಯ ಎಂದರೆ ಏನು ಅದರ ಅನುಭವ ಮತ್ತು ಅನುಭಾವ ಎಂತಹುದು ಎಂಬುದಕ್ಕೆ ಬೇಂದ್ರೆ ನೀಡಿರುವ ಸೌಂದರ್ಯಮೀಮಾಂಸೆ ಕಾವ್ಯಭಾಷೆಯಲ್ಲಿ ಅಪರೂಪವಾಗಿದೆ. ಸುಂದರ ಎಂಬುವುದು ಬರಿ ಬಾಹ್ಯ ಸೌಂದರ್ಯವಲ್ಲ. ಅದು ಆಂತರಿಕವಾದ ನಿಜ ಪ್ರೇಮದ, ಸೌಹಾರ್ದದ ಸಮ ಕೊಡುಕೊಳ್ಳುವ, ಆರ್ದ್ರಭಾವದ, ಜೀವಜೀವಕ್ಕೆ ಸ್ಪಂದಿಸುವ, ಒಬ್ಬರು ಇನ್ನೊಬ್ಬರಿಂದ ಬೇರೆಯಾಗದ; ನೋವು ನಲಿವಿನಲ್ಲಿ ಒಂದಾದ, ಆತುಕೊಂಡ ಆಸರೆಯ ಸೌಂದರ್ಯ. ಅದು ಹೊರಗಿನ ಬಣ್ಣ ಹಾಗೂ ಆಕಾರವಲ್ಲ, ಒಳಗಿನ ಹೊಳಹು ಮತ್ತು ಅರಿವು ಎಂದಿದ್ದಾರೆ.

ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ/ ಕಣ್ಣಿಗು ಕಣ್ಣಾಗಿ ಒಳಗಿಹುದು/ ರೂಪ-ಲಾವಣ್ಯಕೆ ಅಳೆಯಲು ಬಾರದು/ ಅವುಗಳೆ ಇದರೊಂದು ಕಣವಿಹವು.(ಸಖೀಗೀತ)

ಇದು ನಮ್ಮೆಲ್ಲರ ಜೀವನದಲ್ಲಿರುವುದು.ನಮ್ಮ ಬದುಕಿಗೆ ಆಸರೆಯಾದುದು.ಇದು ಸತ್ಯ. ಬದುಕು ಎಂದರೆ ಚೆನ್ನಿಕೋಲು ಆಟವಲ್ಲ. ಯೌವ್ವನದ ಹಾಗು ಹಣದ ಸೊಕ್ಕಿನಿಂದ ತನ್ನ ಮೂಗಿನ ನೇರಕ್ಕೆ ನುಡಿಯುತ್ತ ಇಡೀ ಜನಾಂಗವನ್ನು ದಿಕ್ಕುಗೆಡಿಸುವ ಧಾರ್ಷ್ಟ್ಯವಲ್ಲ. ನಮ್ಮ ನಮ್ಮ ಮಿತಿಗಳ, ನಮ್ಮ ಹಿಡಿಗೆ ಸಿಕ್ಕಷ್ಟರಲ್ಲಿ ನಮ್ಮ ಜೀವನವನ್ನು ರೂಪಿಸಿಕೊಳ್ಳುತ್ತ ಇನ್ನೊಬ್ಬರ ಹಿಡಿಗೆ ಆಸೆಪಡದೆ ಸಹಬಾಳ್ವೆ ಸಾಗಿಸುವಂಥದು. ಇದಕ್ಕೆ ಜನರ ಮನಸ್ಸನ್ನು ರೂಪಿಸಬೇಕಾಗುತ್ತದೆ. ಹಿರಿದಾದ ಚಿಂತನೆಯ ಸತ್ಯವನ್ನು ಅರುಹಬೇಕಾಗುತ್ತದೆ. ಅದನ್ನು ಶ್ರೇಷ್ಠಕವಿಗಳು ತಮ್ಮ ಕಾವ್ಯ, ಸಾಹಿತ್ಯದಲ್ಲಿ ನೀಡಿದ್ದಾರೆ. ಅದು ದಿಢೀರನೆ ಆಗುವಂತಹ ಫಾಸ್ಟ್ ಫುಡ್ ಅಲ್ಲ. ಅದು ಬಿತ್ತಿ ಬೆಳೆಯಬೇಕಾದ ಬೆಳೆ. ಅದಕ್ಕೆ ಬೇಕಾದ ಬೆಳಕು, ನೀರು, ಗಾಳಿ ಕಾವ್ಯದಲ್ಲಿದೆ. ಪ್ರೇಮವು ಚಿಗುರಬೇಕು, ಕಾಮದ ಕಾವಿನಲ್ಲಿ ದಹಿಸಿ ಹೋಗಬಾರದು; ಕಾಮ ಅತಿಯಾಗಿ ಅದರ ಕಾವಿನಲ್ಲಿ ದೇವ ದಾನವ ಮಾನವರೆಲ್ಲ ಬೂದಿಯಾಗಿ ಹೋದರು; ವಿಪರೀತ ಓದಿರುವೆ, ಮಹಾ ತಿಳಿವಳಿಕೆಯನ್ನು ಹೊಂದಿರುವೆ ಎಂಬ ಬೀಗುವಿಕೆ ಪ್ರಯೋಜನವಿಲ್ಲ. ಅದು ಊದುಗೊಳವೆಯಂತೆ ಎಂದು ಬೇಂದ್ರೆಯವರು ಉಪಮಾನದಲ್ಲಿ ಬಣ್ಣಿಸಿದ್ದಾರೆ. ಅರ್ಥಮಾಡಿಕೊಳ್ಳದೆ ಒಂದೇ ಸಮ ಓದುವ ಓದಿಗೆ ಮನೆಯ ಹಿರಿಯರು 'ಏನು ಊದುತ್ತಿದ್ದೀಯೋ' ಎಂದು ಛೇಡಿಸುತ್ತಾರೆ. ಅವರ

ಆ ನುಡಿಯಲ್ಲಿ ಓದು ಮನನವಾಗಬೇಕು ಎಂಬ ವ್ಯಂಗ್ಯಾರ್ಥವಿದೆ. ಓದು ಜೀವನಕ್ಕೆ ಪೂರಕವಾಗಬೇಕು, ಪೋಷಕವಾಗಬೇಕು, ಇಲ್ಲದಿದ್ದರೆ ಅದು ವ್ಯರ್ಥ.

ಊದುಗೊಳವೆಯಲ್ಲಿ ಒಲೆ ಹೊತ್ತಿಸಲು ಊದಿದರೆ ಗಾಳಿ ಒಲೆಯ ಕೆಂಡವನ್ನು ಕಾವುಗೊಳಿಸುತ್ತದೆ. ಒಲೆ ಹೊತ್ತಿದ ನಂತರ ಅದನ್ನು ಪಕ್ಕಕ್ಕಿಡುವರು. ಊದುಗೊಳವೆ ಊದಿದ ಗಾಳಿಯನ್ನಾಗಲಿ; ಕೆಂಡದ ಕಾವನ್ನಾಗಲಿ ಅನುಭವಿಸುವುದಿಲ್ಲ. ಹೀಗೆ, ಮಾನವನ ಬಾಳು ಕಾಮದಲ್ಲಿ ವ್ಯರ್ಥವಾಗಬಾರದು. ಅದು ನಾದವನ್ನು ಹೊಮ್ಮಿಸುವ ಕೊಳಲಾಗಬೇಕು. ತನ್ನನ್ನು ಹಿಡಿದ ಕೈ ಮೃದುವಾಗಿ ತಟ್ಟಿ ತನ್ನ ಸ್ವರದ ಜೊತೆಗೆ ಒಂದಾಗಿಸಿಕೊಳ್ಳುವಂತೆ ಇರಬೇಕು. ಮೈಯಲ್ಲಿಯ ಪುಳಕಗೊಳಿಸುವ ರಂಧ್ರದಲ್ಲಿ ವಾದಕನ ಮನಸ್ಸು ಕೈಯಾಗಿ ಆಡಿಸಿ; ಅವನ ಕೊರಳಾಗಿ ಅವನ ಮನಸ್ಸಿನ ಭಾವದ ದನಿಯಾಗಬೇಕು. ಕೊಳಲು ವಾದಕ ಮತ್ತು ಕೊಳಲು ಮೇಳೈಸಿದ ಅವಿನಾಭಾವದಲ್ಲಿ ಒಂದಾದ ಮಧುರತೆ ಗಂಧರ್ವನಾದವಾಗುತ್ತದೆ. ಹೀಗೆ ಸಖಸಖಿಯರ ಪ್ರೇಮದ ಪಲ್ಲವವಾಗಬೇಕು, ಕಾಮದ ಕಾವಿಗೆ ಕಾರಣವಾಗುವ ಊದುಗೊಳವೆಯಾಗದೆ ಅದು ಕೊಳಲಿನ ದನಿಯಾಗಿ 'ಸನಿ' ಸನಿಹ, ಹತ್ತಿರ ಸಮೀಪಿಸಿ ಮೈಮನಸ್ಸನ್ನು ತುಂಬಿಕೊಳ್ಳಬೇಕು ಎಂದಿದ್ದಾರೆ. 'ಸನಿ' ಪದವನ್ನು ಧ್ವನ್ಯರ್ಥದಲ್ಲಿ ಬಳಸುತ್ತ ಬೇಂದ್ರೆಯವರು ಆ ಬಗೆಯ ಕೊಳಲಾಗುವ ಭಾಗ್ಯವನ್ನು ತನಗೆ ತನ್ನ ಗುರು ನೀಡಲಿ ಎಂದು ಪ್ರಾರ್ಥಿಸಿದ್ದಾರೆ.

ಸನಿ=A request, A respectful entreaty (addressed to a guru)

ಪ್ರೇಮಾನ್ಸ ಪಲ್ಲವಿಸ್ಸದ ಕಾಮದ ಕಾವಿನ್ಯಾಗ/ ದೇವ-ದಾನವ-ಮಾನವರೆಲ್ಲಾ ಬೂದಿ/ ಎಷ್ಟು ಓದಿ, ಏನು ಓದಿ, ಊದುಗೊಳವೀ ಗಾಳೀ ಬಾಳು/ ಕೊಳಲೀನ ದನಿ ಬರಲಿ ಸನಿ.( ಪರಾಕಿ : ಯಾವೂರಾಕಿ ನೀ ಮಾಯಕಾರತಿ?)

ಹೀಗೆ ಬರಿ ಬಿದಿರಿನ, ಕಾಮದ ಕೊಳವೆಯಾಗದೆ, ಗಾಳಿ ಬಾಳಾಗದೆ; ಪ್ರೇಮದ ಮುರಲಿಯಾದಾಗ ಪ್ರೇಮ ಪ್ರಸವವಾಗುತ್ತದೆ. ಅದೇ ಜಗದ ಜನರ ಕಲ್ಯಾಣ ದೀಪ್ತಿ ಎಂದು ಬೇಂದ್ರೆ ನುಡಿದಿದ್ದಾರೆ. 'ಪ್ರೇಮ ಪ್ರಸವ ಇರದಲ್ಲಿ ಬದುಕೇ'? ಬಾಳುವುದೆ ಸತ್ಯ ಬೀಜ?' (ಪರಾಕಿ : ಇಳಿದು ಬಂದಾಳಾ ಸ್ವರ್ಣಗಂಗೆ)ಎಂದು ಪ್ರಶ್ನಿಸಿ ಪ್ರೇಮ ಮತ್ತು ಸತ್ಯವನ್ನು ಒಂದೆಂದು ಸಾರಿದ್ದಾರೆ.

* * * * * *

**ಬಾಳಬೇಕು, ಆಳ ತೆರೆದೂ**

**ನೋಡಬೇಕು ದೃಷ್ಟಿಹರಿದು/ ಕೇಳಬೇಕು ಹಂಗು ತೊರೆದು/ ಬಾಳಬೇಕು, ಆಳ ತೆರೆದೂ ಅದೇ ಹಿರಿದು (2-1 ರಿಂದ 3)**

*ಬೇಂದ್ರೆಯವರು ಜೀವನವನ್ನು ರೂಪಿಸಿಕೊಳ್ಳಬೇಕಾದ ದೃಷ್ಟಿಯನ್ನು ಆಲೋಚಿಸುತ್ತ ಗುರುವನ್ನು ನೆನೆದು ಮೇಲಿನಂತೆ ಧ್ಯಾನಿಸಿದ್ದಾರೆ:

'ಕಾಲಕೆಳಗಿನ ನೋಟ ಬಿಡು' ಎಂಬ ಗಾದೆ ಮಾತಿದೆ. ನಾನು, ನನ್ನ ಹೆಂಡತಿ ಮಕ್ಕಳು ಎಂಬ ಮಿತಿಯಾದ ನೋಟಕ್ಕೆ ಒಳಗಾದವನಿಗೆ ವಿಶಾಲದೃಷ್ಟಿ ಸಾಧ್ಯವಿಲ್ಲ. ಬೆಟ್ಟದ ಮೇಲೆ ನಿಂತವನಿಗೆ ಕಾಣುವ ವೈಶಾಲ್ಯ ಅಟ್ಟದ ಮೇಲಿರುವವನಿಗೆ ಕಾಣುವುದಿಲ್ಲ. ಹಾಗಾಗಿ, ಎತ್ತರದ ನಿಲುವಿಗೆ ಏರಿ ದೃಷ್ಟಿಯನ್ನು ಹರಿಯ ಬಿಡಬೇಕು. 'ಗಂಗೆ ಹರಿದಷ್ಟೂ ತಿಳಿಯುತ್ತ ತಿಳಿಯುತ್ತಾ ಹೋಗುತ್ತದೆ! ತಿಳಿಯಾಗುತ್ತದೆ! ಎಷ್ಟು ತಿಳಿಯಾಗುತ್ತದೆ ಎಂದರೆ, ತಿಳಿ ಹೋಗಿಸುವಂಥ, ಕಲಡುಮಾಡುವಂಥ ಕ್ರಿಮಿಗಳು ಅಲ್ಲಿ ಬದುಕಲಾರವು'.(ಮಾತೆಲ್ಲ ಜ್ಯೋತಿ–ಪುಟ:07) ಹರಿವ ನೀರು ದೋಷ ಕಲ್ಮಷರಹಿತವಾದ ಹಾಗೆ ವಿಶಾಲದೃಷ್ಟಿ ಚಲನಶೀಲತೆಯನ್ನು ಪಡೆಯುತ್ತ ಶುದ್ಧವಾಗುತ್ತದೆ. ಬೇಂದ್ರೆಯವರು ಸ್ಪಷ್ಟ ಅರಿವಿಗೆ–ದೃಷ್ಟಿ ಮತ್ತು ಶ್ರವಣ ಶಕ್ತಿ ಚೆನ್ನಾಗಿರಬೇಕು ಎಂದಿದ್ದಾರೆ.

'ಕಿವಿಯೆ ಕವಿ', 'ನನ್ನ ಕಣ್ಣೇ ಕಿವಿಯು, ಕವಿಯು ನಾನು' ಎಂಬುದು ಅವರ ದೃಷ್ಟಿ ಹಾಗೂ ಶ್ರವಣ ಚೇತನದಲ್ಲಿರುವ ಕಾವ್ಯ ಪ್ರತಿಭಾಸೂಚಕ ನುಡಿಗಳಾಗಿವೆ. ಅವರು – ಯಾವುದೇ ಹಂಗಿಗೆ, ದಾಕ್ಷಿಣ್ಯಕ್ಕೆ ಆಸೆಗೆ ಒಳಗಾಗದೆ ಮುಕ್ತವಾಗಿ ಎಲ್ಲವನ್ನೂ ಕೇಳಬೇಕು. ಅದು ಕೇಳಬೇಕು, ಇದು ಕೇಳಬಾರದು ಎಂಬ ಮಾನಸಿಕ ದೌರ್ಬಲ್ಯಕ್ಕೆ ಒಳಗಾಗದೆ; ಯಾವುದೇ ಬಂಧನದ ನಿಲುವಿಗೆ ಸಿಗದ ಮುಕ್ತಭಾವದಿಂದ ಎಲ್ಲವನ್ನೂ ಕೇಳಿ ಒಳಿತನ್ನು ಸ್ವೀಕರಿಸಬೇಕು ಎಂದಿದ್ದಾರೆ.

'ಬಾಳಬೇಕು ಆಳತೆರೆದೂ' ಎಂಬ ನುಡಿಯಲ್ಲಿ ಯಾವುದೇ ಒಂದು ವಿಷಯವನ್ನು ತಿಳಿದುಕೊಳ್ಳಬೇಕಾದರೆ ಅದರ ಆಳಕ್ಕೆ ಮುಳುಗಬೇಕು ಎಂದು ಒಂದು ಅರ್ಥ ಗೋಚರವಾಗುತ್ತದೆ. ಅದರ ಬಗ್ಗೆ ಇನ್ನೂ ಆಳವಾಗಿ ಯೋಚಿಸಿದರೆ ಬಾಳು ಎಂಬುದು ಬದುಕು ಎಂಬುವುದಕ್ಕಿಂತ ಹೆಚ್ಚು ವ್ಯಾಪಕವಾದ ಅರ್ಥ ಹೊಂದಿದೆ. 'ಆಳತೆರೆದೂ' ಎಂಬ ಪದದ 'ಆಳು'–ವ್ಯಕ್ತಿಯಾಗಿ ಸಮಾಜದಲ್ಲಿ ಅಜ್ಞಾನದಲ್ಲಿರುವ ಇತರ ವ್ಯಕ್ತಿಗಳನ್ನು ಶಿಕ್ಷಿತರನ್ನಾಗಿಸಿ, ಸುಸಂಸ್ಕೃತರನ್ನಾಗಿಸಿ ಅನಾವರಣಗೊಳಿಸಬೇಕು.– ಎಂಬ ಅರ್ಥವನ್ನು ಧ್ವನಿಸುತ್ತದೆ. ಆಗ 'ಬಾಳು' ಎಂಬ ಪದಕ್ಕೆ ಅರ್ಥವಿದೆ. ಅಂತಹ ಬಾಳು–'ಅದೇ ಹಿರಿದು'. ಆ ಉನ್ನತ ಬಾಳಿನಲ್ಲಿ ಒಟ್ಟು ಸಮಾಜದ ಪ್ರಗತಿಯನ್ನು ಗುರುವಿನ ಆಶೀರ್ವಾದದಿಂದ ಸಾಧಿಸಬೇಕು ಎಂದಿದ್ದಾರೆ.

* * * * * *

**ತಾಳು, ಕೂಳು**

**'ಯಾರ ಆಳೂ ಅಲ್ಲ ಬಾಳು/ ತಾಳೋ ಸೂಲೀ ರೂಪ ತಾಳು/ ಹೊಸಾ ಹೊಲದ ಕಾಳು ಕಾಳು/ ಗುರು ಕೂಲಿ ಕೂಳು.' (3–1 ರಿಂದ 3)**

* 'ಬಾಳು' ಎನ್ನುವುದು ಯಾರ ಆಳೂ ಅಲ್ಲ. ಅದು ಯಾರ ಗುತ್ತಿಗೆಯಲ್ಲೂ, ಅಧೀನದಲ್ಲೂ ಇಲ್ಲ. ಒಡೆಯನ ಹಂಗಿನಲ್ಲಿರದೆ ಮುಕ್ತವಾದುದು ಬಾಳು. ಆ ಬಾಳು ತನ್ನದಾದುದರಿಂದ ಪ್ರತಿ ವ್ಯಕ್ತಿಯೂ ಈಶ್ವರನಂತಾಗಬೇಕು, ಶೂಲಿಯನ್ನು ಹಿಡಿಯಬೇಕು ಎಂದಿದ್ದಾರೆ. ಈಶ್ವರನ ಆಯುಧವಾದ ಶೂಲಿ ಇಲ್ಲಿ ತದ್ಭವರೂಪದ ಸೂಲಿ ಆಗಿದೆ. 'ಸೂಲೀ ರೂಪ ತಾಳು' ಎಂಬ ಪದ ಬೇಸಾಯದ ಕೂರಿಗೆಯ ಅರ್ಥವನ್ನು ತನ್ನಲ್ಲಡಗಿಸಿಕೊಂಡು ವಿಶಾಲ ಹರಹಿನಲ್ಲಿ ಕನ್ನಡ ಭಾಷೆಯ ಸಾಧ್ಯತೆಯನ್ನು ಕಾವ್ಯದಲ್ಲಿ ಹೊಮ್ಮಿಸಿದೆ. ಬೇಂದ್ರೆಯವರು ದೊಡ್ಡ ಗ್ರಾಮದಂತಿದ್ದ ಧಾರವಾಡದಲ್ಲಿ ಜನಿಸಿ; ಬ್ರಾಹ್ಮಣ ಬಾಲಕನಾಗಿ ಹುಟ್ಟಿದರೂ ಸಾಧಾರಣ ಕುಟುಂಬದ ಯಾವುದೇ ವೈದಿಕ ಆವರಣದ ಕಟ್ಟಿನಿಂದ ಬಿಗಿದ ಹುಡುಗನಾಗಿರದೆ ಬೆಳೆದ ಕಾರಣ– ರೈತ ಮಕ್ಕಳ ಜೊತೆ ಬೇಸಾಯದಲ್ಲಿ ತೊಡಗಿ ಕೂರಿಗೆ ಹೊಡೆದ ಅನುಭವವಿರುವುದರಿಂದ ಈ ರೈತಾಪಿ ಅನುಭವಗಳನ್ನು ಕಾವ್ಯದಲ್ಲಿ ಕೊಡಲು ಸಾಧ್ಯವಾಗಿದೆ ಎಂದು ಹೇಳಬಹುದು. ಕೂರಿಗೆ ಹೊಡೆದ ಎಲ್ಲ ಕನ್ನಡ ರೈತಮಕ್ಕಳಿಗೆ 'ತಾಳು' ಚಿರಪರಿಚಿತ. ಸಾಮಾನ್ಯವಾಗಿ ಮೂರು ತಾಳಿನ ಕೂರಿಗೆ ಇರುತ್ತದೆ. ಕೂರಿಗೆ ಬಟ್ಟಲಿಂದ ಬಿತ್ತಿದ ಕಾಳು 'ತಾಳು'ವಿನಿಂದ ನೆಲಕ್ಕೆ ಬಿತ್ತನೆಯಾಗುತ್ತದೆ. ಹೀಗೆ ವ್ಯಕ್ತಿ ಮೂರು ಮೊನೆಯ ತ್ರಿಶೂಲದಂತೆ– ಸೂಲೀ ರೂಪ ತಳೆದು– ಫಲದಾಯಕವಾಗುವ ವ್ಯಕ್ತಿಯಾಗಬೇಕು ಎಂದು 'ಸೂಲೀ ರೂಪ ತಾಳು' ಎಂಬ ರೂಪಕದಲ್ಲಿ ಚಿತ್ರಿಸಿದ್ದಾರೆ. ಇದೊಂದು ರೈತನ ಕೂರಿಗೆ ಸಾಧನವನ್ನು ರೂಪಕವಾಗಿಸಿರುವ ಹೊಚ್ಚ ಹೊಸ ಕನ್ನಡದ ರೂಪಕ. ಬೇಂದ್ರೆಯವರ ರೂಪಕಸೃಷ್ಟಿ ಅನನ್ಯವಾದುದು. ವ್ಯಕ್ತಿ ಸೃಷ್ಟಿಶೀಲನಾಗಬೇಕು ಉತ್ಪಾದನಾ ರೂಪಿಯಾಗಬೇಕು. ಒಂದೊಂದು ಕಾಳು ಬಿತ್ತಿ ಭೂಮಿತಾಯಿಯ ಒಡಲಿಂದ ರಾಶಿರಾಶಿ ತೆನೆ ಹೊಮ್ಮಿಸುವ ಕ್ರಿಯಾಶೀಲನಾಗಬೇಕು. ತಾನು ತಿಂದುಂಡು ಇತರರಿಗೂ ನೀಡುವಂತಹವನಾಗಬೇಕು ಎಂಬ ಹಿರಿದಾದ ಜೀವಪರ ನಿಲುವಿನ ಚಿಂತನೆ ಇದಾಗಿದೆ. ಹೀಗೆ ವ್ಯಕ್ತಿ ಹೊಲದಲ್ಲಿ ಕಾಳು ಕಾಳು ಬಿತ್ತನೆ ಮಾಡಿದಾಗ 'ಕೂಳು' ಅಂದರೆ ಅನ್ನದ ಫಲ ದೊರೆಯುತ್ತದೆ. ಇದು ನಾವು ಮಾಡುವ ಕೂಲಿಗೆ ಗುರುವು ನೀಡುವ ಅನ್ನ. ಇದುವೆ 'ಗುರು ಕೂಲಿ ಕೂಳು'.

(ಕೂಳು–ಶಬ್ದ ತನ್ನ ನಿಂದಕ ಅರ್ಥವನ್ನು ಬಿಟ್ಟು ಅದರ ಮೂಲಾರ್ಥ ಅನ್ನವನ್ನು ಇಲ್ಲಿ ಹೊಂದಿದೆ)

* * * * * *

## ನ್ಯಾನಾರೆ ನೀ‌ನಾರೆ

**ಕಟ್ಟಾವ ಬ್ಯಾರೇ ಮುಟ್ಟಾವ ಬ್ಯಾರೇ/ ನ್ಯಾನಾರೇ ನೀನಾರೇ/ ಅಮೃತಧಾರೇ/ ಧಾರವಾಡದಾಕಿ ಇಲ್ಲಾ ಬ್ಯಾರೇ (4–1 ರಿಂದ 3)**

*ಬೇಂದ್ರೆಯವರ ಚಿಂತನೆ ಕಾವ್ಯದಲ್ಲಿ ಹಲವು ಹರಹಿನಲ್ಲಿ ಸಾಗುತ್ತ, ಒಂದೇ ವಿಷಯದ ವಿವಿಧ ಮುಖಗಳನ್ನು ಕಾಣಿಸುತ್ತ ಥಂಗನೆ ಅಧ್ಯಾತ್ಮದ ನೆಲೆಗೆ ನೆಗೆದು ಪ್ರಕಾಶದ ಹೊಂಗಿರಣವನ್ನು ದರ್ಶಿಸುತ್ತದೆ. ತನ್ನ ಪತ್ನಿ ಲಕ್ಷ್ಮೀಬಾಯಿಯು ಅರೆಪ್ರಜ್ಞಾಸ್ಥಿತಿಯಲ್ಲಿ ಹಾಸಿಗೆ ಹಿಡಿದಿರುವಾಗ ಅವರು ಬಾಳಿನ ಅರ್ಥವನ್ನು ಶೋಧಿಸುತ್ತ ಸಾಗಿದ್ದಾರೆ. ತನ್ನ ಬಾಲ್ಯದ ಮುಕ್ತದೃಷ್ಟಿ, ಶ್ರವಣಧ್ಯಾನ, ಕೂರಿಗೆಯ ಅನುಭವದಲ್ಲಿ ವ್ಯಕ್ತಿ ವಿಕಾಸ ಮತ್ತು ಉಳಿವನ್ನು ಚಿತ್ರಿಸಿದ್ದಾರೆ. ಪ್ರೀತಿಯ ಹೆಂಡತಿಯ ಜೀವ ಈಗಲೋ ಆಗಲೋ ತನ್ನಿಂದ ದೂರವಾಗುತ್ತದೆ ಎಂಬ ಸ್ಥಿತಿಯಲ್ಲಿ–ಆಕೆಯನ್ನು ಕುರಿತು ಆಲೋಚಿಸುವಾಗಲೆ ಈ ಬದುಕಿನ ಸತ್ಯವನ್ನು ಶೋಧಿಸುತ್ತ–ಅದರಾಚೆಗಿನ ಪರಮಾರ್ಥದ ಚಿಂತನೆಗೆ ತೊಡಗಿದ್ದಾರೆ.

'ಕಟ್ಟಾವ ಬ್ಯಾರೇ' ಈ ಸ್ತ್ರೀರೂಪಿ ಜೀವಿಯನ್ನು ಸೃಷ್ಟಿಸಿದವನು ಬೇರೆ. ಅಂದರೆ ಅವಳು ಬೇರೆಯವರ ಮನೆಯವಳಾಗಿ ಹುಟ್ಟಿದವಳು. ಅವಳು ವಿವಾಹವಾಗಿ ಸಂಸಾರ ಹೂಡಿದಾಗ ಅವಳನ್ನು 'ಮುಟ್ಟಿ' ನೋಡಿಕೊಂಡವನು ಕವಿ ಅಂಬಿಕಾತನಯದತ್ತ. ಇವನೇ ಬೇರೆ. ಇದು ಜಗದ ರೀತಿ. ಆಗ ಪ್ರಶ್ನೆ ಏಳುತ್ತದೆ– 'ನಾನಾರೆ ನೀನಾರೆ' ಅಂದರೆ 'ನಾನು ಯಾರು? ನೀನು ಯಾರು?' ಎಂಬ ಪ್ರಶ್ನೆ. ಅದರ ಇನ್ನೊಂದು ಅರ್ಥ ಜನಪದರ ನುಡಿಯಲ್ಲಿ 'ನಾನಾದರೂ ಆಗಲಿ ನೀನಾದರೂ ಆಗಲಿ' ಎಂಬ 'ನಾವು ಒಂದೇ ಬೇರೆ ಬೇರೆ ಅಲ್ಲ' ಎಂಬ ಕೂಡಿ ಬಾಳಿದ ಸಂಕೇತದ ಭಾವ. ಹೀಗೆ ಅರ್ಥಪೂರ್ಣವಾಗಿ ಸೇರಿದ್ದೇ–'ಏನು ಏನು?' ಎಂಬ ಪ್ರಶ್ನೆಗೆ ತತ್‌ಕ್ಷಣ ಹೊಮ್ಮುವ 'ಜೇನು ಜೇನು' ಎಂಬ ಅನುಭವದ ಅರ್ಥ. ಅದು 'ಅಮೃತಧಾರೆ'. ಹೀಗೆ ಜೀವ ಭಾವ ಒಂದಾದ ದಾಂಪತ್ಯದಲ್ಲಿ ಅವರಿಗೆ ತನ್ನನ್ನು ರೂಪಿಸಿದ ಪತ್ನಿಯು–ಧಾರವಾಡದಾಕಿ ದುರ್ಗಾಮಾತೆಯ ಒಂದು ಅಂಶ ಎಂಬ ಅನುಭವ.

* * * * * *

## 'ಚಿತ್ರಾ, ಶ್ರವಣಾ, ತಾರೆ'

### ಚಿತ್ರಾ–ಶ್ರವಣಾ–ತಾರೆ/ ಮೃಗಶಿರಾ–ಮಘಾ ತೆರೇ' (5–1, 2)

*ಚಿತ್ರಾ ಎಂದರೆ ದೃಶ್ಯ. ಶ್ರವಣ ಎಂದರೆ ಕೇಳು. ವ್ಯಕ್ತಿಯು ತನ್ನ ಬಾಳಿನಲ್ಲಿ 'ತಾರೆ'ಯಂತಾಗಲು ದೃಷ್ಟಿ ಹರಿದು ನೋಡಿ ವಿಷಯವನ್ನು ಸ್ಪಷ್ಟಗೊಳಿಸಿಕೊಳ್ಳುತ್ತ, ಅದು ಅವನ ಕಾಣ್ಕೆಯಾಗುವಂತೆ ಚಿಂತನಶೀಲನಾಗಬೇಕು. ಅದಕ್ಕೆ ಪೂರಕವಾಗಿ ಹಂಗು ತೊರೆದು ಕೇಳಿ ವಿಷಯದ ಶ್ರವಣ ಧ್ಯಾನಿಯಾಗಬೇಕು ಎಂದಿದ್ದಾರೆ. ಅಂತಹ ಅರ್ಥಪೂರ್ಣ ಬಾಳು 'ತಾರೆ'ಯಂತಹದು. ಹೀಗೆ ವ್ಯಕ್ತಿ ಎಂಬ ಕಾಳು ದೃಷ್ಟಿ ಹಾಗೂ ಶ್ರವಣದಿಂದ ಪುಷ್ಟಿಗೊಂಡು 'ತಾರೆ'ಯಂತಾಗಿ 'ಮುಕ್ಕು ಚಿಕ್ಕೆಯ ಕಾಳು' ಆದಾಗ ಮೃಗಶಿರಾ, ಮಾಘ ಮಾಸದ ಮಳೆಗಾಲ ತೆರೆದುಕೊಳ್ಳುತ್ತದೆ. ಬೆಳೆ ಸಮೃದ್ಧಿಯಾಗುತ್ತದೆ, ವ್ಯಕ್ತಿಯ ವಿಕಾಸವಾಗುತ್ತದೆ ಎಂಬ ಚಿಂತನೆ ಈ ಕಾವ್ಯದಲ್ಲಿದೆ. ಈ ಕಾವ್ಯದ ನುಡಿಗಳು

ಪ್ರತೀಕಗಳಾಗಿ ಓದುಗನ ಅರಿವನ್ನು ಜಾಗೃತಗೊಳಿಸುತ್ತ ಚಿಂತನೆಯ ಪರಿಧಿಯನ್ನು ವಿಸ್ತರಿಸುವ ಚೈತನ್ಯವನ್ನು ಹೊಂದಿವೆ. ಈ ಕಾವ್ಯವು ಗುರುವಿಗೆ ಶರಣಾದ ವ್ಯಕ್ತಿ 'ಮುಕ್ಕು ಚಿಕ್ಕೆಯ ಕಾಳು' ಆಗಿ ಪೂರ್ಣತ್ವವನ್ನು ಪಡೆದಾಗ ಪ್ರಕೃತಿಯು ಅವನಿಗೆ ಪೋಷಕವಾಗಿ ಅವನನ್ನು ಬೆಳೆಸುತ್ತದೆ ಎಂಬ ಸತ್ಯವನ್ನು ಸಾರುತ್ತದೆ. ಜೊತೆಗೆ ಹಾಗೆ ಬೆಳೆದ ವ್ಯಕ್ತಿಯು ಸಮೃದ್ಧಿಯ ಧಾನ್ಯವಾಗುವ, ಜೀವಪೋಷಕ ಶಕ್ತಿಯಾಗುವ 'ಕೂಳು' ಆಗುತ್ತಾನೆ ಎಂಬ ವಿಶ್ವವ್ಯಾಪಿ ಚಿಂತನೆಯನ್ನು, ವ್ಯಕ್ತಿ ಚೇತನದ ಶ್ರೀಮಂತಿಕೆಯನ್ನು ತಿಳಿಸುತ್ತದೆ.

ಗುರುವಿನ ಸ್ಥಾನ ಹಾಗೂ ಮಾನವನ್ನು ಅವಲಂಬಿಸಿ ಶ್ರೇಷ್ಠತೆ ಪ್ರಾಪ್ತವಾಗುವುದು ಸಾಮಾನ್ಯ. ಶಿಷ್ಯನಿಗೆ ಗುರುವಿನ ಉಪದೇಶದ ತಿಳಿವಳಿಕೆ ಆಗುವುದು ಮುಖ್ಯ ಎಂಬುದು ಬೇಂದ್ರೆಯವರು ಪ್ರತಿಪಾದಿಸಿದ ವಿಶೇಷ. ಪ್ರಜ್ಞಾ ಪ್ರಕಾಶಕ್ಕೆ ಕಾರಣನಾಗುವಂಥವನೇ ಶ್ರೇಷ್ಠ ಗುರುವಾಗಬಲ್ಲ ಎಂಬ ನಿಲುವು ಬೇಂದ್ರೆಯವರದು. ಆದುದರಿಂದಲೇ ಬೇಂದ್ರೆಯವರು ಈ ಕವನದಲ್ಲಿ ತಮ್ಮ ಯಾವ ಗುರುವಿನದೂ ನಾಮೋಲ್ಲೇಖ ಮಾಡಿಲ್ಲ. ಅವರೆಲ್ಲರ ಬೋಧ ತಮಗೆ ಆಗಿದೆ ಎಂಬ ವಿಷಯವನ್ನು ಗುಪ್ತವಾಗಿಟ್ಟು, ಬೋಧದ ವಿವರಣೆಗೆ ಕವನದ ರೂಪ ಕೊಟ್ಟಿದ್ದಾರೆ. Impersonality ಕೂಡ ಕಾವ್ಯವಾಗುತ್ತದೆ ಎಂಬುದಕ್ಕೆ ಈ ಕವನವೇ ಉದಾಹರಣೆಯಾಗಿದೆ. ಈ ಕವನದ ಸ್ವರೂಪ ನೋಡಿದರೆ ಇದೊಂದು ಸಾಧಾರಣ ಕವನದಂತಿದೆ. ಆದರೆ ಅದರ ಆಂತರ್ಯದ ಸ್ಪಷ್ಟತೆ, ಒಳ್ಳೆತನ ಅಧ್ಯಯನದ ನಂತರ ವಿಶದಗೊಳ್ಳುತ್ತದೆ. ಈ ಕವನ ಅಷ್ಟು ವಿಚಾರಶೂನ್ಯವಾಗಿ ಓದುವುದಲ್ಲ. ಇದು ಆಳವಾದ ವಿಚಾರಮಾಡಿ ತಿಳಿದುಕೊಳ್ಳಬೇಕಾದ ಸತ್ತ್ವವನ್ನು ಹೊಂದಿದೆ.

---

## ಪಲ್ಲವಿಸಬೇಕೋ

### ಪಲ್ಲವಿಸು, ಇಮ್ಮಾವು, ತೊಂಗಲು

**ಪಲ್ಲವಿಸಬೇಕೋ ಸರ್ವಮಂಗಲಾ/ ಇಮ್ಮಾವಿನಾ ತೊಂಗಲಾ/ ಅದರ ನೆರಳಿಗೆ ತಂಗಲಾ/ ಅಲ್ಲೇ ಅಂಬಾ ಭವಾನೀ। ಫಲಾ ॥ಪಲ್ಲ॥**

: ಚಿಗುರು; ಕುಡಿಯಿಡು.

: ಸಿಹಿಯಾದ ಮಾವು, ಇನಿಮಾವು.

: (ತೂಗಾಡುವ) ಗೊಂಚಲು; ಗುಚ್ಛ; ಕುಚ್ಚು; ಗೊಂಡೆ.

*ಬೇಂದ್ರೆ ಅವರು ಮಗಳು ಮಂಗಳಾಳನ್ನು ಇಮ್ಮಾವಿನ ಪ್ರತಿಮೆಯಲ್ಲಿ ಬಣ್ಣಿಸಿ ವಾತ್ಸಲ್ಯಾನಂದವನ್ನು ಸವಿದಿದ್ದಾರೆ. ತನ್ನ ಮಗಳು ಚೊಚ್ಚಲು ಬಸುರಿಯಾಗಿರುವುದನ್ನು 'ಪಲ್ಲವಿಸು'ವಿನಲ್ಲಿ ಧ್ವನಿಸಿದ್ದಾರೆ. ಬಸುರಿಯ ತೂಗಾಟ ತೊಂಗಲು ಪದದಲ್ಲಿ ತೊನೆದಾಡಿ ಅವಳು ಫಲವತಿಯಾಗಿರುವುದನ್ನು ಪ್ರತಿಮಾತ್ಮಕವಾಗಿ ಧ್ವನಿಸಿದೆ. ತನ್ನ

ಮಗಳೆಂಬ ಮಾವಿನ ತೊಂಗಲ ಕಂಪಾದ ಸೊಂಪಿನಡಿಯಲ್ಲಿ ತಂಗುವುದೇ ಸುಖ. ಅದೇ ಅಂಬಾಭವಾನಿ ನೀಡಿದ ಫಲ ಎಂದು ಧನ್ಯಭಾವದಲ್ಲಿ ಮಿಂದಿದ್ದಾರೆ.

---

# ಮತ್ತೆ ಬಂತು ಶ್ರಾವಣಾ

## ನಾಗವೇಣಿ, ತತ್‌ತ್ರಾಣಿ (ತತ್ರಾಣಿ)

**ತನು ಮನ ಘನ ಪ್ರಾಣಿಯಾಗಿ/ ಜತೆಗು ನಾಗವೇಣಿಯಾಗಿ/ ಪಥದಲಿ ತತ್ ತ್ರಾಣಿಯಾಗಿ/ ಬಿನ್ನಾಣದ ಶ್ರೇಣಿಯಾಗಿ/ ಬರುತಲಿಹುದು ಶ್ರಾವಣಾ/ ಮತ್ತೆ ಬಂತು ಶ್ರಾವಣಾ. (3–1 ರಿಂದ 6)**

*ಪ್ರಕೃತಿಯಲ್ಲಿ ಚೈತನ್ಯಶೀಲವಾದ ವಿಶಿಷ್ಟ ಶರೀರ ಮತ್ತು ಮನಸ್ಸಿನಿಂದ ಕೂಡಿದ ಪ್ರಾಣಿಯಾಗಿ ರೂಪುಗೊಂಡ ಮಾನವ ತನ್ನ ಆಕಾರದಂತೆ ಘನವಾದ ಅಂದರೆ ಯಾವುದೇ ಕೊರತೆಯಿಲ್ಲದೆ ಸೃಷ್ಟಿಯಾದ ಶಕ್ತಿಶಾಲಿ. ಈ ಮಾನವನು ಸಾಧಾರಣ ಪ್ರಾಣಿಯಲ್ಲ. ಇವನ ಶರೀರದಲ್ಲಿಯೇ ನಾಗವೇಣಿಯಿದೆ. ಅಂದರೆ ಅಧ್ಯಾತ್ಮ ಭಾಷೆಯಲ್ಲಿ ಕರೆಯುವ ನಾಗಸರ್ಪದಂತಿರುವ ಕುಂಡಲಿನೀ ಶಕ್ತಿ ಇದೆ. ಅದನ್ನು ಕುರಿತು ಬಿ.ಪುಟ್ಟಸ್ವಾಮಯ್ಯನವರು ನೀಡಿರುವ ವಿವರ ಹೀಗಿದೆ:

'ವೇದಸಾಹಿತ್ಯದಲ್ಲಿ ಎಲ್ಲಿಯೂ 'ಕುಂಡಲಿನೀ' ಶಬ್ದ ದೊರಕುವುದಿಲ್ಲವಾದರೂ, ದ್ವಾದಶೋಪನಿಷತ್ತುಗಳಲ್ಲಿ ಪ್ರಾಚೀನವಲ್ಲದ ಕೆಲವು ಉಪನಿಷತ್ತುಗಳಲ್ಲಿ ಕುಂಡಲಿನೀಯೋಗದ ಉಲ್ಲೇಖ ಹೇರಳವಾಗಿ ದೊರಕುತ್ತದೆ. ಬ್ರಹ್ಮಾಂಡದಲ್ಲಿ ಕುಂಡಲಿ ರೂಪದಿಂದ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣಳಾದ ದೇವಿಯೇ ಮಾನವನ ಸೂಕ್ಷ್ಮ ದೇಹದ ಮೂಲಾಧಾರ ಚಕ್ರದಲ್ಲಿ ಕುಂಡಲಿನಿ ಶಕ್ತಿಯಾಗಿ ಸರ್ಪದಂತೆ ಮೂರುಸುತ್ತು ಸುತ್ತಿಕೊಂಡು ಸುಪ್ತಸ್ಥಿತಿಯಲ್ಲಿ ಸೂಕ್ಷ್ಮರೂಪದಿಂದ ಇರುವಳು. ಯೋಗಸಾಧನೆಯಿಂದ ಎಚ್ಚರಿಸಲ್ಪಟ್ಟಾಗ ಈ ಶಕ್ತಿಯು ಕ್ರಮವಾಗಿ ಸ್ವಾಧಿಷ್ಠಾನ, ಮಣಿಪುರ, ಅನಾಹತ, ವಿಶುದ್ಧಿ, ಆಜ್ಞಾಚಕ್ರಗಳನ್ನು; ಬ್ರಹ್ಮ, ವಿಷ್ಣು, ರುದ್ರ ಗ್ರಂಥಿಗಳನ್ನು ಭೇದಿಸಿಕೊಂಡು ಶಿರಸ್ಸಿನಲ್ಲಿರುವ ಸಹಸ್ರಾರ ಚಕ್ರದಲ್ಲಿ ಶಿವನನ್ನು ಕೂಡಿ, ಕರ್ಣಿಕಾರೂಪದಿಂದ ಅಲ್ಲಿರುವ ಚಂದ್ರಮಂಡಲವನ್ನು ಕಡಿದು ಅಮೃತವನ್ನು ಸುರಿಸುವಳು. ಇದನ್ನೇ ಆದಿಶಂಕರರು 'ಮಹೀಂ ಮೂಲಾಧಾರೇ' ಎಂದು ಪ್ರಾರಂಭವಾಗುವ ಸೌಂದರ್ಯಲಹರಿಯ ಪದ್ಯದಲ್ಲಿ ಹೀಗೆ ಹೇಳಿದ್ದಾರೆ: 'ಎಲೈ ದೇವಿಯೇ, ಮೂಲಾಧಾರದಲ್ಲಿರುವ ಪೃಥ್ವೀತತ್ವವನ್ನೂ, ಮಣಿಪೂರದಲ್ಲಿ ಜಲತತ್ವವನ್ನೂ, ಸ್ವಾಧಿಷ್ಠಾನದಲ್ಲಿ ಅಗ್ನಿತತ್ವವನ್ನೂ, ಕಂಠದಲ್ಲಿರುವ ವಿಶುದ್ಧಿ ಚಕ್ರದಲ್ಲಿ ಆಕಾಶತತ್ವವನ್ನೂ, ಹುಬ್ಬುಗಳ ನಡುವೆ ಇರುವ ಆಜ್ಞಾಚಕ್ರದಲ್ಲಿ ಮನಃತತ್ತ್ವವನ್ನೂ ಭೇದಿಸಿ ಸಹಸ್ರಾರ ಪದ್ಮದಲ್ಲಿ ರಹಸ್ಯವಾಗಿ ಪತಿಯನ್ನು ಸೇರಿ ವಿಹರಿಸುವೆ.' (ಶ್ರೀ ಲಲಿತಾ ಸಹಸ್ರ ಸಾಂಗತ್ಯ – ಪು.233, 234)

ಅಂತಹ ಕುಂಡಲಿನೀಯನ್ನು ಹಠಯೋಗದಿಂದ ಸಾಧಿಸಿದವನ ಶಿರದಲ್ಲಿರುವ ಸಹಸ್ರಕಮಲದ ಬೆಳಕಿನಲ್ಲಿ ಕೋಟಿ ಸೂರ್ಯಪ್ರಕಾಶ ಲಭ್ಯವಾಗುತ್ತದೆ. ಅದು ಸಾವಿಲ್ಲದ ಸಮಾಧಿ ಸ್ಥಿತಿ. ಅದೇ ಪೂರ್ಣತ್ವದ, ಪರಮಜ್ಞಾನ ಸಾಧನೆ ಎಂದು ಯೋಗಿಗಳು ಹೇಳುವರು.

ಹಾಗೆ, ಯೋಗದ ಸಾಧನಾ ಮಾರ್ಗದಲ್ಲಿ ಸಾಗುವಾಗ ಆ 'ತತ್' ಎಂಬ ಪರಬ್ರಹ್ಮವನ್ನು ಸೇರಲು ಬೇಕಾಗುವ ಸಾಧನವೇ ಬೆನ್ನು ಹುರಿಯಲ್ಲಿರುವ ತ್ರಾಣ. ಅದು ಬಿರುಬಿಸಿಲಿನಲ್ಲಿ ಹೊಲ ಉಳುವ ರೈತನು ತನ್ನ ಕೃಷಿಯ ಗೇಯ್ಮೆ ಪೂರ್ಣಗೊಳಿಸಲು, ತನ್ನ ಸಾಧನಾ ಮಾರ್ಗದಲ್ಲಿ ಸಾಗಲು – ದಣಿವಾದಾಗ ಬಾಯಾರಿಕೆಯನ್ನು ಆರಿಸಿಕೊಳ್ಳುತ್ತ ದುಡಿಯಲು– ಬೆನ್ನಿಗೆ ಆನಿಸಿಕೊಂಡ ತತ್ರಾಣಿಯಲ್ಲಿ ಸಂಗ್ರಹಿಸಿಟ್ಟಿರುವ ತ್ರಾಣದಾಯಕ ನೀರಿನಂತೆ. ಶರೀರದ ಬೆನ್ನುಹುರಿ ಸಾಧನಾಮಾರ್ಗದ ತತ್ರಾಣಿ. ಅಲ್ಲಿಯೂ ದ್ರವದ ಚಲನೆ, ತತ್ರಾಣಿಯಲ್ಲಿಯೂ ದಾಹದಾರಿಕೆಯ ನೀರಿನ ಸಂಗ್ರಹಣೆ. ಹೀಗೆ ಬೇಂದ್ರೆಯವರು ರೈತನ ಉಳುಮೆಯ ಸಾಧನೆಯನ್ನು ಜ್ಞಾನಿಯ ಜ್ಞಾನಸಾಧನೆಯನ್ನು ಏಕತ್ರಗೊಳಿಸಿ ತತ್ರಾಣಿ(ತತ್+ತ್ರಾಣಿ)ಯ ರೂಪಕವನ್ನು ಸಮರ್ಥವಾಗಿ ಬಳಸಿದ್ದಾರೆ. ಬೇಂದ್ರೆಯವರು ಪದದೊಡನೆ ಆಟವಾಡಿ ವ್ಯಂಗ್ಯಾರ್ಥದ ಆನಂದ ಪಡೆವ ರೀತಿಗೆ ಇದೊಂದು ಉದಾಹರಣೆ.

ಅಧ್ಯಾತ್ಮ ಪಥವೆಂಬುದು ವೈಜ್ಞಾನಿಕ ರೀತಿಯಲ್ಲಿ ವ್ಯವಸ್ಥಿತವಾಗಿ ಹಂತಹಂತವಾಗಿ ಅರಿತು ಸಾಗಬೇಕಾದುದು. ಅದು 'ಬಿನ್ನಾಣದ ಶ್ರೇಣಿ'. ಶ್ರಾವಣ ಎಂದರೆ ಬೆಳವಣಿಗೆ, ವೃದ್ಧಿ, ಸಮೃದ್ಧಿ ಪ್ರಗತಿ. ಶ್ರಾವಣದಲ್ಲಿಯ ನಿಸರ್ಗದ ಅಭಿವೃದ್ಧಿಯಂತೆ ವ್ಯಕ್ತಿಯಲ್ಲಿಯ ಜ್ಞಾನ ಅಭಿವೃದ್ಧಿಯಾಗಬೇಕು. ಅದನ್ನು ನೀಡಲು ಶ್ರಾವಣ ಮತ್ತೆ ಬಂತು ಎಂದಿದ್ದಾರೆ.

* * * * * *

### ತಮದ ಬಸಿರೊಳಮರಮುಖ

**ಖಗ ನಗ ಜಗ ಸಂಮುಖ/ ಬಾಚುವ ರವಿ ಕಿರಣ ನಖ/ ತಮದ ಬಸಿರೊಳಮರ ಮುಖ/ ನಿರಂತರದ ಸಖ–ಸಖಿ–ಸುಖ/ ಬರುತಲಿಹುದು ಶ್ರಾವಣಾ/ ಮತ್ತೆ ಬಂತು ಶ್ರಾವಣ. (4–1 ರಿಂದ 6)**

*ಈ ಜಗತ್ತಿನ ಸೃಷ್ಟಿಕ್ರಿಯೆಯಲ್ಲಿ ಒಂದು ಇನ್ನೊಂದಕ್ಕೆ ಆಕರ್ಷಿತವಾಗಿ ಆನಂದ ಆಹ್ಲಾದವನ್ನು ಅನುಭವಿಸಲು 'ನಾನೀನ ನುಡಿ ನುಂಗಿ ತಾನೀನ ತಾನೆತಾ/ ತಾನಾಗಿ ತನನ್ನ ಬಂಧಾಂಗ' ಎಂಬ ರೀತಿ ಒಂದಾಗಬೇಕು. ಹಾಗೆ ಒಂದಾಗುವ ಗುಣ ಈ ಪ್ರಕೃತಿಯ ಜೀವರಾಶಿಯಲ್ಲಿದೆ. ಈ ಜಗತ್ತಿನ ಪಕ್ಷಿ ಮತ್ತು ಮರ ಒಂದಕ್ಕೊಂದು ಪೋಷಕವಾಗಿದೆ. ಈ ಎಲ್ಲ ಜಡ ಚೇತನವನ್ನು ರವಿ ತನ್ನ ಕಿರಣದಿಂದ ಬಾಚಿ, ನೇವರಿಸಿ ಅಂದಗೊಳಿಸುತ್ತಿದ್ದಾನೆ. ಸೌಂದರ್ಯವೇ ಬೆಳಕು, ಕೆದರಿದ ಕೂದಲು

ಅಶುಚಿಯ, ಅಜ್ಞಾನದ, ಮೌಢ್ಯದ ಅನಾಗರಿಕತೆ, ಅಸಂಸ್ಕೃತಿಯ ಲಕ್ಷಣ; ಅದು ಕತ್ತಲು. ಸೂರ್ಯನ ಕಿರಣನಖ ಅದನ್ನು ಬಾಚುತ್ತದೆ. ಅಲ್ಲಿ ಕತ್ತಲೆ ಹರಿದು ಬೆಳಕಾಗುತ್ತದೆ. ಕತ್ತಲಿನ ಒಡಲಿನಲ್ಲಿಯೇ ಬೆಳಕಿನ ಅಮರ ಮುಖವಿದೆ. ಅಂತಹ ಶಾಶ್ವತ ಆನಂದ ಸಖ-ಸಖಿ ಭಾವದ ಪತಿ ಪತ್ನಿಯ ಗೆಣೆತನದಲ್ಲಿದೆ. ಅಲ್ಲಿ ಸುಖವಿದೆ.

**ಬಾನು ಬೆಳಕು ಹೂಡಿದಲ್ಲೆ/ ಕಡಲಿನಲ್ಲಿ ಮೂಡಿದಲ್ಲೆ/ ನಲ್ಲ ನಲ್ಲೆ ಕೂಡಿದಲ್ಲೆ/ ಹಿಗ್ಗಿಗುಂಟೆ ಮೇರೆ ಎಲ್ಲೆ?**

ಹೀಗೆ ವಿಶ್ವಜಾಲದ ಗಂಡು ಹೆಣ್ಣಿನ ಸಖ್ಯಭಾವದ ಅಮರ ಮುಖವನ್ನು ಕಂಡ ಕವಿಗೆ ತನ್ನ ವೈಯಕ್ತಿಕ ದಾಂಪತ್ಯದ ಆನಂದ ನೆನಪಾಗಿ ವಿಶ್ವ ವಿಶಾಲ ಪ್ರಕೃತಿಯ ಒಂದು ಭಾಗ ತಾನು ಎನಿಸುತ್ತದೆ.

'ರಸಾ ಇದ್ದರ ಭಾವಾ/ ಇರದಿದ್ದರ ಅಭಾವಾ'

ಎಂಬಂತೆ ಮಳೆಯ ರಸ ನೆಲಕ್ಕೆ ಸೋಕಿದ ತಕ್ಷಣ ಶ್ರಾವಣ ಮಾಸದಲ್ಲಿ:

**'ಹುಡಿಯು ಅರಳಿ ಹೂವು ಆಗೆ/ ಹುಳಕೆ ರೆಕ್ಕೆ ಒಡೆದವು/ ಮುಸುಕು ಹರಿದು ಪಕ್ಕ ತೆರೆದು/ ಚಿಟ್ಟೆ ಮುಕ್ತಿ ಪಡೆದವು.'**

* *

ಹಾಳು ಬೀಳು ಪಡುವು ಬಂಜೆ/ ಹೊಕ್ಕ ಲೊಕ್ಕ ಲೆಲ್ಲವೂ/ ವ್ಯಾಪ್ತ ವಾಯ್ತು ಹೂವ ಹೂವ/ ರಾಸಲೀಲೆಗೆಲ್ಲವೂ.

ಎಂದು ನಿಸರ್ಗ ಜೀವಂತಿಕೆಯಿಂದ ಬೀಗುತ್ತದೆ. ಶ್ರಾವಣದಲ್ಲಿ ಹುಡಿ ಮಣ್ಣಿನ ಕಣಕಣವೂ ಜೀವಪಡೆದು ಹೂವಾಗಿ, ಹುಳುವಾಗಿ, ಹಾರಿ ನಲಿದು ಗೆಳೆತನದಿಂದ ರಾಸಲೀಲೆಯಲ್ಲಿ ನಲಿಯುವುದೊಂದು ವಿಶೇಷ. ಹೀಗಿರುವಾಗ ಅದೇ ಮಣ್ಣಿನಿಂದ ಹುಟ್ಟಿದ ಘನ ಪ್ರಾಣಿಯಾದ ಮಾನವನ ಗಂಡು ಹೆಣ್ಣಿನ ಸಖ್ಯ ಭಾವದ ಅಮರಮುಖ ಕಾಣಿಸಲು ಶ್ರಾವಣ ಮತ್ತೆ ಬಂತು ಎಂದು ಬಣ್ಣಿಸಿದ್ದಾರೆ.

* * * * * *

## ರಾಧಾ, ವೃಂದೆ, ತುಲಸಿ

**ರಾಧಾಧರ ಸುರಿಯುವಲ್ಲಿ/ ಯಮುನಾ ಜಲ ಹರಿಯುವಲ್ಲಿ/ ವೃಂದೆಯ ಚಿತೆ ಉರಿಯುವಲ್ಲಿ/ ತುಲಸಿಯ ಒಡಮುರಿಯುವಲ್ಲಿ/ ಬರುತಲಿಹುದು ಶ್ರಾವಣಾ/ ಮತ್ತೆ ಬಂತು ಶ್ರಾವಣಾ. (5-1 ರಿಂದ 6)**

*ಬೇಂದ್ರೆಯವರು ದಾಂಪತ್ಯದ ಪಾವಿತ್ರ್ಯತೆಯನ್ನು ಕಾಪಾಡಿಕೊಂಡ ಪೌರಾಣಿಕ ಸ್ತ್ರೀಚೇತನಗಳನ್ನು ಮೇಲಿನ ನುಡಿಯಲ್ಲಿ ನೆನೆಯುತ್ತ, ಆ ಕಾರಣವೇ ಈ ನೆಲದಲ್ಲಿ ಮಳೆ

ಸುರಿಯುತ್ತಿದೆ ಎಂದು ಹಾಡಿದ್ದಾರೆ. ಸೃಷ್ಟಿಯ ಹೂವು ಹೂವಿನಲ್ಲೂ ರಾಸಲೀಲೆಯನ್ನು ಕಂಡ ಕವಿ ಮಾನವರ ದಾಂಪತ್ಯದ ವಿವಿಧ ರೂಪ ವೈಭವವನ್ನು ನಮ್ಮ ನಾಡಿನ ಪೌರಾಣಿಕ ಕೃಷ್ಣನ ರಾಸಲೀಲೆಯಲ್ಲಿ ಬಣ್ಣಿಸಿದ್ದಾರೆ. ಕೃಷ್ಣ–ರಾಧೆಯ ದಾಂಪತ್ಯವು ಅವರ ರಾಸಲೀಲೆಗೆ ಸಾಕ್ಷಿಯಾದ ಯಮುನಾ ಜಲದಂತಿತ್ತು ಎಂದು ಹೇಳುತ್ತ ಬೇಂದ್ರೆಯವರು ಸಖ–ಸಖಿಯ ಪ್ರೇಮದ ನಿರಂತರತೆಯನ್ನು ಸಾರಿದ್ದಾರೆ.

ಗಂಡು ಹೆಣ್ಣಿನ ಸ್ನೇಹದ ಇನ್ನೊಂದು ಮುಖದಲ್ಲಿ ಪೌರಾಣಿಕ ವೃಂದೆಯ ಪಾವಿತ್ರ್ಯವನ್ನು ಕೆಡಿಸಿದ ವಿಷ್ಣುವು ಅವಳಿಂದ ಶಾಪ ಪಡೆದು ರಾಮನ ಅವತಾರದಲ್ಲಿ ಸೀತೆಯ ವಿಯೋಗ ವ್ಯಥೆ ಅನುಭವಿಸುವನು. ತುಲಸಿಯ ಪತಿ ಶಂಕಚೂಡನನ್ನು ಸಂಹರಿಸಿದ ವಿಷ್ಣುವು ಶಂಖಚೂಡನ ಆಕಾರದಿಂದ ಅವಳ ಸಮೀಪ ಬರಲು ಆಕೆ ಗಿಡವಾಗುವಳು. ಇವೆರಡೂ ಸ್ತ್ರೀ ಶಕ್ತಿಯ, ಸ್ತ್ರೀ ಪಾತಿವ್ರತ್ಯದ ಕತೆಗಳು. ಅವು ಸ್ತ್ರೀ ಮಹತ್ವದ, ಪುರುಷ ಮಿತಿಯ ಸಂಕೇತಗಳು. ಸ್ತ್ರೀ ಪಾವಿತ್ರ್ಯ ಪೋಷಣೆ ಮಾಡಬೇಕಾದ ವಿಚಾರವಾಗಿ, ದಾಂಪತ್ಯದ ಶುದ್ಧತೆಯನ್ನು ಕಾಪಾಡಬೇಕಾದ ವಿಷಯವಾಗಿ ಅವು ಪ್ರಮುಖವಾಗಿದ್ದು, ಬೇಂದ್ರೆಯವರು ಆ ಪಾವಿತ್ರ್ಯದ ಪೌರಾಣಿಕ ಘಟನೆಯನ್ನು ದಾಂಪತ್ಯದ ಸಂದರ್ಭದಲ್ಲಿ ಶ್ರಾವಣಮಾಸದಲ್ಲಿ ನೆನೆಯಬೇಕು ಎಂದು ಹಾಡಿದ್ದಾರೆ.

'ತುಲಸಿಯು ಒಡಮುರಿಯುವಲ್ಲಿ' ಎಂಬುದು ಇನ್ನೊಂದು ನೆಲೆಯಲ್ಲಿ ಆ ಪವಿತ್ರ ಸಸ್ಯ ಹುಟ್ಟಿದ ಪೌರಾಣಿಕ ಹಿನ್ನೆಲೆಯ ಕಥೆಯನ್ನು ಹೇಳುತ್ತದೆ. 'ಸಮುದ್ರ ಮಥನ ಕಾಲದಲ್ಲಿ ಅಮೃತ ಕಲಶವು ಹುಟ್ಟಿ ಬರಲು ವಿಷ್ಣುವು ಅದನ್ನು ಹಿಡಿದುಕೊಂಡಾಗ ಅವನ ಕಣ್ಣುಗಳಿಂದ ಆನಂದ ಬಾಷ್ಪವು ಉದುರಿ ಆ ಕಲಶದಲ್ಲಿ ಬೀಳಲು ಅದರಿಂದ ಒಂದು ಸಣ್ಣ ಗಿಡ ಹುಟ್ಟಿತು, ಅದೇ ತುಲಸಿ. ತುಲನೆಯಿಲ್ಲದ ಆ ಗಿಡವನ್ನು ಲಕ್ಷ್ಮಿಯೊಂದಿಗೆ ಶ್ರೀವಿಷ್ಣುವು ವಿವಾಹವಾದನು, ಹೀಗೆ ಪವಿತ್ರ ಸಸ್ಯದ ಉಗಮ ದೇವರ ಸೃಷ್ಟಿ ಎಂಬ ಸೂಚನೆಯನ್ನು ನೀಡುತ್ತ, ಶ್ರಾವಣಮಾಸದ ಪಾವಿತ್ರ್ಯವನ್ನು ಬೇಂದ್ರೆ ಸಾರಿದ್ದಾರೆ.

* * * * * *

## ಮಂಗಳ, ಮಿಲಿಂದ, ಸ್ಮಿತ

**ಸಖೀ ಸ್ಮರಣ ಮುಕುರದಲ್ಲಿ/ ಮಂಗಲ ಮುಖ ದೂರದಲ್ಲಿ/ ಆ ಮಿಲಿಂದ ತೀರದಲ್ಲಿ/ ಮಧುರಸ್ಮಿತ ಪೂರದಲ್ಲಿ/ ಬರುತಲಿಹುದು ಶ್ರಾವಣಾ/ ಮತ್ತೆ ಬಂತು ಶ್ರಾವಣಾ (6–1 ರಿಂದ 6).**

*ಕವಿ ಬೇಂದ್ರೆಯವರಿಗೆ ದಾಂಪತ್ಯದ ಅಮರ ಮುಖ ನೆನಪಾದಾಗ ದಿವಂಗತ ಸಖಿ ಲಕ್ಷ್ಮೀಬಾಯಿಯವರ ನೆನಪಾಗುತ್ತದೆ. ಆ ಸ್ಮರಣೆಯ ಕನ್ನಡಿಯಲ್ಲಿ ಅವರಿಗೆ ಕಾಣುವುದು ಆ ದಾಂಪತ್ಯದ ಫಲವಾದ ಮಧುರ ಮಗಳು ಮಂಗಲೆಯ ಮುಖ. ಆ ಮಗಳು ಹತ್ತಿರದಲ್ಲಿಲ್ಲ. ಅವಳು ದೂರದಲ್ಲಿ ತನ್ನ ಮಗ ಮಿಲಿಂದ ಮತ್ತು ಮಗಳು

ಸ್ಮಿತಳ ಆನಂದದ ಪೂರದಲ್ಲಿದ್ದಾಳೆ. ಅವಳ ಆನಂದವೇ ತಂದೆಯ ಆನಂದ. ಹೀಗೆ ಬೆಳವಣಿಗೆಯ ಸದಾ ಹಸಿರಿನ ಸಂಕೇತವಾಗಿ ಸಂತೋಷವನ್ನು ತರುತ್ತ ಶ್ರಾವಣಾ ಮತ್ತೆ ಬಂತು ಎಂಬುದು ಈ ಕಾವ್ಯದ ಮಿಡಿತ.

* * * * * *

## ಬ್ರಹ್ಮರಂಧ್ರ, ಬೆನ್ ಬಿದಿರು, ಶೇಷ

**ಬ್ರಹ್ಮರಂಧ್ರ ಗೀತಾಗಮ/ ಬೆನ್ ಬಿದಿರಿಗೆ ಧ್ವನಿ ಸಂಗಮ/ ಶೇಷ ಶ್ವಾಸ ಸಮ ಘಮಘಮ/ ಜೀವ ಭಾವ ಹೃದಯಂಗಮ/ ಬರುತಲಿಹುದು ಶ್ರಾವಣಾ/ ಮತ್ತೆ ಬಂತು ಶ್ರಾವಣಾ.**(7–1 ರಿಂದ 6)

*ಶ್ರಾವಣದ ಜೀವಸೃಷ್ಟಿಯ, ಪೋಷಣೆಯ, ಆಹ್ಲಾದದ ಗುಣವನ್ನು ಹೇಳುತ್ತ ಬೇಂದ್ರೆಯವರು ನಮ್ಮ ಭಾರತೀಯ ಚಿಂತನೆಯ ಅಧ್ಯಾತ್ಮ ನೆಲೆಯ ಪ್ರಕಾಶವನ್ನು ಶ್ರಾವಣ ತನಗೆ ನೀಡಿತು ಎಂದು ಸಾರಿದ್ದಾರೆ.

ಶಿರದಲ್ಲಿರುವ ಸಹಸ್ರದಲವೇ ಬ್ರಹ್ಮರಂಧ್ರ. ಅಲ್ಲಿಂದಲೇ ಈ ಶರೀರಕ್ಕೆ ಪ್ರಾಣ ಪ್ರವೇಶ, ಅಲ್ಲಿಯೇ ಅಧ್ಯಾತ್ಮದ ಧ್ವನಿ ಕೇಳಿಸುವುದು. ಅದೇ ಯೋಗಸಾಧನೆ. ಅದನ್ನು ಸಾಧಿಸುವಂತೆ ಈ ಶರೀರ ರಚನೆಯಾಗಿದೆ. ಆ ಬ್ರಹ್ಮರಂಧ್ರ ಗೀತೆಯನ್ನು ನುಡಿಸುವಂತೆ ಈ ಬೆನ್ನುಹುರಿ ಬಿದಿರಾಗಿದೆ. ಬೆನ್ನು ಮೂಳೆಯಲ್ಲಿ ಇಪ್ಪತ್ತೆರಡು ಕೊಂಡಿಗಳಿವೆ. ಸಂಗೀತದಲ್ಲಿ ಇಪ್ಪತ್ತೆರಡು ಶ್ರುತಿಗಳು ಇವೆ. ಈ ಶರೀರದಲ್ಲಿಯೇ ಕಾವ್ಯ ಶುರುವಾಗುತ್ತದೆ. ಕಾವ್ಯ ಎಲ್ಲಿಯೋ ಹೊರಗಿನಿಂದ ಬಂದು ಸೇರುವುದಿಲ್ಲ. ಅದು ಶರೀರದಲ್ಲಿಯೇ ಅತಿ ಸಹಜವಾಗಿ ಶ್ರುತಿಯಂತೆ ಹೊಮ್ಮುವಂತಹದು. ಹಾಗಾಗಿ ಕವಿ ನುಡಿದಿದ್ದಾರೆ: 'ನಾದವಿದು ಯಾವುದೋ ಅಗಾಧ ತಳದಿಂ ಬಂತು। ಉದೋದಿದೋ ಶ್ರಾವಣ.'

'ಶೇಷ'ವೆಂದರೆ ಕುಂಡಲಿನೀ ಶಕ್ತಿಯ ಸರ್ಪ. ಅದು ಮೂಲಾಧಾರದಲ್ಲಿರುವುದು. ಮೂಲಾಧಾರದ ಶೇಷ ನಮ್ಮ ಉಸಿರಾಟಕ್ಕೆ ತಿಳಿಯಬೇಕು. ಹಾಗೆ ತಿಳಿದು ಸರ್ಪಶಕ್ತಿ ಜಾಗೃತವಾದರೆ ಚಂದನದ ವಾಸನೆ ಬರುತ್ತದೆ ಎಂದು ಹೇಳುತ್ತಾರೆ. ಹಾಗೆ ಜಾಗೃತಗೊಂಡ ಚಿತ್‌ಶಕ್ತಿಯಿಂದ ಯೋಗಿಯ ತನು-ಮನ ಘನವಾಗುತ್ತದೆ. ಆಗ ಜೀವಭಾವಕ್ಕೆ ಸರಿ ಹೊಂದಾಣಿಕೆಯಾಗಿ ಹೃದಯಂಗಮವಾಗುತ್ತದೆ. ಆಹ್ಲಾದದ ರಸೋತ್ಪತ್ತಿಯಾಗುತ್ತದೆ. ಹೀಗೆ ಹೃದಯಂಗಮವಾದ ಅನುಭವವನ್ನು ನೀಡುವ ಶ್ರಾವಣ ಮತ್ತೆ ಬಂತು ಎಂದು ಕವಿಯು ಹಾಡಿದ್ದಾರೆ. ಶ್ರಾವಣದಲ್ಲಿ ಕಾವ್ಯ ರೂಪುಗೊಳ್ಳುವ ಹಸಿರಾಗಿ ಹೊಮ್ಮಿ ಸಹೃದಯರ ಹೃದಯ ಪ್ರವೇಶಿಸುವ ಸಹಜ ಶಕ್ತಿಯನ್ನು ಬಣ್ಣಿಸಿದ್ದಾರೆ. ಇದು ಜೀವಲೋಕದ, ಮನುಕುಲದ ಗಾಥೆಯಾಗಿ, ವ್ಯಕ್ತಿ ಅದರ ಒಂದು ಭಾಗವಾಗಿ ತಲ್ಲೀನಗೊಳ್ಳುವ ಶ್ರಾವಣದ ಧ್ಯಾನವಾಗಿದೆ.

---

## ೨೪. ಚತುರೋಕ್ತಿ ಮತ್ತು ಇತರ ಕವನಗಳು (೧೯೭೭)

### ಅಹಾ-ಊಹಾ

**ಅಹಾ, ಊಹಾ, ಫಡಕು**

**ಅಹಾ ಅನ್ನದ ಊಹಾ ಏನು ಬಂತು? (1)**

**ಯಾಕ ಕಣ್ಮುಚ್ಚಿ ದುಡುಕಬೇಕು?/ ಫಡಕು ತೆರೆದು ಹುಡುಕಬೇಕು. (2-1)**

: ವಿಸ್ಮಯ; ಆಶ್ಚರ್ಯ.

: ಅನುಮಾನಿಸಿ ತಿಳಿಯುವ ಕ್ರಮ; ತರ್ಕ; ಊಹೆ.

: ಬಾಗಿಲು, ಕಿಟಕಿ ಮೊದಲಾದವುಗಳ ಕದ,-ರೆಕ್ಕೆ.

*ಚತುರೋಕ್ತಿ ಕವನಗಳು ದಶಪದಿ ಛಂದಸ್ಸಿನಲ್ಲಿವೆ. ಈ ಛಂದಸ್ಸಿನಲ್ಲಿ ಬೇಂದ್ರೆ ಅವರು 32 ಕವನಗಳನ್ನು ರಚಿಸಿದ್ದಾರೆ. 'ದಶಪದಿ ಛಂದಸ್ಸಿನ ರಚನೆ ವರಕವಿ ದ.ರಾ ಬೇಂದ್ರೆಯವರ ನೂತನ ಸೃಷ್ಟಿ. ಒಂದೇ ಸಾಲಿನ ಭಾವವನ್ನು-ಎರಡು, ಮೂರು ಮತ್ತು ನಾಲ್ಕು ಸಾಲಿಗೆ ಹಿಗ್ಗಿಸಿ, ಹಿಗ್ಗು ಕೊಡುವ ಛಂದೋ ಪ್ರಕಾರ ಇದು.'

ಬೇಂದ್ರೆ ಬಳಸಿದ ದಶಪದಿ ಎಂಬ ಛಂದಸ್ಸು ಛಂದಸ್ ಶಾಸ್ತ್ರಕ್ಕೆ ಹೊಸ ಕೊಡುಗೆ. 1+2+3+4=10. ಒಂದು ಬೀಜಕ್ಕೆ ನಾಕುದಳ ಚತುರೋಕ್ತಿ. ಇಂಥ ಚತುರೋಕ್ತಿಗಳ ಸಮುಚ್ಚಯ-ಹತ್ತೆ ಸಾಲಿನ ಆಕೃತಿ ಹೊಂದಿದೆ. ಪರಿಪೂರ್ಣತೆಯ ದಶ+ಮ ಸ್ಥಿತಿ, ಶಮದ ಸ್ಥಿತಿ- ಶಾಂತಿಯ ನಿಲುವು.'(ಔದುಂಬರಗಾಥೆ ಸಂಪುಟ-1, ಪುಟ 21)

ಮನಸ್ಸು 'ಅಹಾ' ಎಂದು ವಿಸ್ಮಯಕ್ಕೊಳಗಾಗದಿದ್ದರೆ ಊಹೆ ಸಾಧ್ಯವಿಲ್ಲ. ಕಣ್ಣು ತೆರೆದು, ಮನಸ್ಸಿನ ಕಿಟಕಿಯ ಕದತೆರೆದು ಐಂದ್ರಿಯಿಕ ಸೌಂದರ್ಯದಲ್ಲಿ ಮೀಯಬೇಕು. ಆಗ ಕಲ್ಪನಾಲಹರಿಯು ಗರಿಗೆದರುತ್ತದೆ.

---

### ಇಸ್ತ್ರೀವ್ಯಸನ

**ಲಲನೆ, ನಲಿನ**

**ಲಿಲೀ ಲಿಲೀ ಲಾಲೀಹಾಡ ಹಾಡತಾಳ$_s$ ಲಲ$_s$ನಾ/ ನಲೀ ನಲೀ ನೀರಿನಲ್ಲಿ$_s$ ನೋಡತಾವ$_s$ ನಲ್ಲಿ$_s$ನಾ. (2-1, 2)**

: ಹೆಂಗಸು; ಹೆಣ್ಣು; ಸ್ತ್ರೀ.

: ತಾವರೆ; ಕಮಲ.

---

## ಗರಗರ

**ಡೂಗು**

**ಮುಖಾನ ಇಲ್ಲ ಮೂಗ್ಯಾಕ?/ ಮೈನ ಇಲ್ಲಾ ಡೂಗ್ಯಾಕ? (2–1, 2)**

: ಬಾಗು; ವಕ್ರವಾಗು; ಗೂನಾಗು.

* * * * * *

**ಪನಿವಾರ, ಕಂತಿ, ಸುಂತಿ.**

**ಜಾತ್ರಿಗೆ ಜನಿವಾರ ಹಾಕಿಲ್ಲಾ/ ಯಾತ್ರಿಗೆ ಪನಿವಾರ ಹಂಚಿಲ್ಲಾ/ ಕಲ್ಲಿಗೆ ಕಂತೀ ಕಟ್ಟಿಲ್ಲಾ/ ತಂತೀದು ಸುಂತೀ ಮಾಡಿಲ್ಲಾ (4–1, 2, 3, 4)**

: ಭಕ್ಷ್ಯ; ತಿಂಡಿ.

: ಲಿಂಗಗಳಿಗೂ, ಬಸವನ ವಿಗ್ರಹಗಳಿಗೂ ಲೇಪಿಸುವುದಕ್ಕಾಗಿ ತಯಾರಿಸಿದ ಗೇರೆಣ್ಣೆ ಹಾಗೂ ಕಾಡಿಗೆಯ ಕರಿಯ ಮಿಶ್ರಣ.

: (ಯೆಹೂದ್ಯರು ಮತ್ತು ಮುಸಲ್ಮಾನರಲ್ಲಿ) ಗಂಡಸಿನ ಜನನಾಂಗದ ಮುಂದೊಗಲ ಭಾಗವನ್ನು ಕತ್ತರಿಸುವ ಧಾರ್ಮಿಕ ವಿಧಿ, ಮತ ಸಂಸ್ಕಾರ.

---

## ನಾ–ತಾ

**ಬೆನ್ನೀರು**

**ಬೆನ್ನೀರೊಳಗ ತಣ್ಣೀರ್ಹಾಕಬೇಕು (3–3)**

: ಬಿಸಿನೀರ್.

---

## ಬಸವ–ಮುಸವ

**ಮುಸವ, ಹೊಸದು, ಕಸಕ, ಕಿಸು**

**ಬಸವನ ಬೆನ್ನು ಮುಸವ ಹತ್ತಲಾರದು. (1)**

**ಹೊಸದಿದ್ದರ ಹೊಸದು ನೋಡಬ್ಯಾಡ/ ಕಸಕಿದ್ದರ ಕಿಸಿದು ತೋರಬ್ಯಾಡ (2–1, 2)**

: ಕರಿಯ ಮುಖವೂ ಉದ್ದ ಬಾಲವೂ ಉಳ್ಳ, ಒಂದು ಬಗೆಯ ದೊಡ್ಡ ಗಾತ್ರದ ಕಪಿ; ಗೋಲಾಂಗೂಲ.

: 1. ನೂತನವಾದುದು; ನವೀನವಾದುದು.

2. ಹೊಸದು; (ಹಗ್ಗ, ನೂಲು ಮೊದಲಾದುವುಗಳನ್ನು) ತಿರಿಚು; ಹುರಿಮಾಡು.

: ಎಳಕಲು; ಬಲಿಯದೆ ಇರುವಂತಹದು; ಹೀಚು.

: ಅಗಲವಾಗಿಸು; ಹಿಗ್ಗಿಸು; ತೆರೆ.

*ಹೊಸ ಸ್ನೇಹ, ಸಂಬಂಧ ಮಾಡುವಾಗ ಹೆಚ್ಚು ಹೊಸೆಯಬಾರದು. ಅದು ತನ್ನ ಹುರಿಯನ್ನು ಸಡಿಲವಾಗಿಸುತ್ತದೆ. ಎಳಕಲು, ಹೀಚಾದ ಭಾವ ಆಲೋಚನೆಯನ್ನು ತೆರೆದು ತೋರಿದರೆ ವ್ಯಕ್ತಿತ್ವಕ್ಕೆ ಕುಂದುಂಟಾಗುತ್ತದೆ. ಈ ಮೇಲಿನ ಸಾಲುಗಳಲ್ಲಿ ಕವಿಯ ಲೋಕಾನುಭವ ಕಾವ್ಯಾನುಭವವಾಗಿ ಹುರಿಗೊಂಡಿದೆ.

---

## ಬೆಲ್ಲಾ–ಇರಿವಿ

**ಇರವು, ಅಖಂಡ**

**ಅಲ್ಲಮನ ಮ್ಯಾಲೆ ಇರಿವಿ ಆಡೋದಿಲ್ಲಾ. (1)**

ಬೆಲ್ಲಕ್ಕ್ಯಾಕ ಬ್ಯಾರೇ ಸವಿ?/ ಭಕ್ತಗಿಲ್ಲಾ ಬ್ಯಾರೇ ಕಿವಿ (2–1, 2)

ಕನ್ನಡೀ, ನೆರಳ ಕಂಡಿಲ್ಲಾ/ ಮೌನಾ, ಮಾತ ಉಂಡಿಲ್ಲಾ/ ಅಖಂಡಕ್ಕ ತುಂಡಿಲ್ಲಾ. (3–1 ರಿಂದ 3)

: ಜೀವನ; ಬಾಳು.

: ನಡುವೆ ಕತ್ತರಿಸಿ ಹೋಗದ; ಅವಿಚ್ಛಿನ್ನವಾದ; ಪೂರ್ಣವಾದ.

*ಕವಿಯ ಚತುರೋಕ್ತಿ ಬೆಡಗಿನದಾಗಿದೆ. ಮೊದಲ ಸಾಲು ಅಲ್ಲಮನಲ್ಲಿ ಲೌಕಿಕ ಜೀವನದ ತೊಳಲಾಟಗಳಿಲ್ಲ ಎಂದು ಹೇಳುತ್ತ, ಅವನಲ್ಲಿ ಅರಿವು ಆಡುತ್ತಿದೆ ಎಂದು

ಓದುಗ ತಿಳಿಯುವಂತೆ ಮಾಡುತ್ತದೆ. ಅವನ ವಚನಗಳ ಸವಿ ಮತ್ತು ಭಕ್ತಿಯನ್ನು ಪ್ರತಿಮಾತ್ಮಕವಾಗಿ ಎರಡನೆಯ ನುಡಿಯ ಎರಡು ಸಾಲುಗಳು ತಿಳಿಸುತ್ತವೆ. ಮೂರನೆಯ ನುಡಿಯ ಮೊದಲ ಸಾಲು 'ಕನ್ನಡೀ, ನೆರಳ ಕಂಡಿಲ್ಲಾ'ಅಲ್ಲಮನ ಬೆಳಕನ್ನು ಪ್ರತಿಮಾತ್ಮಕವಾಗಿ ಅಭಿವ್ಯಕ್ತಿಸಿದೆ. ಎರಡನೆಯ ಸಾಲು 'ಮೌನಾ, ಮೌತ ಉಂಡಿಲ್ಲಾ' ಅವನ ವಚನಗಳು ಅವನ ಒಳಗಿನ ನಿಶ್ಶಬ್ದದ ವಾಹಕಗಳು ಎಂಬುದನ್ನು ಬೆಡಗಿನಲ್ಲಿ ಹೇಳಿದೆ. ಮೂರನೆಯ ಸಾಲು ಅವನ ಅವಿಚ್ಛಿನ್ನ ಚಿಂತನೆಗೆ ಸಾಕ್ಷಿಯಾಗಿದೆ.

---

## ಅರವು–ಮರವು

### ಹೊಳಲು

**ಸೀಧಾ ಸೀಧಾ ಐತಿ ಸಿದ್ಧರ ಹಾದಿ/ ಕೊಳಲು ಊದೋದು ಹೊಳಲ ಬೀದಿ,/ ಅರ್ಥಾ ಹುಡುಕಲಿಕ್ಕೆ ಹೋದಗೀದಿ. (3–1, 2, 3)**

: 1. ಊರು; ಪಟ್ಟಣ; ನಗರ.

2. ಪ್ರತಿಧ್ವನಿ; ಮಾರ್ದನಿ.

*ಭಾರತೀಯರ ಪ್ರೇಮಭಾವದ ಸಂಕೇತ ಕೊಳಲು. ಶ್ರೀಕೃಷ್ಣನ ಕೊಳಲ ನಾದ ಉಂಟು ಮಾಡಿದ 'ಅರವು–ಮರವು', ಅದರ ಹಲವು ನೆನಪಿನ ಝುರಿಗಳು ಈ ನಾಡಿನಲ್ಲಿ ಹರಿಯುತ್ತಿರುವುದನ್ನು ರೂಪಕಾತ್ಮಕವಾಗಿ 'ಕೊಳಲು ಊದೋದು ಹೊಳಲ ಬೀದಿ' ಅಭಿವ್ಯಕ್ತಿಸಿದೆ. ಅದು ಸವಿ. 'ಅರ್ಥಾ ಹುಡುಕಲಿಕ್ಕೆ ಹೋದಗೀದಿ' ಎಂದು ಕವಿ ಸವಿಯ ಅನುಭಾವಿಯಾಗಲು ಸಹೃದಯನಿಗೆ ತಿಳಿಸಿದ್ದಾರೆ. ಕೊಳಲಿನ ನಾದದಿಂದ ಪಟ್ಟಣವು ಮಾರ್ದನಿಸುತ್ತ ಕಂಗೊಳಿಸುವುದನ್ನು ಈ ನುಡಿಯು ಧ್ವನಿಸುತ್ತದೆ.

---

## ಕೆತ್ತೇಬರ್ಝೀ

### ಕೆತ್ತೇಬರ್ಝೀ

**ಗಾಳಿಯೊಳಗ ಬ್ಯಾಳಿ ಬಿತ್ತಿ/ ಬೆಳಿ ಅಂಬೋದು ಏನು ಕೆತ್ತೀ?/ ಕೆತ್ತೇಬರ್ಝೀ! ಯಾಕ ಬೆನ್ನು ಹತ್ತೀ? (3–1, 2, 3)**

: (ಉಕ)ಅಧಿಕ ಪ್ರಸಂಗ; ಅನಾವಶ್ಯಕ ಉಪದ್ವ್ಯಾಪ.

---

## ಋಷಭಾ–ರಾಸಭಾ

**ರಾಸಭಾ**

**ರಾಸಭಾ ಮಾತ್ರ ಬೆದರತೈತಿ ಡೊಣ್ಣೆಗೆ (4–4)**

: ಕತ್ತೆ; ಗಾರ್ಧಭ.

---

## ಪತಂಗದ ಹಾರಾಟ

**ಪತಿ**

**ಪತಿ ಪತೀ ಹಚ್ಚಿಕೊಂಡು ಹಾರತದ ಪತಂಗ! (1)**

: ಗಾಳಿಪಟದ ತಳಕ್ಕೆ ಅಳವಡಿಸಿರುವ ಬಾಲದಂತಹ ಬಟ್ಟೆಯ ಅಥವಾ ಕಾಗದ ತುಂಡು ತುಂಡು ಅಂಟಿಸಿದ ತೆಳುವಾದ ಪಟ್ಟಿ.

---

## ದರವೇಶಿ ಮಕಾಣ

**ದರವೇಶಿ, ಮಕಾಣ**

**ದರ್ವೇಶಿಗೂ ಮಕಾಣ ಬೇಕು (4–4)**

: 1. ಮುಸಲ್ಮಾನ ಸಾಧು; ಫಕೀರ.

2. ದರಿದ್ರನಾದವನು; ಬಡವ.

: ಮಕಾನು, ವಾಸಮಾಡುವ ಸ್ಥಳ; ಮನೆ; ನಿವಾಸ.

---

## ದತ್ತ–ಉಗಾಭೋಗ

**ಮೂನಾ, ಸನ್, ಒನ್**

**ಒಮ್ಮೆ ಮೂನಾ! ನೀನು ಸನ್ನಾಗಿ ಬಾ (1)**

**ಮತ್ತೆ ಒನ್ನಾಗಿ ಬಾ/ ಮತ್ತೆ ಚೆನ್ನಾಗಿ ಬಾ (2–1, 2)**

: Moon.

: Sun.

: One.

*ಭಾವಸಂದರ್ಭ: ಹಿಂದೂಸ್ಥಾನದ ಪೂಜ್ಯವಸ್ತು ಸನ್- Sun. ಪಾಕಿಸ್ತಾನದ ಪೂಜ್ಯವಸ್ತು ಮೂನ್- Moon. ಇವು ಒನ್ನಾಗಬೇಕು- One ಆಗಬೇಕು ಎಂಬ ಸಾಮರಸ್ಯ ಸಂದೇಶದ ಕವನ.

---

## ಚದುರಾ–ಚದುರೆ

**ಪುರೆ**

**ರೇ, ರೇ, ರೇ,/ ಹೇಳಿರೆ–ಕೇಳಿರೇ/ ವಿರಸ ಕ್ರೀಡೆಯಾಗದಿರೆ,/ ಪುರೆ, ಇರೆ, ಒಂದಾಗಿ. (4–1 ರಿಂದ 4)**

: ಸಾಕು, ಇನ್ನು ಬೇಡ ಎಂಬರ್ಥದ ಮಾತು. (ಮರಾ.–ಪುರೇ)

*ಪಾನಕ್ರೀಡೆ ವಿರಸಕ್ರೀಡೆಯಾಗದಿರಲಿ ಎಂಬ ಆಶಯದ ಕವನ.

---

## ಅಮರ

**ಕಮತಾ**

**ಇಲ್ಲಾ ಭೂತಾ, ಭ್ರಮರಾ/ ಕಂಪಲ್ಲಾ ಕಮತಾ (2–1, 2)**

: ಕಮಟು; ಗಬ್ಬು ವಾಸನೆ; ಅಸಹ್ಯವಾಸನೆ; ವಿಶೇಷವಾಗಿ ಬಹಳ ದಿನ ಇಟ್ಟ ಕೊಬ್ಬರಿ, ಹೊಲಸು ಬಟ್ಟೆ. ಮೊದಲಾದುವುಗಳಿಂದ ಬರುವ ವಾಸನೆ; ತುಪ್ಪ ಅಥವಾ ಎಣ್ಣೆ ಸುಟ್ಟ ವಾಸನೆ.

*ಮನುಷ್ಯನನ್ನು ಕಾಡುವುದು ಭೂತ, ಚಾಂಚಲ್ಯ, ಕಂಪು ಅಲ್ಲ. ಅರಿಷಡ್ವರ್ಗಗಳನ್ನು ಜಯಿಸಲಾರದೆ ಕಮಟು ಹಿಡಿದು ಹೋಗಿರುವ ಅವನದೇ ಅಸಹ್ಯ ವಾಸನೆ.

---

## ಇತಿಹಾಸ- ರಿಫ್ಯೂಜ್ಡ್ ಬಲ್ಬು

**ಕಂಡಾಬಟ್ಟೆ**

**ಅಡ್ಡಗೋಡೆಯ ಮೇಲೆ ದೀಪವಿಟ್ಟೆ/ ಕಣ್ಣಿದ್ದವ ಕಂಡಾನು,/ ಕುರುಡನಿಗೆ-ಕಂಡಾಬಟ್ಟೆ.(3-1, 2, 3)**

: ಮನ ಬಂದಹಾಗೆ; ಮಿತಿಯಿಲ್ಲದೆ; ಸಿಕ್ಕಾಪಟ್ಟೆ.

---

## ಮಂತ್ರ-ಪುಷ್ಪ-ರತ್ನ

**ನೂತ್ನ**

**ಈ ಹರಳು ಯಾವ ರತ್ನ? (1)**

**ಇದು ಸಹಜ ಅಯತ್ನ/ ಮೈ ಮೈಯು ನೂತ್ನ! (2-1, 2)**

: 1. ನೂತನ.

2. ಸುಂದರವಾದ; ಸೊಗಸಾದ; ಚೆಲುವಾದ.

---

## ಕೃತ್ಸ್ನ ಕಂಸ

**ಕೃತ್ಸ್ನ, ಕಂಸ**

**ಒಲವಿಗಿದೆ ಮಧ್ಯ ಸೂತ್ರ/ ನಲಿವು. ನಲ್ಮೆ- ನೇತ್ರ/ ಕಂಸನಲಿ ಕೃಷ್ಣ ಗಾತ್ರ/ ಕೃತ್ಸ್ನ, ರಂಗ, ಅನೇಕ ಪಾತ್ರ. (4-1 ರಿಂದ 4)**

: ಪೂರ್ಣ (ಪೂರ್ತಿಭಾಗ).

: ಅಪೂರ್ಣ (ಕಾಲುಭಾಗ).

*ಕಂಸನಿಗೆ ಹೋಲಿಸಿದರೆ ಕೃಷ್ಣ ಹಿರಿಮೆಯುಳ್ಳವನು (ಗಾತ್ರ) ನಿಜ. ಆದರೆ, ಲೀಲೆಯಲ್ಲಿ ಎಲ್ಲವೂ ಪೂರ್ಣವೇ (ಕೃತ್ಸ್ನ) ಆಗಿದೆ, ರಂಗ ಎಂಬ ಪದಕ್ಕೆ ಕೃಷ್ಣ ಎಂಬ ಅರ್ಥವೂ ಉಂಟು ಹಾಗೆಯೇ ಲೀಲಾನಾಟಕ ಎಂಬ ಅರ್ಥವೂ ಉಂಟು. ಅವನೇ ಅನೇಕ ಪಾತ್ರದಲ್ಲಿ ಮೈದಾಳಿರುವನು.

---

# ಪಾಯಕ್ಕೆ ಯಾವ ಪಾಯಾ?

**ಪಾಯಕ್ಕೆ ಯಾವ ಪಾಯಾ?, ಸ್ಥಲೋ ವಿಶಿಷ್ಟಃ**

**ತ್ರಿವಿಕ್ರಮೋ ವಿಷ್ಣುಃ ಶಿಪಿವಿಷ್ಟಃ/ ಓಂ ಇಷ್ಟೋಘವಿಷ್ಟಃ/ ಹೃದಯಾವಿಷ್ಟಃ/ ಸ್ಥಲೋ ವಿಶಿಷ್ಟಃ (4-1 ರಿಂದ 4)**

*ಪಾಯಕ್ಕೆ ಯಾವ ಅಪಾಯ? ಎಂದೂ ಓದಿಕೊಳ್ಳಬಹುದು. ಪಾಯವೆಂದರೆ ಬಲಿ ಚಕ್ರವರ್ತಿ. ಅವನನ್ನು ವಾಮನ ತುಳಿದರೂ ಅವನಿಗೆ ಯಾವ ಅಪಾಯ ಒದಗಿ ಬರುತ್ತದೆ? ಎಂದು ಕೇಳುತ್ತಿರಬಹುದು. ಏಕೆಂದರೆ ಪಾತಾಳದಲ್ಲಿ ಬಲಿಗೆ ಮಹಾವಿಷ್ಣುವೇ ಕಾವಲುಗಾರನಾಗಿ ನಿಂತಿರುವನು ಎಂಬ ಉಲ್ಲೇಖ ಪುರಾಣಗಳಲ್ಲಿದೆ.

ತ್ರಿವಿಕ್ರಮನಾದ ವಿಷ್ಣುವು ಬೆಳಕನ್ನು ನೀಡುವವನು. ಇಷ್ಟವಾದುದನ್ನು ನೀಡುವವನು. ಹೃದಯದಲ್ಲಿ ನೆಲೆಸಿರುವವನು. ದೃಢನಾದವನು ಮತ್ತು ವಿಶಿಷ್ಟನು.

---

# ಕಾಳ್ಯೋಮಾಳ್ಯೋ

**ಕಾಳ್ಯೋಮಾಳ್ಯೋ**

*ಮಳೆ ಬರುವಾಗ ಮಕ್ಕಳು ಆ ಮಳೆಗೆ ಮೈಯೊಡ್ಡಿ ಸಂಭ್ರಮಿಸುವ ಆಟ. 'ಕಳ್ಳೆ-ಮಳ್ಳೆ' ಎನ್ನುವುದು ದೇಸಿರೂಪ.

ಮಳೆ ಶುರುವಾದ ತಕ್ಷಣ ಮಕ್ಕಳು ಅಂಗಳಕ್ಕೆ ಇಳಿದು ತಮ್ಮ ಎರಡೂ ಕೈಗಳನ್ನು ಎಡ-ಬಲ ಬದಿಗೆ ಮಾರುಗೈಯಾಗಿ ಚಾಚಿ ನಿಂತಲ್ಲೇ ಬುಗುರಿಯಂತೆ ಸುತ್ತುವ ಸಂತೋಷವನ್ನು ಅನುಭವಿಸಿಯೇ ತಿಳಿಯಬೇಕು. ಹೀಗೆ ಆಡುವ ಸಂದರ್ಭದಲ್ಲಿ ಮಕ್ಕಳು

"ಕಳ್ಳೆ ಮಳ್ಳೆ ಕಪತ್ತ ಮಳ್ಳೆ/ ಬಾರೋ ಬಾರೋ ಮಳೆರಾಯ/ ನಮ್ಮಯ ತೋಟಕೆ ನೀರಿಲ್ಲ" ಎಂದು ಪದೇ ಪದೇ ಅದನ್ನೇ ಹಾಡಿಕೊಳ್ಳುತ್ತ ಮಳೆಯನ್ನು ಕರೆಯುವ ಅಭೀಪ್ಸೆಯನ್ನು ವ್ಯಕ್ತಪಡಿಸುತ್ತಾರೆ.

* * * * * *

**ಭುಭೂಷೆ**

**ಭುಭುಃಕಾರದಲಿ ಭುಭೂಷೆ ಅಂಕುರ/ ಇದು ಆಶಾ ತಂತು/ ಮುಕ್ತಿ ಪಂಕದಲಿ ಭಕ್ತಿಯ ಪಂಕಜ/ ಮೂಡುತ್ತಿರಲಿಂತು (2-1 ರಿಂದ 4)**

: ಭೋಗಿಸುವ, ಅನುಭವಿಸುವ ಇಚ್ಛೆಯುಳ್ಳವನು.

*ಕೆಸರಿನಿಂದ ಕಮಲ ಅರಳುವ ಹಾಗೆ ಭಗವಂತನ ಕರುಣೆಯಿಂದ ಭೋಗವೇ ಯೋಗಕ್ಕೆ ನಾಂದಿಯಾಗುತ್ತದೆ ಎಂದು ಕವಿ ನುಡಿದಿರುವರು.

---

## ಭಾವ–ನವ–ನೀತ

**ಗಡಂಗಡಪ್**

**ನೆನೆನೆನೆಥಾಂಗ ನೆಪ್ಪಿನ ಹಿಂದ$_s$/ ಆತೋ ಗಡಂಗಡಪ್ಪಾ$_{sss}$. (1–6)**

: ಅಡಗುವಿಕೆ; ಕಣ್ಣಿಗೆ ಕಾಣದಾಗುವಿಕೆ; ಮರೆಯಾಗುವಿಕೆ.(ಹಿಂ.ಮರಾ.ಗಡಪ್; ಅರ. ಗರ್ಬ್)

*ಮನಸ್ಸಿನಲ್ಲಿ ಭಾವ ಹರಿದು ಬರುವ ಬಗೆಯನ್ನು ಕವಿ ಗಗನದ ನೀಲಿಯಲ್ಲಿ ತೇಲಿ ಬರುವ ಕಪ್ಪು ಮೋಡ ಮತ್ತು ನೀರಿನ ತೆರೆಯ ಮೇಲೆ ತೇಲಿಬರುವ ತೆಪ್ಪಕ್ಕೆ ಹೋಲಿಸುತ್ತಾರೆ. ಆದರೆ, ಅವುಗಳ ಚಮತ್ಕಾರವನ್ನು ಹಿಡಿಯಬೇಕೆಂದು ನೆನೆಯುವಾಗ ಅವು ನೆಪ್ಪಿನ ಹಿಂದೆ ಮರೆಯಾಗಿ ಹೋಗುವುದನ್ನು 'ಗಡಂಗಡಪ್ಪಾ' ಆಡುನುಡಿಯಲ್ಲಿ ಅಭಿವ್ಯಕ್ತಿಸಿದ್ದಾರೆ.

* * * * * *

**ಆಶಿಸು, ಇಷಾ, ತೆರಿ, ಮೆಲುಕು.**

**ಏನೋ ಆಶಿಸುವಾ, ಎಂತೋ ಆಶಿಸುವಾ,/ ಇಷಾ, ಇಷಾ, ಹೂವಿಸುವಾ/ ತೆರೀ ಹಿಂದ ತೆರಿ; ತೂರೀ ಹಾಲಿಗೇ/ ಬೆಣ್ಣೆ ಹ್ಯಾಂಗ ಬಂತೋ$_s$/ ಹೋಗ ಹೋಗತ$_s$ ಮೆಲಕು ಹಾಕತಿರು/ ಗೆಣೆಯಾ, ನಿಂತೊ, ಕುಂತೋ$_s$ (3–1 ರಿಂದ 6)**

: ಬಯಸು; ಹಾರೈಸು; ಕೋರು.

: ರಸವುಳ್ಳದ್ದು; ಶಕ್ತಿಯುತವಾದುದು.

: ವ್ಯಕ್ತಪಡಿಸು.

: (ಎತ್ತು, ಒಂಟೆ ಮುಂತಾದ ಪ್ರಾಣಿಗಳು) ಅರೆ ಜೀರ್ಣವಾದ ಆಹಾರ ಪದಾರ್ಥವನ್ನು ಮರಳಿ ಬಾಯಿಗೆ ತಂದುಕೊಂಡು ಅಗಿ–ನುರಿಸಿ ನುಣ್ಣಗೆ ಮಾಡುವಿಕೆ.

*ಭಾವ ಲಹರಿಯಲ್ಲಿ ಏನೋ ಎಂತೋ ಹಾರೈಸುತ್ತ, ರಸವನ್ನು ಹೂವಾಗಿಸುತ್ತ ಅದನ್ನು ಒಳಮನದಿಂದ ವ್ಯಕ್ತಪಡಿಸುವುದು ಭಾವಗೀತೆ. ಗೆಳೆಯನೆ, ಅದು ಹೇಗೆ ಎಂದು

ತಿಳಿಯಲು ನಿಂತಾಗ ಕುಂತಾಗ- ಹಾಲಿನಲ್ಲಿ ಬೆಣ್ಣೆ ಹೇಗೆ ಬಂತು-ಎಂಬುದನ್ನು ಮೆಲುಕು ಹಾಕುತ್ತಿರು. ಆಗ ಹೊಳೆದೀತು 'ಭಾವ-ನವ-ನೀತ'.

---

## ಕನಸಿನ ಕೆನಿ

**ಬಳ್ಳ, ಸೆಲಿ**

**ಬಳ್ಳ ಬಳ್ಳ ಸೆಲೀಯೊಳಗ್ಸ ನೆಳ್ಳ ನೀಡಬ್ಯಾಡಾ ನಿಂತು/ ಮುಳುಗು ಹಾಕು ಮೂರು ಒಳಗ ಒಳಗ॥ಅನು ಪಲ್ಲವಿ॥**

: ನೀರು.

: ಪ್ರವಾಹ; ಝುರಿ.

---

## ೨೫. ಪರಾಕಿ (೧೯೮೨)

### ಪರಾಕಿ

**ಚವರಾ, ಪರಾಕಿ**

**ಚವರಾ ಬೀಸಾಕಿ, ಹಾಕಾಕಿ ಕಣ್ಣು/ ನಾ ಹೊಗಳಾಕಿ–ನಿನ್ನ ಪರಾಕಿ (1–3, 4)**

: 1. ಚಮರ ಮೃಗದ ಬಾಲದ ಕೂದಲಿಂದ ತಯಾರಿಸಿದ ಕುಂಚ,–ಚಾಮರ.

2. ಉದ್ದವಾದ ಕೂದಲು ಮತ್ತು ಗೊಂಡೆ ಬಾಲವುಳ್ಳ ಒಂದು ಬಗೆಯ ಮೃಗ.

: 1. ಹನ್ನೆರಡು ದಿನ ಉಪವಾಸ ಮಾಡುವ ವ್ರತವನ್ನಾಚರಿಸುವ ವ್ಯಕ್ತಿ.

2. ಹೊಗಳಿಕೆ, ಸ್ತುತಿ ಮಾಡುವವಳು.

* 'ಹೊಗಳಿಕೆ' ಎನ್ನುವುದು 'ಹೊನ್ನಶೂಲ' ಎಂದಿದ್ದಾರೆ ಬಸವಣ್ಣ. 'ಪರಾಕು' ಹೇಳಿಸಿಕೊಳ್ಳುವುದು ಯಜಮಾನ ಸಂಸ್ಕೃತಿಯ ಪ್ರತೀಕವೂ ಹೌದು.

'ರಾಜಾಧೀರಾಜ ತ್ರಿಭುವನ ಮಲ್ಲ ಗಂಡರಗಂಡ, ವೈರಿ ಮಾರ್ತಾಂಡ, ಗಜ ಬೇಂಟೆಕಾರ ಬಹುಪರಾಕ್, ಬಹುಪರಾಕ್' ಇತ್ಯಾದಿ ಭಟ್ಟಂಗಿತನದ ವ್ಯಕ್ತಿ ಪರಂಪರೆಯೆ ನಮ್ಮಲ್ಲಿದೆ. ಈ ಕವನ 'ಪರಾಕಿ'ಯು ಬೈರಾಗಿ(ಲೌಕಿಕ ವಿಷಯಗಳಲ್ಲಿ ಆಸಕ್ತಿ ಇಲ್ಲದವನು)ಯ ಜೊತೆಗಿದ್ದು ಅವನನ್ನು ಸೇವೆಮಾಡಿ ಸುಖಿಸುವ ಮುಕ್ತ ಭಾವಲಹರಿ.

* * * * * *

**ಕಾಕುಪೋಕ**

**ಕಾಕುಪೋಕರ ಸಂಗತಿ ಸೋಕೀ. (2–3)**

: ಅಲ್ಪನಾದವನು; ನೀಚ; ಕೀಳು ಮನುಷ್ಯ.

* * * * * *

**ಚೆಳ್ಳಹಣ್ಣು**

**ತಿನ್ನುವವರು ಚೆಳ್ಳಹಣ್ಣು ತಿನ್ನಲಿ (3–2)**

* 'ಚೆಳ್ಳ' ಎನ್ನುವ ಗಿಡದಲ್ಲಿ ಬಿಡುವ ಹಣ್ಣು; ಚೆಳ್ಳೆಹಣ್ಣು. ಚೆಳ್ಳಯಲ್ಲಿ ಎರಡು ಜಾತಿಯ ಗಿಡಗಳಿವೆ. ಒಂದು–ಸಾಮಾನ್ಯ ಜಾತಿಯದು. ಕಡು ಹಸಿರು ಬಣ್ಣದ, ಕಿರಿಲಿಂಬೆ ಗಾತ್ರದ ಇದರ ಕಾಯಿಗಳನ್ನು ಪಲ್ಯೆ ಮಾಡಿಯೋ ಉಪ್ಪಿನಕಾಯಿ ರೂಪದಲ್ಲೋ ತಿನ್ನಬಹುದು. ಎರಡು–ನಾಯಿ ಚೆಳ್ಳ ಜಾತಿಯದು. ಇದು ಸಾಮಾನ್ಯ ಜಾತಿಯ ಚೆಳ್ಳ ಗಿಡದ

ಕಾಯಿಗಳಿಗಿಂತ ಸಣ್ಣಗಾತ್ರದ ಕಾಯಿಗಳನ್ನು ಬಿಡುತ್ತದೆ. ಈ ಕಾಯಿಗಳನ್ನು ತಿನ್ನಲು ಉಪಯೋಗಿಸುವುದು ಹಾನಿಕಾರಕ.

ಸಾಮಾನ್ಯ ಜಾತಿಯ ಚೆಳ್ಳಕಾಯಲ್ಲಿ ಅವರೆಕಾಳು ಗಾತ್ರದ ಒಂದೇ ಬೀಜ ಇರುತ್ತದೆ ಮತ್ತು ಕಾಯಿಯ ಒಳಭಾಗ ಅಂಟು ಅಂಟಾಗಿರುತ್ತದೆ. ಬೀಜಗಳನ್ನು ಹೊರತೆಗೆದು ಈ ಕಾಯಿಗಳನ್ನು ಉಪಯೋಗಿಸುವುದು ಸಾಮಾನ್ಯ. ಹಸಿಕಾಯಿಗಳನ್ನು ತಿಂದರೆ ಬಾಯಲ್ಲಿ ಅಂಟು ಮೆತ್ತಿಕೊಂಡು ತುರಿಕೆಯಾಗಬಹುದು. ಅದನ್ನು ಅಗಿಯಲು, ನುರಿಸಲು ಆಗುವುದಿಲ್ಲ. ಅದು ವ್ಯರ್ಥ ಪ್ರಯಾಸ. ಅದಕ್ಕೆ 'ನಿನಗ ಚೆಳ್ಳಹಣ್ಣ ತಿನಸ್ತೇನಿ' ಎಂದು ಹೇಳುವುದು ಉತ್ತರ ಕರ್ನಾಟಕದ ವಾಡಿಕೆಯ ಮಾತು.

* * * * * *

### ಚುನ್ನಲಿ, ಹರಲಿ

**ಜನದಾಗ ಇಲ್ಲ ನನ್ನ ಚುನ್ನಲಿ/ ತಾ ಬಂದಗಿಂದ ಹರಲೀ ಹೊರಾಕಿ (3–3, 4)**

: ಆರೋಪ.

: ಅಪವಾದ.

---

## ಯಾವೂರಾಕಿ ನೀ ಮಾಯಾಕಾರತಿ?

### ದೇಸಗತಿ

**ದೇಸಗತಿ ಆಳೋಹಾಂಗ, ಏನೇನೋ/ ನೀ ಮಾತನಾಡತಿ. (1–3, 4)**

: ದೇಸಾಯಿಯ ಅಧಿಕಾರ,–ಹುದ್ದೆ; ದೇಸಾಯಿಯ ಆಳ್ವಿಕೆ–ಆಡಳಿತ; ದೇಸಾಯಿತನ.

* * * * * *

### ಸೆಜ್ಜೆ

**ಸೆಜ್ಜೆ ಸಾಲೀ ಒಳಗ ಗೆಜ್ಜೀ|ಗತ್ತಿನ ಜತಿ/ ಹುಚ್ಚು ಬಿಡಿಸೋಹಾಂಗ ಏನೋ ಹಾಡತಿ.(1–7, 8)**

: ಒಂದು ಬಗೆಯ ತೃಣಧಾನ್ಯ.

*ಬೆಳೆದ ಸೆಜ್ಜೆ ಧಾನ್ಯ ಗಾಳಿಗೆ ಕುಲುಕಾಡುವಾಗ ಹೊಮ್ಮಿಸುವ ನಾದಕ್ಕೆ ಹೆಣ್ಣಿನ ಕಾಲ್ಗೆಜ್ಜೆಯ ಗತ್ತಿನ ನಡಿಗೆ ಒಂದು ಮಧುರ ಮೇಳ. ಧಾನ್ಯ ಪ್ರಕೃತಿಯ ಜೊತೆಗೆ ಸ್ತ್ರೀ ಪ್ರಕೃತಿ ಒಂದಾಗಿ ಹೊಮ್ಮಿಸುವ ನಾದಕ್ಕೆ ಕಿವಿಯಾದವರು ಬೇಂದ್ರೆ. ಅವರು ಹಾಗೆ

ಪ್ರಕೃತಿ ಹೊಮ್ಮಿದ ನಾದ ದಿವ್ಯದಲ್ಲಿ ಮಾಯಕಾರತಿಯು ಹೆಜ್ಜೆ ಹಾಕುತ್ತ 'ಹುಚ್ಚು ಬಿಡಿಸೋ ಹಾಂಗ ಏನೋ ಹಾಡುತ್ತಿದ್ದಾಳೆ' ಎಂದು ಆಕೆಯ ನಿಸರ್ಗ ಸಹಜ ಮೋಹಕ ಲಹರಿಯನ್ನು ಕಾವ್ಯದಲ್ಲಿ ಕಡೆದಿದ್ದಾರೆ.

* * * * * *

## ಅಗ್ಗಿ, ಮಗ್ಗಿ

**ಅಗ್ಗೀ॒ಯ ಮಗ್ಗಿ ಮಾಡಿ ಹಿಗ್ಗೀ॒ನ ಮಲ್ಲಿಗಿ ಮಾಲಿ/ ಯಾರ್‍ದೊ ಕೊರಳಾಗ ನೀ ಹಾಕತಿ (2–1, 2)**

: ಅಗ್ನಿ; ಬೆಂಕಿ; ಉರಿ; ಕಿಚ್ಚು.

: ಮೊಗ್ಗು; ಮುಗುಳು; ಕುಟ್ಮಲ.

*ಆದಿಶಕ್ತಿ ಜಗನ್ಮಾತೆಯು ಮಾಯಕಾರತಿ. ಆಕೆ ಉರಿವ ಬೆಂಕಿಕೆಂಡವನ್ನು ಮೊಗ್ಗು ಮಾಡುತ್ತಾಳೆ. ಅದನ್ನು ಕಂಪು ಬೀರುವ ಹಿಗ್ಗಿನ ಮಾಲೆಯಾಗಿಸಿ ಅರ್ಹರ ಕೊರಳಿಗೆ ತೊಡಿಸುತ್ತಾಳೆ!

ನಮ್ಮೂರು ಚೋಳನಾಯ್ಕನಹಳ್ಳಿಯಲ್ಲಿ ಮಾರಮ್ಮನ ಹಬ್ಬದಲ್ಲಿ ನಾವೆಲ್ಲ ಕೆಂಡ ಹಾಯುತ್ತಿದ್ದೆವು. ನಾನು ಬೀದರದಲ್ಲಿ ಕೆಲಸ ಮಾಡುತ್ತಿರುವಾಗ ಹುಮ್ನಾಬಾದಿನ ವೀರಭದ್ರೇಶ್ವರ ಜಾತ್ರೆಗೆ ಜನ 'ಅಗ್ಗಿ ತುಳಿಯಲು' ಹೋಗುತ್ತಿದ್ದರು. 'ಅಗ್ನಿ' ಪದವು ಜನಪದರ ನಾಲಗೆಯಲ್ಲಿ 'ಅಗ್ಗಿ' ಆಗಿರುವುದು ಆಗ ನನಗೆ ಗೊತ್ತಾಯಿತು.

ಕೊಂಡ: ಹಬ್ಬ, ಜಾತ್ರೆಗಳಲ್ಲಿ ಗುಡಿಯ ಎದುರು ಉದ್ದವಾಗಿ ಮಾಡಿದ ಕೆಂಡದ ಗುಂಡಿ; ಅಗ್ನಿಕುಂಡ. ನಿಗಿನಿಗಿ ಉರಿಯುವ ಅಗ್ನಿಯುಳ್ಳ ಕೊಂಡದ ಮೂಲಕ ದೇವರನ್ನು ಹೊತ್ತುಕೊಂಡು ಪೂಜಾರಿ ಬರಿಗಾಲಿನಲ್ಲಿ ನಡೆದು ಹೋದ ಮೇಲೆ ಹರಕೆ ಹೊತ್ತ ಭಕ್ತರೂ ಸಾಗುತ್ತಾರೆ. ಬೆಂಕಿ ಸುಡುವುದಿಲ್ಲ. ಕೊಂಡ ಹಾಯುವುದು ಒಂದು ವಿಶಿಷ್ಟ ಆಚರಣೆ.(ಕನ್ನಡ ಜಾನಪದ ಕೋಶ; ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು)

* * * * * *

## ಪ್ರಾರ್ಥಭವ

**ಕೋಟಿ ಪ್ರಾರ್ಥಭವ ನೀಗ್ತಿ (5–6)**

*ಕೋಟಿ ಪ್ರಾರ್ಥಭವ ನೀಗ್ತಿ= ಸಂಸ್ಕೃತದಲ್ಲಿ ಪ್ರಾರ್ಥಭವ ಎಂಬ ಪ್ರಯೋಗವಿಲ್ಲ. "ಕೋಟಿ ಪ್ರಾರಬ್ಧವ ನೀಗ್ತಿ" ಎಂಬ ಇಂಗಿತವನ್ನು ಅಪಭ್ರಂಶ ರೂಪದಲ್ಲಿ ಬೇಂದ್ರೆ ಕೋಟಿ ಪ್ರಾರ್ಥಭವ ನೀಗ್ತಿ ಎಂದು ಹಾಡಿರಬಹುದು.

* * * * * *

**ಹುಜರಾ**

**ಹುಜರಾ ಹುಜರಾನ್ಸ ಐತಿ, ಜೀವಂತ ವ್ಯವಹಾರ (10–3)**

: ಸಮಕ್ಷಮ; ಎದುರು.

* * * * * *

**ತುಡಿ**

**ಭಜನೀಯ ತಾಳಗತ್ತು ಹಿಡಿ/ ಬಾರಿಸು ಹೃದಯದ ತುಡಿ (10–11, 12)**

: 1. ದುಡಿ; ಒಂದು ಬಗೆಯ ಚರ್ಮವಾದ್ಯ.

2. ಮಿಡಿ; ಸ್ಪಂದಿಸು.

*ಭಕ್ತನಾದವನು ಆವೇಶದಲ್ಲಿ ಭಜನೆಯ ಗತ್ತು ಹಿಡಿದು ತನ್ನ ಹೃದಯದ ಮಿಡಿತವನ್ನು ಅದರಲ್ಲಿ ಒಂದಾಗಿಸುತ್ತಾನೆ. ದುಡಿಯನ್ನು ಹಿಡಿದು ತನ್ನ ಹೃದಯದ ತುಡಿತವನ್ನು ಅದರಲ್ಲಿ ಐಕ್ಯಗೊಳಿಸಿ ಬಾರಿಸುತ್ತಾನೆ. ಕಲ್ಪನೆಯ ರೆಕ್ಕೆಬಿಚ್ಚಿ, ಕೊರಳಿನಲ್ಲಿ ಭಕ್ತಿಯ ಹಕ್ಕಿಯನ್ನು ಹಾರಿಸಿ ಹಾಡುತ್ತಾನೆ.

---

## ಯಮಕಾ–ಗಮಕಾ

**ಸೂರು**

**ಸೂರ್ ಹಚ್ಚಿ ನೋಡೇವು ಹ್ಯಾಂಗೋ ಹಾಡಿ (4–4)**

: 1. ಧ್ವನಿ; ಉಲಿ; ಸ್ವರ; ಸರ.

2. (ಆಲಂ)ಉಸಿರು.

3. ಒಂದು ಬಗೆಯ ವಾದ್ಯ(ಮರಾ. ಸೂರ್/ಸಂ.ಸ್ವರ)

---

## ಸಂಧಾನ

**ಸಂಧಾನ, ಧಾರಣೆ, ಸಮಾಧಿ, ಸಂಯಮನ, ಸಚ್ಚಿದಾನಂದ, ವಿಜ್ಞಾನ**

**ಅಣುವಿಗು ಮಹತ್ತಿಗು/ ಇಲ್ಲಿಹುದು ಸಂಧಾನ/ ಧಾರಣೆ, ಸಮಾಧಿ, ಸಂಯಮಿತವೀ**

**ಧ್ಯಾನ/ ಅಲ್ಲ ಅಜ್ಞಾನ ಆ ಜ್ಞಾನ/ ತಾನೇ ತಾನಾದ ಸಚ್ಚಿದಾನಂದ ವಿಜ್ಞಾನ (5–1, 2, 3, 4, 5)**

: ಸೇರಿಸುವಂಥದು; ಬೆಸೆಯುವಂಥದು.

: 1. ಅಂಕೆಯಲ್ಲಿಡುವಿಕೆ, ನಿಗ್ರಹ.

2. (ಯೋಗ) ಯೋಗದ ಎಂಟು ಅಂಗಗಳಲ್ಲಿ ಒಂದು; ಇಂದ್ರಿಯ ಪ್ರವೃತ್ತಿಗಳನ್ನು ನಿರೋಧಿಸಿ ಚಿತ್ತವನ್ನು ಹೃತ್ಕಮಲದಲ್ಲಿರುವ ಪರಮಾತ್ಮನಲ್ಲಿ ದೃಢವಾಗಿ ನೆಲೆಗೊಳಿಸುವುದು.

: 1.ಯಾವುದಾದರೊಂದು ವಿಷಯವನ್ನು ಕುರಿತಂತೆ ಇರುವ ತನ್ಮಯತೆ; ಏಕಾಗ್ರತೆ.

2. (ಯೋಗ) ಯೋಗದ ಎಂಟನೆಯ ಹಾಗೂ ಕಡೆಯ ಅವಸ್ಥೆ. ಮನಸ್ಸನ್ನು ಪರಬ್ರಹ್ಮದಲ್ಲಿ ಐಕ್ಯಗೊಳಿಸುವುದು.

: ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳುವುದು; ಮನೋನಿಗ್ರಹ.

: 1. ಶ್ರೇಷ್ಠವಾದ ಆನಂದ.

2. ಆನಂದ ಸ್ವರೂಪನಾದ ಪರಮಾತ್ಮ.

: (ವಿಶೇಷವಾದ) ಅರಿವು; ತಿಳಿವಳಿಕೆ.

---

## ನಾಳಿನ ಕನಸು

### ಗಾಳುಮಾತು

**ಗಾಳುಮಾತುಗಳಾ ಗಾಳಿ ಸೇರದಾ (1–2)**

: ಕೆಟ್ಟಮಾತು; ಬಯ್ಗಳು; ನಿಂದೆಯನುಡಿ.

---

## ಶ್ರೀಲಕ್ಷ್ಮಿಗೆ–ಶ್ರೀನಾರಾಯಣದತ್ತ ಅಂದ

### ಕುಡುಹು

**ಋಷಿಕವಿ ಏನು ಕಂಡನೋ? ಸಾಹಿತ್ಯವಂದರೂ ಏನು ಮಣ್ಣೋ!/ ನನ್ನ ಕುಡುಹಿನ ನಾಲಿಗೆಯಲಿ ನೀನೇ ಕುಣಿ, ನೀನೇ ಗುಣಿ! (4–1, 2)**

: ವಾದ್ಯವನ್ನು ಬಾರಿಸುವ ಕೋಲು; ಪಿಟೀಲು ಮೊದಲಾದ ತಂತಿವಾದ್ಯಗಳನ್ನು ನುಡಿಸುವ ಬಿಲ್ಲು,-ಕಮಾನು.

*ಬೇಂದ್ರೆಯವರಿಗೆ ತಾನು ಕಾವ್ಯರ್ಷಿಯಾದರೂ ತನ್ನ ಸಖಿ ಇಲ್ಲದ ಬಾಳು ವ್ಯರ್ಥವೆನಿಸಿದೆ. ಆದಕಾರಣ ಅವನಲ್ಲಿ ಜೀವರಸ ತುಂಬಲು ಆಕೆ ಬೇಕಾಗಿದೆ. ಆಕೆಯನ್ನು ಕುಡುಹಿನ ರೂಪಕವಾಗಿಸಿ ವಾದ್ಯವಾದ ತಾನು ನುಡಿಯಲು ಆಕೆಯೇ ಕಾರಣ ಎಂದಿದ್ದಾರೆ. ನಾಲಗೆಯ ಮೇಲೆ ಕಾವ್ಯ ಹುಟ್ಟುತ್ತದೆ. ಅದಕ್ಕೆ ಸ್ಫೂರ್ತಿ ಸರಸ್ವತಿ, ಅವಳು ರಸವತಿ. ಹಾಗೆಯೆ ಪತ್ನಿ ಮರಣಾ ನಂತರವೂ ಕುಡುಹಾಗಿ ತನ್ನಲ್ಲಿ ಕಾವ್ಯ ನಿರಂತರವಾಗಿ ಹರಿಯಲು ಕಾರಣಳಾಗಿದ್ದಾಳೆ. ಗುಣವಂತಿಯಾದ ಅವಳು ತನ್ನ ನಾಲಗೆಯಲ್ಲಿ ಈಗಲೂ ಕುಣಿಯುತ್ತಿದ್ದಾಳೆ. ಆಕೆ ಬದುಕಿದ್ದಾಗ ಸ್ಫೂರ್ತಿ ಚೇತನೆಯಾಗಿದ್ದಂತೆ ಈಗಲೂ ಇದ್ದಾಳೆ. ಎಂದು ಹೇಳಿದ್ದಾರೆ. ಇದು ದಾಂಪತ್ಯದ ಜೀವನದ ಸಫಲತೆಯ, ನಿರಂತರತೆಯ ನುಡಿ.

---

## ಕರುಣೆಗಳರಸ ರಾಘವೇಂದ್ರ

**ಪಟ, ದೇವಾಂಗ**

**ಅಡ್ಡ ಎಳೆ ಉದ್ದ ಎಳೆ ಅಂಚು ಸೆರಗೂ ಕೂಡ/ ಸರಿಯಾದರಷ್ಟೆ ಆ ಪಟ ತಾನೆ ದೇವಾಂಗ (1–3, 4)**

: ಬಟ್ಟೆ, ವಸ್ತ್ರ.

: 1. ದೇವರ ಅವಯವ.

2. ಶ್ರೇಷ್ಠವಾದ ಒಂದು ಬಗೆಯ ಬಟ್ಟೆ; ರೇಶ್ಮೆ ಬಟ್ಟೆ.

---

## ಡಿ.ವಿ.ಜಿ

**ದಿವಿಜ, ದಿವಿ**

**ದಿವಿಜರಲ್ಲವೆ ನಮ್ಮ ಡಿ.ವಿ.ಜಿ ಎಂಬವರು/ ದಿವಿಗೆ ಹೋದರೆ? ಅವರ ಆಸ್ಥಾನವೇ ಸ್ವರ್ಗ! (1–1, 2)**

: ಸ್ವರ್ಗದಲ್ಲಿ ಹುಟ್ಟಿದವನು; ದೇವತೆ.

: ಸ್ವರ್ಗ; ದೇವಲೋಕ.

---

## ಮುನಿದೇವರಾತ

**ಅರ್ಣವ**

**ಅರ್ಣವದ ಘೋಷಕ್ಕೆ ಗೋಕರ್ಣವೇ ಯೋಗ್ಯ. (2–4)**

: ಸಮುದ್ರ.

---

## ಅಜಂತಾ ಗುಹೆ

**ಅಚಿಂತ್ಯ, ಅಜಜನಿತ, ಅಜ್ಞಾಂತ, ಕಿಂವದಂತಿ**

**ಓ ಅಚಿಂತ್ಯ ಗುಹೆಯೆ! ಅಜ ಜನಿತ ಅಜ್ಞಾಂತ। ದಂತಕತೆ ಕಿಂವದಂತಿಯ ಕಂತೆ ಕೆತ್ತಿದ ದಂತ!॥ (1–1, 2)**

ಅಚಿಂತ್ಯ= ಊಹೆಗೆ ನಿಲುಕದ

ಅಜ ಜನಿತ= ಬ್ರಹ್ಮನ ಸೃಷ್ಟಿ.(ಅಜಂತಾ ಮನುಷ್ಯ ಸೃಷ್ಟಿಯೇ ಆದರೂ ಆ ದಿವ್ಯ ಕಲಾಕೃತಿಗಳು ಹುಲುಮಾನವರಿಂದ ಸೃಷ್ಟಿಯಾಗಿರಲು ಸಾಧ್ಯವಿಲ್ಲ, ಅದು ಅಪೌರುಷೇಯವಾದುದು ದೈವದಿಂದಲೇ ಸೃಷ್ಟಿಯಾದುದು ಎಂಬುದು ಕವಿಭಾವ.)

ಅಜ್ಞಾಂತ= ಇದು ಬೇಂದ್ರೆಯವರ ಬೆಡಗಿನ ಪ್ರಯೋಗವಾಗಿದೆ. 'ಅಜ್ಞಾಂತ' ಎಂಬ ಪದವನ್ನು ಸಂಸ್ಕೃತದಲ್ಲಿ ನಾಮವಾಚಕವನ್ನಾಗಿ ಬಳಸಬಹುದು(ಅಜ್ಞ= ಅರಿಯದವನು, ಅಂತ=ಕೊನೆವರೆಗು). ಅಜಂತಾದ ಗಹನತೆಯನ್ನು, ನಿಗೂಢವನ್ನು ಕೊನೆಗೂ ಅರಿಯಲಾರದೆ ಹೋದವನು ಎಂದೂ ಹಾಗೆಯೇ ಕೊನೆಗೂ ಅರಿವಿಗೆ ನಿಲುಕದೆ ಹೋದುದು ಎಂದೂ 'ಅಜ್ಞಾಂತ' ಪದವನ್ನು ಅರ್ಥೈಸಬಹುದು.

ಕಿಂ ವದಂತಿ= ಏನು ಹೇಳುತ್ತದೆ? (ಕಿಂ=ಏನು, ವದಂತಿ= ಹೇಳುತ್ತದೆ)

ಅಜ್ಞಾಂತ ದಂತಕತೆ ಕಿಂವದಂತಿಯ ಕಂತೆ ಕೆತ್ತಿದ ದಂತ=(ಅಜಂತದ ಆನೆಯ ಶಿಲ್ಪದ ದಂತಗಳು) ಅರಿಯಲಾಗದ ದಂತಕತೆಯ ಕಂತೆಯನ್ನು ಕೆತ್ತಿವೆ, ಹೇಳುತ್ತಿವೆ.

---

## ಬಿಕ್ಕಿ ಬೇಡವ್ರ ಮಕ್ಕಳ ಕಂಟ್ರೋಲ ಆಗಲಿ

**ಶೆಟವಿ, ಭಿಕಾರಿ, ಡೋಕಾರಿ.**

**ಹೆಗಲಲ್ಲೊಂದು ಬಗಲಲ್ಲೊಂದು/ ಹಿಂದೆರಡು ಮುಂದೆರಡು/ ಎಲ್ಲಿ ಹೊರಟೆ ಶೆಟವೀ? ನೀನು ಬೀದೀ ಭಿಕಾರೀ! ಇಲ್ಲ ಚಾಕರಿ; ಇಲ್ಲಾ ನೋಕರಿ/ ಅದು ಬೇಕರಿ, ಇದೂ ಬೇಕ್ರಿ/ಬೇಕರಿ ಬ್ರೆಡ್ಡು ಭಕ್ಕರಿ ಚೂರು, ಬೇಡ್ತಾಳ ಡೋಕಾರಿ.** (1–1, 2, 3, 4, 5, 6)

: ಮಕ್ಕಳು ಹುಟ್ಟಿದ ಆರನೆಯ ದಿನ ಪೂಜಿಸುವ ದೇವತೆ; ಮಾನವರ ಹಣೆಯ ಬರಹವನ್ನು ಬರೆಯುವವಳೆಂದು ನಂಬಲಾದ ಒಬ್ಬ ಗ್ರಾಮದೇವತೆ. (ಮರಾ, ಸಟವಾಈ, ಸಟವೀ)

: ಭಿಕ್ಷೆ ಬೇಡುವವನು; ತಿರುಕ.

: ಅಪಾಯಕ್ಕೆ ಒಳಗಾದಂತೆ ಸೋಗುಹಾಕಿ ಅಳುವ ವ್ಯಕ್ತಿ; ನೋಯಿಸದಿದ್ದರೂ ನೋವಾದಂತೆ ನಟಿಸುತ್ತ ಕೂಗಾಡುವ ವ್ಯಕ್ತಿ.

*ಭಿಕ್ಷುಕಿ ನಿಸ್ಸಹಾಯಕಳು. ಹೆಣ್ಣಾದ ತಪ್ಪಿಗೆ ಮಕ್ಕಳನ್ನು ಹಡೆದು ಅವುಗಳನ್ನು ಹೊತ್ತು ಅವುಗಳ ಹಣೆಬರಹ ಬರೆಯುವ ಶೆಟವಿಯಂತೆ ಓಡಾಡುತ್ತಾಳೆ.

ಬೇಂದ್ರೆ ನೋವಿನಲ್ಲೂ ಕಿರುಹಾಸ್ಯ ತುಂಬಿರುತ್ತಾರೆ ಎಂಬುದಕ್ಕೆ ಮೇಲಿನ ನುಡಿಯ ಕೊನೆಯ ಸಾಲು ಸಾಕ್ಷಿಯಾಗಿದೆ. ಅವಳಿಗೆ ಮತ್ತು ಅವಳ ಮಕ್ಕಳಿಗೆ ಬೇಕರಿಯ ಬ್ರೆಡ್ಡು ಇತರ ವಸ್ತುಗಳ ರುಚಿ ನೋಡುವ ಆಸೆ. ಆದಕಾರಣ ಬೇಕರಿ ಮುಂದೆ ಅವಳು 'ಡೋಕರಿ'ಯಾಗುತ್ತಾಳೆ. ಅಂದರೆ ನೋವಾಗದಿದ್ದರೂ ಅಳುವ ವ್ಯಕ್ತಿಯಾಗಿ ಅಳುತ್ತಾಳೆ, ಕೊರಗುತ್ತಾಳೆ– ಬ್ರೆಡ್ಡು ಕೇಕನ್ನು ತಿನ್ನುವವರು ತುಂಡನ್ನು ತನ್ನತ್ತ ಎಸೆಯಲಿ ಎಂದು. ಹೀಗೆ ಬೇಂದ್ರೆ ಒಂದು ವಸ್ತುವಿನ ಚಿತ್ರಣಕ್ಕೆ ತೊಡಗಿದರೆ ಅದರ ಮೂಲವನ್ನು ಹೊಕ್ಕು ಅದರ ಒಳಹೊರಗನ್ನು ಕಾವ್ಯವಾಗಿಸುತ್ತಾರೆ.

---

## ಎಚ್ಚರದ ಕಣ್ಣು

**ತ್ವೇಷ**

**ಹುಟ್ಟಿಸ್ತಾರ ತಾನೇ ತ್ವೇಷ/ ಅಂತಾರ ಮಾಡಬ್ಯಾಡ್ರಿ ದ್ವೇಷ.** (1–5, 6)

: ಆವೇಷ; ಉದ್ರೇಕ.

*ಇಂದಿನ ರಾಜಕಾರಣಿಗಳು ವರ್ತಿಸುವ ರೀತಿಯನ್ನು ಬೇಂದ್ರೆ 'ಎಚ್ಚರದಕಣ್ಣು'ವಿನಿಂದ

ನೋಡಿ ಎಂದು ಜನರನ್ನು ಜಾಗೃತಗೊಳಿಸಿದ್ದಾರೆ.

---

## ರಾಕಾಸುಂದರೀ

### ಬಯಲಾಗಿರತಾರ

**ಆಚ್ಕಿಗೆ ಈಚ್ಕಿಗೆ ನಾಚ್ಕಿಗೆ ಇಲ್ಲಾ/ ಹೋ‌್ಸ ಹೋಗೇ ಆಚೆಗೇ/ ಬೊಂಬಾಯಿ ಬೀಚೆಗೇ./ ಬಯಲಾಗಿರತಾರ, ಮೈ ಇಲ್ಲದವರು/ ಅವರ ತವರು ಮಣ್ಣು/ ಅವರಿಗೆ ಇಲ್ಲಾ ಕಣ್ಣು. (1–1 ರಿಂದ 6)**

*ಬೇಂದ್ರೆಯವರನ್ನು ಅವರ ಚಿಕ್ಕಂದಿನಲ್ಲಿ, ಯೌವನದಲ್ಲಿ ಕಾಡಿದ ವೇಶ್ಯಾಸಮಸ್ಯೆ ಅವರ ಇಳಿವಯಸ್ಸಿನಲ್ಲೂ ಕಾಡಿದೆ. ಈ ಸಮಾಜ ಸ್ತ್ರೀಯನ್ನು ಶೋಷಿಸುವ ಪರಿಯನ್ನು ಕಂಡು ಹೆಣ್ಣೇ ಅದರ ವಿರುದ್ಧ ಸೆಟೆದು ನಿಲ್ಲಬೇಕು. ತನ್ನ ಜೀವನವನ್ನು ತಾನೇ ರೂಪಿಸಿಕೊಳ್ಳಬೇಕು. ಆಗಲೇ ಈ ಸಮಸ್ಯೆಗೆ ಪರಿಹಾರ. ಅದುವರೆಗೂ ಅದು ಸಾಧ್ಯವಿಲ್ಲ ಎಂಬ ಚಿಂತನೆಯನ್ನು ಅವರು ಈ ಕವನದಲ್ಲಿ ನೀಡಿದ್ದಾರೆ.

ಈ ಕವನವನ್ನು ಓದಿದಾಗ ಸುಂದರ ಹುಣ್ಣಿಮೆಯನ್ನು ಸವಿಯಲು ಬೊಂಬಾಯಿ ಬೀಚೆಗೆ ಹೋದ ಸಂದರ್ಭದಲ್ಲಿ ಕವಿ ಕಂಡ ನೋಟಕ್ಕೆ ನೊಂದು; ಅಲ್ಲಿ ಕಂಡ ಹೆಣ್ಣುಗಳ ಚಿತ್ರಣವನ್ನು ನೀಡಿದ್ದಾರೆ ಎನ್ನಬಹುದು. ಹುಣ್ಣಿಮೆಯ ಚಂದ್ರನೂ ಸುಂದರ ಹೆಣ್ಣಿನಂತೆ. ಆ ಬೆಳದಿಂಗಳಿನಲ್ಲಿ ಜಗತ್ತೇ ಬೆಳಗುತ್ತದೆ. ಆದರೆ ಆಗಸದ ರಾಕಾಸುಂದರಿಯ ಬೆಳಕಿನಲ್ಲಿ ಇಲ್ಲಿ ನೆಲದ ಮೇಲೆ ಕಾಣುವ ಸುಂದರಿಯರನ್ನು ಕಂಡಾಗ ಕವಿಯ ಮನಸ್ಸಿಗೆ ನೋವಾಗಿದೆ. ವಿಕೃತ ಆಸೆಗಳಿಗೆ ಈಡಾದ ಹೆಣ್ಣುಗಳನ್ನು ನೋಡಿ ಅನುಕಂಪಗೊಂಡ ಕವಿ ಅದನ್ನು ಈ ಕವನದಲ್ಲಿ ಬಣ್ಣಿಸಿದ್ದಾರೆ. ಇಲ್ಲಿ ನಾಲ್ಕು ರೀತಿಯ ಹೆಣ್ಣುಗಳನ್ನು ಚಿತ್ರಿಸಿ ನಾಲ್ಕನೆಯ ಬಗೆಯ ಹೆಣ್ಣನ್ನು ರಾಕಾಸುಂದರಿ ಎಂದಿದ್ದಾರೆ.

ಕವನದ ಮೊದಲ ಭಾಗದಲ್ಲಿ ವೇಶ್ಯೆಯರನ್ನು ಕುರಿತು–ಅವರು ಲೈಂಗಿಕವಾಗಿ, ಆರ್ಥಿಕವಾಗಿ ಶೋಷಣೆಗೆ ಒಳಗಾಗಿ ಹೀನಾವಸ್ಥೆಯಲ್ಲಿ ಆಶ್ರಯರಹಿತರಾದುದರ ಬಗ್ಗೆ ಕವಿಯು ನೊಂದಿದ್ದಾರೆ. ಆ ಅವಸ್ಥೆಯನ್ನು 'ಬಯಲಾಗಿರತಾರ' ಎಂಬ ರೂಪಕನಿಷ್ಠ ನುಡಿಗಟ್ಟಿನಲ್ಲಿ ಹಿಡಿದಿಟ್ಟಿದ್ದಾರೆ. ಮೈಪರಿವೆ ಇಲ್ಲದೆ ಮಣ್ಣಾಗಿ ಹೋಗಿ ತಮ್ಮ ಅರಿವೇ ಇಲ್ಲವಾದಂತಾಗಿರುವ ಅವರ ಚಿತ್ರಣ ಇಲ್ಲಿದೆ.

'ಬಯಲಾಗಿರತಾರ, ಮೈ ಇಲ್ಲದವರು/ ಅವರ ತವರು–ಮಣ್ಣು/ ಅವರಿಗೆ ಇಲ್ಲಾ ಕಣ್ಣು'

* * * * * *

## ಮುಚ್ಚಿದ್ದನ್ನೇ ತೋರುವಾಕೆ

**ಯಾರೇ$_s$ ನೀ? ನೀರಿನಾಕೆ!/ ಗಾಳೀ ಯೊಳಗ ಇರುವಾಕೆ/ ಬೇನೇ ಬೇಸರಿಕೆ ತರುವಾಕೆ/ ಮುಚ್ಚಿದ್ದನ್ನೇ ತೋರುವಾಕೆ./ ನಿನ್ನ ಬಯಕಿಗೇ ಬೇರಿಲ್ಲಾ ತುದಿ ಇಲ್ಲಾ/ಹಲಕೆಲವು ರಾಗಾ ತೆಗೆದು ನರಳುವಾಕೆ./ ಬರಿ ಪರದೆಯ ಮೇಲೆ ನೆರಳುವಾಕೆ/ ತೆರೆಯಲ್ಲಿ ತೋರೀ, ತೆರಳುವಾಕೆ./ ಓ$_s$ ಬೆಣ್ಣಿ ತುಪ್ಪಾದಾಕೆ, ಹೆಣ್ಣೇ! ಸೋಗಿನಾಕೆ! (2–1 ರಿಂದ 9)**

*ಎರಡನೆಯ ಭಾಗದಲ್ಲಿ ನಟಿಯಾಗುವ ಆಸೆಯಿಂದ ಕಲ್ಪನಾ ಲಹರಿಯಲ್ಲಿ ತೇಲಾಡುವ ಅವಳ ಯೌವನದ ತಡೆರಹಿತ ಭಾವವನ್ನು ಕಂಡು:

'ಯಾರೇ$_s$ ನೀ? ನೀರಿನಾಕೆ!/ ಗಾಳೀಯೊಳಗೆ ಇರುವಾಕೆ'

ಎಂದು ಅವಳ ಚಂಚಲತೆಯನ್ನು; ಎಲ್ಲವನ್ನು ಆವರಿಸಿ ಎಲ್ಲರನ್ನೂ ಮೆಚ್ಚಿಸುವ ಎಲ್ಲರಿಗೆ ಬೇಕಾದವಳು ಎನ್ನುವ ಅವಳ ಭಾವವನ್ನು ಚಿತ್ರಿಸಿದ್ದಾರೆ. ಅವಳಿಗೆ ತನ್ನ ಜೀವನದ ಅರಿವಿಲ್ಲ. ಬಯಕೆಯ ಕಾರಣ ಹಾಗೂ ಮಿತಿ ತಿಳಿದಿಲ್ಲ ಎಂಬುದನ್ನು 'ನಿನ್ನ ಬಯಕಿಗೆ ಬೇರಿಲ್ಲಾ ತುದಿ ಇಲ್ಲಾ' ಎಂದು ಹೇಳುತ್ತ ಅವಳ ಅವಸ್ಥೆಗೆ ವ್ಯಥೆಪಟ್ಟು ಅವಳು ಈ ಹುಸಿ ಬಯಕೆಗೆ ಈಡಾಗಿ–ನಿಜವಾಗಿ ಬೆಣ್ಣೆ ತುಪ್ಪದಂತಹ ಹೆಣ್ಣಾದರೂ ಸೋಗಿನವಳಾದಳಲ್ಲ ಎಂದು ಅಚ್ಚರಿಯನ್ನು ವ್ಯಕ್ತಪಡಿಸಿದ್ದಾರೆ.

* * * * * *

## ಮಜ್ಜಿಗಿ, ಮತ್ತೆ ಜಿಗಿ

**ಮಜ್ಜಿಗಿ, ಮತ್ತೆ ಜಿಗಿ/ ಎನುವಾಕೆ, ಕಡೆವಾಕೆ/ ತಾವರೆಗಂಧಾ ತೊಡೆವಾಕೇ/ ತೊಳೆವಾಕೇ/ ಮತ್ತೆ ಮತ್ತೆ ಮೊಳೆವಾಕೆ/ ಬೆಳೆವಾಕೆ/ ನಾರುವಾಕೇ! ಸೋರುವಾಕೆ!/ ತುರುಮಂದಿ ಸಂದೀ/ ಸೇರುವಾಕೆ, ಪೋ$_s$ ಪೋ$_s$ ಪೋ$_s$ (3–1 ರಿಂದ 9)**

*ಮೂರನೆಯವಳನ್ನು ಬಣ್ಣಿಸುವ ನುಡಿಯ ಲಯ, ಜಿಗಿತದಲ್ಲಿ ಅವಳು ಎಂತಹವಳೆಂಬುದನ್ನು ಓದುಗರಿಗೆ ಪರಿಚಯಿಸುತ್ತಾರೆ. ಇದು ಬೇಂದ್ರೆ ವಿಷಯದ ಒಳಹೊಕ್ಕು ಅದರ ಅಂತರಾಳವನ್ನು ನುಡಿಯಲ್ಲಿ ಹೊಮ್ಮಿಸುವ ಕಾವ್ಯ ವೈಖರಿ.

"ಮಜ್ಜಿಗಿ, ಮತ್ತೆ ಜಿಗಿ/ ಎನುವಾಕೆ, ಕಡೆವಾಕೆ"

ಈ ರೂಪಕದಲ್ಲಿ ಮಜ್ಜಿಗಿ, ಅದನ್ನು ಕಡೆಯುವ ಬಗೆಯನ್ನು ಓದಿದಾಗ ಮಜ್ಜಿಗಿ ಮತ್ತು ಕಡೆಯುವ ಕೈ ಬೇರೆಯಲ್ಲ ಒಂದೇ ಎನಿಸುತ್ತದೆ. ಮಜ್ಜಿಗಿಯಲ್ಲಿನ ಜಿಗಿತ, ಅದರ ಕುಲುಕುವ ಬಗೆಯಲ್ಲಿಯೇ ನಾಚವಾಲಿಯ ಪರಿಚಯ ಮಾಡಿಕೊಡುತ್ತಾರೆ. ಅಂತಹವಳನ್ನು ಬಹಳ ಜನಗಳ ಜೊತೆಗೆ ಸೇರುವವಳು, ತನ್ನ ಆರೋಗ್ಯ ಕೆಡಿಸಿಕೊಳ್ಳುವವಳು ಎಂದು ಅವಳ ಅವಸ್ಥೆಗೆ ನೊಂದು–ಇನ್ನು ನೋಡಲಾಗದು ಎಂದಿದ್ದಾರೆ. ಅದು ಆರೋಗ್ಯಪೂರ್ಣವಾಗಿದ್ದ ಮಜ್ಜಿಗೆಯ ಅನಂತರದ ಹೀನಾವಸ್ಥೆ.

"ನಾರುವಾಕೇ! ಸೋರುವಾಕೆ!/ ತುರುಮಂದಿ ಸಂದೀ/ ಸೇರುವಾಕೆ. ಪೋ$_s$ ಪೋ$_s$ ಪೋ$_s$."

* * * * * *

## ಮಿಂಚಿನಾ ತಂತಿಯ ಮೇಲೆ ನಡೆವಾಕೆ

**ಬಾ, ಹೊಸಬೀ! ತಲೆಯಾಕೆ/ ಪಡೆವಾಕೆ/ ಮಿಂಚಿನಾ ತಂತಿಯ ಮೇಲೆ ನಡೆವಾಕೆ/ ಐನೂರಿನಾ ಅರುವತ್ತಾರಾ/ ಎಂಟರಾಕೆ/ ಹದಿನೆಂಟೀ ಅಲ್ಲಾ! ನೀ/ ಹದಿನೇಳರಾಕೇ!/ ರಾಕಾಸುಂದರೀ!/ ಬೆಳುದಿಂಗಳಾಕೆ. ಪರಾಕು ನಿನಗೆ. (4–1 ರಿಂದ 9)**

*ಹುಣ್ಣಿಮೆಯ ಬೀಚಿನಲ್ಲಿ ಹದಿನಾರು ಕಲೆಗಳಿಂದ ಕೂಡಿದ ಚಂದ್ರನ ಮೂರು ಬಗೆಯ ಹೆಣ್ಣುಗಳನ್ನು ನೋಡಿದ ಮೇಲೆ ಹದಿನೇಳರ ರಾಕಾಸುಂದರಿಯನ್ನು ನೋಡಿ ಕವಿ ಮೆಚ್ಚುತ್ತಾನೆ. ತನ್ನ ಬುದ್ಧಿ, ಶರೀರ, ಧೈರ್ಯವನ್ನು ಒಗ್ಗೂಡಿಸಿಕೊಂಡು ಡೊಂಬರ ಕಲೆಯಲ್ಲಿ ನೈಪುಣ್ಯ ಸಾಧಿಸಿ, ಹಣ ಸಂಪಾದಿಸುವ ಕುಟುಂಬವತ್ಸಲೆಯಾಗಿರುವ ಡೊಂಬರವಳಂತಾಗಬೇಕು ಎಂದು ರಾಕಾ ಸುಂದರಿಯನ್ನು ಮೆಚ್ಚಿ ನುಡಿಯುತ್ತಾನೆ. ಅವಳೇ ಹುಣ್ಣಿವೇ ಎಂದು ಆಕೆಯ ಕಲೆ ಮತ್ತು ವ್ಯಕ್ತಿತ್ವಕ್ಕೆ ಪರಾಕು ಹೇಳುತ್ತಾನೆ. ಅವಳನ್ನು 'ಹದಿನೆಂಟೀ ಅಲ್ಲಾ! ನೀ ಹದಿನೇಳರಾಕೇ!' ಎಂದಿದ್ದಾನೆ.

ಚಂದ್ರನಿಗೆ ಹದಿನೇಳು ಕಲೆಗಳು. ಅವನ ಹದಿನೇಳನೆಯ ಕಲೆ–ರಾಕಾಸುಂದರಿ. ಸುಂದರವಾದ ಹುಣ್ಣಿವೆಗೆ ಕವಿ ಕೊಟ್ಟ ಹೆಸರು ರಾಕಾಸುಂದರಿ. ಹದಿನೆಂಟು ದಿನ ನಡೆದ ಮಹಾಭಾರತದ ಯುದ್ಧದಂತೆ ಹದಿನೆಂಟು ನಾಶದ ಹಾದಿ. ಹದಿನೇಳು–ಜೀವನಕಲೆ. ಇದನ್ನು ಬಲ್ಲವಳು ಡೊಂಬರಾಕಿ. ಇವಳು ಹೊಸಬಿ. ಮಿಂಚಿನ ತಲೆಯ ಮೇಲೆ ನಡೆವಾಕಿ. ಶರೀರ, ಬುದ್ಧಿ, ದೈರ್ಯವನ್ನು ಕಲಾತ್ಮಕವಾಗಿ ರೂಢಿಸಿಕೊಂಡು, ಕೌಶಲ್ಯದ ಆಟವಾಡಿ ಕುಟುಂಬವತ್ಸಲೆಯಾಗಿ ಜೀವನ ಸಾಗಿಸುವವಳು. ಇವಳು ಕವಿಗೆ ಪ್ರಿಯ. ಹದಿನೆಂಟು ಗ್ರಹಣದ ಸಂಕೇತವಾದರೆ, ಹತ್ತೊಂಬತ್ತು(5+6+8=ಐನೂರಿನಾ ಅರುವತ್ತಾರಾ ಎಂಟರಾಕೆ) ಗ್ರಹಣ ಮುಕ್ತಿಯ ಸಂಕೇತ. ಗ್ರಹಣ ಎಂಬುದು ಚಂದ್ರನಿಗೆ ಘಟಿಸುವ ದೋಷ. ಈ ದೋಷದಿಂದ ಮುಕ್ತಳಾದವಳು ರಾಕಾಸುಂದರಿ–ಡೊಂಬರಾಕೆ. ಮೊದಲಿನ ಮೂವರ–ವೇಶ್ಯೆ, ಸೋಗಿನ ತಾರೆ ಮತ್ತು ನಾಚವಾಲಿ ಬುದ್ಧಿಗೆ ಗ್ರಹಣ ಹಿಡಿದಿದೆ. ಅವರ ನಡತೆ ಹೇಯವಾಗಿದೆ. ಇವರ ಸ್ಥಿತಿಯನ್ನು ಕಂಡು ಕವಿ ವ್ಯಥೆಯನ್ನು ವ್ಯಕ್ತಪಡಿಸಿದ್ದಾನೆ. ಇವರ ಮನದ ಪರಿವರ್ತನೆ ನಿಜವಾದ ಹುಣ್ಣಿವೆ. ಹೆಣ್ಣಿನ ಬುದ್ಧಿ ಕೆಟ್ಟರೆ ಅದು ಗ್ರಹಣ; ಸುಬುದ್ಧಿಯವಳಾದರೆ ಹುಣ್ಣಿವೆ ಎಂಬುದು ಕವಿಯ ಆಶಯವಾಗಿದೆ. ಕವಿ ರಾಕಾಸುಂದರಿಯನ್ನು ಮೇಲಿನಂತೆ ಹೊಗಳುತ್ತಾನೆ.

ಹೀಗೆ ಮಹಿಳೆಯನ್ನು ಬಣ್ಣಿಸುವಲ್ಲಿ ಸಮಾಜದ ಹೀನವ್ಯವಸ್ಥೆ, ವಿಕೃತ ಬದುಕನ್ನು ಕಾಣುತ್ತ; ಆ ವ್ಯವಸ್ಥೆಯಲ್ಲಿಯೇ ಅದೇ ಶರೀರ, ಉಡುಪು, ನೃತ್ಯದ ಶೈಲಿ ಬಳಸಿಕೊಂಡು ಸುಕೃತ

ಶೈಲಿಯಲ್ಲಿ ಬದುಕಲು ಸಾಧ್ಯ ಎಂಬುದನ್ನು ಈ ಕವನ ಸೂಚಿಸುತ್ತದೆ. ಹೆಣ್ಣಿನ ನಿಜ ಸತ್ವವನ್ನು ಮೆಚ್ಚಿ ಬರೆದ ಉತ್ತಮ ಕವನ ಇದಾಗಿದೆ. ಬೇಂದ್ರೆಕಾವ್ಯ ಲೋಕವಸ್ತುವಿನ ಪ್ರತಿಕೃತಿಯಲ್ಲ, ಪ್ರತಿಮೆಯಲ್ಲ. ಅದು ಪ್ರತಿಸೃಷ್ಟಿ ಎಂಬುದು ಈ ಕವಿತೆಯಲ್ಲಿ ಸ್ಪಷ್ಟವಾಗಿದೆ.

---

## ಅಗ್ನೀ–ಸೋಮ

**ಪಾವಕ**

**ಜೀವನಾ ಪಾವನಾ ಆಗಬೇಕಾದ್ರ/ನಾವ್ನ್ಸ್ ಆಗಬೇಕು ಪಾವಕಾ. (5–3, 4)**

: 1. ಬೆಂಕಿ; ಅಗ್ನಿ.

: 2. ಶುದ್ಧಗೊಳಿಸುವ; ಪವಿತ್ರಗೊಳಿಸುವ.

*ಬೇಂದ್ರೆಯವರು ನಮ್ಮ ಜೀವನ ಪಾವನವಾಗಬೇಕಾದರೆ ನಾವೇ ಅಗ್ನಿಯಾಗಬೇಕು. ನಮ್ಮ ದೋಷಗಳನ್ನು ನಾವೇ ಸುಟ್ಟು ಹಾಕಿಕೊಳ್ಳಬೇಕು. ಸದಾಚಾರದಿಂದ ತಲೆ ಎತ್ತಿನಿಲ್ಲುವಂತಾಗಬೇಕು. ಅದೇ ಶುದ್ಧಿಕ್ರಿಯೆ; ಅದೇ ಪವಿತ್ರ ಎಂಬ ಹಿರಿದಾದ ಜೀವನತತ್ತ್ವ ತಿಳಿಸಿದ್ದಾರೆ.

---

## ಪ್ರತಿಬುದ್ಧಾ ಅಭೂತನ

**'ಪ್ರತಿಬುದ್ಧಾ ಅಭೂತನ', 'ಮಧುವಾತಾ ಋತಾಯತೇ ಮಧುಕ್ಷರಂತಿ ಸಿಂಧವಃ', ಹನುಮಾ, ಹಯಗ್ರೀವಾ.**

**ಇದು ಬಕುರಥಮನದಾ ಕರೆ_/ 'ಪ್ರತಿಬುದ್ಧ ಅಭೂತನ' (1–1, 2)**

* *

**ಉಳಿಯಬೇಕು। ಅಳಿಯಬಾರದು.। ಇದು ಅರವಿಂದ ಭೃಂಗದ ಘೋಷಾ। 'ಮಧುವಾತಾ ಋತಾಯತೇ। ಮಧುಕ್ಷರಂತಿ ಸಿಂಧವಃ' (5–1 ರಿಂದ 5)**

* *

**ಓ ಹನುಮಾ ಜನ್ಮಾ। ಹಯಗ್ರೀವಾ ಭೂಮಾ ಭೂಮಾ. (8–6, 7)**

*ಇದು ಋಗ್ವೇದದಲ್ಲಿ ಬರುವ ಒಂದು ಮಂತ್ರ ಧ್ಯಾನಿಸಿದ್ದರಿಂದ ಹುಟ್ಟಿದ ಕವಿತೆಯಾಗಿದೆ. ಆ ಮಂತ್ರ ಹೀಗಿದೆ:

ಏತ ಉ ತ್ಯೇ ಪ್ರತ್ಯದೃಷ್ಣನ್ ಪ್ರದೋಷಂ ತಸ್ಕರಾ ಇವ ॥

ಅದೃಷ್ಟಾ ವಿಶ್ವದೃಷ್ಟಾಃ ಪ್ರತಿಬುದ್ಧಾಧಅಭೂತನ॥ ಋಗ್ವೇದ (ಮಂಡಲ 1, ಸೂಕ್ತ 191, ಮಂತ್ರ 5)

(ಇವನು (ವಿಷ್ಣು) ಕಳ್ಳರ ಹಾಗೆ ರಾತ್ರಿಯ ವೇಳೆಯಲ್ಲಿ ಕಾಣಿಸುವನು. ಅವನು ಲೋಕದ ಕಣ್ಣಿಗೆ ಕಾಣಿಸುವುದಿಲ್ಲ, ಆದರೆ ಲೋಕವನ್ನು ಸದಾ ನೋಡುತ್ತಿರುವನು. ಹೇ ಮನುಷ್ಯರೇಎಚ್ಚರದಿಂದಿರಿ!)

ಮಧುವಾತಾಋತಾಯತೇ ಮಧುಕ್ಷರಂತಿ ಸಿಂಧವಃ । ಮಾಧ್ವೀರ್ನ ಸಂತ್ವೋಷಧೀಃ ॥ ಮಧುನಕ್ತಮುತೋಷಸೋ ಮಧುಮತ್ಪಾರ್ಥಿವಂ ರಜಃ । ಮಧುದ್ಯೋರಸ್ತು ನಃ ಪಿತಾ ॥ ಮಧುಮಾನ್ನೋ ವನಸ್ಪತಿರ್ಮಧುಮಾಜ್ ಅಸ್ತು ಸೂರ್ಯಃ । ಮಾಧ್ವೀರ್ಗಾವೋ ಭವಂತು ನಃ ॥ – ಋಗ್ವೇದ

(ಗಾಳಿ ಜೇನಿನಂತೆ ಬೀಸಲಿ, ನದಿ ಜೇನಿನಂತೆ ಹರಿಯಲಿ, ಔಷಧಿಗಳು ನಮ್ಮ ಪಾಲಿಗೆ ಜೇನಾಗಲಿ, ಹಗಲಿರುಳುಗಳು ನಮಗೆ ಜೇನಾಗಿ ಪರಿಣಮಿಸಲಿ, ನೆಲದ ಮೇಲಿನ ಧೂಳೂ ಜೇನಿನ ರೂಪವಾಗಲಿ, ಸ್ವರ್ಗದಲ್ಲಿನ ದೇವತೆಗಳೂ ನಮಗೆ ಜೇನನ್ನೇ ಅನುಗ್ರಹಿಸಲಿ, ಗಿಡ ಮರಗಳು ಜೇನಿನ ರೂಪ ತಳೆಯಲಿ. ಸೂರ್ಯ ಜೇನಿನ ರೂಪವಾಗಲಿ ಮತ್ತು ಹಸು ನಮ್ಮ ಪಾಲಿಗೆ ಜೇನಾಗಲಿ)

ಹನುಮಾ = ಕೋತಿ ಮುಖದವನು (ಆಂಜನೇಯ), ಹಯಗ್ರೀವಾ = ಕುದುರೆ ಮುಖದವನು (ತುಂಬುರ) ಈ ಪದಗಳಲ್ಲಿ ಮನುಷ್ಯ ಪಶುತ್ವದ ನೆಲೆಯಿಂದ ಮೇಲಿನ ನೆಲೆಗಳಿಗೆ ಏರುವನು ಎಂಬ ಸೂಚನೆ ಇದೆ.

(ಭೂಮಾ = ಹಿರಿದಾದುದು)

ಭವಿಷ್ಯದಲ್ಲಿ ಮನುಷ್ಯನ ಮೇಲೆ ದಿವ್ಯತ್ವದ ಅನುಗ್ರಹವಾಗಲಿದೆ, ದಿವ್ಯತ್ವವನ್ನು ಸಾಧಿಸಿ ಸಂಪಾದಿಸಬೇಕಾದ ಅಗತ್ಯವಿಲ್ಲ, ಮನುಷ್ಯ ಹುಟ್ಟುವಾಗಲೇ ದಿವ್ಯ ಮಾನವನಾಗಿ ಜನಿಸುವನು ಎಂದು ಅರವಿಂದರು ಭವಿಷ್ಯವಾಣಿ ನುಡಿದಿರುವರು. ಆ ಭವಿಷ್ಯ ವಾಣಿಯ ಸಂದೇಶ 6, 7 ಮತ್ತು 8ನೇ ಪದ್ಯಭಾಗಗಳಲ್ಲಿವೆ.

---

## ದಿವ್ಯ ಗಾಯತ್ರೀ

**ವಿಷ್ಣು ಸಹಸ್ರನಾಮ.**

**ಉದ್ಭವಾ, ಕ್ಷೋಭಣಾದೇವಾ ಶ್ರೀಗರ್ಭಾ/ ಪರಮೇಶ್ವರಾ ಕರಣಾ ಕಾರಣಾ ಕರ್ತಾ/ ವಿಕರ್ತಾ, ಗಹನಾ, ಗುಹಾ, ದಹರಾ ಹೃದಯಾ/ ವಿಠ್ಠಲಾ ಪುಂಡರೀಕಾ ಅನಸೂಯಾ**

**ವಿವೇಕಾಪಾಯಾ. (5-1 ರಿಂದ 4)**

ವಿಷ್ಣು ಸಹಸ್ರನಾಮ: ಕುರುಕ್ಷೇತ್ರಯುದ್ಧದ ಪ್ರಾರಂಭದಲ್ಲಿ ಗೀತೆ ಮತ್ತು ಅಂತ್ಯದಲ್ಲಿ ವಿಷ್ಣು ಸಹಸ್ರನಾಮ ಬರುತ್ತದೆ. ಇದನ್ನು ಶರಶಯ್ಯೆಯಲ್ಲಿ ಮಲಗಿದ್ದ ಭೀಷ್ಮ ಧರ್ಮರಾಯನಿಗೆ ಉಪದೇಶಿಸುವರು, ಹೀಗೆ ಉಪದೇಶಿಸುವಾಗ ವಿಷ್ಣುವಿನ ಪೂರ್ಣಾವತಾರವಾದ ಶ್ರೀಕೃಷ್ಣನೂ ಅಲ್ಲೇ ಹಾಜರಿರುವನು. ಬಂಧುಗಳನ್ನು ಕಳೆದುಕೊಂಡು ದುಃಖದಲ್ಲಿ ಮುಳುಗಿದ್ದ ಧರ್ಮರಾಯನನ್ನು ಶ್ರೀಕೃಷ್ಣನೇ ಭೀಷ್ಮರ ಬಳಿಗೆ ಕರೆತರುವನು. ಹೀಗೆ ಭಗವದ್ಗೀತೆ ಭಕ್ತನೆದುರು (ಅರ್ಜುನನೆದುರು) ಭಗವಂತನು ತೋಡಿಕೊಂಡ ಸ್ವಯಂ ನಿವೇದನೆಯಾದರೆ, ವಿಷ್ಣು ಸಹಸ್ರನಾಮ ಭಗವಂತನೆದುರು ಭಕ್ತ(ಅಂದರೆ ಭೀಷ್ಮ) ತೋಡಿಕೊಳ್ಳುವ ಅಂತರಂಗದ ನಿವೇದನೆಯಾಗಿದೆ. ಯುದ್ಧಾರಂಭದಲ್ಲಿ ಅರ್ಜುನನ ದುಃಖಕ್ಕೆ ತಾನೇ ಸಮಾಧಾನ ಹೇಳಿದ ಭಗವಂತ ಯುದ್ಧಾಂತ್ಯದಲ್ಲಿ ಧರ್ಮರಾಯನ ದುಃಖಕ್ಕೆ ತಾನು ಪರಿಹಾರ ಹೇಳದೆ ತನ್ನ ಮತ್ತೊಬ್ಬ ಭಕ್ತನಿಂದ ಪರಿಹಾರ ಹೇಳಿಸುತ್ತಿರುವುದು ಇಲ್ಲಿ ವಿಶೇಷ. ಭೀಷ್ಮರ ಬಾಯಿಂದ ವಿಷ್ಣು ಸಹಸ್ರನಾಮ ಕೇಳಿ ಧರ್ಮರಾಯನಿಗೆ ಪುನಃ ಮನಃಶ್ಯಾಂತಿ ಲಭಿಸುತ್ತದೆ. ಪದ್ಮಪುರಾಣದಲ್ಲಿಯೂ ವಿಷ್ಣುಸಹಸ್ರನಾಮ ಉಂಟು.

ಪದ್ಯದಲ್ಲಿ ಉಲ್ಲೇಖಿತವಾಗಿರುವ ವಿಷ್ಣು ಸಹಸ್ರನಾಮದ ಸ್ತೋತ್ರ:

ಉದ್ಭವಃ ಕ್ಷೋಭಣೋದೇವಃ ಶ್ರೀಗರ್ಭಃ ಪರಮೇಶ್ವರಃ ॥

ಕರಣಂ ಕಾರಣಂ ಕರ್ತಾ ವಿಕರ್ತಾ ಗಹನೋ ಗುಹಃ ॥ 41 ॥

ಮೇಲಿನ ಪದ್ಯಕ್ಕೆ ಆದಿಶಂಕರರು ನೀಡಿರುವ ವ್ಯಾಖ್ಯಾನದ ಯಥಾವತ್ತಾದ ಅನುವಾದ:

ಉದ್ಭವಃ=(ಪ್ರಪಂಚೋತ್ಪತ್ತಿಉತ್ಪಾದಾನಕಾರಣತ್ವಾತ್‌ಉದ್ಭವಃ)ಜಗತ್ತನ್ನು ಸೃಷ್ಟಿಸಿದವನು. ಉದ್ಭವ ಎಂಬ ಪದಕ್ಕೆ ಭವವನ್ನು ಅತಿಕ್ರಮಿಸಿದವನು ಎಂಬ ಮತ್ತೊಂದು ಅರ್ಥವೂ ಉಂಟು.

ಕ್ಷೋಭಣಃ=(ಕ್ಷೋಭಯಾಮಾಸ ಇತಿ ಕ್ಷೋಭಣಃ) ಕ್ಷೋಭೆ ಎಂದರೆ ಗದ್ದಲ, ಕ್ಷೋಭಣನೆಂದರೆ ಗದ್ದಲ ಉಂಟು ಮಾಡುವವನು. ಲೋಕವನ್ನು ಸೃಷ್ಟಿಸಿ ಬಳಿಕ ಲೋಕವ್ಯಾಪಾರಕ್ಕೆ, ಲೋಕದ ಗದ್ದಲಗಳಿಗೆ ಪ್ರೇರೇಪಣೆ ನೀಡಿದವನು ಕ್ಷೋಭಣ.

ದೇವಃ=(ದೀವ್ಯತಿ ತಸ್ಮಾತ್‌ದೇವಃ) ದೀವ್ಯತಿ ಎಂದರೆ ಆಡಿಸುವವನು, ಪ್ರೇರೇಪಿಸುವುದಷ್ಟೇ ಅಲ್ಲ ಆಡಿಸುವವನೂ ಆದಕಾರಣ ಅವನಿಗೆ ದೇವ ಎಂಬ ಹೆಸರಿದೆ.

ಶ್ರೀಗರ್ಭಃ=(ಶ್ರೀಃ ವಿಭೂತಿಃ ಯಸ್ಯ ಉದರಾಂತರೇ ಜಗದ್ರೂಪಾಯಸ್ಯ ಗರ್ಭೇ ಸ್ಥಿತಾ ಸಃ ಗರ್ಭಃ) ಲೋಕವನ್ನು ಆಡಿಸುವವನ ಆಂತರ್ಯದಲ್ಲಿ ಹಿರಿದಾದ ವಿಭೂತಿ ಇದೆ. ಆ ಆಂತರ್ಯವನ್ನೇ ಇಲ್ಲಿ ಗರ್ಭ ಎಂದಿರುವುದು. ಹಿರಿದಾದ ವಿಭೂತಿಯನ್ನು ತನ್ನ ಹೊಟ್ಟೆಯಲ್ಲಿ ಇರಿಸಿಕೊಂಡವನಾದ ಕಾರಣ ಅವನು ಶ್ರೀಗರ್ಭ.

ಪರಮೇಶ್ವರಃ= (ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಃ)ಯಾವುದು ಆ ಹಿರಿದಾದ ವಿಭೂತಿ? ಅದು ಅಖಿಲ ಜೀವಜಾತದಲ್ಲೂ ನೆಲೆಸಿದೆ. ಪರಮೇಶ್ವರನೆಂದರೆ ಸರ್ವ ಭೂತಗಳಲ್ಲಿಯೂ ಸಮಾನವಾಗಿ ನೆಲೆಸಿರುವವನು (ತಿಷ್ಠಂತಂ).

ಕರಣಂ =(ಜಗದುತ್ಪತ್ತೌ ಸಾಧಕತಮಂ ಕರಣಮ್)ಕರಣ ಎಂಬ ಪದಕ್ಕೆ ಸೃಷ್ಟಿಯ ಮೂಲದ್ರವ್ಯ (ಸಾಧಕತಮ) ಎಂಬ ಅರ್ಥವಿದೆ.

ಕಾರಣಂ =(ಉಪಾದಾನ ನಿಮಿತ್ತಂ ಚ ಕಾರಣಮ್)ಅವನು ಲೋಕದ ಮೂಲದ್ರವ್ಯನೂ ಹೌದು ಹಾಗೆಯೇ ಲೋಕದ ಚಟುವಟಿಕೆಗಳ ಮೂಲಕಾರಣನೂ ಹೌದು.

ಕರ್ತಾ= (ಕರ್ತಾ ಸ್ವತಂತ್ರಃ) ಲೋಕದ ದ್ರವ್ಯ ಮತ್ತು ಕಾರಣನಷ್ಟೇ ಅಲ್ಲ, ಕರ್ತೃವೂ ಹೌದು. ಸರ್ವಸ್ವತಂತ್ರನಾದ ಕಾರಣ ಅವನೇ ಎಲ್ಲದರ ಕರ್ತೃ. ಅವನೇ ಎಲ್ಲವನ್ನೂ ಮಾಡಿಸುತ್ತಿರುವವನು.

ವಿಕರ್ತಾ=(ವಿಚಿತ್ರಂ ಭುವನಂ ಕೃತವಾನ್ ಇತಿ ವಿಕರ್ತಾ) ಲೋಕ ವ್ಯಾಪಾರವನ್ನು ಕಾರ್ಯ, ಕಾರಣ, ಕರ್ತೃ ಎಂದು ಅಷ್ಟು ಸರಳವಾಗಿ ವಿವರಿಸಲಾಗದು. ಲೋಕವ್ಯಾಪಾರ ವಿಚಿತ್ರವಾದುದು, ಸಂಕೀರ್ಣವಾದುದು. ಈ ಸಂಕೀರ್ಣತೆಗೆ ಕಾರಣನಾದ ಕಾರಣ ಅವನು ವಿಕರ್ತಾ.

ಗಹನಃ=(ತಸ್ಯ ಜ್ಞಾತುಂ ನ ಶಕ್ಯತೇ ಇತಿ ಗಹನಃ) ಆ ಸಂಕೀರ್ಣತೆಯ ಸ್ವರೂಪವನ್ನು ಅರಿಯಲು ಶಕ್ಯವಿಲ್ಲವಾದ ಕಾರಣ ಅವನಿಗೆ 'ಗಹನ' ಎಂಬ ಹೆಸರುಂಟು.

ಗುಹಃ= (ಗೂಹತೇ ಸಂವೃಣೋತಿ ಸ್ವರೂಪಾದಿ ನಿಜಮಾಯಯಾ ಇತಿ ಗುಹಃ) ಎಲ್ಲವನ್ನೂ ತನ್ನ ಮಾಯೆಯಿಂದ ಮರೆಮಾಚಿರುವ (ಗೂಹತೇ) ಕಾರಣ ಅವನು ಗುಹ. "ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾ ಸಮಾವೃತಃ" ಎಂದು ಸ್ವತಃ ಶ್ರೀಕೃಷ್ಣನೇ ಗೀತೆಯಲ್ಲಿ ನುಡಿದಿರುವನು (ಗೀ. 7.25)

---

# ೨೬. ಕಾವ್ಯ ವೈಖರಿ (೧೯೮೨)

## ಸರ್ವಮಂಗಲೆ

### ಲೋಪಾಮುದ್ರೆಗೆ ಬುಲ್ಲಿ, ಮಕರಂದ, ಮಿಲಿಂದ, ಪ್ರಭಾಕರ

**ಎಲ್ಲಿದ್ದ ಅವನೀತ ದುರ್ವಿನೀತನು ಎಲ್ಲಿ? ಕಾವೇರಿ ಇನ್ನುನೂ ಲೋಪಾಮುದ್ರೆಗೆ ಬುಲ್ಲಿ./**
**ಇಲ್ಲಿಹನು ಮಕರಂದ ಆ ಮಿಲಿಂದನು ಇಲ್ಲಿ/ ಆ ನಳವು ಬಂದಿತ್ತು ದಮಯಂತಿ ಕೈ ಛಲ್ಲಿ./**
**ಅಸ್ಮಿತೆಯ ವಿಸ್ಮಿತತೆ ಆ ಪ್ರಭಾಕರನಲ್ಲಿ/ ಸರ್ವಮಂಗಳೆ ಹಸಿರು ಹನ್ನೆರಡು ತಿಂಗಳ ಬಳ್ಳಿ.**

*ಬೇಂದ್ರೆಯವರು ಸರ್ವಮಂಗಲೆ ಕವನವನ್ನು ಬರೆದುದು ತಾ.10–07–1981. ಅವರು ತೀರಿಹೋದುದು ತಾ.26–10–81. ಈ ಕಾರಣದಿಂದ ಅವರು ಕಾಯಿಲೆ ಬಿದ್ದಾಗ ತನ್ನ ಮಗಳು ಮಂಗಲಳನ್ನು ನೆನೆದು ಆಕೆಯನ್ನು ನೋಡಬೇಕೆಂಬ ಮನಸ್ಸಿನಿಂದ ಬರೆದ ಕವನ ಇದಾಗಿದೆ. ಬೇಂದ್ರೆಯವರು ಮಗಳನ್ನು ಔರಂಗಾಬಾದಿಗೆ ನೀಡಿದ್ದಾರೆ. ಅದು ವಿದರ್ಭದಲ್ಲಿದೆ. ಆಕೆಯ ಇಬ್ಬರು ಗಂಡುಮಕ್ಕಳ ಹೆಸರು ಮಕರಂದ, ಮಿಲಿಂದ. ಆಕೆಯ ಪತಿ ಪ್ರಭಾಕರ. ಅವರನ್ನೆಲ್ಲ ನೆನೆದು ಬರೆದ ಕವನ ಇದಾಗಿದೆ. ಬೇಂದ್ರೆಯವರು ಕಾವೇರಿ ನಾಡಿನವರು. ಆದರೆ ಮಗಳನ್ನು ವಿವಾಹಮಾಡಿ ನೀಡಿರುವುದು ವಿದರ್ಭಕ್ಕೆ. ಲೋಪಾಮುದ್ರೆ ವಿದರ್ಭ ರಾಜನ ಮಗಳು ಹಾಗೂ ಅಗಸ್ತ್ಯ ಮುನಿಯ ಹೆಂಡತಿ. ಈ ಎಲ್ಲ ವಾಸ್ತವ ಮತ್ತು ಪುರಾಣಗಳ ಹಿನ್ನೆಲೆಯಿಂದ ಈ ಕವನವನ್ನು ಅರ್ಥಮಾಡಿಕೊಳ್ಳಬೇಕಾಗಿದೆ.

ಕವಿಯು ತನ್ನ ಮಗಳು ಮಂಗಲಳನ್ನು ಸರ್ವಮಂಗಲೆ ಎಂದು ಕರೆದಿರುವ ಕವನದ ಶೀರ್ಷಿಕೆಯಲ್ಲಿಯೇ ಅವಳಿಗೆ ಒಳ್ಳೆಯದಾಗಲಿ; ಆಕೆ ಸದಾ ಮಂಗಲೆಯಾಗಿ, ಮುತ್ತೈದೆಯಾಗಿ ಇರಲಿ ಎಂಬ ಮಂಗಳ ಆಶೀರ್ವಾದವಿದೆ. ಅವರಿಗೆ ಕಾಯಿಲೆ ಹೆಚ್ಚಾಗಿ ತಾನು ಉಳಿಯುವೆನೋ ಇಲ್ಲವೋ ಎಂಬ ಮನಸ್ಸಿನ ತಳಮಳ ಜಾಸ್ತಿಯಾದಾಗ ಮಗಳನ್ನು ನೆನೆದಿದ್ದಾರೆ. ಆಕೆಯನ್ನು ಕರ್ನಾಟಕದಲ್ಲಿಯೇ ಎಲ್ಲಾದರೂ ವಿವಾಹ ಮಾಡಿಕೊಟ್ಟಿದ್ದರೆ ಚೆನ್ನಾಗಿತ್ತು. ದೂರದ ಊರಿಗೆ ಕೊಟ್ಟು ತನ್ನ ಕೊನೆ ಘಳಿಗೆಯಲ್ಲಿ ಅವಳನ್ನು ನೋಡಲಾಗಲಿಲ್ಲವಲ್ಲ ಎಂಬ ವ್ಯಥೆ ಕಾಡಿದೆ. ಯಾವ ದುಷ್ಟಶಕ್ತಿಗಳ ಕಾರಣವಾಗಿ ತಾನು ತನ್ನ ಮಗಳನ್ನು ಕಾವೇರಿಯ ನಾಡಿನಿಂದ ಲೋಪಾಮುದ್ರೆಯ ದೂರದ ಊರಿಗೆ (ಬುಲ್ಲಿ = To become extensive) ಸಂಬಂಧ ವಿಸ್ತರಿಸಿ ನೀಡಿದೆನಲ್ಲ ಎಂಬ ನೋವು ಮೊದಲ ಚರಣದಲ್ಲಿದೆ.

ದಮಯಂತಿಯಂತಹ ತನ್ನ ಮಗಳಿಗೆ ನಳನಂತಹ ಸಂಬಂಧ ಕೂಡಿ ಬಂತು, ವಿವಾಹ ಮಾಡಿದೆ. ಈಗ ಆಕೆಗೆ ಮಕರಂದ, ಮಿಲಿಂದ ಎಂಬ ಎರಡು ಗಂಡುಮಕ್ಕಳು ಹಾಗೂ ಸ್ಮಿತಾ ಎಂಬ ಹೆಣ್ಣುಮಗಳಿದ್ದಾಳೆ. ಅವಳ ಜೀವನಕ್ಕೆ ಅರ್ಥ ಬಂದಿರುವುದರಿಂದ

ತನ್ನ ಮೊಮ್ಮಕ್ಕಳು ಇಲ್ಲೇ ಇದ್ದಾರೆ ಎಂದು ಭಾವಿಸಬೇಕು ಎಂದು ಸಮಾಧಾನಪಟ್ಟ ಮನಸ್ಸಿನಭಾವ ಎರಡನೆಯ ಚರಣದಲ್ಲಿದೆ.

ತನ್ನ ಅಳಿಯ ಪ್ರಭಾಕರನಲ್ಲಿ ಆಶ್ಚರ್ಯಗೊಳಿಸುವ ರೀತಿಯ ತಿಳುವಳಿಕೆ ಇದೆ. ಅವನು ಅರ್ಥಪೂರ್ಣವಾಗಿ ಬದುಕಿದ್ದಾನೆ. ಆದಕಾರಣ ತನ್ನ ಕರುಳ ಬಳ್ಳಿಯಾದ ಮಗಳು ಸದಾ ಸಂತಸದಿಂದಿದ್ದಾಳೆ. ಅದು 'ಹಸಿರು ಹನ್ನೆರಡು ತಿಂಗಳ ಬಳ್ಳಿ' ಎಂಬ ತೃಪ್ತಿಯ ಶಾಂತ ಚಿತ್ತ ಭಾವ ಮೂರನೆಯ ಚರಣದಲ್ಲಿದೆ. ಇದೊಂದು ಬೇಂದ್ರೆಯವರ ತೀವ್ರ ಭಾವಲಹರಿಯ ತುಂಟತನ ಬೆರೆತ ಆತ್ಮೀಯ ಭಾವದ ಅಪರೂಪ ಕವನ.

---

## ತಂದೆ-ತಾಯಿ

**ತುಸ**

**ಅಕ್ಕಿಬೆಳೆಗೇ ಬೇಕು ತುಸ (2-2)**

: ತವುಡು; ಹೊಟ್ಟು; ಉಮ್ಮಿ.

---

# ೨೭. ತಾ ಲೆಕ್ಕಣಿಕೆ ತಾ ದೌತಿ (೧೯೮೩)

## ತಾ ಲೆಕ್ಕಣಿಕೆ ತಾ ದೌತಿ

**ಲೆಕ್ಕಣಿಕೆ, ದೌತಿ**

**ತಾ ಲೆಕ್ಕಣಿಕೆ, ತಾ ದೌತಿ (ಪಲ್ಲ॥ 2ನೇ ಸಾಲು)**

: ಮಸಿಯಲ್ಲಿ ಹದ್ದಿಕೊಂಡು ಬರೆಯುವ ಚೂಪಾದ ತುದಿಯುಳ್ಳ ಒಂದು ಸಾಧನ; ಟಾಕು. (ಉ.ಕ)

: ಮಸಿಕುಡಿಕೆ; ಶಾಯಿ ಕುಡಿಕೆ.(ಮರಾ. ದವತ್, ದೌತ್)

---

## ಈ ವಿಶ್ವ ಸ್ವರೂಪನಾದ ಗಣಪತಿಗೆ

**ಋದ್ಧಿ-ಸಿದ್ಧಿ**

**ಈ ವಿಶ್ವ ಸ್ವರೂಪನಾದಾ ಗಣಪತಿಗೆ/ ಹಾಗೆ ಋದ್ಧಿ-ಸಿದ್ಧಿ ಸಂಗತೀ ॥ಪ॥**

*ಇವರಿಬ್ಬರು ಗಣಪತಿಯ ಮಡದಿಯರು ಎಂಬ ಉಲ್ಲೇಖ 'ಗಣೇಶ ಪುರಾಣ' (1ನೇ ಸ್ಕಂದ, 65ನೇ ಅಧ್ಯಾಯ) ದಲ್ಲಿ ಬರುತ್ತದೆ. ಋದ್ಧಿ ಸಿದ್ಧಿಯರು ಬ್ರಹ್ಮನ ಮಾನಸ ಪುತ್ರಿಯರು. ಎಲ್ಲ ದೇವತೆಗಳು ಗಣೇಶನಿಗೆ ನಾನಾ ಉಡುಗೊರೆಗಳನ್ನು ನೀಡುವಾಗ ಬ್ರಹ್ಮ ತನ್ನ ಮಾನಸ ಪುತ್ರಿಯರನ್ನೇ ಗಣೇಶನಿಗೆ ದಾನ ಮಾಡುತ್ತಾನೆ.

ಮುದ್ಗಲ ಪುರಾಣದಲ್ಲಿ ಮತ್ತೊಂದು ಉಲ್ಲೇಖವಿದೆ. ಅಲ್ಲಿ ಬ್ರಹ್ಮ ಗಣೇಶನಿಗೆ ಉಡುಗೊರೆ ನೀಡಲು ತನ್ನ ಬಳಿ ಏನೂ ಇಲ್ಲವೆಂದು ಚಡಪಡಿಸುತ್ತಿದ್ದಾಗ ಆಗ ಅವನ ಚಡಪಡಿಕೆಯನ್ನು ಕಂಡು ಗಣೇಶ ತನ್ನ ಸಂಕಲ್ಪದಿಂದಲೇ ಋದ್ಧಿ-ಸಿದ್ಧಿಯರನ್ನು ಸೃಷ್ಟಿಸಿ ಬ್ರಹ್ಮನಿಗೆ ನೀಡುವನು. ಆಗ ಬ್ರಹ್ಮ ಗಣೇಶನಿಂದ ಪಡೆದ ಈ ಇಬ್ಬರು ಪುತ್ರಿಯರನ್ನು ಪುನಃ ಗಣೇಶನಿಗೇ ಸಮರ್ಪಿಸಿ ಕೃತಾರ್ಥನಾಗುವನು. ಕೆಲವು ಪುರಾಣಗಳಲ್ಲಿ ಇವರಿಬ್ಬರನ್ನು 'ಬುದ್ಧಿ-ಸಿದ್ಧಿ' ಎಂಬ ಹೆಸರಿನಿಂದಲೂ ಕರೆದಿರುವರು.

ಇವಿಷ್ಟು ಪುರಾಣದ(ಸ್ಮೃತಿಯ) ಉಲ್ಲೇಖಗಳು. ಇದಲ್ಲದೆ ಇದಕ್ಕಿಂತಲೂ ಪ್ರಾಚೀನವಾದ ವೇದಗಳಲ್ಲೂ (ಶ್ರುತಿಗಳಲ್ಲು) ಗಣೇಶನ ಉಲ್ಲೇಖವಿದೆ. ವೇದಗಳಲ್ಲಿ ಬರುವ ಗಣೇಶನಿಗೆ ಮಡದಿಯರಿಲ್ಲ, ಅವನು ಬ್ರಹ್ಮಚಾರಿ. ಗಣೇಶನ ವ್ರತದಲ್ಲೂ ಸಂಕಲ್ಪದಲ್ಲಿ ಮತ್ತು ಗಣೇಶನನ್ನು ಆಮಂತ್ರಿಸುವ ಮಂತ್ರಗಳಲ್ಲಿ ಅವರ ಮಡದಿಯರನ್ನು ಪ್ರಸ್ತಾಪಿಸುವ ಮಂತ್ರಗಳಿಲ್ಲ, ಗಣೇಶನೊಬ್ಬನನ್ನೇ ಆಮಂತ್ರಿಸುವ ಪರಿಪಾಟವಿದೆ. ಋದ್ಧಿ ಸಿದ್ಧಿಯರನ್ನು

ಪಡೆದ ಗಣೇಶನನ್ನು ಕ್ರಮವಾಗಿ ರೂಪಕಾತ್ಮಕವಾಗಿ ಲೌಕಿಕ-ಆಧ್ಯಾತ್ಮಿಕ ಸಂಪತ್ತುಗಳ ಒಡೆಯನೆಂದು ಸ್ತುತಿಸಲಾಗುತ್ತದೆ.

---

## ನಿತ್ಯ ಶುಭಾ ನಿತ್ಯ ಮಂಗಳಾ

**ಚಾಂಗು**

**ಈ ಜನಾ ಅನ್ನಲಿ-ಚಾಂಗುಭಲಾ, ಭಲಾ (3-4)**

: ಭಲೆ, ಭೇಷ್, ಭಾಪು ಎಂಬರ್ಥದ ಹೊಗಳಿಕೆಯ ಮಾತು,-ಕೊಂಡಾಟದ ನುಡಿ.

---

## ಈ ಗಣನಾಥಾ

**'ಗಣಾನಾಂ ತ್ವಾ ಗಣಪತಿಂ ಹವಾಮಹೇ'**

*ಗಣಾನಾಂ ತ್ವಾ ಗಣಪತಿಂ ಹವಾಮಹೇ/ ಕವಿಂ ಕವೀನಾಮುಪವಶ್ರವಸ್ತಮಮ್ ॥/ ಜ್ಯೇಷ್ಠ ರಾಜಂ ಬ್ರಹ್ಮಣಾ ಬ್ರಹ್ಮಣಸ್ಪತ/ ಆ ನ ಶ್ರುಣ್ವನ್ನೂತಿಭಿಸ್ಸೀದ ಸಾಧನಮ್ ॥ - ಋಗ್ವೇದ (ಮಂಡಲ 2, ಸೂಕ್ತ 23, ಮಂತ್ರ 1) ಗಣಗಳಿಗೆ ಒಡೆಯನಾದ ನಿನಗೆ ನಮ್ಮನ್ನೇ ನಾವು ಸಮರ್ಪಿಸುವೆವು. ನೀನು ಕವಿಗಳಲ್ಲೆಲ್ಲ ಅತ್ಯಂತ ಶ್ರೇಷ್ಠ ಕವಿಯಾಗಿರುವೆ. ನೀನು ಜ್ಯೇಷ್ಠನಾದ ರಾಜನಾಗಿರುವೆ, ಮಂತ್ರಗಳಿಗೆ ಒಡೆಯನಾಗಿರುವೆ. ನೀನು ನಮ್ಮ ಮೊರೆಯನ್ನು ಕೇಳಿ ನಮ್ಮನ್ನು ರಕ್ಷಿಸು, ನಮ್ಮ ಹೃದಯದಲ್ಲಿ ನೆಲೆಸು.

ಶಿವನ ಅನುಯಾಯಿಗಳನ್ನು 'ಶಿವಗಣ' ಎನ್ನುವರು. ಶಿವಗಣದಲ್ಲಿ ಮೂರುಜಾತಿ ಅಥವಾ ವರ್ಗಗಳಿವೆ ಯಕ್ಷರು, ಪ್ರಮಥರು ಮತ್ತು ಭೂತಗಳು - ಈ ಮೂರೂ ವರ್ಗಗಳು ಸೇರಿ 'ಶಿವಗಣ' ಆಗಿದೆ. ವಿನಾಯಕನು ಈ ಮೂರು ವರ್ಗಗಳಿಗೆ ಒಡೆಯನಾಗಿರುವನು. ಶಿವಗಣ ಶಿವನ ಅನುಯಾಯಿಗಳಾದರೂ ಶಿವ ಸದಾ ತಪೋಮಗ್ನನಾಗಿರುವ ಕಾರಣ ಶಿವಗಣಕ್ಕೆ ಮಾರ್ಗದರ್ಶಕರ ಕೊರತೆ ಇರುತ್ತದೆ. ಆ ಕೊರತೆ ನೀಗಿಸಲು ಶಿವನೇ ತನ್ನ ಮಗನನ್ನು ಇವರ ಅಧಿಪತಿಯನ್ನಾಗಿ ನೇಮಿಸುವನು ಎಂದು ಪುರಾಣದ ಕಥೆ ಇದೆ. ಆದ್ದರಿಂದಲೇ ಅವನಿಗೆ 'ಗಣೇಶ', 'ಗಣಪತಿ' ಎಂಬ ಹೆಸರಿದೆ.

---

## ನೀ ನಾಕನೇ ತಂತಿ

**ಅವಸರ್ಪಿಣಿ, ಉತ್ಸರ್ಪಿಣ**

**ಅವಸರ್ಪಾ–ಉತ್ಸರ್ಪಾ (3–4)**

: 1. ಇಳಿತಾಯ; ಕುಂದುವುದು.

2. (ಜೈನ) ಮನುಷ್ಯರ ಆಯುಸ್ಸು ಸುಖ ಮುಂತಾದುವುಗಳು ಕ್ರಮವಾಗಿ ಕುಂದುವ ಕಾಲ.

: 1. ಮೇಲೆ ಏರುವಿಕೆ.

2. (ಜೈನ) ಕಾಲದ ಒಂದು ಭಾಗ; ಮನುಷ್ಯರ ದೇಹ ಪ್ರಮಾಣ, ಶರೀರಬಲ, ಆಯುಸ್ಸು, ಸುಖ ಮುಂತಾದುವುಗಳು ಕ್ರಮವಾಗಿ ಏರುವ ಕಾಲ.

---

## ಹುಷಾರ! ಮನಿಅವರ್‍ರ್ಯಾ ಹುಷಾರ್!

**ಘೋಕ, ಝೋಕು**

**ಪ್ರಜಾರಾಜ್ಯ ಘೋಕಾಗಿಲ್ಲಾ, ಝೋಕಾಗಿಲ್ಲಾ (10–4)**

: (ಉ.ಕ) ಪುನರಾವೃತ್ತಿ; ಉರು; ಕಂಠಪಾಠ.

: 1. ಗೀತವಾದ್ಯವನ್ನು ಬಾರಿಸುವುದರಲ್ಲಿ ಒಂದು ಕ್ರಮ.

2. ಠೀವಿ; ಬೆಡಗು; ಡೌಲು.

---

## ಖೈರಾತು ದಾನ ಪದ್ಧತಿ

**ಖೈರು, ಖಾವಿಂದ**

**ಖಾವಿಂದರು ಗಾಳಿಸವಾರಿಗೆ ಹೊರಟದ್ದಾರೆ (1–1)**

: ಕ್ಷೇಮ; ಕುಶಲ; ಸುಖ. (ಅರ.ಮರಾ.ಖೈರ್)

: ಒಡೆಯ; ಸ್ವಾಮಿ; ಪ್ರಭು; ಯಜಮಾನ.

---

## ಸತ್ತ ಸವಿಯು

**ಕಿವುಳ, ಕುರುಳ್, ಉಡಕ**

**ನಾನು ಕಿವುಳ–ನೀನು ಕಿವುಡ/ ನಾನು ಕುರುಳ್–ನೀನು ಕುರುಡ/ ಉಳ್ಳವಗು ಉಡಕನಿಗು ಬಾಂಧವ್ಯವೇ? (1–1, 2, 3)**

: ಕೇಳಿದರೂ ಕೇಳಿಸದಂತಿರು; ಗಮನಿಸದಿರು; ಮಾತನ್ನು ಅಲಕ್ಷಿಸು.

: (ಆಲಂ) ಅಜ್ಞಾನಿ; ಅವಿವೇಕಿ; ಮೂರ್ಖ.

*ಉಡುಕ–ಸೊಂಟಕ್ಕೆ ಸುತ್ತಿದ ಹೊದಿಕೆ. ಅಂದರೆ ಮರ್ಯಾದೆ ಮುಚ್ಚಿಕೊಳ್ಳುವಷ್ಟು ಬಟ್ಟೆ ಉಟ್ಟವನು. ಮೈತುಂಬ ಬಟ್ಟೆ ಉಡಲಾರದ ದಟ್ಟ ದಾರಿದ್ರ್ಯವುಳ್ಳವನು.

ಅವನೊಂದಿಗೆ ಉಳ್ಳವನು ಬಾಂಧವ್ಯ(ಸಖ್ಯ)ಹೊಂದಲು ಸಾಧ್ಯವೇ? ಎಂಬ ಪ್ರಶ್ನೆಯಲ್ಲಿ ಸಾಧ್ಯವಿಲ್ಲವೆನ್ನುವ ಉತ್ತರವೂ ಅಡಗಿದೆ.

---

## ಇಲ್ಲದಕೆ ಒಲ್ಲ

**ಸಮದಂಡಿ**

**ಒಲ್ಲದವನಿಗೆ ಇಲ್ಲ, ಲಿಂಗ ವಿದ್ಯಾವರ್ಗ/ ಒಲಿದವನಿಗುಂಟು ಅದು ಸಮದಂಡಿ ಆದಾಗ./ ಅತ್ತ ಯಾವುದೊ ನರಕ ಇತ್ತ ಏನೊ ಸ್ವರ್ಗ/ ಭಗವಂತನೊಡನೆ ತಾನವಿಭಕ್ತವಾದಾಗ (1–1, 2, 3, 4)**

: ತಕ್ಕಡಿಯ ಕೋಲು; ತುಲಾದಂಡ.

*ಒಲವೆ ಲಿಂಗಾನುಭವ. ಆ ಅನುಭಾವದ ನೆಲೆಗೆ ಏರಿದವನು ಸಮದಂಡಿಯಾಗಿ ಸ್ಥಿತಪ್ರಜ್ಞನಾಗಿರಬೇಕು. ಭಗವಂತನೊಡನೆ ಅವಿಭಕ್ತನಾದಾಗ ನರಕ ಸ್ವರ್ಗಗಳನ್ನು ಸಮನಾಗಿ ತೂಗಬೇಕು.

'ಅಣುವಿಗು ಮಹತ್ತಿಗು/ ಇಲ್ಲಿಹುದು ಸಂಧಾನ/ ಧಾರಣೆ, ಸಮಾಧಿ, ಸಂಯಮಿತವೀಧ್ಯಾನ/ ಅಲ್ಲ ಅಜ್ಞಾನ ಆ ಜ್ಞಾನ/ ತಾನೇ ತಾನಾದ ಸಚ್ಚಿದಾನಂದ ವಿಜ್ಞಾನ' (ಪರಾಕಿ: ಸಂಧಾನ) ಎಂಬ ಅರಿವಿನಲ್ಲಿ ಒಂದಾಗಬೇಕು.

---

## ಗುರುವೆ

**ವೈ, ಹಾಸು, ಹೊಕ್ಕು, ನೆಯಿ, ಹೊಯಿ**

**ಹಗಲನೆರಡನ್ನು ರೆಕ್ಕೆ ಗೈ/ ಮುಂದೆ ವೈ, ಮೇಲೆ ವೈ/ ಹಾಸು ಹೊಕ್ಕನು ಹೀಗೆ ನೆಯಿ/ ಬತ್ತಿ ಹೋದೀತು, ನೆಯಿ, ಹೊಯಿ. (3–1, 2, 3, 4)**

: Indeed, certainly/ ದಿಟವಾಗಿ; ನಿಶ್ಚಯವಾಗಿ, ನಿಸ್ಸಂಶಯವಾಗಿ.

: ಮಗ್ಗದಲ್ಲಿ ಉದ್ದಕ್ಕೆ ಹಾಕಿರುವ ಎಳೆಗಳ ಸಾಲು.

: ಮಗ್ಗದ ನೆಯ್ಗೆಯಲ್ಲಿ ಅಡ್ಡವಾಗಿ ಹಾಕುವ ಎಳೆ.

: ನೂಲನ್ನು ಮಗ್ಗದಲ್ಲಿ ಹಾಸು ಹೊಕ್ಕಾಗಿ ಅಳವಡಿಸಿ ಬಟ್ಟೆಯನ್ನು ತಯಾರಿಸು.

: ಹೊಡೆ; ಬಡಿ; ಅಪ್ಪಳಿಸು.

*ಗುರುವಿಗೆ ಪೂರ್ಣವಾಗಿ ಅರ್ಪಿಸಿಕೊಂಡು ಅವನು ತನ್ನನ್ನು ರೂಪಿಸುವ ಬಗೆಯನ್ನು ಧ್ಯಾನಿಸಿರುವ ಭಕ್ತಿ ಇಲ್ಲಿ ರೂಪಕಾತ್ಮಕವಾಗಿ ಬಣ್ಣನೆಗೊಂಡಿದೆ.

ಹಗಲು ರಾತ್ರಿಯನ್ನು ರೆಕ್ಕೆಯಾಗಿಸಿ–ನಿಶ್ಚಯವಾಗಿ ನನ್ನನ್ನು ಮುಂದೆ, ಮೇಲೆ ಕೊಂಡೊಯ್ಯುವೆ. ನನ್ನನ್ನು ಉಪಯುಕ್ತ ವ್ಯಕ್ತಿಯಾಗಲು–ಬಟ್ಟೆಯಂತೆ ನೇಯ್ದು, ಹೊಡೆದು ಬಡಿದು ನಯಗೊಳಿಸುವೆ.

---

## ಒಲವಿಗೊಲವು

**ಲಂಪಟ, ಕುತುಕ**

**ಲಂಪಟರಿಗೆಂತು ನಾರಿಯರ ಲೀಲೆ/ ಬಣ್ಣಿಸಲು ಕುತುಕ ಉಂಟು? (1–1, 2)**

: ಕಾಮಾಸಕ್ತ; ಕಾಮುಕ.

: ಆಶ್ಚರ್ಯ; ಬೆರಗು; ವಿಸ್ಮಯ.

* 'ಒಲವಿಗೊಲವು' ನೀಡಿ ನಲಿವ ಜೀವಿ ನಾರಿ. ಅವಳನ್ನು ಬೆರಗಿನಿಂದ ಕಂಡು ನಲಿದು ಬಣ್ಣಿಸಲು ಕಾಮುಕನಿಗೆ ಹೇಗೆ ಸಾಧ್ಯ? ಎಂದು ಬೇಂದ್ರೆ ಪ್ರಶ್ನಿಸಿದ್ದಾರೆ.

* * * * * *

**ನಿಟ್ಟು, ತಮ್ಮಡಿ, ಶ್ರುತಿ**

**ಇದು ಗುಟ್ಟು ಕಟ್ಟು ಹೇಳುವದೆ ನಿಟ್ಟು/ ಶ್ರೀ ಗುರುವ ಕರೆದು ಬಳಿಗೆ/ ಹತ್ತಿರಕೆ ಬಂದ ತಮ್ಮಡಿಯ ಕಿವಿಗೆ/ ಹಾಕುವರು ಶ್ರುತಿಯ ಸುಳಿಗೆ. (2–1, 2, 3, 4)**

: ಗುರಿ; ಉದ್ದೇಶ.

: ಗುರು; ಆಚಾರ್ಯ.

: ವೇದ.

*ಶ್ರೀಕೃಷ್ಣ ಗೋಪಿಯರ ಒಲವಿನ ರಹಸ್ಯವನ್ನು ತಿಳಿಯುವ ಗುರಿಯಿಂದ ಶ್ರೀಗುರುವನ್ನು ಬಳಿಗೆ ಕರೆಯಬೇಕು. ಹತ್ತಿರಕ್ಕೆ ಬಂದ ಆಚಾರ್ಯರು ನಮ್ಮ ಕಿವಿಗೆ ಅದರ ವೇದ ತಿಳಿಸುವರು.

# ೨೮. ಬಾಲಬೋಧೆ (೧೯೮೩)

## ಹತ್ತು

**ಝುಳಕ**

**ಅಂಬಿಕೆಯ ಗರ್ಭಾ/ ತುಂಬಿದಾ ಬೆಳಕಾ/ ಸೂರ್ಯನ ಝುಳಕಾ/ದತ್ತ ಮಿಂದಾ (5–1 ರಿಂದ 4)**

: 1. ಹೊಳಪು; ಪ್ರಕಾಶ; ಕಾಂತಿ.

2. ಮೈ ತೊಳೆಯುವುದು; ಮಿಾಹ; ಸ್ನಾನ.

* ಅರಿವಿನ ನೆಲೆ ತಾಯಿ. ತಾಯಿ ಅಂಬಿಕೆಯ ಗರ್ಭದಲ್ಲಿದ್ದಾಗಲೇ 'ಅಂಬಿಕಾತನಯದತ್ತ'ನಿಗೆ ಬೆಳಕು–ಜ್ಞಾನ ತುಂಬಿ ಬಂದಿತ್ತು. ಅವನು ಅವಳಿಂದ ಜನ್ಮ ಪಡೆದು ಸೂರ್ಯನ ಕಾಂತಿಯಲ್ಲಿ ಸ್ನಾನ ಮಾಡಿದ. ಬೆಳಕಿನ ಉಪಾಸಕನಾದ.

---

## ಹದಿಮೂರು

**ಸಂತ, ಕಂತಿ, ಚಾರಿತ್ರ**

**ಸಂತರ ಸಂತಾನ/ ಸಂತೀಪೇಟೆಯಲ್ಲಿಲ್ಲಾ/ ಕಂತೀ ಕಟ್ಟಿದರಲ್ಲಾ/ ಗುರು ಚಾರಿತ್ರ. (2–1 ರಿಂದ 4)**

: 1. ಸಾತ್ವಿಕ ಸ್ವಭಾವದ ವ್ಯಕ್ತಿ; ಸಾಧು.

2. ಮೋಕ್ಷ ಸಾಧನೆಯ ಮೂರು ಮುಖ್ಯ ಮಾರ್ಗಗಳಲ್ಲಿ ಒಂದಾದ ಭಕ್ತಿಮಾರ್ಗವನ್ನು ಅನುಸರಿಸುವವನು; ಭಕ್ತಿ ಪಂಥದ ಅನುಯಾಯಿ.

: ಲಿಂಗಗಳಿಗೂ, ಬಸವನ ವಿಗ್ರಹಗಳಿಗೂ ಲೇಪಿಸುವುದಕ್ಕಾಗಿ ತಯಾರಿಸಿದ ಗೇರೆಣ್ಣೆ ಹಾಗೂ ಕಾಡಿಗೆಯ ಕರಿಯ ಮಿಶ್ರಣ.

: ಶೀಲ; ನಡತೆ; ಆಚಾರ.

* ಸಂತರು ಸಂತೆಪೇಟೆಯಲ್ಲಿರುವುದಿಲ್ಲ. ಬೂದಿಕಂತಿ ಬಡಿದುಕೊಂಡರೆ ಗುರುಚಾರಿತ್ರ್ಯ ಸಾಧ್ಯವಿಲ್ಲ.

---

# ಹದಿನಾಲ್ಕು

**ನೆಗೆವು, ಸತ್ತಿಗೆ**

**ನಗೆವ್ವದ ಸರಕು/ ಹೊತ್ತೆ ತಲೀಮ್ಯಾಲೆ/ ಸತ್ತಿಗೆ ಇತ್ತಲ್ಲೆ/ ನೆರಳು ಮಾಡಿ. (1-1 ರಿಂದ 4)**

: ಮೇಲಕ್ಕೆ ಎತ್ತು; ಎತ್ತಿಹಿಡಿ.

: ಕೊಡೆ; ಛತ್ರಿ.

* ದುಃಖ-ದುಮ್ಮಾನ. ಕಷ್ಟ-ಸುಖ, ನೋವು-ನಲಿವುಗಳೆಂಬ ಸರಕನ್ನು ಎತ್ತಿಹಿಡಿದು ತಲೆಯ ಮೇಲೆ ಹೊತ್ತುಕೊಂಡಿದ್ದೇನೆ. ಆದರೆ ಅದೇ ಕೊಡೆಯಂತೆ ನೆರಳಾಗಿ ಕಾಪಾಡುತ್ತಿದೆ.

---

# ಹತ್ತೊಂಭತ್ತು

**ಧ್ರುವ, ಹೋಕಾಯಂತ್ರ.**

**ಕತ್ತಲಿ ಬೆಳಕು ಜೋಡಿ/ ಎರಡೂ ಕೂಡಿ ಇಡೀ/ ಧ್ರುವನ ನೋಡಿ ನಡೀ/ ಹೋಕಾಯಂತ್ರಾ (1-1 ರಿಂದ 4)**

: 1. ಸ್ಥಿರವಾದ; ಅಚಲವಾದ.

2.ಭೂಮಿಯ ಅಕ್ಷದ ಉತ್ತರ ಹಾಗೂ ದಕ್ಷಿಣ ದಿಕ್ಕಿನ ಕೇಂದ್ರ ಬಿಂದುಗಳು; ಉತ್ತರಧ್ರುವ ಮತ್ತು ದಕ್ಷಿಣಧ್ರುವ.

: (ನಾವಿಕರು ಸಮುದ್ರದಲ್ಲಿ) ಹಡಗನ್ನು ನಡೆಸುವಾಗ ಮಾರ್ಗ ಅಥವಾ ದಿಕ್ಕನ್ನು ತಿಳಿಯಲು ಉಪಯೋಗಿಸುವ ಒಂದು ಬಗೆಯ ಯಂತ್ರ,-ಉಪಕರಣ, ದಿಕ್ಸೂಚಿ.

* ಭೂಮಿಯು ಸದಾ ತಿರುಗುತ್ತಿದ್ದರೂ ಅದರ ಅಕ್ಷದ ಉತ್ತರ ಮತ್ತು ದಕ್ಷಿಣದ ಬಿಂದುಗಳು ಸ್ಥಿರವಾಗಿರುತ್ತವೆ. ಅವು ಧ್ರುವಗಳು. ದಿನದ ಕಾಲಮಾನವೆಂದರೆ ಹಗಲು ಮತ್ತು ರಾತ್ರಿ ಕೂಡಿ ಆಗಿರುವುದು. ಸಮುದ್ರದಲ್ಲಿನ ನಾವಿಕನಿಗೆ ಹೋಕಾಯಂತ್ರವು ದಕ್ಷಿಣಧ್ರುವ ಮತ್ತು ಉತ್ತರಧ್ರುವವನ್ನು ತಿಳಿಸುವ ದಿಕ್ಸೂಚಿ. ಅದನ್ನು ಬೇಂದ್ರೆ ಅವರು ಮೇಲಿನಂತೆ ಕಾವ್ಯಾತ್ಮಕವಾಗಿ ಬಣ್ಣಿಸಿದ್ದಾರೆ.

---

## ಇಪ್ಪತ್ತು

### ಗುಂಗು

**ಹತ್ತೂ ಮೋರೆ ಹೊಂದಿ/ ಎತ್ತೆತ್ತೋ ಕುಣಿದಾಡಿ/ ಲಿಂಗಾನ ಕಳಕೊಂಡು/ ಗುಂಗು ಆದಿ (2-1, 2, 3, 4)**

* 'ಗುಂಗು' ಎಂದ ತಕ್ಷಣ ಅಮಲು; ಮತ್ತು ಎಂಬ ಅರ್ಥ ಹೊಮ್ಮುತ್ತದೆ. ಗೀಳುವಿಗೆ ಒಳಗಾದ ವ್ಯಕ್ತಿ ಕಣ್ಮುಂದೆ ಕಾಣುತ್ತಾನೆ. ಆದರೆ ಈ ಕವನದಲ್ಲಿ ಬೇಂದ್ರೆಯವರು ಬಳಸಿರುವುದು ಈ ಅರ್ಥದಲ್ಲಿ ಅಲ್ಲ ಎನಿಸಿತು. ಹಾಗೆ ಹಲವು ವರ್ಷಗಳು ಈ ಪದ ಕುರಿತು ಧ್ಯಾನಿಸುತ್ತಿದ್ದಾಗ ನನ್ನ ಒಂದು ಬಾಲ್ಯದ ಘಟನೆ ನೆನಪಾಯಿತು. ನಮ್ಮಪ್ಪನು ನಮ್ಮೂರು ಚೋಳನಾಯಕನಹಳ್ಳಿಯಲ್ಲಿ ಹೊಲ ಪಾಲಿಗೆ ಕೊಟ್ಟು ಪ್ರತಿ ವರ್ಷ ಎತ್ತಿನ ಗಾಡಿಯಲ್ಲಿ ರಾಗಿ ತರುತ್ತಿದ್ದಾಗ ಒಂದು ಕೊರೆ 'ಗುಂಗು' ತರುತ್ತಿದ್ದುದು ಸ್ಮರಣೆಗೆ ಬಂದಿತು. ಆ 'ಗುಂಗು' ರಾಗಿಯ ಮೇಲಿನ ಉಬ್ಬುಲು. ಆ ಗುಂಗು/ಉಬ್ಬುಲನ್ನು ತಲ ಮೂಟೆಗೆ ಹಾಕಿ ಹೊಲಿದು ಉಪಯೋಗಿಸುತ್ತಿದ್ದೆವು. ಅದು ತಲೆಗೆ ಮೃದುವಾಗಿದ್ದು, ತಂಪಾಗಿರುತ್ತಿತ್ತು.

ರೈತರು ಈಗಲೂ ರಾಗಿಯ ಬಣವೆಗೆ ಮೇಲ್ಪದರವಾಗಿ 'ಗುಂಗ'ನ್ನು ಬಳಸುತ್ತಾರೆ. ಅದರಿಂದ ಮಳೆಗಾಲದಲ್ಲಿ ನೀರು ಬಣವೆಗೆ ಇಳಿಯುವುದಿಲ್ಲ. ತೆಂಗು ಮತ್ತು ಅಡಕೆ ಮರದ ಬುಡಗಳಿಗೆ ತೇವಾಂಶ ಹಿಡಿದಿಟ್ಟುಕೊಳ್ಳಲು 'ಉಬ್ಬಲ'ನ್ನು ಹಾಕುವರು. ಆ ದೇಸಿಪದ ಬೇಂದ್ರೆಯವರ ಶಿಷ್ಟಕಾವ್ಯದಲ್ಲಿ ಕಸಿಗೊಂಡಿದೆ.

ಆತ್ಮಲಿಂಗವನ್ನು ಕಳೆದುಕೊಂಡ ರಾವಣನನ್ನು ಬೇಂದ್ರೆಯವರು 'ಗುಂಗು' ಪದದಿಂದ ಅವನು ಕಾಳನ್ನು ನೀಗಿಕೊಂಡು ಉಬ್ಬಲುವಿನಂತಾದುದನ್ನು ಧ್ವನಿಸಿದ್ದಾರೆ.

---

## ಐವತ್ನಾಲ್ಕು

### ದವನ, ಸಗ್ಗಿಸು

**ದವನದ ವಾಸನೆಗೆ/ ಮೂಗನು ಹಿಗ್ಗಿಸಿ/ ಜೀವನ ಸಗ್ಗಿಸಿ/ ಬಿಟ್ಟೆ ತಾಯಿ! (3-1, 2, 3, 4)**

: ಸುವಾಸನೆಯ ಎಲೆಗಳುಳ್ಳ ಒಂದು ಬಗೆಯ ಗಿಡ; ಹಬ್ಬ ಹೂ.

: ತಗ್ಗುವಂತೆ ಮಾಡು; ಕುಸಿಯಿಸು.

* ಪ್ರಕೃತಿಯ ಪವಿತ್ರಾತ್ಮ ಗಂಗೆಯಾಗಿ ಹರಿದು ಸಕಲ ಚರಾಚರವನ್ನು ಪಾವನಗೊಳಿಸುತ್ತದೆ. ಆ ತಾಯಿ ಹರಿದು ಬರುವಾಗ ದವನ-ಹಬ್ಬ ಹೂವಿನ ಕಂಪನ್ನು ಹೊತ್ತು ತರುತ್ತಾಳೆ.

ಕಂಪು ತಂಪಿನ ಆ ತಾಯಿ ಸಕಲರ ಜೀವನ ಸಗ್ಗಿಸಿ–ತಗ್ಗುವಂತೆ ಮಾಡಿ, ವಿನಮ್ರವಾಗಿಸಿ, ಶಾಂತವಾಗಿಸಿ ಬಿಟ್ಟಿದ್ದಾಳೆ.

---

## ಅರವತ್ನಾಲ್ಕು

**ಟುರ್ಕ**

**ತರ್ಕ ಮಾಡಿ ಮಾಡಿ/ ಟುರ್ಕನಾಗಬೇಡ/ ಅತರ್ಕ್ಯದ ಆಚೆ/ ಕಾಣಬೇಕು (2–1 ರಿಂದ 4)**

: ಬಲವಂತದಿಂದ ಹೇರು; ತುರುಕು; ಒತ್ತಿ ಒತ್ತಿ ತುಂಬು.

ತರ್ಕವಾದಿಗಳ ಪ್ರವೃತ್ತಿ ಟುರ್ಕ. ಪುನಃ ಪುನಃ ಅದನ್ನೇ ಹೇಳಿ, ವಾದಿಸಿ ತಮ್ಮ ಅಭಿಪ್ರಾಯವನ್ನೇ ಸಮರ್ಥಿಸಿಕೊಳ್ಳುವುದು. ಕೇಳುಗರ ತಲೆಯಲ್ಲಿ ತಮ್ಮ ತರ್ಕ ನುಗ್ಗಿಸುವುದು ಇಂಥವರ ಹವ್ಯಾಸವಾಗಿರುತ್ತದೆ.

---

## ೨೯. ಪ್ರತಿಬಿಂಬಗಳು (೧೯೮೭)

### ಒಂದೇ ಒಂದು ನಾಡಿ

**ನಾಡಿ, ಓರಂದ**

**ಒಂದೇ ಒಂದು ನಾಡಿ/ ಬರಿದು ಓರಂದ ಇರದು ಮಕರಂದ/ ರಸವು ಹುಡಿಯ ಜೋಡಿ (2-1, 2, 3)**

: ತಾವರೆಯ ದಂಟು,-ನಾಳ.

: ಒಂದೇ ಕ್ರಮ; ಏಕಪ್ರಕಾರ.

* ಒಂದೇ ಒಂದು ನಾಳದಿಂದ ಹೂ ಹೊಮ್ಮಿದ್ದರೂ ಅದರ ಮಕರಂದ ಏಕಪ್ರಕಾರವಾಗಿ ಪಸರಿಸುವುದಿಲ್ಲ. ಕುಸುಮದ ಹುಡಿಯ ಜೋಡಿ ಅದರ ರಸವು ಗಾಳಿಯಲ್ಲಿ ತೇಲಿ ಸಾಗುತ್ತಾ ಮಕರಂದವಾಗಿ ಬಹುಮುಖವಾಗಿ ಕಂಪು ಬೀರುವುದು.

---

### ಕೈಲಾಸದ ತೇರು

**ಗಣ್ಣು**

**ಹೊರ ಮೈ ಹೊಲಗೇರಿಯು ಆದರೆ/ ಒಳಮೈ ಹೆಣದೂರು./ ಹೆಣವಾಗದೆ ಹೆಣ್ಣಾದರೆ ಗಣ್ಣಿಗೆ ಅದು ಕೈಲಾಸದ ತೇರು.**

: ಮೊಳಕೆ ಹೊರಡುವ ಗೆಣ್ಣು.

* ವ್ಯಕ್ತಿಯ ಒಳಮೈ ಆಂತರ್ಯದ ಚೇತನವು ಹೆಣದ ಊರು ಆಗಬಾರದು. ಅದು ಮೊಳಕೆ ಹೊರಡುವ ಗೆಣ್ಣು ಆಗಬೇಕು. ಹೆಣ್ಣು-ತಾಯಿಯಂತೆ ಚಿಗುರಬೇಕು. ಅಲ್ಲಿಂದ ಹೂ ಹೊಮ್ಮಿ ಹಣ್ಣಾಗಿ ಮತ್ತೆ ಫಲರೂಪಿಯಾಗಿ ಸಾರ್ಥಕವಾಗಬೇಕು. ಹಾಗಾದಾಗ ಮನುಷ್ಯ ಕೈಲಾಸದ ತೇರು ಆದಂತೆ. ಇದು ಬೇಂದ್ರೆ ಆಶಿಸಿದ ಮನುಷ್ಯನಲ್ಲಿಯ ಜೀವಂತಿಕೆ, ಚಿರಂತನತೆ.

---

## ಯಾರಾಕೆ?

**ರಾಕಾ, ಕುಹೂ. ಗುಂಗು, ಸಿನಿವಾಲಿ, ತಂಬಲ**

**ರಾಕಾ! ಕುಹೂ!/ ಗುಂಗೂ! ಸಿನಿವಾಲೀ!/ ಎಂಬಾಕೆ!/ ತಂಬಲ ತಿಂಬಾಕೆ. (6–1, 2, 3, 4)**

: ಪೂರ್ಣಚಂದ್ರ; ಹುಣ್ಣಿಮೆಯ ಚಂದ್ರ.

: ಕುಹು; ಚಂದ್ರನ ಕಲೆಯು ಕಾಣಿಸದಿರುವ ಅಮಾವಾಸ್ಯೆ.

: 1. ಹವ್ಯಾಸ.

2. ತನ್ಮಯತೆ.

: ಚಂದ್ರಕಲೆಯಿಂದ ಕೂಡಿದ ಅಮಾವಾಸ್ಯೆ; ಚಂದ್ರನನ್ನು ಕಾಣಬಹುದಾದ ಅಮಾವಾಸ್ಯೆ.

: ತಂಪು.

* ತಾರೆಗಳ ಸಮೂಹದೊಂದಿಗೆ ಬಂದ ಪೂರ್ಣಚಂದ್ರಳನ್ನು ಕಂಡು ಪುಲಕಿತರಾದ ಬೇಂದ್ರೆ ಅವಳ ವರ್ಣನೆಯಲ್ಲಿ ಮೈದುಂಬಿ ಹೋಗಿದ್ದಾರೆ. ಹಾಗೆ ಪೂರ್ಣಳಾಗಿರುವ ಚಂದ್ರಳು ದಿನಕಳೆದಂತೆ ಕ್ಷೀಣವಾಗಿ ಅಮಾವಾಸ್ಯೆಯಲ್ಲಿ ಕಾಣದಿರುವ ಕುಹೂ ಆಗುತ್ತಾಳೆ. ಇದೊಂದು ಅವಳಿಗೆ ಹವ್ಯಾಸ. ತನ್ನದೇ ತನ್ಮಯತೆಯಲ್ಲಿದ್ದು ಒಮ್ಮೊಮ್ಮೆ ಅಮಾವಾಸ್ಯೆಯಲ್ಲಿಯೂ ಕಾಣುತ್ತಾ ಸಿನಿವಾಲಿ ಎಂದು ಹೆಸರು ಪಡೆಯುತ್ತಾಳೆ. ಅವಳು ಸದಾ ತಂಪು ಸವಿಯುವ ಆರ್ದ್ರಳು.

---

## ಸೌಮ್ಯ ಮುಖವೆ ಚಂದಿರಾ

**ಅಹೋ, ಬಲ, ದಲ, ಅಹರಹ, ಇಂಚರ**

**"ಅಹೋ ರೂಪ ಅಹೋ ಧ್ವನಿ"/ ಅಹೋ ಬಲ, ಅಹೋದಲ,/ ಅಹೋರಹೋ ನಿಶಾಚರಾ/ ಅಹರಹರವಿದು ಇಂಚರಾ (ಎರಡು: 5–1 ರಿಂದ 4)**

: ಆಶ್ಚರ್ಯ, ವೇದನೆ, ಸಂಬೋಧನೆ, ನಿವಾರಣೆ, ಮೆಚ್ಚಿಗೆ ಮುಂತಾದ ಅರ್ಥಗಳಲ್ಲಿ ಸೂಚಿಸುವ ಅವ್ಯಯ.

: ಪರಾಕ್ರಮ; ಕಸುವು; ಶಕ್ತಿ; ಸಾಮರ್ಥ್ಯ.

: ಗುಂಪು; ತಂಡ; ಸಮೂಹ.

: ಪ್ರತಿ ದಿನ.

: ಇಂಪಾದ ಧ್ವನಿ; ಮಧುರ ಸ್ವರ.

* ಬೇಂದ್ರೆಯವರು ಸೌಮ್ಯಮುಖದ ಚಂದಿರನ ರಾತ್ರಿಯಲ್ಲಿ ಓಡಿದ ಬೇಟೆಯನ್ನು ನೋಡಿ "ಅಹೋ ರೂಪ ಅಹೋ ಧ್ವನಿ!" ಎಂದು ಆ ನಿಶಾಚರಿಗಳ ರೂಪ, ಧ್ವನಿಗೆ ಅಚ್ಚರಿಗೊಂಡಿದ್ದಾರೆ! ಮೆಚ್ಚಿಗೆಯ ಉದ್ಗಾರ ಹೊಮ್ಮಿಸಿದ್ದಾರೆ. ಆ ಪ್ರಾಣಿ–ಪಕ್ಷಿಗಳಲ್ಲಿ ಶಕ್ತಿ ಪರಾಕ್ರಮದ ಜೊತಗೆ ಹೆಣ್ಣು ಗಂಡು ಪ್ರಾಣಿಗಳ ಮಿಲನದ ಮಧುರತೆ ಕಂಡು 'ಅಹೋರಹೋ ನಿಶಾಚರಾ' ಎಂದಿದ್ದಾರೆ.

'ಹದಿನಾರು ಕಲೆಗಳುಳ್ಳ ಚಂದ್ರನ ಹಿಂದೆ ಅದೃಶ್ಯವಾದ ಹದಿನೇಳನೆಯ ಕಲೆ– ಜೀವನಕಲೆ ಇರುತ್ತದೆ ಎಂದು ಅನುಭಾವಿಗಳು ಸಾರಿದ್ದಾರೆ.' ಎಂದು ವಾಮನಬೇಂದ್ರೆಯವರು ಈ ಕವನದ ಭಾವ ಸಂದರ್ಭದಲ್ಲಿ ತಿಳಿಸಿದ್ದಾರೆ. ಈ ಜಗದ ಪ್ರಾಣಿ ಪಕ್ಷಿಗಳಲ್ಲಿ ಜೀವನಕಲೆ ಸಹಜವಾಗಿ ಪ್ರಕಾಶಿಸುತ್ತ ದಿನದಿನವು ಮಧುರವಿರುವದನ್ನು ಕವಿಯು 'ಅಹರಹರವಿದು ಇಂಚರಾ' ಎಂದು ಅಭಿವ್ಯಕ್ತಿಸಿದ್ದಾರೆ.

---

## ನಮ್ಮ ತಾಯಿ ಮಾಹೂರಗಡದಾಕಿ

### ತಾಪತ್ರಯ

**ನೀನ್ಽ ತಾಯೀ. ತಾಪತ್ರಯದ ಮದ್ದಿನಾಕಿ! (7–2)**

: ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕ ಎಂಬ ಮೂರು ಬಗೆಯ ತೊಂದರೆಗಳು,– ದುಃಖಗಳು.

* ಮಹಾರಾಷ್ಟ್ರದ ನಾಂದೇಡ್ ಸಮೀಪ ಮಾಹೂರಗಡವಿದೆ. ಅಲ್ಲಿಯ ದೇವಿ ರೇಣುಕ ಎಲ್ಲಮ್ಮ. ಆ ಮಾಹೂರಗಡದ ತಾಯಿ ಆಧಿದೈವಿಕ, ಆದಿಭೌತಿಕ, ಅಧ್ಯಾತ್ಮಿಕ ಎಂಬ ತಾಪತ್ರಯಗಳಿಗೆ ಮದ್ದು ಎಂದಿದ್ದಾರೆ.

* * * * * *

### ಹಜರ, ನಜರ

**ಎತ್ತೆತ್ತು ಹಜರ ಇರು, ನಜರ ಹಾಕಿ. (8–2)**

: ಹಾಜರು; ಪ್ರತ್ಯಕ್ಷ ಇರುವಿಕೆ; ಉಪಸ್ಥಿತವಾಗಿರುವಿಕೆ.

: ದೃಷ್ಟಿ; ನಿಗಾ.(ಮರಾ.ನಜರ್, ನದರ್)

* ಓ ತಾಯಿ ಮಾಹೂರಗಡದಾಕಿಯೇ ನಿನ್ನ ದೃಷ್ಟಿ ಹರಿಸಿ, ಎತ್ತೆತ್ತು ಪ್ರತ್ಯಕ್ಷ ಇರು ಎಂದು ಪ್ರಾರ್ಥಿಸಿದ್ದಾರೆ.

---

## ಚಾಂಗುಭಲಾ

**ಶಿರಪೇಚು**

**ಸತ್ತನ್ಯಾವ? ಇರುವನ್ಯಾವ?/ ಹೆಣಕ್ಕೆ ಬೇಕೆ ಸ್ಮಾರಕ?/ ಇದ್ದವಗೇಕೆ ಶಿರಪೇಚು? (2–1, 2, 3)**

: ಕಿರೀಟ; ಪೇಟ; ಟೋಪಿ ಮುಂತಾದವುಗಳ ತುದಿಗೆ ಅಲಂಕಾರಕ್ಕಾಗಿ ಅಳವಡಿಸಿದ ಮುತ್ತು ಮುಂತಾದವುಗಳ ಕುಚ್ಚು; ತುರಾಯಿ.(ಹಿಂ. ಸಿರಪೇಚ್, ಸಿರಪೇಶ್; ಮರಾ: ಸರಪೇಚ್)

---

## ೩೦. ಶತಮಾನ (೨೦೦೪)

## ಧನ್ಯ ವೃಂದಾವನಾ!

**ಹೊಳಲು, ತೆರವು, ಸಂವಿತ್ತು.**

**ಕೊಳಲಾಗುತಿದೆ ಉದಯಾ/ ಹೊಳಲುಗೊಡುತಿದೆ ಹೃದಯಾ/ ತೆರವುಗೊಡು, ತೆರೆಯುತಿರು/ ಸಂವಿತ್ತಿನೆದೆಯಾ॥ (ಒಂದು: 4-1 ರಿಂದ 4)**

: ಪ್ರತಿಧ್ವನಿಯನ್ನುಂಟುಮಾಡು; ಮಾರ್ದನಿಗೊಡು.

: ಎಡೆ; ಸ್ಥಳ; ಜಾಗ.

: ಜ್ಞಾನ; ಬುದ್ಧಿ.

*ವೃಂದಾವನದಲ್ಲಿಯ ಸೂರ್ಯೋದಯವನ್ನು ಬೇಂದ್ರೆಯವರು ರೂಪಕಾತ್ಮಕವಾಗಿ 'ಕೊಳಲಾಗುತಿದೆ ಉದಯಾ' ಎಂದು ಬಣ್ಣಿಸಿ ನಾದಾನುಭವದಿಂದ ಸಂಮೋಹನಗೊಳಿಸಿದ್ದಾರೆ. ಅದು ಅವರ 'ಬೆಳಗು' ಕವನ 'ಗಿಡಗಂಟೆಯಾ ಕೊರಳೊಳಗಿಂದ/ ಹಕ್ಕಿಗಳಾ ಹಾಡು/ ಹೊರಟಿತು-ಹಕ್ಕಿಗಳಾ ಹಾಡು'. ಎಂದು ಪ್ರಕೃತಿ ಕೊಳಲಾದ ಬೆಡಗು. ಕವಿಯು ಸಹೃದಯನಿಗೆ ಆ ಗಂಧರ್ವರ ಸೀಮೆಯಲ್ಲಿ-ಕರ್ಣಾನಂದಕರವಾದ ಇಂಪು ನಿನ್ನ ಹೃದಯದಲ್ಲಿ ಮಾರ್ದನಿಸುತ್ತದೆ, ಅದಕ್ಕೆ ಎಡೆಗೊಟ್ಟು ಸುಖಿಸು. ನಿನ್ನ ಜ್ಞಾನದೆದೆಯನ್ನು ತೆರೆ, ವಿಕಾಸಗೊಳ್ಳು ಕಂಪಾಗು ಎಂದು ಆಹ್ವಾನಿಸುತ್ತಿದ್ದಾರೆ.

---

## ಇದು ತ್ರಿವಾರ ಸತ್ಯ

**ತ್ರಿವಾರ**

**ಶ್ರೀ ಶ್ರೀ ಶ್ರೀರಾಮ ಪ್ರಾಣರಾದ/ ಶ್ರೀ ಬ್ರಹ್ಮಚೈತನ್ಯ/ ಪಾದ ಪದ್ಮೋಪಜೀವಿ/ ತಾನು ದ.ರಾ. ಬೇಂದ್ರೆ/ ಇದು ತ್ರಿವಾರ ಸತ್ಯ! (2-1, 2, 3, 4, 5)**

: ನಿಶ್ಚಿತವಾಗಿ; ಖಚಿತವಾಗಿ.

* ಬೇಂದ್ರೆ ಅವರ ಅಜ್ಜಿ ಗೋದುಬಾಯಿ. ಈಕೆ ಶ್ರೀ ಬ್ರಹ್ಮಚೈತನ್ಯರ ಶಿಷ್ಯರು. ಬೇಂದ್ರೆ ಅವರು ಬಾಲ್ಯದಲ್ಲಿ ಅವರ ಆಶೀರ್ವಾದ ಪಡೆದಿದ್ದರು. ಅವರು ಬೇಂದ್ರೆಯವರ ಗುರುಗಳು. ಅವರು ಶ್ರೀರಾಮ ತಾರಕಾಮಂತ್ರವನ್ನು ಜನರಿಗೆ ಉಪದೇಶಿಸಿ 'ಶ್ರೀ ಶ್ರೀ

ಶ್ರೀರಾಮ ಪ್ರಾಣರಾದರು'. ಅವರ ಪಾದ ಪದ್ಮೋಪಜೀವಿ ತಾನು ನಿಶ್ಚಿತವೆಂದು ಬೇಂದ್ರೆ ತಿಳಿಸಿದ್ದಾರೆ.

---

## ಝುಪುರ್ಝಾಗಡೇ ಝುಪುರ್ಝಾ

**ಕಂಟಕ, ಶಲ್ಯ, ಮಖಮಲ್ಲು**

**ಕಂಟಕ ಶಲ್ಯದೊಳಿಹೆ ಹರ್ಷ,/ ಮಖ್‌ಮಲ್ಲಿನಾ ನವಿರಿನ ಸ್ಪರ್ಶ. (1–4, 5)**

: ಮುಳ್ಳು.

: (ಸೂಜಿ. ಕೊಂಡಿ, ಮುಳ್ಳು, ಮೊಳೆ ಮುಂತಾದ) ಚೂಪಾದ ಮೊನೆಯುಳ್ಳ ವಸ್ತು.

: ಸೂಕ್ಷ್ಮ ನೆಯ್ಗೆಯ, ನಯವಾದ ಹೊರಮೈಯುಳ್ಳ ಒಂದು ಬಗೆಯ ರೇಶ್ಮೆಯ ದಪ್ಪಬಟ್ಟೆ; ವೆಲ್ವೆಟ್ಟು.

* ಇದು ಮಹಾರಾಷ್ಟ್ರದ ಕವಿ ಕೇಶವಸುತ ಅವರ ಕವನದ ಭಾವಾನುವಾದ. ಝುಪುರ್ಝಾ ಎಂಬುದು ಅಚಿಂತ್ಯಾನುಭಾವದಲ್ಲಿ ತನ್ಮಯವಾದಾಗಿನ ಉದ್ಗಾರ. ಜೀವನದ ಕಷ್ಟಕೋಟಲೆ, ವಿಪತ್ತು ಆಪತ್ತು, ದುಃಖ ದುಮ್ಮಾನಗಳ ಶಲ್ಯ-ಚೂಪಾದ ಮೊನೆಯುಳ್ಳ ತಿವಿತಗಳನ್ನು ಜಯಿಸಿ ಹೊಮ್ಮಿ ಬರುವುದೇ ಹರ್ಷ. ಆ ಹರ್ಷ ರೇಶ್ಮೆವಸ್ತ್ರದ ನುಣುಪು, ಮೃದು ಮಧುರ ಸುಖ.

---

## ಎಲ್ಲಿದ್ದಾಳೋ ನಿದ್ದಿಯ ಕಳ್ಳಿ?

**ಭಗಾಟ–ಭೂಗರಿ**

**ಭಗಾಟ–ಭೊಗರಿ ನಡಿಸಿದ್ದಾಳು/ ತುತ್ತುರಿ– ಕಹಳೀ ಹಿಡಿಸಿದ್ದಾಳು (4–1, 2)**

*ಪರಸ್ಪರ ಕತ್ತರಿ ಆಕಾರದಲ್ಲಿ ಕೈಗಳನ್ನು ಜೋಡಿಸಿ, ಒಬ್ಬರು ಇನ್ನೊಬ್ಬರ ಆಚೀಚೆಗೆ ಸುಲಭವಾಗಿ ಸಿಗುವ ಕೈ ಬೆರಳುಗಳನ್ನು ಸೇರಿಸಿಕೊಂಡು ಬುಗುರಿಯಂತೆ ವೃತ್ತಾಕಾರದಲ್ಲಿ ತಿರುಗುವ ಒಂದು ಆಟ. ಹೆಚ್ಚಾಗಿ ಇಬ್ಬರು ಹೆಣ್ಣುಮಕ್ಕಳು ಸೇರಿ ಆಡುವ ಆಟವಿದು. ಕೆಲವೊಮ್ಮೆ ಗಂಡಸರಿಬ್ಬರು ಸೇರಿಯೂ ಆಡುವುದುಂಟು. ಮೋಜಿನ, ಮೆರವಣಿಗೆಯ, ಧಾಂಡಿಯ ಆಡುವ ಸಂದರ್ಭದಲ್ಲಿ ಈ ಆಟ ಆಡುವುದನ್ನು ನೋಡಬಹುದು.

---

## ಕನಸು ಜನಿಸುತ್ತದೆ

**ಗಳ**

**ಭಾವ ಪಾತಾಳದಲಿ/ ಅನಿಸಿಕೆಯ ಆಳದಲಿ/ ನೆನೆಸಿಕೆಯ ಗಳವನು ತಪ್ಪಿಸುತಿವೆ.(3–4,5,6)**

: A term expressing disorder; confusion. ಗಡಿಬಿಡಿ; ಗೊಂದಲ.

* 'ಭಾವ ಪಾತಾಳದಲಿ, ಅನಿಸಿಕೆಯ ಆಳದಲಿ'– ಆಲೋಚಿಸಿ ಜ್ಞಾಪಿಸಿಕೊಳ್ಳುವಾಗ ಯಾವುದೇ ಬಗೆಯ ಗಡಿಬಿಡಿ, ಗೊಂದಲಗಳನ್ನು ತಪ್ಪಿಸುತ್ತಿವೆ.

'ನೆನೆಸಿಕೆಯ ಗಳವನು ತಪ್ಪಿಸುತಿವೆ' ಸಾಲು–ನೆನಪು ಸ್ಪಷ್ಟವಾಗಿ ಹೊಮ್ಮುತ್ತಿದೆ ಎಂಬುದನ್ನು ವ್ಯಂಜಿಸುತ್ತಿದೆ.

---

## ಗಾಂಧಿ ಭಸ್ಮ

**ಪಾತಾಳಯಂತ್ರಿ, ತಂತ್ರಿ**

**ಗಾಂಧಿ ಭಸ್ಮವನೆ ಮೈಗೆ ತೊಡೆದು/ ಜಾತ್ಯಂಧ–ಗುಪ್ತಮಂತ್ರಿ/ ನೀತಿನೇಯುವನು ಖಾದಿ–ಹಾದಿ/ ಪಾತಾಳಯಂತ್ರಿ–ತಂತ್ರಿ. (1–1, 2, 3, 4)**

: ಗುಪ್ತಕಾರಸ್ಥಾನ ಮಾಡುವ ವ್ಯಕ್ತಿ.

: ಯುಕ್ತಿಯನ್ನು ಬಲ್ಲವನು; ಉಪಾಯಗಾರ.

*ನಮ್ಮನ್ನಾಳುವ ಮಂತ್ರಿಗಳು ಜಾತ್ಯಂಧರು. ಅವರು 'ಗಾಂಧಿ ಭಸ್ಮವನೆ ಮೈಗೆ ತೊಡೆದು' ಬೂಟಾಟಿಕೆ ಪ್ರದರ್ಶನದಲ್ಲಿ ವಿಜೃಂಭಿಸುವವರು. ಅವರು ಮಾತಿನಲ್ಲಿ ನೀತಿ ನೇಯುವವರು. ಅವರು ಪಾತಾಳಯಂತ್ರಿಗಳು, ಯುಕ್ತಿಯನ್ನು ಬಲ್ಲ ತಂತ್ರಿಗಳು ಎಂದು ಕವಿ ಛೇಡಿಸಿದ್ದಾರೆ.

---

## ಚೇತೋಹರಣ

**ಶಸ್ತ್ರಂ ನಾರೀರೂಪಂ/ ಅಸ್ತ್ರಂ ಕಾಮಂಗಮೇಯ ಲಾವಣ್ಯಾಂಗಂ/ ಶಾಸ್ತ್ರಂ ರಸಿಕರ ಮಾರ್ಗಂ/ ವಸ್ತ್ರಂ ಪ್ರಾವರಣವಲ್ಲ ಚೇತೋಹರಣಂ॥**

*ಇದು ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡನ್ನೂ ಬೆರೆಸಿ ರಚಿಸಲಾದ

ಚತುರೋಕ್ತಿಯಾಗಿದೆ. ಇದರ ಸರಳಾನುವಾದ ಹೀಗಿದೆ: ನಾರಿಯ ರೂಪ ಒಂದು ಆಯುಧವಾಗಿದೆ. ಅದು ಕಾಮನಿಗೆ ಒಂದು ಆಯುಧವಾಗಿದ್ದು ಆ ಆಯುಧದ ಸ್ವರೂಪ ಉಪಮಿಸಲಾಗದ (ಅಮೇಯ) ಲಾವಣ್ಯಮಯ ಅಂಗವಾಗಿದೆ (ಲವಣ = ಉಪ್ಪು). ಲಾವಣ್ಯವೆಂದರೆ ರುಚಿಕರವಾದುದು, ಎಲ್ಲ ರುಚಿಗಳ ಮೂಲಧಾತು. ಅವಳ ಚೆಲುವು ರಸಿಕರ ಮಾರ್ಗದ ಶಾಸ್ತ್ರವಾಗಿದೆ. ಶಾಸ್ತ್ರ ಎಂಬ ಪದಕ್ಕೆ ಮಾರ್ಗದರ್ಶಿ, ಆದೇಶ ಎಂಬ ಅರ್ಥಗಳಿವೆ. ರಸಿಕರ ಕಲ್ಪನೆಗೆ ಅವಳು ಮಾರ್ಗದರ್ಶಿಯಾಗಿರುವಳು, ಕಲ್ಪನೆಗೆ ಆದೇಶಿಸುವವಳು. ವಸ್ತ್ರ ಅವಳ ಸೊಬಗನ್ನು ಮರೆಮಾಚುತ್ತಿಲ್ಲ, ನಮ್ಮ ಚಿತ್ತವನ್ನೇ ಮರೆಮಾಚಿದೆ. ಅವಳ ಸೊಬಗನ್ನು ಕಂಡು ಕವಿ ಚಿತ್ತಶೂನ್ಯನಾಗಿರುವನು.

---

## ಅಭಿಪ್ರೇತ

### ಗಂಗಟಗಾಳ

**ಹಲ ರೂಪವು ಬಾಳವು/ ಕೆಲವು ರೂಪ ತಾಳವು/ ಆದರೂ ಸ್ವರೂಪಕುಂಟೆ/ ಆ ಗಂಗಟಗಾಳವು?(3–5ರಿಂದ8)**

: ಕುದಿಸುವಾಗ ಇತರ ಧಾನ್ಯಗಳಂತೆ ಕುದ್ದು ಮೃದುವಾಗದ ಕೆಲವು ಗಟ್ಟಿ ಕಾಳುಗಳು ಹಾಗೇ ಉಳಿದು ಬಿಡುತ್ತವೆ. (ಕಳ್ಳಗಾಳು ಎನ್ನುತ್ತಾರೆ ಜನ ಇವಕ್ಕೆ) ಹೆಸರು, ಚೆನ್ನಂಗಿ, ಮಡಕಿ ಕಾಳುಗಳನ್ನೇ ಹೋಲುತ್ತವಾದರೂ ಕುದಿಸಿದಾಗಲೇ ಇವುಗಳ ಅಸಲಿಯತ್ತು ಗೊತ್ತಾಗುವುದು. ಉಣ್ಣುವಾಗ ಹಲ್ಲಿಗೆ ಸಿಕ್ಕು ಇವು ಗಂಗಟಗಾಳು ಎನ್ನುವುದು ಅನುಭವಕ್ಕೆ ಬರುತ್ತದೆ.

---

## ಸ್ಫುರಣಗಳು

### ಲಟಕಟಿಸು, ಕವಡು, ಡೊಳ್ಳಾಸ.

**ಲಟಕಟಿಸಿ ಬರುವವಳ ಕವಡು ಡೊಳ್ಳಾಸ. (8)**

: ಹೌಹಾರು; ಗಾಬರಿಗೊಳ್ಳು; ತವಕಿಸು, ಆತುರ ತೋರು; ಬೆದರು; ಹಾತೊರೆ.

: ಮೋಸ; ವಂಚನೆ; ಕಪಟತನ.

: 1. ಮೋಸ; ವಂಚನೆ; ಕಪಟ.

2. ಬೆಡಗು; ಒಯ್ಯಾರ; ಬಿನ್ನಾಣ; ವಿಲಾಸ.

*ಕವಡು ಡೊಳ್ಳಾಸ–ಒಂದೇ ಅರ್ಥದ ಕೂಡುನುಡಿ.

*   *   *   *   *   *

**ಎಳತು, ಎಳಸು, ಎಳೆತ**

**ಎಳತಿನಲ್ಲಿ ಎಳಸಿದತ್ತ/ ನಮ್ಮ ನಿಮ್ಮ ಎಳೆತವು (23–1, 2)**

: ಚಂಚಲವಾಗಿ; ಅಲುಗಾಟದಿಂದ ಕೂಡಿ.

: ಬಯಸು; ಅಪೇಕ್ಷಿಸು; ಆಶಿಸು.

: 1. ಎಳೆಯುವಿಕೆ; ಸೆಳೆಯುವಿಕೆ.

2. (ಆಲಂ)(ಮನಸ್ಸಿನ) ಆಕರ್ಷಣೆ; ಒಲವು.

*ಈ ಮನಸ್ಸು ಚಂಚಲವಾಗಿದ್ದು ಅದು ಬಯಸಿದತ್ತ ಆಕರ್ಷಿತವಾಗುತ್ತದೆ.

*   *   *   *   *   *

**ಓವಿ**

**ನೀನೇ ಮಾತೆ, ನೀನೆ ತ್ರಾತೆ, ನೀನು ನನ್ನ ದೇವಿ/ ನೀನೇ ಪ್ರಾಣ, ನೀನೆಪ್ರಾಣ, ಕಾಯಿ ನನ್ನನೋವಿ. (33–1, 2)**

: ರಕ್ಷಕಳು; ಕಾಪಾಡುವವಳು.

*   *   *   *   *   *

**ಇನಿದು, ತಣಿಸು, ಕಣ್ಮುರಿ, ಚಲಿವಿಂದರ**

**ಇನಿದಿನಿದಾಗಿ ತಣಿಸಿತು ಚಿತ್ತವ/ ಕಣ್ಮುರಿಯುವ ಮಾಟ/ ಚಲಿವಿಂದರದಲಿ ಜಲವನು/ ಹಣಿಸುವ, ಚೆಲುವೆಯ ಹನಿನೋಟ (59–1, 2, 3, 4)**

: ಸಿಹಿಯಾದ; ಪ್ರಿಯವಾದ; ಇಂಪಾದ; ಮನೋಹರವಾದ.

: 1. ತೃಪ್ತಿಯನ್ನುಂಟುಮಾಡು; ಸಂತೋಷಪಡಿಸು.

2. ತಣ್ಣಗೆಮಾಡು; ತಂಪುಗೊಳಿಸು; ಆರಿಸು.

: ಕಣ್ಣು ತಿರುವು; ಕಣ್ಸನ್ನೆಮಾಡು.

: ಪ್ರಯಾಣಿಕರ ಉಪಯೋಗಕ್ಕಾಗಿ ರಸ್ತೆಗಳ ಪಕ್ಕಗಳಲ್ಲಿ ನಿರ್ಮಿಸಿದ ನೀರಿನ ಆಶ್ರಯ; ಅರವಟ್ಟಿಗೆ.(ತೆಲು: ಚಲಿವಿಂದಲ, ಚಲಿವೆಂದ, ಚಲಿವೇಂದರ)

*ಕವಿಯು ಈ ಮೇಲಿನ ನುಡಿಯಲ್ಲಿ ಅರವಟ್ಟಿಗೆಯಲ್ಲಿ ದಣಿದು ಬಂದ ಪ್ರಯಾಣಿಕರಿಗೆ ನೀರನ್ನು ಹಣಿಸುವ ಚೆಲುವೆಯ ಹನಿನೋಟವನ್ನು ಬಣ್ಣಿಸಿದ್ದಾರೆ. ಹನಿನೀರಿನಲ್ಲಿ

ಹನಿನೋಟ! ನೀರನ್ನು ಈಂಟುವ ರಸಿಕನ ಚಿತ್ತವನ್ನು ಅವಳ ಕಣ್ಸನ್ನೆಯ ಮಾಟವು ಪ್ರಿಯವಾಗಿ ನೀರಿನಂತೆ ತಂಪುಗೊಳಿಸುತ್ತ ಸಂತೋಷಪಡಿಸಿದೆ!

ಚಿತ್ತ, ಚಲಿವಿಂದರ, ಚೆಲುವೆ; ತಣಿಸು; ಹಣಿಸು; ಮಾಟ, ನೋಟ ಪದಗಳು ಪ್ರಾಸ, ಒಳಪ್ರಾಸಗಳಲ್ಲಿ ನೇಯ್ದುಕೊಂಡು ಮನೋಹರ ಭಾವವನ್ನು ಸೃಷ್ಟಿಸಿವೆ.

* * * * * *

### ತಂದೆ

**ಅದೂ ನಂದೆ/ ಇದೂ ನಂದೆ/ ಯಾವುದೂನು ತಂದೆ ಎಂದು/ ನಂದೇ ಹೋಯ್ತು ಬಾಳುವೆ/ ಕುಂದಿ ಹೋಯ್ತು ಬಾಳುವೆ (62–1, 2, 3, 4, 5)**

* 'ತಂದೆ' ಪದವು ಅಪ್ಪ ಎಂಬ ಅರ್ಥ ಹೊಂದಿದೆ. ಆದರೆ ಈ ಮೇಲಿನ ನುಡಿಯಲ್ಲಿ 'ತಂದೆ' ಪದಕ್ಕೆ 'ನಾನೇ ತೆಗೆದುಕೊಂಡು ಬಂದೆ', 'ಎಲ್ಲವೂ ನನ್ನದೆ' ಎಂಬ ಅರ್ಥದಲ್ಲಿ ಪ್ರಯೋಗಿಸಿದ್ದಾರೆ.

---

## ಎಲ್ಲಾ ಶಬ್ದಾ ಶಬ್ದಾ

### ತಿಗಡಿ

**ನಮ್ಮ ಅವ್ವನ ಮುಂಚೆ ಆಕಿ ಅವ್ವನೂ ಸತ್ತಳು/ ಆಕಿ ಸತ್ತಾಗ ನಾ ಮನ್ಯಾಗ ಇರಲಿಲ್ಲಾ./ ನಾಕು ವೈಷ್ಣವರು ಹೆಣಾ ಎತ್ತಿದರು/ ಇನ್ನೊಬ್ಬ ವೈಷ್ಣವ ತಿಗಡಿ ಬೆಂಕೀ ಹಿಡಿದಾ/ ಹೋದರು, ಸುಟ್ಟುಬಿಟ್ಟು/ ತಮ್ಮ ತಮ್ಮ ಮನೀಗೆ ಹೋದರು. (4–1 ರಿಂದ 6)**

: ತ್ರಿಕೋಣಾಕೃತಿ; ತ್ರಿಭುಜ; ಹೆಣದ ಮುಂದೆ ಗಡಗಿಯಲ್ಲಿ ಬೆಂಕಿಯನ್ನು ಒಯ್ಯುವಾಗ ಉಪಯೋಗಿಸುವ ತ್ರಿಕೋನ ಆಕೃತಿಯ ಬಿದಿರಿನ ಸಾಧನ.

*ಈ ಕವನದ 'ವಿಶೇಷ'ವನ್ನು ವಾಮನಬೇಂದ್ರೆ ಹೀಗೆ ತಿಳಿಸಿದ್ದಾರೆ:

1913ರಲ್ಲಿ ಧಾರವಾಡದಲ್ಲಿ ಮರಾಠಿ ಭಾಷೆಯ ಹಾಗೂ ಮರಾಠಿ ಮಾತೃಭಾಷೆಯಾಗಿದ್ದ ಕೊಂಕಣಸ್ಥ ಚಿತ್ಪಾವನರ ಪ್ರಾಬಲ್ಯ ಇತ್ತು. ಕೊಂಕಣಸ್ಥ ಚಿತ್ಪಾವನರಾದ ದ.ರಾ ಬೇಂದ್ರೆ ಅಜ್ಜಿ, ತಾಯಿ ಹಾಗೂ ಇವರ ನಿಕಟ ಸಂಪರ್ಕ ಮತ್ತು ಸಲಿಗೆ ಕನ್ನಡ ಭಾಷೆಯೊಂದಿಗೆ ಇದ್ದುದರಿಂದ, ಅಜ್ಜಿಯ ಅಂತ್ಯಸಂಸ್ಕಾರಕ್ಕೆ ನೆರವಾದವರು ವೈಷ್ಣವರು ಎಂಬುದು ಗಮನಾರ್ಹ.

---

# ಯುಗದ ಕವಿಗೆ

## ತೊರೆ, ತತಿ, ತಣಿ

**ರಾಮಕೃಷ್ಣ ವಚನೋದಿತ ಪ್ರತಿಭೆ ತೊರೆದ/ ಕವನ  ತತಿಗೆ ತಣಿಯದವರು ಆರು? (2–1, 2)**

: ಪಕ್ವ; ಮಾಗಿದ

: ಸಮೂಹ.

: ತೃಪ್ತಿಹೊಂದು; ಸಮಾಧಾನಗೊಳ್ಳು.

*ಶ್ರೀ ರಾಮಕೃಷ್ಣ ಪರಮಹಂಸರ ಪರಮ ಶಿಷ್ಯರಾದ ಕುವೆಂಪು 'ಶ್ರೀ ರಾಮಕೃಷ್ಣ ವಚನವೇದ ನುಡಿನಮನ' ಮತ್ತು 'ಶ್ರೀ ರಾಮಕೃಷ್ಣ ಪರಮಹಂಸರ ಜೀವನ ಚರಿತ್ರೆ'ಯನ್ನು ರಚಿಸಿದ್ದಾರೆ. ಕುವೆಂಪು ಅವರ ರಾಮಕೃಷ್ಣ ವಚನೋದಿತ ಪ್ರತಿಭೆ ಸೃಷ್ಟಿಸಿದ ಪಕ್ವಕವನ ಸಮೂಹವನ್ನು ಓದಿ  ತೃಪ್ತಿ ಹೊಂದದವರು ಯಾರು? ಎಂದು ಬೇಂದ್ರೆ ಕೇಳಿದ್ದಾರೆ.

*  *  *  *  *  *

## ಚಾರುತ್ವ, ಕುಂದಣ, ಚಾರಿತ್ರ್ಯ

**ಚಾರುತ್ವದ ಕುಂದಣದಲ್ಲಿ / ಚಾರಿತ್ರ್ಯದ ರತ್ನ (4–3, 4)**

: ಮನೋಹರತೆ; ಸುಂದರತೆ.

: ಚಿನ್ನದಲ್ಲಿ ಹರಳನ್ನು ಕೂಡಿಸುವ ಕೆಲಸ,–ಕೆಚ್ಚುವ ಕೆಲಸ.

: ಶೀಲ; ನಡತೆ; ಆಚಾರ.

*ಕುವೆಂಪು ಸುಂದರ, ಮನೋಹರ, ಸಲ್ಲಕ್ಷಣ ತೇಜಸ್ವಿ, ಅವರ ವ್ಯಕ್ತಿತ್ವವನ್ನು ರೂಪಿಸಿರುವ ಅವರ ಶುದ್ಧ ಜೀವನ ಶೈಲಿ ನಾಡಿಗೆ ಆದರ್ಶ. ಅಂತಹ ಚಾರಿತ್ರ್ಯ ಅವರದು. ಸೃಷ್ಟಿಕರ್ತ ಭಗವಂತನು ಚಿನ್ನದಲ್ಲಿ ಹರಳನ್ನು ಕೂಡಿಸುವ ಕೆಲಸ–ಕುಂದಣದ ರೀತಿಯಲ್ಲಿ ಅವರನ್ನು ಸೃಷ್ಟಿಸಿದ್ದಾನೆ ಎಂದು ಚಾರುತ್ವ, ಚಾರಿತ್ರ್ಯವನ್ನು ಪ್ರತಿಮಾತ್ಮಕವಾಗಿ ಬೇಂದ್ರೆ ಚಿತ್ರಿಸಿದ್ದಾರೆ.

# ದಿವಂಗತ ನರಸಿಂಗ

## ಗಡಿ, ಕಟಕರಿಸು

**ಹತ್ತು ಜನರೊಳಗಿದ್ದು ಹತ್ತರಂತಿರಲಿಲ್ಲ/ ಮುತ್ತಿನಂತಿದ್ದ ಗಡಿ! ಮುಂದೆ ಬರಲೇ ಇಲ್ಲ/ ಬಾಳಿನಲಂಕಾರ ಏಕೇನೋ ಕಟಕರಿಸಿ/ ಕಣ್ಣು ಮರೆಗಾದ ಜೀವನದ ಜವನಿಕೆ ಸರಿಸಿ (3–1 ರಿಂದ 4)**

: ಕಟಮಸ್ತಾದ (ಬಂಧುರವಾದ) ಎದ್ದು ಕಾಣುವ ವ್ಯಕ್ತಿತ್ವದವನು. ಹುರುಪಿನ ಗಡಿ, ಕುಸ್ತಿಗಡಿ ಎಂಬ ಪದಗಳು ಹೆಚ್ಚು ಬಳಕೆಯಲ್ಲಿವೆ. 'ಭಪ್ಪರೆಗಡಿ' ಎಂಬುದೂ ಒಂದು ಪ್ರಯೋಗ.

: 'ಕಟಕರು' ಎನ್ನುವುದು ಇದರ ಮೂಲರೂಪವಿರಬಹುದು. ಇದು 'ಇಸು' ಪ್ರತ್ಯಯ ಹೊಂದಿ ಕಟಕರಿಸು ಎಂದಾಗಿದೆ. ಒಳಗೊಳಗೆ ತೊಂದರೆ ಕೊಡುವುದು, ಪೀಡಿಸುವುದು, ಕಿಟಿಕಿಟಿ ಮಾಡುವುದು, ಹೊಡೆಯದೆ–ಬಡಿಯದೇ ಚುಚ್ಚುಮಾತುಗಳನ್ನಾಡಿ ಕಾಡುವುದು. 'ಎಷ್ಟಕಟಕರಿಸಲಿಕ್ಕ ಹತ್ತೀದಿ', 'ಕಟಕರಿಸೋದು ಸಾಕಿನ್ನ' ಮುಂತಾದ ಪ್ರಯೋಗಗಳಿವೆ.

---

# ಸ್ವಯಂಭೂ ಬುಭೂಷೆ

## ಸ್ವಯಂಭೂ ಬುಭೂಷೆ

**ಸ್ವಯಂಭೂ ಬುಭೂಷೆಯೋ/ ಯಾವ ಭಾಷ್ಯ ಭಾಷೆಯೋ?/ ಎಲ್ಲಿ ಮೂರು ಬೆಳಕಿವೆ/ ಅಲ್ಲೇ ಮೂರು ಬೆಡಗಿವೆ/ ಮೂರು ಚುಕ್ಕಿ ಮೂರು ಹಕ್ಕಿ/ ತತ್ತಿಯಲ್ಲಿ ಮಡಗಿವೆ/ ಅತ್ರಿಯಲ್ಲಿ ಮುಳುಗಿವೆ/ ಮೂಡಲಾಗ ತೊಡಗಿವೆ.**

* 'ಎಲ್ಲಿ ಮೂರು ಬೆಳಕಿವೆ/ ಅಲ್ಲೇ ಮೂರು ಬೆಡಗಿವೆ'– ಆ ಮೂರು ಬೆಳಕು ಹಾಗು ಬೆಡಗುಗಳನ್ನು ಈ ಕೆಳಗಿನ ಉಲ್ಲೇಖಗಳ ನೆರವಿನಿಂದ ವ್ಯಾಖ್ಯಾನಿಸಿಕೊಳ್ಳಬಹುದು: ಮಹಾಪುರಾಣದ ಪ್ರಕಾರ ಮನುಷ್ಯ ಶರೀರದಲ್ಲಿ ಮೂರು ಬಗೆಯ ಅಗ್ನಿಗಳುಂಟು: ಕ್ರೋಧಾಗ್ನಿ, ಕಾಮಾಗ್ನಿ ಮತ್ತು ಉದರಾಗ್ನಿ.

ಋಗ್ವೇದದಲ್ಲಿ ಮೂರು ಬಗೆಯ ಅಗ್ನಿಗಳ ಉಲ್ಲೇಖವಿದೆ: ಗಾರ್ಹಪತ್ಯ (ಗೃಹಸ್ಥರ ಲೌಕಿಕ ಬಳಕೆಗೆ), ಆವಹನೀಯ (ದೇವತೆಗಳ ಆವಾಹನೆಗೆ), ದಕ್ಷಿಣಾಗ್ನಿ (ದುಷ್ಟ ಶಕ್ತಿಗಳ ನಿವಾರಣೆಗೆ)

ಪುರಾಣಗಳ ಪ್ರಕಾರ ಸ್ವಾಹಾದೇವಿಯನ್ನು ವರಿಸಿದ ಅಗ್ನಿಗೆ ಮೂವರು ಮಕ್ಕಳು: ಪಾವಕ, ಪವಮಾನ ಮತ್ತು ಶುಚಿ (ಇವುಗಳ ಅರ್ಥ ಕ್ರಮವಾಗಿ ಶುಚಿಗೊಳಿಸುವವನು, ಶುಚಿಗೊಳ್ಳುವವನು ಮತ್ತು ಶುಚಿ)

'ಅತ್ರಿಯಲ್ಲಿ ಮುಳುಗಿವೆ/ ಮೂಡಲಾಗಿ ತೊಡಗಿವೆ'-ತ್ರಿಮೂರ್ತಿಗಳು (ಬ್ರಹ್ಮ ವಿಷ್ಣು ಮಹೇಶ್ವರರು) ಅಗ್ನಿರೂಪರಾಗಿ ಅತ್ರಿಮುನಿಗೆ ದತ್ತಾತ್ರೇಯನಿಂದ ಜನಿಸುವರು ಮತ್ತು ಲೋಕದ ಲೀಲೆಗಳನ್ನು ಪ್ರೇರೇಪಿಸುವರು.(ಮೂಡಲಾಗಿ ತೊಡಗಿವೆ)

---

## ಕಣ್ಣಕದಿರು

**ಬೆನ್ನು, ಬೀಳು, ಕಾಪು, ಕದಿರು**

**ಬೆನ್ನಿಗೆ ಬಿದ್ದಿಹ ಕತ್ತಲೆ ಕಾಪಿಗೆ/ ಬೆಳಕಿಗೆ ಇದಿರಾಗಿ,/ ಬಣ್ಣ ಬಣ್ಣಗಳು ಬಡಿದಾಡುತ್ತಿವೆ/ ಕಣ್ಣ ಕದಿರಿಗಾಗಿ (1-1, 2, 3, 4)**

: ಹಿಂದೆಬೀಳು

: ಕಾಯುವಿಕೆ; ಕಾವಲು; ಪಹರೆ.

: ಕಾಂತಿ; ಹೊಳಪು.

* ಬೆಳಕನ್ನು ಹಿಂಬಾಲಿಸುವ ಕತ್ತಲು ಅದಕ್ಕೆ ಪಹರೆಯಂತಿದೆ. ಎಲೆಯಂತಹ ವಸ್ತು ಬೆಳಕಿನಲ್ಲಿರುವ ಬೇರೆ ಬಣ್ಣಗಳನ್ನು ಹೀರಿಕೊಂಡು ಹಸುರನ್ನು ಮಾತ್ರ ಪ್ರತಿ ಫಲಿಸುತ್ತದೆ. ಹಾಗಾಗಿ ಎಲೆ ಹಸುರಾಗಿ ಕಾಣುತ್ತದೆ. ಇದು ಪ್ರತಿಯೊಂದು ವಸ್ತುವಿನ ಬಣ್ಣಗೋಚರಿಸುವ ಬಗೆ. ಅಂತಹ ಬಣ್ಣಗಳು ಬೆಳಕಿಗೆ ಎದುರಾಗಿ, ಕಣ್ಣಕಾಂತಿಯಲ್ಲಿ ಪ್ರಕಾಶಿಸಲು ಬಡಿದಾಡುತ್ತಿವೆ ಎಂಬುದು ಕವಿಯ ಭಾವ.

---

## ಬಾರೋಬಾ

**ಪೊಂಗಿಸು, ಬೆಳುವಲ**

**ಶೃಂಗೇರಿ ಶಿಖರಾ ಏರಿ, ತುಂಗಿಯ ಒಡಲಸೇರಿ/ ಬಂಗಾರ ಮಲೆನಾಡ ಪೊಂಗಿಸಿ ಬಾ/ ಬೆಳುವಲ ಬರಗಾಲ ಹಿಂಗಿಸಿ ಬಾ (1-1, 2, 3)**

: ಹೆಚ್ಚಿಸು; ಅಧಿಕಗೊಳಿಸು; ಉತ್ಕರ್ಷಗೊಳಿಸು.

: ಒಂದು ನಾಡಿನ ಹೆಸರು ಈಗಿನ ಧಾರವಾಡ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶ.

*ಕವನ ಸಂದರ್ಭ: ಮಳೆಗಾಗಿ ಪ್ರಾರ್ಥನೆ.

* * * * * *

**ನಾಡಹೊಯ್ಲಕ**

**ಕೊಂಕಣ ಸುತ್ತಿಕೊಂಡು, ಮೈಲಾರ ನೋಡಿಕೊಂಡು/ ಬಯಲ್ಸ ಸೀಮಿ ದಾಟು ಶ್ರೀ ಶೈಲಕ್ಕ ಬಾ/ ನಾಡಹೊಯ್ಲಕ್ಕ ಬಾ॥ (2–1, 2, 3)**

* ಕವಿಯು ಮಳೆಯನ್ನು ನಾಡಿನ ಮೇಲೆ ಉಯ್ಯಲು ಬಾ ಎಂದು ಪ್ರಾರ್ಥಿಸಿದ್ದಾರೆ.

* * * * * *

**ಹಂತೇಕ**

**ಮಳೆರಾಯ ಬಂದೇನು, ಘನರಾಯ ಅಂದೇನು/ ತುಂತುರ ಮಳೆಗಾಗಿ ಹಂತೇಕ ಬಾ(5–1,2)**

: ಹತ್ತಿರ.

* 'ಇನ್ನೂ ಹತ್ತಿರ ಹತ್ತಿರ ಬಾ' ಎಂಬ ಭಾವ.

---

# ನಮ್ಮ ಚಿತ್ತ

**ದರಕಾರ, ಬೇಕಾರ**

**ಪ್ರಾಣಕ್ಕಿಲ್ಲ ಯಾವ ದರಕಾರಾ/ ಮನಸ್ಸು ಬೇಕ್ಯಾರ್ರಾ ಬುದ್ಧಿಗೆ ನಿಲುಕದೋ ತೀಕ್ರಾ ಉಸಿರಾಡಿಸದೆ ಇತ್ತು ಅಹಂಕಾರಾ॥ (1–1 ರಿಂದ 4)**

: ಲಕ್ಷ್ಯ; ಪರಿವೆ; ಗಮನ; ಎಚ್ಚರ.

: ಅಸ್ತವ್ಯಸ್ತವಾಗು; ಕೆಟ್ಟುಹೋಗು; ಬೇಸರಾಗು.

* 'ಮನಸ್ಸು ಬೇಕಾರಾಗೇತಿ', 'ಮನಸ್ಸು ಬೇಚೈನ ಆಗೇತಿ' ಎನ್ನುವ ಪ್ರಯೋಗಗಳಿವೆ.

---

# ಅಚ್ಚೀ ತುಪ್ಪಾ ಅಲ್ಲಾ ರಾಜ್ಯ ನಡೆಸೋದು

**ಕತಬಿ, ಕಿತಬಿ, ಹಸಿಬಿ**

**ಕತಬಿ ಕಿತಬಿ ತಂದಿಲ್ಲಾ/ ಹಸಿಬಿ ತುಂಬಿಕೊಂಡು ಹೋಗೋದಿಲ್ಲಾ (2–12, 13)**

: ಸಾಲಕ್ಕಾಗಿ ಬರೆದುಕೊಡುವ ಪತ್ರ; ಕರಾರು ಪತ್ರ.(ಮರಾ. ಕತಬಾ, ಕತಾಬತ್)

: ಇಲ್ಲದ ಕಾರಭಾರ; ಸಲ್ಲದ ಕಾರ್ಯ; ಕಿತಾಪತಿ.

: ಮಧ್ಯದಲ್ಲಿ ಬಾಯಿಯಿದ್ದು ಭುಜದ ಮೇಲೆ ಹಾಕಿಕೊಂಡಾಗ ಎರಡೂ ಕಡೆ ಬರುವಂಥ ಉದ್ದದ ಚೀಲ.

* * * * * *

**ಮ್ಯಾಳ, ಘೋಳಾ**

**ಪ್ರಳಯದಾಗ ಉಳದವ್ರು/ ಕೆಲವ್ರು ಹುಚ್ಚರಾಗ್ತಾರ/ ಕೆಲವ್ರು ಸ್ವಚ್ಛರಾಗ್ತಾರ/ ಅವರವರ ಮ್ಯಾಳ್ಯ ಮ್ಯಾಳ/ ಉಳಿದವ್ರದು ಬರೇ ಘೋಳಾ! (3–1, 2, 3, 4, 5)**

: ಮೇಳ; ಹೊಂದಾಣಿಕೆ; ಹೊಂದಿಕೆ.

: ಗೋಳಾಟ.

* * * * * *

**ಅಚ್ಚೀ**

**ಅಚ್ಚೀ ತುಪ್ಪಾ ಅಲ್ಲಾ ರಾಜ್ಯ ನಡೆಸೋದು (6–4)**

*ಅಚ್ಚಿ–ಮೆತ್ತನೆಯ ರೊಟ್ಟಿ. ಎಳೆಯ ಮಕ್ಕಳಿಗೆ ಒಂದು ಹಂತದವರೆಗೆ 'ಅಚ್ಚಿ' ಎಂದರೆ ರೊಟ್ಟಿ; 'ಆಬು' ಎಂದರೆ ನೀರು; 'ಮಮ್ಮು' ಎಂದರೆ ಅನ್ನ ಎಂದು ಪರ್ಯಾಯ ಪದಗಳನ್ನು ಬಳಸಿ ಅರ್ಥ ಮಾಡಿಸುತ್ತೇವೆ. ಮಕ್ಕಳಿಗೆ 'ಅಚ್ಚಿ' ತಿನ್ನಿಸುವಾಗ ತುಪ್ಪ, ಬೆಣ್ಣೆ, ಮೊಸರು ಸವರಿ ತಿನ್ನಿಸುವುದು ಸರಳ. ಆದರೆ ರಾಜ್ಯ ನಡಸೋದು ಅಷ್ಟು ಸರಳವಲ್ಲ. ಅದು ಕಠಿಣಾತ್ ಕಠಿಣ ಕಾರ್ಯ ಎಂಬ ಅರ್ಥ, ಇಲ್ಲಿ ಪ್ರಯುಕ್ತವಾಗಿದೆ.

## ಭರತಖಂಡ–ಬದನಿಕಾಯಿ

**ಭರಿತ**

**ಭರತಖಂಡ ಬದನಿಕಾಯಿ/ ಭರಿತ ಮಾಡ ಬ್ಯಾಡಾ ತಮ್ಮಾ! (1–1, 2)**

: ಭರತ.

*ಬದನೆಕಾಯಿಯನ್ನು ಕಿಚ್ಚದಲ್ಲಿ ಸುಟ್ಟು ಅದರ ಸಿಪ್ಪೆ ಸುಲಿದು ಸಣ್ಣನೆ ಕಿವುಚಿ ಅದರೊಳಗೆ ಸಣ್ಣಗೆ ಹಚ್ಚಿದ ಈರುಳ್ಳಿ, ಕೊತ್ತಂಬರಿ, ರುಚಿಗೆ ತಕ್ಕಷ್ಟು ಉಪ್ಪು, ಖಾರದ ಪುಡಿ, ಹಸಿ ಒಳ್ಳೆಣ್ಣೆ ಹಾಕಿ ಕಲಸಿದರೆ 'ಭರಿತ' ಸಿದ್ಧವಾಗುತ್ತದೆ.

ಭರತ ಖಂಡವನ್ನು 'ಭರಿತ' ಮಾಡೋದಂದರೆ ಅದನ್ನು ಘಾಸಿ ಮಾಡೋದು. ಸುಡುವ, ಸುಲಿಯುವ, ಕಿವುಚುವ ಕ್ರಿಯಾವಾಚಿಗಳು ಭಾರತದ ಸಂಕಷ್ಟದ ಸ್ಥಿತಿಗೆ ಸಾದೃಶ್ಯವಾಗುತ್ತವೆ.

---

## ಒಂದು ದಿನ

**ಅಡಗಾಣಿಸು.**

**ಯಾವುದೂ ಅಡಗಾಣಿಸಿ ನಿಲ್ಲೋದಿಲ್ಲಾ (5–1)**

: ಅಡ್ಡವಾಗಿ ಕಂಡುಬರು; ಅಡಚಣೆಯಾಗು; ತಡೆ; ಅಡ್ಡಿಮಾಡು.

* 'ಯಾವುದೂ ಅಡಗಾಣಿಸಿ ನಿಲ್ಲೋದಿಲ್ಲಾ' ಅಂದರೆ ಯಾವುದೂ ತಡೆದು ನಿಲ್ಲುವುದಿಲ್ಲ; ಯಾವುದಕ್ಕೂ ತೊಂದರೆಯಾಗುವುದಿಲ್ಲ ಎಂಬ ಭಾವ.

---

## ಉಚಿತ ಕರ್ಮ

**ನಿಶಾಚರ**

**ನಿನ್ನ ಹೆಂಡಿರೊಲು ಹೆರರ ಹೆಂಡಿರನು/ ಕಾವುದೊಂದೆ ಧರ್ಮ/ ನಿಶಾಚರನು ನೀನಾದರೇನು/ ನಿನಗದುವೆ ಉಚಿತ ಕರ್ಮ (3–1, 2, 3, 4)**

: 1. ರಾತ್ರಿಯಲ್ಲಿ ಓಡಾಡುವ.

2. ರಾಕ್ಷಸ.

3. ಕಳ್ಳ; ಚೋರ.

---

## ಆಗು

**ಸುಪಾಣಿ**

**ನೀ ಸುಪಾಣಿ ಮುತ್ತು!(5–2)**

: ಶುಭ್ರವಾದ ನೀರಿರುವ ಮುತ್ತು; ಶ್ರೇಷ್ಠ ದರ್ಜೆಯ ಮೌಕ್ತಿಕ.

---

## ಪರಾಮರ್ಶನ ಗ್ರಂಥಗಳು


| | |
|---|---|
| 1. ಅಮರಸಿಂಹನ ಅಮರಕೋಶಕ್ಕೊಂದು ನಿಘಂಟು | ಕ.ನಂ. ಪ್ರಸನ್ನ |
| 2. ಇಂಗ್ಲಿಷ್ ಇಂಗ್ಲಿಷ್ ಮರಾಠಿ ಡಿಕ್ಷನರಿ | ಸಹ್ನಿ ಪಬ್ಲಿಕೇಷನ್ಸ್ |
| 3. ಕನ್ನಡ–ಇಂಗ್ಲಿಷ್ ಡಿಕ್ಷ್ನರಿ | ರೆ. ಎಫ್. ಕಿಟಲ್ |
| 4. ಕನ್ನಡ ನಿಘಂಟು(8 ಸಂಪುಟಗಳು) | ಕನ್ನಡ ಸಾಹಿತ್ಯ ಪರಿಷತ್ತು |
| 5. ಕನ್ನಡ ಜಾನಪದ ಕೋಶ | ಕರ್ನಾಟಕ ಜಾನಪದ ಪರಿಷತ್ತು |
| 6. ಕನ್ನಡ– ಮರಾಠಿ ಶಬ್ದಕೋಶ | ಸಾಹಿತ್ಯ ಅಣಿ ಸಂಸ್ಕೃತಿ ಮಂಡಳ್, ಮಹಾರಾಷ್ಟ್ರ ರಾಜ್ಯ. |
| 7. ಕಾವ್ಯಾರ್ಥ ಪದಕೋಶ | ಜಿ.ಎಸ್ ಶಿವರುದ್ರಪ್ಪ., ಕೆ.ವಿ ನಾರಾಯಣ |
| 8. ಕುವೆಂಪು ನಿಘಂಟು | ದೇಜಗೌ |
| 9. ಕೇಶಿರಾಜನ ಶಬ್ದಮಣಿದರ್ಪಣ ವಿಳಾಸ | ವಿ. ಶಿವಾನಂದ |
| 10. ಚಿಗಟೇರಿ ಪದಕೋಶ | ಮುದೇನೂರು ಸಂಗಣ್ಣ |
| 11. ಜನಪದ ನಿಘಂಟು | ಕ್ಯಾತನಹಳ್ಳಿ ರಾಮಣ್ಣ |
| 12. ಜನಪದ ನುಡಿಗಟ್ಟುಗಳ ಕೋಶ | ಸುಧಾಕರ |
| 13. ದ.ರಾ. ಬೇಂದ್ರೆ ಸಮಗ್ರ ಕಾವ್ಯ ನಿಘಂಟು | ಬಿ.ಬಿ ರಾಜಪುರೋಹಿತ |
| 14. ಪರಮಾರ್ಥ ಪದಕೋಶ | ಅ.ರಾ.ಸೇ |
| 15. ಪುರಾಣ ಭಾರತ ಕೋಶ | ಯಜ್ಞ ನಾರಾಯಣ ಉಡುಪ |
| 16. ಪಾರಮಾರ್ಥಿಕ ಪದಕೋಶ | ಆರ್. ಶೇಷಶಾಸ್ತ್ರಿ ., ಬಿ.ಎನ್ ಶ್ರೀನಿವಾಸನ್ |

| | |
|---|---|
| 17. ಬೀದರ ಕನ್ನಡ ಕೋಶ | ದೇಶಾಂಶ ಹುಡಗಿ |
| 18. ಮುದ್ದಣ ಪದಪ್ರಯೋಗ ಕೋಶ | ಜಿ. ವೆಂಕಟಸುಬ್ಬಯ್ಯ |
| 19. ಸಂಸ್ಕೃತ-ಕನ್ನಡ ಶಬ್ದಕೋಶ(6 ಸಂಪುಟಗಳು) | ಚಕ್ರವರ್ತಿ ಶ್ರೀನಿವಾಸ ಗೋಪಾಲಚಾರ್ಯ |
| 20. ಹವ್ಯಕ-ಇಂಗ್ಲಿಷ್ ನಿಘಂಟು | ಎಂ. ಮರಿಯಪ್ಪಭಟ್ಟ |
| 21. ಹಳಗನ್ನಡ ಪದಸಂಪದ | ಪಿ.ವಿ ನಾರಾಯಣ |

# ಪದಸೂಚಿ

# ಲೇಖಕರ ಕೃತಿಗಳು

1. ಹಾಡುಹಕ್ಕಿ ಅಂಬಿಕಾತನಯದತ್ತ (1995)
   ಮೂರನೆ ಆವೃತ್ತಿ, 2012
2. ಡಿ.ಆರ್. ಬೇಂದ್ರೆ (1997)
   ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಆಂಗ್ಲಕೃತಿ.
3. ನಾಕುತಂತಿ – ಒಂದು ಟಿಪ್ಪಣಿ (2000)
   ಮೂರನೆ ಆವೃತ್ತಿ 2012
4. ರಸ್ತೆ ನಿಯಮಗಳು (2000)
   ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಕೃತಿ.
   ಐದನೆ ಆವೃತ್ತಿ – 2015
5. ಹೂತ್ಕದ ಹುಣಸಿ (2000) (ದ.ರಾ. ಬೇಂದ್ರೆ ಕಾವ್ಯ ವಿಮರ್ಶೆ)
   ಎರಡನೆ ಆವೃತ್ತಿ – 2011
6. ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ – ಒಂದು ಅಧ್ಯಯನ (2001)
   (ಪಿ.ಎಚ್.ಡಿ. ಮಹಾಪ್ರಬಂಧ) ಎರಡನೆ ಆವೃತ್ತಿ 2012
7. ಬರೆಹದಲ್ಲಿ ಬೇಂದ್ರೆಯವರ ಬದುಕು (2008)
   ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ಧಾರವಾಡ ಪ್ರಕಟಿಸಿರುವ ಕೃತಿ.
8. ಅಂತರಂಗದತ್ತ ನಯನ (2010)
9. ಮಹಾಕವಿ ಲಕ್ಷ್ಮೀಶನ ವಚನ ಜೈಮಿನಿ ಭಾರತ (2012)
10. ಹರಿಹರ ಮಹಾಕವಿಯ ವಚನ ಗಿರಿಜಾಕಲ್ಯಾಣ (2013)
11. ಬೆಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ (2015)
12. ರಾಘವಾಂಕ ಮಹಾಕವಿಯ ವಚನ ಹರಿಶ್ಚಂದ್ರ ಚಾರಿತ್ರ (2015)
13. ತಿರುತಿರುಗಿಯು ಹೊಸತಾಗಿರಿ (2015)
    (ದ.ರಾ.ಬೇದ್ರೆಯವರ ನಾದಲೀಲೆಯ ಅಧ್ಯಯನ)
14. ಸಂತಕವಿ ಕನಕದಾಸರ ನಳದಮಯಂತಿ ಪ್ರೇಮಕಥೆ (2018)
15. ಬೇಂದ್ರೆಕಾವ್ಯ (2018) ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ.



ಬೇಂದ್ರೆಕಾವ್ಯದ ಯಾನಕ್ಕೆ ಇದೀಗ ನೂರುವರ್ಷ ತುಂಬುತ್ತಿದೆ. ನೂರುವರ್ಷದ ಅವಧಿಯಲ್ಲಿ ನಮ್ಮ ಸಮಾಜದಲ್ಲಿ ಎಷ್ಟೋ ಬದಲಾವಣೆಗಳು ಘಟಿಸಿವೆ. ಅದರಲ್ಲೂ ಕಳೆದ ಮೂವತ್ತು ವರ್ಷಗಳ ಈಚೆಗೆ ವಿದ್ಯುನ್ಮಾನ-ತಂತ್ರಜ್ಞಾನ ಹಾಗೂ ಮಾಹಿತಿಜ್ಞಾನದಲ್ಲಿ ಆಗಿರುವ ವೇಗೋತ್ಕರ್ಷ ಪರಿಣಾಮಗಳು ನಾವು ಊಹಿಸುವುದಕ್ಕೂ ಸಾಧ್ಯವಾಗಿಲ್ಲದಿರುವುದು ಎಲ್ಲರಿಗೂ ತಿಳಿದ ಸಂಗತಿಯೇ. ಇಂಥ ಸಂದರ್ಭದಲ್ಲಿ 'ಬೇಂದ್ರೆಕಾವ್ಯ'ವನ್ನು ತಿಳಿಯುವ ಬಗೆ ಹೇಗೆ? ಅದಕ್ಕೆ ಉತ್ತರರೂಪವಾಗಿ ಡಾ. ಜಿ. ಕೃಷ್ಣಪ್ಪನವರು 'ಬೇಂದ್ರೆಕಾವ್ಯ: ಪದನಿರುಕ್ತ'ವನ್ನು ನಮ್ಮ ಕೈಗೆ ಇಡುತ್ತಿದ್ದಾರೆ. ಬೇಂದ್ರೆಕಾವ್ಯಸಹೃದಯರು ಇದನ್ನು ತಮ್ಮ ಬಳಿಯಿಟ್ಟುಕೊಳ್ಳಬೇಕು; ಆಧುನಿಕ ವಿಮರ್ಶಾ ಮೂರ್ಧನ್ಯರೂ ಇದರ ಜತೆ ಓಲಾಡಬೇಕು. ಬೇಂದ್ರೆಕಾವ್ಯ ಸಮುದ್ರದಲ್ಲಿ ಕುಂಗನ ರೀತಿಯಲ್ಲಿ ಡಾ.ಜಿ.ಕೃಷ್ಣಪ್ಪನವರು ಅಸೀಮಸಾಹಸವನ್ನು ಮೆರೆದಿದ್ದಾರೆ. ಇದು ನಿಜಕ್ಕೂ ಕುಂಭಕಪ್ರಾಣಾಯಾಮವೇ ಸರಿ. ಕಾವ್ಯಪ್ರಾಣಾಯಾಮದಲ್ಲಿ ಪೂರಕ ಮಾಡಿಕೊಳ್ಳಬಹುದು; ರೇಚಕವನ್ನೂ ಮಾಡಿಕೊಳ್ಳಬಹುದು. ಆದರೆ, ಬೇಂದ್ರೆಕಾವ್ಯದ ಅರ್ಥದ ವಿಶೇಷತೆಗಳನ್ನು ಕುಂಭಕಧ್ಯಾನದಲ್ಲಿ ನೆಲೆನಿಂತು ಅರಸಬೇಕಾದರೆ ಜಿ. ಕೃಷ್ಣಪ್ಪನವರ ಈ ಕೃತಿ ನಮಗೆ ಸಹಾಯ ಮಾಡುತ್ತದೆ. ಡಾ.ಜಿ.ಕೃಷ್ಣಪ್ಪನವರ ಕೃತಿಯಿಲ್ಲದೆ ಬೇಂದ್ರೆಯವರ ಕಾವ್ಯಪ್ರವೇಶ ಅಸಾಧ್ಯವೆಂದೇ ನನ್ನ ತಿಳಿವಳಿಕೆ.

ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ
ವಿಶ್ರಾಂತ ಕುಲಪತಿಗಳು

ಬೇಂದ್ರೆಯವರ ಕಾವ್ಯಗಳ ವಿಮರ್ಶೆಯ ಹಾದಿಯಲ್ಲಿ ಕೃಷ್ಣಪ್ಪನವರು ಒಂದು ಚಿನ್ನದ ಬಾಗಿಲನ್ನೇ ಈ ಕೋಶದ ಮೂಲಕ ತೆರೆದಿದ್ದಾರೆಂದರೆ ಅದು ಅತಿಶಯೋಕ್ತಿಯಲ್ಲ. ಬೇಂದ್ರೆಯವರ ಕಾವ್ಯವನ್ನು ಮೊದಲು ವಾಚ್ಯಾರ್ಥದ ನೆಲೆಯಲ್ಲಿ ಅರ್ಥಮಾಡಿಕೊಂಡು ತರುವಾಯ ಲಕ್ಷ್ಯಾರ್ಥ ಧ್ವನ್ಯಾರ್ಥಗಳ ಅಂತಸ್ತುಗಳನ್ನು ಕಟ್ಟಬೇಕು ಎಂದು ಬಯಸುವವರಿಗೆಲ್ಲ ಈ ಕೋಶವೊಂದು ತವನಿಧಿಯಂತಿದೆ. ಬೇಂದ್ರೆಯವರ ಕವಿತೆಗಳನ್ನು ಆಸ್ವಾದಿಸುವ, ಅರ್ಥೈಸುವ, ವಿಮರ್ಶಿಸುವ ದಿಕ್ಕಿನಲ್ಲಿ ಸಹೃದಯರಿಗೆ ಕೃಷ್ಣಪ್ಪನವರು ಹೊಸದೊಂದು "ಕಣ್ಣನ್ನೇ" ಕೊಟ್ಟಿದ್ದಾರೆ. "ನನ್ನ ವಿಶ್ವರೂಪವನ್ನು ನೀನು ಸಾಮಾನ್ಯ ಕಣ್ಣುಗಳಿಂದ ನೋಡಲಾರೆಯಪ್ಪಾ, 'ದಿವ್ಯಂದದಾಮಿತೇ ಚಕ್ಷುಃ'- ನಿನಗೆ ದಿವ್ಯವಾದ ಕಣ್ಣುಗಳನ್ನು ಕೊಡುತ್ತೇನೆ." ಎಂದು ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ಹೇಳಿದ ಮಾತು ಈ ಹೊತ್ತಿನಲ್ಲಿ ನನಗೆ ನೆನಪಿಗೆ ಬರುತ್ತಿದೆ. ಈ ಕೋಶದ ಮೂಲಕ ಬೇಂದ್ರೆಯವರ ಕಾವ್ಯದ ವಿರಾಟ್‌ದರ್ಶನಕ್ಕೆ ಕೃಷ್ಣಪ್ಪನವರು ದಿವ್ಯವಾದ ಚಕ್ಷುಸ್ಸನ್ನೇ ಕೊಟ್ಟಿದ್ದಾರೆ. ಇದು ಬೇಂದ್ರೆಯವರನ್ನು ಕುರಿತಂತೆ ಕೃಷ್ಣಪ್ಪನವರು ಮಾಡಿರುವ "ಜೀವಮಾನದ ಸಾಧನೆ"ಎಂದು ನಿರ್ಭಯವಾಗಿ ಹೇಳಬಹುದು.

ಕೆ. ಅನಂತರಾಮು
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ




ವಂಶಿ ಪಬ್ಲಿಕೇಷನ್ಸ್
ನಂ.4, ಗಾಯತ್ರಿ ಕಾಂಪ್ಲೆಕ್ಸ್, ಟಿ.ಬಿ. ಬಸ್ ನಿಲ್ದಾಣದ ಹತ್ತಿರ
ಬಿ.ಎಚ್. ರಸ್ತೆ, ಸುಭಾಷ್‌ನಗರ, ನೆಲಮಂಗಲ,
ಬೆಂಗಳೂರು-562 123
ಮೊಬೈಲ್ : 9916595916
ಇ-ಮೈಲ್: vamshipublications@gmail.com

